# ಆಮೂಲಾಗ್ರ ವಿಚಾರಿಯ ಧರ್ಮೇಂದ್ರಿಯ

ಮೂಲ ಲೇಖಕರು
ಸ್ಕಾಟ್ ನಿಯರಿಂಗ್

ಅನುವಾದಕ :
ಸ. ವೆಂಕಟಾಚಲಪತಿ





ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆ
ನರಸಿಂಹರಾಜ ಕಾಲೊನಿ
ಬೆಂಗಳೂರು - 560 019

1980

ಬೆಲೆ ರೂ : 12/-



ಗ್ರಂಥಕರ್ತರು – ಕಾರ್ಯನಿರತರಾಗಿ

# ಆಮೂಲಾಗ್ರ ವಿಚಾರಿಯ ಧರ್ಮೇಂದ್ರಿಯ


ಮೂಲ ಲೇಖಕರು :

ಸ್ಕಾಟ್ ನಿಯರಿಂಗ್

ಅನುವಾದಕ :

ಸ. ವೆಂಕಟಾಚಲಪತಿ








ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆ

ನರಸಿಂಹರಾಜ ಕಾಲೊನಿ

ಬೆಂಗಳೂರು – 560 019

1980 ಬೆಲೆ ರೂ : 12/–

"THE CONSCIENCE OF A RADICAL" by Scott Nearing. Translated in Kannada by S. Venkatachalapathy, Published by the Gokhale Institute of Public Affairs, N. R. Colony, BANGALORE-560 019







ಬೆಲೆ ರೂ. 12/-

ಪ್ರಕಾಶಕರು :
**ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ**
ನರಸಿಂಹರಾಜ ಕಾಲೊನಿ, ಬೆಂಗಳೂರು – 560 019

ಮುದ್ರಕರು :
**ಸ್ವಾಮಿ ಸತ್ಯಾನಂದ ಮುದ್ರಣಾಲಯ**
6 (10), ಕೃಷ್ಣ ರಸ್ತೆ, ಬಸವನಗುಡಿ
ಬೆಂಗಳೂರು – 560 019

# ಪ್ರಕಾಶಕರ ಮಾತು

ನನ್ನ ಮಾನ್ಯ ಮಿತ್ರರಾದ ಡಾ॥ ಭೋಲಾ ದತ್ತ ಪಂತರು ಜನ್ಮಭೂಮಿ ಪ್ರೆಸ್ ಟ್ರಸ್ಟಿನ ಸ್ಥಾಪಕರಾದ ದಿವಂಗತ ಶ್ರೀ ಬಿ. ಎನ್. ಗುಪ್ತರವರಿಗೆ ಪ್ರೊ॥ ಸ್ಕಾಟ್ ನಿಯರಿಂಗ್ ಅವರ "The Conscience of a Radical ಎಂಬ ಪುಸ್ತಕವನ್ನು ಓದಿನೋಡಲು ಕೊಟ್ಟರು. ಅದನ್ನು ಓದಿದಾಗ, ಗುಪ್ತರೇ ಹೇಳಿದಂತೆ, ಅದು ಅವರ ಮೇಲೆ ಗಾಢ ಪರಿಣಾಮವನ್ನುಂಟುಮಾಡಿತು. ಪುಸ್ತಕವು ಇಂಡಿಯದಲ್ಲಿ ದೊರೆಯದೆಂದೂ, ಅಮೆರಿಕದಿಂದ ಅದನ್ನು ತರಿಸಿಕೊಳ್ಳಬೇಕೆಂದೂ ತಿಳಿದುಬಂದ ಕೂಡಲೆ ಶ್ರೀ ಗುಪ್ತರು ಈ ಪುಸ್ತಕವು ಸುಲಭಸಾಧ್ಯವಾಗಿ ದೊರಕಬೇಕೆಂದು ಮನಗಂಡು ಅದರ ಭಾರತೀಯ ಅವತರಣಿಕೆಯನ್ನು (edition) ಹೊರತರಲು ಸ್ಕಾಟ್ ನಿಯರಿಂಗರ ಅನುಮತಿಯನ್ನು ಕೋರಿದರು. ಅನುಮತಿಯು ಒಡನೆಯೇ ದೊರಕಿತು. ಆಮೇಲೆ ಗುಪ್ತರು ಪ್ರಕಟನೆಯ ಮಾರ್ಗವನ್ನು ಯೋಚಿಸಿದರು. ಗ್ರಂಥ ಪ್ರಕಾಶನದ ಹೊಣೆಯನ್ನು ಯಾವುದೋ ವ್ಯಾಪಾರೀಧರ್ಮದ ಪ್ರಕಟನ ಸಂಸ್ಥೆಗೆ ವಹಿಸುವುದಕ್ಕೆ ಬದಲು, ವಿಶೇಷ ಗಣ್ಯರಾದ ಗ್ರಂಥಕರ್ತರ ಘನಾದರ್ಶ ಹಾಗೂ ತದನುಸಾರವಾದ ಜೀವನ ವಾಹಿನಿಗೆ ಸಮತಾನದಲ್ಲಿ ದುಡಿಯುವ ಒಂದು ಸಾರ್ವಜನಿಕ ಸೇವಾ ಸಂಸ್ಥೆಯೇ ಏಕೆ ಪ್ರಕಟಮಾಡಬಾರದೆಂದೂ ಯೋಚಿಸಿ, ಪ್ರಕಟನ ಕಾರ್ಯವನ್ನು ಗೋಖಲೆ ಸಂಸ್ಥೆ ವಹಿಸಿಕೊಳ್ಳಬೇಕೆಂದು ಕೋರಿದರು. ಅವರ ಈ ಕೋರಿಕೆಗೆ ನಾವು ಸಂತೋಷದಿಂದ ಒಪ್ಪಿಕೆ ಕೊಟ್ಟೆವು. ಶ್ರೀ ಗುಪ್ತರದು ಉದಾರವಾದ ಮನಸ್ಸು. ಈ ಬಗ್ಗೆ ಒಪ್ಪಂದದ ಕಟ್ಟುನಿಟ್ಟಾದ ಷರತ್ತುಗಳ ವಿಧಿ ಅನಾವಶ್ಯಕವೆಂದೂ ಗೋಖಲೆ ಸಂಸ್ಥೆ ಪುಸ್ತಕವನ್ನು ಹೊರಕ್ಕೆ ತಂದು, ತನಗೆ ಇಷ್ಟವೆಂದು ತೋರಿದ ರೀತಿಯಲ್ಲಿ ಪ್ರತಿಗಳ ವಿತರಣೆ ಮಾಡಬಹುದೆಂದೂ ಸೂಚಿಸಿದರು. ಆ ಹೊತ್ತಿಗೆ ಶ್ರೀ ಗುಪ್ತರು ಪ್ರಾಣಾಂತಕ ವ್ಯಾಧಿಯಿಂದ ನರಳುತ್ತಿದ್ದರು. ಗ್ರಂಥಪ್ರಕಟನ ಕಾರ್ಯವು ತಡವಾಗಬಾರದೆಂದು ತವಕಿಸುತ್ತ, ತಾವೇ ಒಂದು ಮುದ್ರಣಾಲಯವನ್ನು ಗೊತ್ತುಮಾಡಿ ಅಚ್ಚಿನ ವ್ಯವಸ್ಥೆಗೆ ಗಮನ ಕೊಟ್ಟು ಶ್ರಮಿಸಿದರು. ಆದರೆ ದೈವ ವಿಲಾಸ; ದುರದೃಷ್ಟವಶಾತ್ ಪುಸ್ತಕ ಪ್ರಕಟನ ಪೂರ್ವದಲ್ಲೇ ಅವರು ಕಾಲಾಧೀನರಾದರು. ಆದರೂ ಶ್ರೀ ಗುಪ್ತರ ಸಂಕಲ್ಪವನ್ನು ನೆರವೇರಿಸಲು ಅವರ ಮೊಮ್ಮಗ ಶ್ರೀ ಬಿ. ಕೃಷ್ಣ ಅವರು ಮತ್ತು ಅವರ ಧರ್ಮಪತ್ನಿ ಶ್ರೀಮತಿ ಬಿ. ಶಾರದಾ ಅವರು ಮುಂದೆ ಬಂದರು. ಹಿರಿಯರ ಪವಿತ್ರ ಸ್ಮರಣೆಗುಚಿತವಾದ, ತುಂಬು ಶ್ರದ್ಧೆಯಿಂದ ಅವರಿಬ್ಬರೂ ಶ್ರೀ ಗುಪ್ತರು ಮುಗಿಸಲಾಗದೆ ಉಳಿದುಕೊಂಡ ಕಾರ್ಯ ಸೂತ್ರವನ್ನು ಕೈಗೆತ್ತಿಕೊಂಡು, ಗ್ರಂಥ ಪ್ರಕಾಶನದ ಕಾರ್ಯವು ಸಂಪೂರ್ಣವಾಗಲು ನೆರವಾದರು.

ಜನ್ಮಭೂಮಿ ಪ್ರೆಸ್ ಟ್ರಸ್ಟ್ ಹಾಗೂ ಗ್ರಂಥಕರ್ತರು ನಮಗೆ ಈ ಗ್ರಂಥವನ್ನು ಪ್ರಕಟಪಡಿಸಲು ಕೊಟ್ಟ ಅವಕಾಶವನ್ನು ನಮ್ಮ ಸುಯೋಗವೆಂದೇ ಭಾವಿಸುತ್ತೇವೆ. ಸ್ಕಾಟ್ ನಿಯರಿಂಗ್ ಅವರು ಈ ಸಂಸ್ಥೆಯ ವೇದಿಕೆಗೆ ಅಪರಿಚಿತರಲ್ಲ. ಇಲ್ಲಿ ಬಂದು ಅವರು ಉಪನ್ಯಾಸ ಕೊಟ್ಟದ್ದು ನಮಗೆ ಹೆಮ್ಮೆಯ ಸಂಗತಿಯಾಗಿದೆ.

ಆರ್ಥಿಕ ರಾಜಕೀಯ ಕ್ಷೇತ್ರಗಳಲ್ಲಿ ಅನುಸರಣೀಯವಾದ ನೂತನ ವಿಚಾರ ಗಳನ್ನೂ ಹೊಸ ಕಾರ್ಯಸೂತ್ರಗಳನ್ನೂ ಕಟ್ಟಿ ಬೆಳಸುವದರಲ್ಲಿ ದೊಡ್ಡ ಪಾತ್ರವನ್ನು ವಹಿಸುತ್ತ ಬಂದವರು ಸ್ಕಾಟ್ ನಿಯರಿಂಗ್. ಈ ದೊಡ್ಡ ಕೆಲಸದಲ್ಲಿ ಶ್ರದ್ಧೆಯಿಂದ ಪಾಲ್ಗೊಂಡವರು ಅವರ ಸಹಧರ್ಮಿಣಿ ಹೆಲೆನ್ ನಿಯರಿಂಗ್. ಸ್ಕಾಟ್ ಅವರು ತಮ್ಮ ಹಲವು ಕೃತಿಗಳಲ್ಲಿ ತಾವು ನೆರೆನಂಬಿಕೊಂಡು ಸಾರಿರುವ ಉಪದೇಶವೆಲ್ಲ ಪ್ರಸಕ್ತ ಕೃತಿಯಲ್ಲಿ ಮಥನಗೊಂಡು ಸಾರಭೂತವಾಗಿ ರೂಪಗೊಂಡಿದೆಯೆಂದು ಹೇಳಬಹುದು. ಇದಕ್ಕೆ ಅವರು ಕೊಟ್ಟಿರುವ ಶೀರ್ಷಿಕೆಯೇ ಸಾಕ್ಷಿ. ಸ್ಕಾಟ್ ಅವರದು ಒಬ್ಬ ಆಲೋಚಕ, ಲೇಖಕ ಎಂಬ ಪರಿಗಣನೆಯನ್ನು ಮೀರಿದ ದೊಡ್ಡ ವ್ಯಕ್ತಿತ್ವ. ಅವರೂ ಅವರ ಪತ್ನಿ ಹೆಲೆನ್ ಅವರೂ ತಮ್ಮ ಬದುಕನ್ನು ಸಂತತವಾಗಿ ನಂಬಿಕೆಗೆ ಹೊಂದಿಸಿ ಬಾಳಿದವರು. ಹಾಗೆ ಬದುಕುವಾಗ ಬರುವ ವಿಘ್ನಗಳನ್ನೂ ಕಷ್ಟಗಳನ್ನೂ ಲಕ್ಷಿಸದೆ ಕೆಚ್ಚೆದೆಯಿಂದ ಎದುರಿಸಿದವರು. ಅಂಥ ಬದುಕಿಗಾಗಿ ಅಪಾರ ತ್ಯಾಗ ಮಾಡಿರುವವರು. ಅಂಥ ಜನರು ಅತಿವಿರಳರೆಂದು ಹೇಳಬೇಕಾದದ್ದಿಲ್ಲ.

ಈ ಪುಸ್ತಕದ ಪ್ರಕಟನೆಯ ಬಗ್ಗೆ ಸಡಗರಗೊಂಡಂತೆ ಕರ್ತರ ವ್ಯಕ್ತಿತ್ವದ ಬಗ್ಗೆ ಕೂಡಾ ಸಡಗರಗೊಂಡ ಶ್ರೀ ಗುಪ್ತರು ಕೃತಿಯನ್ನು ಹೇಗೋ ಹಾಗೆಯೇ ಕರ್ತರ ವ್ಯಕ್ತಿತ್ವದ ಪರಿಚಯವನ್ನು ನಮ್ಮ ಜನ ಆದಷ್ಟು ಚೆನ್ನಾಗಿ ತಿಳಿದುಕೊಳ್ಳಬೇಕೆಂದು ಬಯಸಿ, ಸ್ಕಾಟ್ ಅವರನ್ನು ಕುರಿತು ಒಂದು ಪರಿಚಯಾತ್ಮಕ ಲೇಖನವನ್ನು ಬರೆದು ಪ್ರಕಟನೆಗೆ ಸೇರಿಸಬೇಕೆಂದು ಡಾ|| ಪಂತರನ್ನು ಕೋರಿದರು. ಈ ಕೋರಿಕೆಯನ್ನು ಡಾ|| ಪಂತರು ಸಂತೋಷದಿಂದ ನಡಸಿಕೊಟ್ಟಿದ್ದಾರೆ. ಪಂತರು ಸ್ಕಾಟ್ ದಂಪತಿ ಗಳನ್ನು ಬಹುಕಾಲ ಬಲ್ಲ ಅವರ ಆಪ್ತ ಸ್ನೇಹಿತರು. ಹೀಗೆ ಸ್ಕಾಟ್ ಅವರ ವ್ಯಕ್ತಿ ಚಿತ್ರವನ್ನು ಸಿದ್ಧಪಡಿಸುವುದಕ್ಕಾಗಿ ಡಾ|| ಪಂತರು ಸ್ಕಾಟ್ ನಿಯರಿಂಗರ ಬರವಣಿಗೆಗಳ ಬಹುಭಾಗವನ್ನು ಪುನಃ ಅಧ್ಯಯನಮಾಡಿರುವರಲ್ಲದೆ ನಿಯರಿಂಗ್ ದಂಪತಿಗಳನ್ನು ಕುರಿತ ತಮ್ಮ ಸ್ವಂತ ತಿಳಿವಳಿಕೆಯನ್ನೂ ಬಳಸಿದ್ದಾರೆ. ಇದರ ಪರಿಣಾಮವಾಗಿ ಗ್ರಂಥ ಕರ್ತರ ವ್ಯಕ್ತಿಚಿತ್ರವು ಬಹು ಸಮರ್ಪಕವಾಗಿ ಮೂಡಿಬಂದಿದೆ. ಈ ಸುಂದರ ಲೇಖನಕ್ಕಾಗಿ ನಾವು ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

* * * * * *

ನಾವು ಪ್ರಕಟಿಸಿದ ಇಂಗ್ಲಿಷ್ ಅವತರಣಿಕೆಯಲ್ಲಿ ಕಂಡುಬರುವ ಪ್ರಕಾಶಕರ ನಿವೇದನೆಯ ಕನ್ನಡ ಅನುವಾದವನ್ನು ಮೇಲೆ ಕೊಟ್ಟಿದೆ.

ಈ ಕನ್ನಡ ಅನುವಾದದ ಪ್ರಕಟನೆಯನ್ನೂ ನಮ್ಮ ಸಂಸ್ಥೆಗೆ ವಹಿಸಿದ್ದಕ್ಕಾಗಿ ಜನ್ಮಭೂಮಿ ಟ್ರಸ್ಟಿನ ಶ್ರೀ ಬಿ. ಕೃಷ್ಣ ಮತ್ತು ಶ್ರೀಮತಿ ಬಿ. ಶಾರದಾ ಇವರುಗಳಿಗೂ ಇಂಗ್ಲಿಷ್ ಅವತರಣಿಕೆಯ ಪ್ರಕಟನೆಯ ವಿಷಯದಲ್ಲಿ ಹೇಗೋ ಹಾಗೆಯೇ ಈ ಅನುವಾದದ ಪ್ರಕಟನೆಯ ವಿಷಯದಲ್ಲಿ ಅತ್ಯಂತವಾಗಿ ಆಸಕ್ತಿವಹಿಸಿ ನೆರವಾದ ಡಾ|| ಭೋಲಾ ದತ್ತ ಪಂತರಿಗೂ ಪ್ರೊ|| ಬಿ. ಕುಪ್ಪುಸ್ವಾಮಿಯವರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ನಮಗೆ ದೊರೆತುದು ಅನುವಾದದ ಗುಣದ ಹಿರಿಯ ಮಟ್ಟವಷ್ಟೇ ಅಲ್ಲದೆ ಶ್ರೀ ಎಸ್. ವೆಂಕಟಾಚಲಪತಿಯವರ ವಿಚಾರ ಪೂರ್ಣವಾದ ಅನುವಾದಕನ ಆರಿಕೆಯೂ ಈ ಕಾರ್ಯವನ್ನು ನೆರವೇರಿಸಲು ಅವರು ದೊರೆತದ್ದು ನಮ್ಮ ಭಾಗ್ಯ ಎಷ್ಟು ಹಿರಿದೆಂಬುದಕ್ಕೆ ಸಾಕ್ಷಿ.

ಅವರಿಗೂ ಈ ಪುಸ್ತಕವನ್ನು ಬಹು ಶ್ರದ್ಧೆಯಿಂದ ಅಂದವಾಗಿಯೂ ಶೀಘ್ರವಾಗಿಯೂ ಮುದ್ರಿಸಿ ಸಿದ್ಧಪಡಿಸಿದ ಸ್ವಾಮಿ ಸತ್ಯಾನಂದ ಮುದ್ರಣಾಲಯಕ್ಕೂ ನಾವು ಚಿರಋಣಿಗಳು.

ಬೆಂಗಳೂರು
22. 2. 1980.

ನಿಟ್ಟೂರು ಶ್ರೀನಿವಾಸ ರಾವ್
ಗೌ|| ಕಾರ್ಯದರ್ಶಿ
ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ

# ಅನುವಾದಕನ ಅರಿಕೆ

ಪ್ರೊ॥ ಸ್ಕಾಟ್ ನಿಯರಿಂಗ್ ಅವರ ಅನೇಕ ಪುಸ್ತಕಗಳಲ್ಲಿ ನಾನು ಕನ್ನಡದಲ್ಲಿ ಅನುವಾದಮಾಡಿ ಕೊಟ್ಟಿರುವ ಎರಡನೆಯ ಪುಸ್ತಕ ಇದು. ಮೊದಲನೆಯ ಪುಸ್ತಕ "ಸ್ವಾತಂತ್ರ್ಯ ಮೀಮಾಂಸೆ" ಎಂಬ ಹೆಸರಿನಲ್ಲಿ ಮೈಸೂರು ವಿಶ್ವವಿದ್ಯಾನಿಲಯದಿಂದ ಪ್ರಕಟವಾಗಿದೆ.

ಈ ಎರಡನೆಯ ಪುಸ್ತಕಕ್ಕೆ ನಾನು ಇಟ್ಟಿರುವ ಹೆಸರು "ಆಮೂಲಾಗ್ರ ವಿಚಾರಿಯ ಧರ್ಮೇಂದ್ರಿಯ" ಎಂದು. ಇಂಗ್ಲಿಷ್‌ನಲ್ಲಿ ಲೇಖಕರು ಅದನ್ನು "ದಿ ಕಾನ್ಷನ್ಸ್ ಆಫ್ ಎ ರ್‍ಯಾಡಿಕಲ್" (The Conscience of a Radical) ಎಂದು ಕರೆದಿದ್ದಾರೆ. ಈ 'ಕಾನ್ಷನ್ಸ್' ಎಂಬ ಪದ ಈಚೆಗೆ ನಮ್ಮ ರಾಜಕೀಯ ಜನದಿಂದ ತುಂಬ ಬಳಕೆಗೆ ಬಂದಿದೆ. ಅದು ಒಳಗಣಿಂದ ಮನುಷ್ಯನನ್ನು ತಿದ್ದಲು, ಅಥವಾ ಇಕ್ಕಟ್ಟಿನಿಂದ ಪಾರುಮಾಡಲು, ಎದ್ದುಕೊಂಡು ಅವನ ಒಳಕಿವಿಗೆ ಕೇಳಿಸುವ ದಿವ್ಯಧ್ವನಿ. ಈ ದನಿಗೆ ಅನುಮೋದನೆ ಕೊಟ್ಟು ನಡೆದರೆ ಮನುಷ್ಯನ ನಡತೆ ಸರಿಯಾಗುತ್ತದೆ ಎಂಬ ಸದ್ಭಾವನೆಯಿಂದ ಕಾನ್ಷನ್ಸಿನ ಪ್ರೇರಣೆಗೂ ಚೋದನೆಗೂ ಬೆಲೆ ಬರುತ್ತದೆ. ಪ್ರಲೋಭನಮಯವಾದ ಈ ಜಗತ್ತಿನಲ್ಲಿ ಕಾನ್ಷನ್ಸಿಗೆ ಅನುಸಾರವಾದ ವರ್ತನೆ ಬಹು ಕಷ್ಟ. ಅದಕ್ಕನುಸಾರವಾಗಿ ವರ್ತಿಸುವವರ ಚಿತ್ರ ವಿಚಿತ್ರವಲ್ಲದ, ನೇರವೂ ಋಜುವೂ ಆದ, ಚಟುವಟಿಕೆಯಿಂದ ಜನಕ್ಕೆ ಶ್ರೇಷ್ಠಮಿತಿಯ ಹಿತಸಾಧನೆಯಾಗಬೇಕು. ಹಾಗೆ ವರ್ತಿಸಿದವರಿಗೋ ಅತಿಶಯವಾದ ಆತ್ಮಸಂತೋಷವೇ ಪ್ರತಿಫಲ. ಜೀವಿಕಾಸೌಕರ್ಯಗಳನ್ನು ಎಲ್ಲ ಜನರಲ್ಲೂ ಹಂಚಿಕೊಡಬೇಕೆಂದು ಯಾವ ಸುಧಾರಕನು ಚಡಪಡಿಸುತ್ತಾನೋ ಆವನು ತಾನೆ ಧರ್ಮೇಂದ್ರಿಯ ವಾಣಿಗೆ ತಕ್ಕಂತೆ ಪ್ರತ್ಯುತ್ತರ ದಾನಮಾಡಿ, ಅರ್ಥಿಕವಾಗಿಯೂ ಸಾಮಾಜಿಕವಾಗಿಯೂ ಬಹುಜನದ ಏಳಿಗೆಗೆ ಕಾರಣವಾಗುವ ಧಾರ್ಮಿಕ ಪುರುಷಕಾರವನ್ನು ಮೆರೆಯುತ್ತಾನೆ. ಇದು ವ್ಯಾಸರು ಭಾರತ ಸಾವಿತ್ರಿಯಲ್ಲಿ ಕಾತರ ಪಡುತ್ತ ತೋಳೆತ್ತಿ ಕೊಟ್ಟ ಉಪದೇಶ – "ಧರ್ಮಾದರ್ಥಶ್ಚ ಕಾಮಶ್ಚ". ದೈವ ಎಂದಿಗೂ ಧಾರ್ಮಿಕ ಪುರುಷಕಾರಕ್ಕೆ ಪ್ರತಿಕಕ್ಷಿಯಲ್ಲ. ಮನುಷ್ಯನ ಸ್ವಾರ್ಥಬುದ್ಧಿ ಕಲ್ಪಿಸಿದ ಪಲಾಯನೋಪಾಯವು ಈ ದೈವದ ರೂಪವನ್ನು ಧರಿಸಿ ಅವನನ್ನು ಅಣಕಿಸುತ್ತದೆ, ಅಷ್ಟೆ.

ಅಧರ್ಮದ ದಾರಿಯನ್ನು ತುಳಿಯುವವರು ಧರ್ಮದ ಮಾತನ್ನು ಆಡುತ್ತಲೇ ಇರುತ್ತಾರೆ. ಧರ್ಮೇಂದ್ರಿಯವನ್ನು ಇತರ ಇಂದ್ರಿಯಗಳ ಮಟ್ಟಕ್ಕೆ ಇಳಿಸಬಲ್ಲ ಅಸುರ ವೃತ್ತಿ ಇವರದು; ಆದರೆ ಧರ್ಮೇಂದ್ರಿಯವು ಇತರ ಸಾಮಾನ್ಯ ಇಂದ್ರಿಯಗಳಿಗೆ ಮೇಲ್ಪಟ್ಟು, ಅಂತರ್ಯಾಮಿಯಾದ

ಆತ್ಮಚೈತನ್ಯಕ್ಕೆ ನಿಕಟವಾಗಿದ್ದು, ಅವಕ್ಕೆ ಅಧೀನವಾಗಿದ್ದು, ಜೀವನಿಗೆ ಎಚ್ಚರಿಕೆ ಹೇಳುವ ಒಳದನಿ. ಮನುಷ್ಯನು ತನ್ನ ಜಗದ್ವ್ಯಾಪಾರವನ್ನು ಸರಿಯಾಗಿ ನಡಸಬೇಕೆಂದು ಅವನನ್ನು ಚುಚ್ಚಿ ಎಬ್ಬಿಸುವ ನಿರ್ಮಲ ಸಾತ್ವಿಕ ಶಕ್ತಿವಿಶೇಷವೇ ಈ ಧರ್ಮೇಂದ್ರಿಯ. ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆರಡರ ಕರ್ಮಗಳ ಮೇಲೆ ಕಣ್ಣಿರಿಸಿ, ಸಾಕ್ಷಿ ಚೈತನ್ಯದಿಂದ ಬಲವನ್ನು ತಂದುಕೊಳ್ಳುತ್ತ, ಆಗಾಗ್ಗೆ ಬೆಳಗಿ ಸರಿದಾರಿಯನ್ನು ತೋರಿಸುವ ಶಕ್ತಿ ಧರ್ಮೇಂದ್ರಿಯಕ್ಕೆ ಇರುತ್ತದೆ. ನಮ್ಮ ಅಂತರಂಗದಲ್ಲಿ ಧರ್ಮೇಂದ್ರಿಯದ ಸ್ಥಾನ ಯಾವುದು ಎಂಬುದು ಮುಖ್ಯವಲ್ಲ, ಅದರ ವಾಣಿಯನ್ನಾಲಿಸಿ ಒಡಂಬಟ್ಟು ನಡಸುವ ಚಟುವಟಿಕೆ ಮುಖ್ಯ. ಈ ಬಗ್ಗೆ ನಮಗೆ ಈಚಿನ ಉದಾಹರಣೆ ಮಹಾತ್ಮಾ ಗಾಂಧಿಯವರು.

ಚಿತ್ತನದೀ ನಾಮ ಉಭಯತೋ ವಾಹಿನೀ ;  
ವಹತಿ ಕಲ್ಯಾಣಾಯ, ವಹತಿ ಪಾಪಾಯ ಚ ।

"ಮನಸ್ಸೆಂಬ ನದಿ ಒಂದು ಗೊತ್ತುಪಾಡಿಲ್ಲದೆ, ಪಾತ್ರಮರ್ಯಾದೆಯನ್ನತಿಕ್ರಮಿಸಿ, ಅತ್ತ ಪುಣ್ಯದ ಕಡೆಗೋ ಇತ್ತ ಪಾಪದ ಕಡೆಗೋ ಹರಿಯುತ್ತದೆ". ಅದಕ್ಕೆ ತನ್ನ ಪಕ್ಕದಲ್ಲೇ ಕಾರ್ಯಮಾಡುವ ಬುದ್ಧಿವಿವೇಕದಿಂದ ಪರಿಷ್ಕರಣ ಹಾಗೂ ಶೋಧನ ಚಿಕಿತ್ಸೆ ನಡೆಯದಿದ್ದರೆ ಅದು ಕಲ್ಯಾಣ ವೃತ್ತಿಯಲ್ಲೇ ನೆಲೆ ನಿಲ್ಲುವ ಭರವಸೆಯಿಲ್ಲ.

ಚಿತ್ತ ವೃತ್ತಿಗಳನ್ನು ಗೆಲ್ಲದಿರುವವರು ಸಾರ್ವಜನಿಕ ಜೀವನದಲ್ಲಿ ಮಾಡುವ ಹಾವಳಿ ಸ್ವಲ್ಪವಲ್ಲ. ಆದದ್ದರಿಂದ ಸುಮ್ಮನೆ ಎಂಥದೋ ಕರ್ಮ ಪ್ರೇರಣೆಗೆ ಮನಸ್ಸು ಕೊಡದೆ ಸತ್ಕರ್ಮ ಪ್ರೇರಣೆಗೆ ಮಾತ್ರ ಮನಸ್ಸು ಕೊಡಬಲ್ಲವನು ಸ್ವಂತವಾಗಿ ಸಮ್ಯಗ್ ಜೀವನ ನಡಸುತ್ತ ಸಾರ್ವಜನಿಕ ಚಟುವಟಿಕೆಯಲ್ಲಿ ಕೃತಕೃತ್ಯನಾಗುತ್ತಾನೆ. ಆದದ್ದರಿಂದ ನಾನು ಇಲ್ಲಿ ಈ ಗ್ರಂಥ ಲೇಖಕರ ಮಾತನ್ನು ಎತ್ತಿಕೊಟ್ಟು, ಮನುಷ್ಯ ಚರಿತ್ರೆಯಲ್ಲಿ ಧರ್ಮೇಂದ್ರಿಯಕ್ಕಿರುವ ಪಾತ್ರವೇನೆಂದು ವಾಚಕರು ತೀರ್ಮಾನಿಸಿಕೊಳ್ಳಬೇಕೆಂದು ಬಯಸುತ್ತೇನೆ.

ರ್‍ಯಾಡಿಕಲ್ ಪಂಥಿಯಾದ ನಾನು ಪರಿಚಿತರಿಗೂ, ಅಕಸ್ಮಾತ್ತಾಗಿ ನನ್ನ ಬದುಕಿನ ಹಾದಿಯಲ್ಲಿ ಸಂಪರ್ಕಕ್ಕೆಬಂದ ಆಗಂತುಕರಿಗೂ – "ನೀವು ಯಾವಾಗಲೂ ಶುಭವನ್ನೇ ಆಯ್ದುಕೊಳ್ಳಿರಿ, ಉತ್ತಮೋತ್ತಮವಾದದ್ದನ್ನು ಗಳಿಸಲು ದುಡಿಯಿರಿ" ಎಂದು ಒತ್ತಾಯದಿಂದ ಹೇಳುತ್ತೇನೆ. ಇತಿಹಾಸದಲ್ಲಿ ದಾಖಲೆಗೆ ಬಂದ ರ್‍ಯಾಡಿಕಲ್ ಪಂಥಿಗಳ ಪೈಕಿ ದೊಡ್ಡವರ ಸಾಲಿನಲ್ಲಿ ಬರುವ ಸೊಕ್ರೆಟೀಸ್ ಮಹಾನುಭಾವನು ಹೇಳಿದ್ದೇನು? "ಪ್ರಜ್ಞೆಯಿರುವ ಯಾವ ಮನುಷ್ಯನೇ ಆಗಲಿ ಅವನಲ್ಲಿ ಶುಭಾಶುಭವಿವೇಕವೊಂದು ಇದ್ದರೆ ಸಾಕು. ಅವನು ಶುಭವನ್ನೇ ಆಯ್ದುಕೊಳ್ಳುತ್ತಾನೆ" ಎಂದು ಹೇಳುತ್ತಾನೆ. (ಪು. 136)

ಸೊಕ್ರೆಟೀಸ್‌ಗಿಂತ ಬಹಳ ಹಿಂದೆಯೇ ನಮ್ಮ ವೇದಕಾಲದ ಮಹರ್ಷಿಗಳು ನಮ್ಮಲ್ಲಿ ಶುಭ ಸಂಕಲ್ಪಗಳು ಮೂಡುತ್ತಿರಬೇಕೆಂದು ಹಾರೈಸಿದರು. ಯಜುರ್ವೇದದಲ್ಲಿ ಬರುವ ಎರಡು ಮಂತ್ರಗಳು ಇವು :

ಯಜ್ಜಾಗ್ರತೋ ದೂರಮುದೈತಿ ದೈವಂ
ತದು ಸುಪ್ತಸ್ಯ ತಥೈವೈತಿ ।
ದೂರಂಗಮಂ ಜ್ಯೋತಿಷಾಂ ಜ್ಯೋತಿರೇಕಂ
ತನ್ಮೇ ಮನಃ ಶಿವಸಂಕಲ್ಪಮಸ್ತು । (–34. 1)

ಎಚ್ಚರ (ಕನಸು) ನಿದ್ದೆಗಳಿಗೆ ದೂರದಲ್ಲಿ, ಅವಕ್ಕೆ ಎಟುಕದಷ್ಟು ದೂರದಲ್ಲಿ, ಉದಿಸಿ, ಚಲಿಸುತ್ತ ಬೆಳಕನ್ನು ಚೆಲ್ಲತಕ್ಕದ್ದು – ಬೆಳಕುಗಳಲ್ಲೆಲ್ಲ ಹೆಬ್ಬೆಳಕಾದ ಏಕ ದೇವರು. ಅದೇ ನನ್ನ ಮನಸ್ಸು. ಆತನ ಕೃಪೆಯಿಂದ ಇಳೆಯಲ್ಲಿ ನನ್ನ ಬದುಕು ಚೆನ್ನಾಗಲು ನನ್ನ ಮನಸ್ಸಿನಲ್ಲಿ ಶುಭ ಸಂಕಲ್ಪಗಳೇ ಎದ್ದುಕೊಳ್ಳುತ್ತಿರಲಿ.

ಯತ್ಪ್ರಜ್ಞಾನಮುತ ಚೇತೋ ಧೃತಿಶ್ಚ
ಯಜ್ಜ್ಯೋತಿರಂತರಮೃತಂ ಪ್ರಜಾಸು ।
ಯಸ್ಮಾನ್ನಋತೇ ಕಿಂಚನ ಕರ್ಮ ಕ್ರಿಯತೇ
ತನ್ಮೇ ಮನಃ ಶಿವಸಂಕಲ್ಪಮಸ್ತು ॥ (–34. 2)

ದೊಡ್ಡರಿವಿಗೆ ಮೂಲಾಧಾರವಾದ, ಚಿನ್ಮಾತ್ರವೂ ಧಾರಣಶಕ್ತಿಯೂ ಆದ, ಸಾವಿಲ್ಲದ ಸವಿ ಹೆಬ್ಬೆಳಕಾದ ಅದು ಕೃಪೆಮಾಡಿದ ಬಲದಿಂದ ಅದೇ ಆದ ನಾನು ಕೂಡಿಕೊಂಡು ಆಧ್ಯನಾದಾಗ ಮಾತ್ರ ನನ್ನ ಮಾಡಿದ ಕರ್ಮಕ್ಕೆ ಯಶಸ್ಸು. ಆದದ್ದರಿಂದ ನನ್ನ ಮನಸ್ಸಿನಲ್ಲಿ ಸದಾ ಶುಭ ಸಂಕಲ್ಪಗಳೇ ಎದ್ದುಕೊಳ್ಳುತ್ತಿರಲಿ.

ಸಾವಿರಾರು ವರ್ಷಗಳ ಹಿಂದಿನಿಂದ ಸಮ್ಯಗ್‌ಜೀವನವನ್ನೂ ಸಮ್ಯಗ್‌ವಿಚಾರವನ್ನೂ ಕುರಿತು ಇಂಥ ಉಪದೇಶ ಕೇಳಿಸುತ್ತಿದ್ದರೂ ತಲೆಮೊರೆಯಿಂದ ತಲೆಮೊರೆಗೆ ಮನುಷ್ಯನು – ಆದೇಕೆ ತಪ್ಪು ಮಾಡಿಕೊಂಡೇ ಬರುತ್ತಿದ್ದಾನೆ ? ಏಕೆ ! ಗೀತೆಯಲ್ಲಿ ಅರ್ಜುನನ ಪ್ರಶ್ನೆಗೆ ಭಗವಂತನು ಉತ್ತರ ಹೇಳಿಲ್ಲವೇ? (ಅಧ್ಯಾಯ 3. ಶ್ಲೋಕ 36–48) ಆ ಉತ್ತರ ಎಲ್ಲ ಕಾಲಕ್ಕೂ ಅನ್ವಯಿಸುವ ಉತ್ತರ. ಆದರೆ ನನಗೆ ಮನುಷ್ಯನಲ್ಲಿ ನಂಬಿಕೆಯುಂಟು. ಅವನು ತನ್ನ ತಪ್ಪನ್ನು ತಿದ್ದಿಕೊಂಡು ಸರಿದಾರಿಯನ್ನು ಹಿಡಿದು ಸವಿಗುರಿಯನ್ನು ಮುಟ್ಟುತ್ತಾನೆ ಎಂಬ ಗಟ್ಟಿ ನಂಬಿಕೆಯುಂಟು. ಒಂದು ಸಂಸ್ಕೃತ ಸುಭಾಷಿತ ನನ್ನ ನಂಬಿಕೆಯನ್ನು ಇನ್ನಷ್ಟು ಬಲಪಡಿಸುತ್ತದೆ–ತಪ್ಪುಮಾಡುವಾಗ ನನ್ನ ಬಗ್ಗೆ, ಮತ್ತು ನನ್ನ ಹಾಗೆಯೇ ಇತರರು ತಪ್ಪುಮಾಡುವಾಗ ಅವರ ಬಗ್ಗೆ:

ಅಮಂತ್ರಮಕ್ಷರಂ ನಾಸ್ತಿ, ನಾಸ್ತಿಮೂಲಮನೌಷಧಮ್ ।
ಅಯೋಗ್ಯಃ ಪುರುಷೋ ನಾಸ್ತಿ ಯೋಜಕಸ್ತತ್ರ ದುರ್ಲಭಃ ॥

ಯಾವ ಮಾತೂ 'ಮಂತ್ರ' ಪದವಿಗೆ ಅನರ್ಹವಾದದ್ದಲ್ಲ; ಯಾವ (ಮೂಲಿಕೆಯ) ಬೇರೂ ಬೇನೆಗೆ ಮದ್ದಾಗಿ ಒದಗದೆ ಇರುವಂಥಾದ್ದಲ್ಲ; ಯಾವ ಮನುಷ್ಯನೂ ಕಾರ್ಯಕ್ಕೆ ಒದಗದ ಅಯೋಗ್ಯನಲ್ಲ. ಆದರೆ ಜಗದ್ವಸ್ತುಗಳಲ್ಲಿರುವ ಜನೋಪಕಾರಕ ಶಕ್ತಿಯನ್ನು ಗುರುತಿಸಿ, ಸಂಯೋಜಿಸಿ, ಜನರೊಡನೆ ಕೂಡಿಕೊಂಡು ಶುಭದ ವ್ಯವಸಾಯ ಮಾಡುವವರು ಮಾತ್ರ ದುರ್ಲಭರು. ನಾಡಿನ ಪುಣ್ಯ ಮಾತ್ರ ದುರ್ಲಭರನ್ನು ಸುಲಭ ಲಭ್ಯರನ್ನಾಗಿ ಮಾಡುತ್ತದೆ.

ಪ್ರೊಫೆಸರ್ ಸ್ಕಾಟ್ ನಿಯರಿಂಗ್ ಅವರು ರ್‍ಯಾಡಿಕಲ್ ಪಂಥಿಯಾಗಿ ಬಹುಜನದ ಹಿತಕ್ಕಾಗಿ ಕಾತರಗೊಂಡು, ಸ್ವಜೀವನದ ನಿದರ್ಶನವನ್ನೂ ಕೊಟ್ಟು, ವ್ಯಕ್ತಿಯ ಸುಧಾರಣೆಗೂ ಸಮಸ್ತ ಸಮಾಜದ ಸುಧಾರಣೆಗೂ ಸಂಬಂಧಪಟ್ಟಂತೆ ಬಹು ಬೆಲೆಯುಳ್ಳ ಸಲಹೆಗಳನ್ನು ಈ ಗ್ರಂಥದ ಮೂಲಕ ಸ್ವದೇಶೀಯರಾದ ಅಮೆರಿಕನರ ಮುಂದೆ ಇಟ್ಟಿದ್ದಾರೆ. ಅವರ ಸಲಹೆಗಳು ಪ್ರಪಂಚದ ಎಲ್ಲ ರಾಷ್ಟ್ರ ಪ್ರಜೆಗಳಿಗೂ ಅನ್ವಯಿಸುವಂಥವೆಂದು ನಾನು ಮನಗಂಡು ಅವರ ಗ್ರಂಥವನ್ನು ಕನ್ನಡಕ್ಕೆ ಅನುವಾದಿಸಿದ್ದೇನೆ. ಕಾರ್ಯಮಾಡುವ ಕಾಲದಲ್ಲಿ ತುಂಬ ಉಲ್ಲಾಸಗೊಂಡಿದ್ದೇನೆ. ನನ್ನ ಅನುವಾದವನ್ನು ಕೆಲವರು ಸ್ನೇಹಿತರ ಮುಂದೆ ಓದಿ ಹೇಳಿದ್ದೇನೆ. ಮೂಲ ಗ್ರಂಥದ ಭಾರತೀಯ ಅವತರಣಿಕೆಯನ್ನು (ಎಡಿಷನ್) ಗೋಖಲೆ ಸಂಸ್ಥೆ ಪ್ರಕಟಮಾಡಿದ ಸಂದರ್ಭದಲ್ಲಿ, ಬೆಂಗಳೂರಿನ ಪ್ರಸಿದ್ಧ ಸಮಾಜ ವಿಜ್ಞಾನಿಗಳೂ ಮನಶ್ಶಾಸ್ತ್ರಜ್ಞರೂ ಆದ ಪ್ರೊ॥ ಬಿ. ಕುಪ್ಪುಸ್ವಾಮಿಯವರು ನನ್ನ ಅನುವಾದದ ಹಸ್ತಪ್ರತಿಯನ್ನು ಆದರದಿಂದ ಬರಮಾಡಿಕೊಂಡು, ಓದಿ ಮೆಚ್ಚಿಕೊಂಡರಲ್ಲದೆ ಕೆಲವು ಪದ ಪ್ರಯೋಗಗಳ ಬಗ್ಗೆ ಸಲಹೆಗಳನ್ನು ನೀಡಿ ಉಪಕಾರ ಮಾಡಿದ್ದಾರೆ. ಅವರ ಔದಾರ್ಯವೂ ಸ್ನೇಹಪರತೆಯೂ ಅನನ್ಯಸಾಧಾರಣವಾದವು. ಅವರನ್ನು ಎದೆಯಾರ ವಂದಿಸಿ ಕೃತಜ್ಞತೆ ಸಲ್ಲಿಸುತ್ತೇನೆ.

ಕಾನ್ಷನ್ಸ್ (conscience) ಎಂಬ ಮಾತನ್ನು 'ಧರ್ಮೇಂದ್ರಿಯ' ಎಂದು ಅನುವಾದಮಾಡದೆ ಕನ್ನಡದಲ್ಲಿ 'ಆತ್ಮಸಾಕ್ಷಿ' 'ಅಂತಸ್ಸಾಕ್ಷಿ' ಎಂದು ಅನುವಾದಮಾಡಬಹುದೆಂಬ ಅವರ ಸೂಚನೆಯನ್ನು ಒಪ್ಪಿಕೊಳ್ಳಲು ಆಗಲಿಲ್ಲ. ಏಕೆಂದರೆ ಆತ್ಮ, ಸಾಕ್ಷಿ ಎಂಬ ಪದಗಳು ವೇದಾಂತದ ಪದಗಳು, ಪರಮಾರ್ಥಕ್ಕೆ ತಕ್ಕವು. ವ್ಯವಹಾರ ಪ್ರಪಂಚಕ್ಕೆ ಹೊಂದದವು ಅವು ಎಂದು ನನಗನ್ನಿಸಿ, ನಾನು 'ಧರ್ಮೇಂದ್ರಿಯ' ಎಂಬ ಪದವನ್ನೇ ಉಳಿಸಿಕೊಂಡಿದ್ದೇನೆ. ನಿಘಂಟಿನ ಮಾತಾದರೂ ಚಲಾವಣೆಗೆ ಯೋಗ್ಯವೆಂದು ಭಾವಿಸಿದ್ದೇನೆ. ನನ್ನ ಈ 'ಅರಿಕೆ'ಯ ಮೊದಲಲ್ಲಿ ಕಾರಣವನ್ನು ತಕ್ಕಮಟ್ಟಿಗೆ ವಿವರಿಸಿ ಕೊಟ್ಟಿದ್ದೇನೆ.

ಡಾ॥ ಭೋಲಾ ದತ್ತ ಪಂತರು ಈ ನನ್ನ ಎರಡನೆಯ ಅನುವಾದಕ್ಕೂ ಪ್ರೇರಣೆ ಕೊಟ್ಟರು. ಅವರ ಸ್ನೇಹ ನನಗೆ ಅಮೂಲ್ಯ ಸಂಪತ್ತು.

ಈ ಪುಸ್ತಕವನ್ನು ಸ್ವಾಮಿ ಸತ್ಯಾನಂದ ಮುದ್ರಣಾಲಯದಲ್ಲಿ ಅಚ್ಚುಮಾಡಿಸುವಾಗ ನನಗೆ ಶ್ರದ್ಧೆಯಿಂದ ನೆರವು ಕೊಟ್ಟ ಮಿತ್ರರಾದ ಶ್ರೀ ಎಸ್. ಸುಬ್ರಹ್ಮಣ್ಯ ಮತ್ತು ಅವರ ಸಹೋದರಿ ಕುಮಾರಿ ಎಸ್. ಜ್ಯೋತಿ ಇವರಿಗೆ ಋಣಿಯಾಗಿದ್ದೇನೆ. ಅವರಿಗೆ ದೇವರು ಯಾವಾಗಲೂ ಒಳ್ಳೆಯದನ್ನು ಅನುಗ್ರಹಿಸುತ್ತಿರಲಿ ಎಂದು ಬೇಡುತ್ತೇನೆ.

ಕೊನೆಯದಾಗಿ ನಾನು ನನ್ನ ಸ್ವಂತದ ಎರಡು ಮಾತನ್ನು ಹೇಳ ಬಯಸುತ್ತೇನೆ. ನಾನು ವಿದ್ಯಾರ್ಥಿದಶೆಯಲ್ಲಿದ್ದಾಗಲೇ ಉದ್ಯೋಗಾರ್ಥಿಯಾಗಬೇಕಾಗಿ ಬಂತು. ಓದಿನೊಡನೆ ಕಸಬು, ಕಸಬಿನೊಡನೆ ಓದು ಹೀಗೆ ಕೊಂಚಕಾಲ ನನ್ನ ಬದುಕಾಯಿತು. 1932 ರಿಂದ ಇಂದಿನವರೆಗೆ ನನ್ನನ್ನು ಕಸಬಿನಲ್ಲಿ ನಿಲ್ಲಿಸಿದವರು ಹಲವರು. ಅವರ ಸಾಹಚರ್ಯದಲ್ಲಿ ನಾನು ಬೆಳೆದೆನಲ್ಲಾ ಎಂಬ ಭಾವನೆ—ವಿವರಗಳಿಗೆ ಹೋಗದಂತೆ– ಲೇಖನಿಯ ಓಟವನ್ನು ತಡೆಯುತ್ತದೆ. ಅವರೊಡನೆ ನಾನು ಮಾಡುತ್ತ ಬಂದ ಕೆಲಸಗಳೆಲ್ಲ ನನಗೆ ಸತ್ಸಂಸ್ಕಾರಪ್ರದವಾದುವು. ಅವರ ಪೈಕಿ ಒಬ್ಬರಾದ ಶ್ರೀ ಬಿ. ಎನ್. ಗುಪ್ತರು ನನ್ನ ಈ ಅನುವಾದ ಕೃತಿಯ ಪ್ರಕಟನೆಗೆ ನೆರವು ಕೊಡುವುದಾಗಿ ವಾಗ್ದಾನ ಮಾಡಿದ್ದರು. ಅದು ನೆರವೇರುವುದಕ್ಕೆ ಮುಂಚೆ ಅವರು ಕಾಲಾಧೀನರಾದದ್ದು ನನ್ನ ದುರ್ದೈವ. ಅವರು ಸ್ಥಾಪಿಸಿದ ಜನ್ಮಭೂಮಿ ಪ್ರೆಸ್ ಟ್ರಸ್ಟಿನ ಇಂದಿನ ಆಡಳಿತಗಾರರಾದ ಶ್ರೀ ಬಿ. ಕೃಷ್ಣ ಅವರು ತಮ್ಮ ತಾತನ ಆಶಯವನ್ನು ನೆರವೇರಿಸಿ ನನ್ನ ಹೃತ್ಪೂರ್ವಕ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಗೋಖಲೆ ಸಂಸ್ಥೆಗೂ ನನಗೂ, ಅದು ಶಾಸನಾನುಸಾರವಾಗಿ ಅಸ್ತಿತ್ವಕ್ಕೆ ಬಂದ ಕಾಲದಿಂದ (1945), ಮಧುರ ಬಾಂಧವ್ಯ ನಡೆದುಕೊಂಡುಬಂದಿದೆ. ನನ್ನ ಈ ಅನುವಾದ ಕೃತಿಯ ಪ್ರಕಟನೆ ಈ ಸಂಸ್ಥೆಯ ಆಶ್ರಯವನ್ನು ಪಡೆದದ್ದರಿಂದ ನಾನು ಧನ್ಯ. ನನ್ನ ಉದ್ಯೋಗದ ಅನಿಶ್ಚಿತತೆಯನ್ನು ತಡೆದು ಒಂದು ಕಡೆ ನೆಲೆಯಾಗಿ ನಿಲ್ಲಿಸಿದ ಸಂಸ್ಥೆಯ ಅಂದಿನ ಮತ್ತು ಇಂದಿನ ಅಧಿಕಾರಿ ವರ್ಗಕ್ಕೆ ನನ್ನ ಹೃತ್ಪೂರ್ವಕವಾದ ವಂದನೆ ಸಲ್ಲಿಸುತ್ತೇನೆ. ಸಂಸ್ಥೆಯ ಉಪಕಾರ ಗತಜನ್ಮದಲ್ಲೋ ಸಾಂಪ್ರತ ಜನ್ಮದಲ್ಲೋ, ನನಗೆ ತಿಳಿಯದಂತೆ ಹೇಗೋ ಲಭ್ಯವಾದ, ಪುಣ್ಯದ ಫಲ ಎಂದಿಷ್ಟು ಮಾತ್ರ ಹೇಳಬಲ್ಲೆ.

ಬೆಂಗಳೂರು
21-2-1980

ಸ. ವೆಂಕಟಾಚಲಪತಿ

# ಅರ್ಪಣೆ

ಯಾರು 1945 ರಿಂದ ಈಚೆಗೆ ಜನ್ಮಕ್ಕೆ ಬಂದಿರುವರೋ, ಪ್ರಭುತ್ವಗಳ ಜನಾಯುಷ್ಯದ ಅಂದಾಜು ತಃಖ್ತೆಗಳ ಪ್ರಕಾರ ಯಾರು ಆಯುಷ್ಮಂತರಾಗಿ ಬಾಳಿಕೊಂಡಿದ್ದು 2022ನೆಯ ಸಂವತ್ಸರದಲ್ಲೂ ಬದುಕಿರುವರೋ ಅವರನ್ನು ಉದ್ದೇಶಿಸಿ—

ಯಾರು ಆಲೋಚನೆಗೂ ಅನುಷ್ಠಾನಕ್ಕೂ ಇರುವ ಐಕ್ಯವನ್ನು ಒಳ್ಳೆಯ ಬದುಕನ್ನು ಬಾಳುವುದರಲ್ಲಿ ಕಂಡು ಸಂತೋಷಪಡುವರೋ ಅವರನ್ನು ಉದ್ದೇಶಿಸಿ—

ಯಾರು ತಮ್ಮ ಸಕಲ ಸಾಮರ್ಥ್ಯಗಳನ್ನೂ ಶಕ್ತಿಗಳನ್ನೂ ಕೌಶಲ ನೈಪುಣ್ಯಗಳನ್ನೂ —ಅವಶ್ಯವಾದರೆ ತಮ್ಮ ಪ್ರಾಣಗಳನ್ನೂ—ಉತ್ಪಾದನದಕ್ಷವೂ ಕ್ರಿಯಾಶೀಲವೂ ಸಹಕಾರನಿಷ್ಠವೂ ಆದ ವಿಶ್ವಮಾನವಸಮಾಜಸ್ಥಾಪನೆಗಾಗಿ ಮುಡುಪಾಗಿರಿಸಿ ಬಳಸುವರೋ ಅವರನ್ನು ಉದ್ದೇಶಿಸಿ--

ಬರೆದ ಈ ಗ್ರಂಥವು
ಅವರೆಲ್ಲರಿಗೂ ಸಮರ್ಪಿತವಾಗಿದೆ.

# ವಿಷಯಾನುಕ್ರಮಣಿಕೆ

# ಸ್ಕಾಟ್ ನಿಯರಿಂಗ್

## ಒಂದು ವ್ಯಕ್ತಿ ಚಿತ್ರ

ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾಽಪರಿಗ್ರಹಾ ಯಮಾಃ ।
ಜಾತಿ ದೇಶ ಕಾಲ ಸಮಯಾನವಚ್ಛಿನ್ನಾಃ ಸಾರ್ವಭೌಮಾ ಮಹಾವ್ರತಮ್ ॥

ಪತಂಜಲಿ ಯೋಗದರ್ಶನ
೨ ಸಾಧನಪಾದ, ಸೂತ್ರಗಳು ೩೦-೩೧

**[ ಹಿಂಸೆ ಮಾಡದಿರುವಿಕೆ, ನಿಜ ಹೇಳುವಿಕೆ, ಕದಿಯದಿರುವಿಕೆ, ಇಂದ್ರಿಯಗಳನ್ನು ಗೆದ್ದಿರುವಿಕೆ ಮತ್ತು ಸೊತ್ತಿನ ಹಂಬಲವಿಲ್ಲದಿರುವಿಕೆ-ಯಮದ ಅಂಗಗಳಾದ ಇವು ಐದೂ ಮಹಾವ್ರತಗಳೆನಿಸಿ, ಜಾತಿ ದೇಶ ಕಾಲ ಆಚಾರಗಳಿಂದ ಮಿತಿಗೊಳಪಡದವಾಗಿ, ಒಂದೊಂದೂ ಎಲ್ಲರಿಗೂ ಎಲ್ಲೆಲ್ಲೂ ಯಾವಾಗಲೂ ಆಚರಣೆಗೆ ತಕ್ಕದ್ದಾಗಿ ಸಾರ್ವಭೌಮ ವ್ರತವೆನಿಸುತ್ತದೆ. ]**

ಈ ಪುಸ್ತಕವನ್ನು ಓದುವುದಕ್ಕೆ ಮುಂಚೆ ಅದನ್ನು ಬರೆದವರ ಜೀವನ ಪರಿಚಯವು ವಾಚಕರಿಗೆ ಆಗಿರುವುದು ಒಳ್ಳೆಯದು. ಲೇಖಕರ ಜೀವನಾನುಭವವೇ ಗ್ರಂಥದಲ್ಲಿ ಪ್ರತಿಪಾದಿತವಾಗಿರುವ ವಿಷಯಕ್ಕೆ ಪ್ರೇರಣೆಯನ್ನೊದಗಿಸಿರುವುದರಿಂದ, ವಾಚಕರಿಗೆ ಅವರ ವ್ಯಕ್ತಿತ್ವದ ಪರಿಚಯದಿಂದ ತುಂಬ ಸಹಾಯವಾಗುತ್ತದೆ. ವಾಚಕ-ಲೇಖಕರ ನಡುವೆ ಈ ಮಾನಸ ಸೇತು ಉಭಯರನ್ನೂ ಸ್ನೇಹ ಬಾಂಧವ್ಯದಲ್ಲಿ ನಡಸೀತು. ಪ್ರೊಫೆಸರ್ ನಿಯರಿಂಗ್ ಅವರ ವಿಸ್ತಾರವೂ, ಗಂಭೀರವೂ, ಉದಾತ್ತವೂ ಆದ ಜೀವನದ ಸಾರಸಂಗ್ರಹವನ್ನು ನೀಡಲು ಈ ಪ್ರಸ್ತಾವನೆಯಲ್ಲಿ ಪ್ರಯತ್ನಿಸಿದೆ. ಪ್ರಿಯಗುರುವಾಗಿ ಅವರು ಶಿಷ್ಯಸಮುದಾಯದೊಡನೆ ತಮ್ಮ ಆರ್ಜಿಸಿದ ಜ್ಞಾನವನ್ನು ಹಂಚಿಕೊಳ್ಳಲು ಯಾವಾಗಲೂ ತವಕಿಸುತ್ತಾರೆ; ಮತ್ತು ಆಲೋಚನೆಗೆ ಪರಿಣಾಮಕಾರಿಯಾದ ವಾಗ್ರೂಪವನ್ನು ಕೊಡುವ ರಹಸ್ಯವನ್ನು ಅವರು ಚೆನ್ನಾಗಿ ಗ್ರಹಿಸಿದವರು. ಸ್ವತಃ ಸ್ಫೂರ್ತಿಯಿಂದ ವಿಚಾರ ಮಾಡುವವರು, ಜೊತೆಗೆ ತಮ್ಮ ಮಾತನ್ನಾಲಿಸುವ ಕುತೂಹಲವುಳ್ಳವರಲ್ಲಿ ವಿಚಾರ ಪ್ರಚೋದನೆ ಮಾಡುವವರು. ಸತ್ಯವನ್ನೂ, ಜ್ಞಾನವನ್ನೂ ತಿಳಿದುಕೊಳ್ಳುವ ಹಂಬಲ

ವುಳ್ಳವರೆಲ್ಲ ಅವರ ಸ್ವಭಾವ ಪರಿಚಯವಾದೊಡನೆ ಅವರ ಸನ್ನಿಧಿಯನ್ನು ಆಡಿಗಡಿಗೆ ಹಾರೈಸಿ ಪ್ರಯೋಜನ ಪಡೆಯಲು ಕಾತರಿಸುತ್ತಾರೆ, ಧಾವಿಸಿ ಅವರೊಡನೆ ಕಲೆತು ಕಲಿತು ಧನ್ಯರಾಗುತ್ತಾರೆ. ಆದದ್ದರಿಂದಲೇ ಅವರು ಒಮ್ಮೆ ದರ್ಶನಾರ್ಥಿಗಳ ನಿಕಟ ಪರಿಚಯಕ್ಕೆ ಬಂದೊಡನೆ, ಇಬ್ಬರ ನಡುವೆ ಇದ್ದಿರಬಹುದಾದ ಅಡ್ಡಗೋಡೆ ಗಳನ್ನೊಡೆದು ಅವರು ಸಂದರ್ಶಕರ ಹೃದಯಕ್ಕೆ ಸಮೀಪರಾಗಿ, ಆಪ್ತರೂ, ಆತ್ಮೀಯರೂ ಆಗಿಬಿಡುತ್ತಾರೆ. ಇದೇ ಕಾರಣದಿಂದ ಯಾವ ವಿಶೇಷಣವಾಚಕದ ಭಾರವೂ ಅವಶ್ಯವಾಗದೆ ಕೇವಲ 'ಸ್ಕಾಟ್' ಎಂಬ ಪ್ರಿಯ ಸಂಬೋಧನೆಗೆ ಪಾತ್ರ ರಾಗಿ, ಇಷ್ಟ ಮಿತ್ರರ ಬಳಗವನ್ನು ಎಲ್ಲೆಲ್ಲೂ ಕಟ್ಟಿಕೊಂಡಿದ್ದಾರೆ. ಈ ಗೆಳೆಯರ ಬಳಗವು ಪ್ರಪಂಚದ ನಾನಾ ದೇಶಗಳಲ್ಲಿ ಹರಡಿಕೊಂಡಿದೆ. ವಯಸ್ಸಿನಲ್ಲಿ ತೊಂಬತ್ತು ವರ್ಷಗಳನ್ನು ದಾಟಿ ಶತಮಾನವನ್ನು ಮುಟ್ಟುತ್ತಿರುವ ಈ ಧೀರ ಇಂದಿಗೂ ತನ್ನ ಜ್ಞಾನ ಶಿಖರದಿಂದ ಪ್ರೀತಿ ಮಮತೆಗಳನ್ನು ಹರಡುತ್ತಿದ್ದಾರೆ. ಮುಪ್ಪೇರಿದ್ದರೂ ತಮ್ಮ ಒಡಲಲ್ಲಿ ಹರಿಯುವ ಉಕ್ಕನ್ನು ಹರಿಯಿಸುತ್ತಿದ್ದಾರೆ. ಆದದ್ದರಿಂದಲೇ ನಿತ್ಯ ಸುಹೃದಯರಾಗಿ ಜ್ಞಾನಾರ್ಥಿಗಳಿಗೆ ನೀಡಬೇಕಾದದ್ದನ್ನು ನೀಡುವ ಉದಾರ ಮನೋ ಧರ್ಮವನ್ನು ಕಾಪಾಡಿಕೊಂಡಿದ್ದಾರೆ. ಅವರಲ್ಲಿ ಈ ನಿತ್ಯಜೀವನೋತ್ಸಾಹ ಹೇಗೆ ದೃಢವಾಗಿ ನೆಲೆಸಿದೆಯೆಂದು ಹಲವರು ಬೆರಗೇರುತ್ತಾರೆ. ಅಂಥವರಿಗೆ ಸ್ಕಾಟ್ ಕೊಡುವ ಸಮಾಧಾನ ಇದು; "ಒಬ್ಬನ ಉತ್ಸಾಹ ತುಂಬಿದ ಬಾಳಿಗೂ ಅವನು ಉಣ್ಣುವ ಉಣಿಸಿಗೂ ಸಂಬಂಧವುಂಟು. ಸಸ್ಯಾಹಾರದ ಕಟ್ಟುನಿಟ್ಟಾದ ಅವಲಂಬನ ಒಂದು ಕಡೆ ಅವನಿಗೆ ಬಲಕೊಟ್ಟರೆ, ಇನ್ನೊಂದು ಕಡೆ ಅಫೀಮು, ಗಾಂಜಾ, ಮೊದಲಾದ ಮಾದಕ ದ್ರವ್ಯ ಹಾಗೂ ಕಾಫೀ, ಟೀ ಮೊದಲಾದ ಪಾನೀಯ, ಹೊಗೆಸೊಪ್ಪು ಇಂಥ ವಸ್ತುಗಳ ಪೂರ್ತಿಯಾದ ಪರಿವರ್ಜನ ಎರಡೂ ಸೇರಿ ಅವನಲ್ಲಿ ಅಪರಿಮಿತವಾದ ಜೀವನೋತ್ಸಾಹವನ್ನು ತುಂಬಿ ಬಾಳಿಸುತ್ತವೆ." ಸ್ಕಾಟ್ ಮತ್ತು ಅವರ ಮಡದಿ ಹೆಲೆನ್, ಅಮೇರಿಕಾ ಸಂಯುಕ್ತ ಸಂಸ್ಥಾನಗಳಲ್ಲೂ ಹೊರಗಿನ ವಿಶಾಲ ಪ್ರಪಂಚದಲ್ಲೂ ಅರ್ಧಶತಮಾನದಿಂದ ಅಡಿಗಡಿಗೆ ಪ್ರವಾಸಮಾಡುತ್ತ ಬಂದಿದ್ದಾರೆ. ಬರಿಯ ಮನೋವಿನೋದವಾಗಲಿ ಶರೀರಾಂಗಗಳಿಗೆ ಉಲ್ಲಾಸ ವಿಶ್ರಾಂತಿಗಳಾಗಲಿ ಅವರ ಪ್ರವಾಸೋದ್ದೇಶವಲ್ಲ. ಪ್ರವಾಸ ಕಾಲದಲ್ಲಿ ಜನಜೀವನವನ್ನು ವೀಕ್ಷಿಸ ಬೇಕು, ವ್ಯಾಸಂಗ ಮಾಡಬೇಕು, ಜನರ ಮನೋಗತವನ್ನು ಆಲಿಸಬೇಕು, ಲೋಕಾನು ಭವವನ್ನು ಆರ್ಜಿಸಬೇಕು, ಮತ್ತು ಹರಡಿಕೊಂಡಿರುವ ಸ್ನೇಹಿತರೊಡನೆ ಕಲೆತು ವಿಚಾರವಿನಿಮಯ ಮಾಡಬೇಕು- ಇವು ನಿಯರಿಂಗ್ ದಂಪತಿಗಳ ಪ್ರವಾಸವನ್ನು ನಿರ್ಣಯಿಸುವ ಸಂಗತಿಗಳು. ಒಂದು ಗೊತ್ತುಪಾಡಿಲ್ಲದೆ ಅವರು ಪ್ರವಾಸದ ತೀರ್ಮಾನ ವನ್ನೆಂದಿಗೂ ಕೈಗೊಳ್ಳರು. ಮೊದಲು ಪರಿಶ್ರಮಪೂರ್ವಕವಾದ ಸಿದ್ಧತೆ, ಆಮೇಲೆ ಪ್ರವಾಸ. ಇಂಡಿಯಕ್ಕೆ ಅವರು ಈಗಾಗಲೇ ನಾಲ್ಕು ಸಾರಿ ಬಂದು ಹೋಗಿದ್ದಾರೆ. ಐದನೆಯ ಸಾರಿ ಅವರು ಇಲ್ಲಿಗೆ ಬರಬೇಕೆಂಬ ಯೋಚನೆಯಲ್ಲಿದ್ದರು.

ಅಂತರ ರಾಷ್ಟ್ರೀಯ ಸಸ್ಯಾಹಾರಿಗಳ ಸಮ್ಮೇಳನ ಸಂಸ್ಥೆಯ ಭಾರತೀಯ ಅಧಿವೇಶನ 1976ರಲ್ಲಿ ಮದರಾಸಿನಲ್ಲಿ ನಡೆಯಬೇಕೆಂದು ಗೊತ್ತಾದಾಗ ನಿಯರಿಂಗ್ ದಂಪತಿಗಳು ಇಲ್ಲಿಗೆ ಪ್ರತಿನಿಧಿಗಳಾಗಿ ಬರುವ ನಿರೀಕ್ಷೆಯಿತ್ತು. ಆದರೆ ಕಾರಣಾಂತರದಿಂದ ಅವರು ಬರಲಾಗಲಿಲ್ಲ. ಅವರು ಈ ದೇಶಕ್ಕೆ ಬಂದಾಗಲೆಲ್ಲ ಸಾರ್ವಜನಿಕ ಸಭೆಗಳಲ್ಲೂ, ವಿಚಾರಗೋಷ್ಠಿಗಳಲ್ಲೂ ಮಾತನಾಡುತ್ತಾರೆ. ಅನೇಕ ವಿಶ್ವವಿದ್ಯಾನಿಲಯಗಳೂ ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಸಂಸ್ಥೆಗಳೂ ಅವರನ್ನು ತಂತಮ್ಮ ವೇದಿಕೆಗಳಿಗೆ ಬರಮಾಡಿಕೊಂಡು ಮಹಾಜನರು ಅವರ ವಿಚಾರಧಾರೆಯನ್ನು ಕೇಳಲೆಂದು ಸಡಗರಿಸುತ್ತವೆ.

## ಜನನ–ತಾಯ ಪೋಷಣ ಶಿಕ್ಷಣಗಳು

ಸ್ಕಾಟ್ 6-8-1883 ರಲ್ಲಿ ಜನ್ಮ ತಳೆದರು. ಅಮೆರಿಕಾ ರಾಷ್ಟ್ರದ ಪೆನ್ಸಿಲ್ವೇನಿಯಾ ರಾಜ್ಯದ ಕಾಡು–ಗುಡ್ಡ–ಮೇಡುಗಳುಳ್ಳ ಪ್ರದೇಶದ ಒಂದು ಪುಟ್ಟ ಹಳ್ಳಿ ಅವರ ತನರೂರು. ಅವರ ತಾಯಿ ಮಿನ್ನಿ ನಿಯರಿಂಗ್. ಈಕೆ ಮಗನ ಶಾರೀರಕ–ಮಾನಸಿಕ–ಆಧ್ಯಾತ್ಮಿಕವಿಕಾಸಗಳ ಬಗ್ಗೆ ಮಾತೃಸಹಜವಾದ ಕಾತರ ತೋರಿಸಿದರು. ಈಕೆ ಮಗನ ಪಾಲಿಗೆ ಪರಮಗುರು. ಅವನ ಏಳಿಗೆಯಲ್ಲಿ ಮನಸ್ಸಿಟ್ಟು ಎಚ್ಚರದಿಂದ ಮಾರ್ಗದರ್ಶನ ಮಾಡಿದರು. ಮಗನ ಆಲೋಚನೆಯನ್ನೂ, ಮಾತನ್ನೂ, ಕೆಲಸವನ್ನೂ ಅಡಿಗಡಿಗೆ ತಿದ್ದಿ, ತ್ರಿಕರಣಗಳಲ್ಲಿ ಸಮನ್ವಯ ತಂದು, ಅವು ಮೂರು ಸರ್ವದಾ ಸಾಂಗತ್ಯದಲ್ಲಿ ನಡೆಯುವಂತೆ ಮಾಡಿದರು. ತಾಯ ಈ ಘನವಾದ ಪಾತ್ರದ ಫಲವಾಗಿ ಮಗನ ಸಾಮರ್ಥ್ಯಗಳು ಚೆನ್ನಾಗಿ ಪ್ರಕಟವಾಗಲು ಬಹುಕಾಲ ಬೇಕಾಗಲಿಲ್ಲ. ಸತ್ಯಸಂಧತೆಯೇ ಮಗನಿಗೆ ಸಾರ್ಥಕ ಜೀವನ ಧರ್ಮವಾಯಿತು. ಅವನ ಎಳಮೆಯನ್ನು ಆಳಿದ್ದು ಈ ಅಚಲ ಸತ್ಯನಿಷ್ಠೆ. ಅವನ ಶೀಲಕ್ಕೂ ಕಲಿಮಿಗೂ ಸತ್ಯವೇ ಪರಮಾಧಾರವಾಯಿತು. ಸಮತೂಕದ ಆಹಾರ ಒಡಲಿಗೆ ದಾರ್ಢ್ಯವನ್ನೂ ಕಸುವು ಕೆಚ್ಚುಗಳನ್ನೂ ಕೊಡಲು ಕಾರಣವಾದಂತೆ ಸತ್ಯವು ಅವನ ಅಂತರಂಗ ದಾರ್ಢ್ಯವನ್ನು ಭರವಸೆ ಪಡಿಸಿತು. ಸ್ವಕುಟುಂಬದಲ್ಲಿ ತಾಯಿ ನೆಲೆಗೊಳಿಸಿದ್ದದ್ದು ಪ್ರಜಾಪ್ರಭುತ್ವ ಭಾವನೆಯನ್ನು. ಕುಟುಂಬದಲ್ಲಿ ಸದಸ್ಯರು ಒಬ್ಬೊಬ್ಬರಿಗೂ ಕರ್ತವ್ಯ ಇರುತ್ತದೆ; ಈ ಕರ್ತವ್ಯ ಪಾಲನೆ ಕುಟುಂಬ ಜೀವನದಲ್ಲಿ ಒಬ್ಬೊಬ್ಬರಿಗೂ ವಾಡಿಕೆಯಾದಾಗ, ಅದು ರಾಷ್ಟ್ರವ್ಯಾಪಿಯಾಗಿ ಸ್ಥಿರವಾಗುತ್ತದೆ ಎಂದು ಆಕೆ ನಂಬಿದ್ದರು. ಮಗನು ಕುಟುಂಬಕ್ಕೆ ಅಂಟಿಕೊಂಡು ವೈಯಕ್ತಿಕವಾಗಿ ಅರಳಿ ಬೆಳೆಯಲುಳ್ಳವನು ಎಂದು ಮಗನಲ್ಲಿ ಹಕ್ಕು- ಹೊಣೆಗಳು ಸಮರಸವಾಗಿಹೊಂದಿಕೊಳ್ಳುವಂತೆ ಪೋಷಣೆ ಕೊಟ್ಟರು. ಕುಟುಂಬದಲ್ಲಿ ಅಭಿವೃದ್ಧಿ, ಸ್ಥಿರತೆ, ರಕ್ಷಣೆಗಳು ಉಂಟೆಂಬ ಭರವಸೆ ಪಡಬಹುದಾದದ್ದು ಅದರ ಸದಸ್ಯರೆಲ್ಲರೂ ಹೊಣೆಯರಿತು ಪಾತ್ರ ವಹಿಸುತ್ತಿರುವಾಗ. ಹೀಗೆ ಕುಟುಂಬವು

ವೈಯಕ್ತಿಕ ಸತ್ಯ ನೀತಿಗಳಿಗೆ ಆದಿಮ ಪ್ರಯೋಗ ಕ್ಷೇತ್ರ. ಸ್ವಾರ್ಥದೂರವಾದ ಸಾಮಾಜಿಕ ಸತ್ಯನಿಷ್ಠೆಗೂ ಸಂಬಂಧಗಳ ನಿರ್ವಾಹಕ್ಕೂ ಹಾಗೆಯೇ ಕುಟುಂಬವು ಆದಿಮ ಪ್ರಯೋಗ ಕ್ಷೇತ್ರವೇ. ಆದದ್ದರಿಂದ ಸಾಮಾಜಿಕ ಸತ್ಯನಿಷ್ಠೆ, ವಿವಿಧ ಜನರ ಹೃದಯ ಬಾಂಧವ್ಯ ಮತ್ತು ಉದಾರ ಸಾಮಾಜಿಕ ಪ್ರಜ್ಞೆ, ಇವುಗಳ ಪಾರ್ಶ್ವಕ್ಕೆ ಗಟ್ಟಿ ತಳಪಾಯವನ್ನಳವಡಿಸಿದರು ಸ್ಕಾಟಿನ ಮಹಾತಾಯಿ ಮಿನ್ನಿ. ಮಗನಲ್ಲಿ ಈ ಗಟ್ಟಿ ಗುಣಗಳು ಬಲಿಯುವುದಕ್ಕೆ ತಾಯಿ ನಿರ್ಮಿಸಿದ ಕುಟುಂಬ ಪರಿಸರವೇ ಪ್ರಧಾನ ಕಾರಣವಾಯಿತು. ಇದು ಮಗನ ಪಾಲಿಗೆ ನಿರ್ಬಂಧ ವಿಕಾಸವಾಗದೆ ಸಹಜ ವಿಕಾಸವೇ ಆಯಿತು. ಮುಂದೆ ಅವನ ಜೀವನ ವಿಧಾನವನ್ನು ಈ ನೀತಿ ಮೌಲ್ಯವೂ, ಮಾನವ ಪ್ರೀತಿ ಕಾತರವೂ ತಿದ್ದಿ ಕಟ್ಟಿದುವು. ಭೌತ ಪ್ರಗತಿ ಭಾವನೆಗಳ ಶಿಲ್ಪಕ್ಕೆ ಅವಶ್ಯವಾದ ಸತ್ಯಾವೇಶದ ಗಟ್ಟಿ ನೆಲಗಟ್ಟು ಹೀಗೆ ಹೊಂದಿಕೊಂಡಿತು. ತರುಣ ಸ್ಕಾಟಿನಲ್ಲಿ ಸಾಮಾಜಿಕ ದೃಷ್ಟಿಗೆ ಬೆಲೆಯೇರಿಸಿದ್ದು ತಾಯಿ ನಂಬಿದ್ದ ಈ ಸತ್ಯಭೂಮಿಕೆಯೇ. ಇಳೆಯ ಎಲ್ಲ ನಾಡುಗಳಲ್ಲೂ ಹೆತ್ತ ತಾಯನ್ನು ಹೊಗಳುವ ಸವಿನುಡಿಗಳಿವೆ. ಆಕೆಯಲ್ಲಿ ಮಮತೆ ಮೋಹಗಳು ಇಲ್ಲದೇ ಇರವು. ಆದರೆ ಆಕೆಯ ತಾಯ್ತನಕ್ಕೆ ಅರ್ಥಕೊಟ್ಟು ಅದನ್ನು ಸಾರ್ಥಕವೆನಿಸತಕ್ಕವು ಇವು ಮಾತ್ರ ಅಲ್ಲ. ತಾನು ಹೆತ್ತು ಕುಟುಂಬಕ್ಕೆ ಸಲ್ಲಿಸುವ ದೊಡ್ಡ ಕಾಣಿಕೆಯಾದ ಸಂತಾನವನ್ನು ರಾಷ್ಟ್ರಕುಟುಂಬವಾದ ಜನ್ಮಭೂಮಿಯೂ ಒಪ್ಪುವಂಥಾದ್ದಾಗಿರಬೇಕೆಂಬುದು ತಾಯ ಹಂಬಲ. ನಮ್ಮ ದೇಶದ ಪ್ರಾಚೀನ ಸುಭಾಷಿತವೊಂದು ಸ್ಕಾಟ್ ನಿಯರಿಂಗ್ ಅವರ ತಾಯಲ್ಲಿ ಈ ನಮ್ಮ ಆರ್ಯ ಭಾವನೆಯನ್ನು ಗುರುತಿಸಬಲ್ಲುದು :

ಪ್ರಸೂತೇ ಶಿಕ್ಷತೇ ವಿದ್ಯಾಂ ದೋಷೇಭ್ಯಃ ಪರಿರಕ್ಷತಿ ।
ನಿಯೋಜಯತಿ ಧರ್ಮೇ ಚ ನಾಸ್ತಿ ಮಾತೃಸಮೋ ಗುರುಃ ॥

ಬಸಿರಲ್ಲಿ ಹೊತ್ತು ಮಗನನ್ನು ಹೆರುತ್ತಾಳೆ; ಮಡಿಲಕಾವಿತ್ತು ಸ್ತನ್ಯಪಾನ ಮಾಡಿಸಿ ಅಂಗಾಂಗಗಳಿಗೆ ಪುಷ್ಟಿ ಕೊಡುತ್ತಾಳಲ್ಲದೆ ಮಗನನ್ನು ಶಿಸ್ತಿನಲ್ಲಿ ಬೆಳಸಿ ವಿದ್ಯಾದಾನ ಮಾಡುತ್ತಾಳೆ. ಕೇಡುಗಳಿಂದ ತನಯನನ್ನು ಕಾಪಾಡುತ್ತಾಳೆ ಮತ್ತು ಧರ್ಮದಲ್ಲಿ ನಿಲ್ಲಿಸಿ ನಡಸುತ್ತಾಳೆ. ಇಂಥ ತಾಯಿಗೆ ಸಾಟಿಯಾದ ಬೇರೆ ಗುರುವಿಲ್ಲ.

ವಯೋಧರ್ಮದೊಡನೆ ಮಗನ ಬುದ್ಧಿ ಬಲಿಯಬೇಕು ಎಂದು ಸ್ಕಾಟನ ತಾಯಿ ಬಗೆಬಗೆಯ ಪಾಠ ಪುಸ್ತಕಗಳನ್ನು ಅವನಿಗೊದಗಿಸಿ ಓದಲು ಚೋದಿಸಿದಳು. ಮಗನು ಪ್ರಕೃತಿಯನ್ನು ನೋಡಿ ಅರ್ಥಮಾಡಿಕೊಳ್ಳಲಿ, ಪ್ರವಾಸಯೋಗ್ಯವಾದ ಸ್ಥಳಗಳನ್ನು ಸಂದರ್ಶಿಸಲಿ, ಕಾವ್ಯಕಾದಂಬರಿಗಳನ್ನೋದಿ ಮನೋವಿನೋದವನ್ನು ಪಡೆಯಲಿ, ವಿಜ್ಞಾನ ವಿಷಯಗಳನ್ನೋದಿ ವೈಜ್ಞಾನಿಕ ಮನೋಧರ್ಮವನ್ನು ಬೆಳಸಿಕೊಳ್ಳಲಿ—ಎಂದು ಆಕೆ ನಿರ್ಣಯಿಸಿ, ಅಮೆರಿಕದ ಲೇಖಕರೂ ಪ್ರಪಂಚದ ಇತರ ದೇಶಗಳ

ಲೇಖಕರೂ ಬರೆದ ಗ್ರಂಥಗಳನ್ನು ಆಯ್ದು ಮಗನ ವ್ಯಾಸಂಗಕ್ಕೆ ಕೊಟ್ಟಳು. ಮಗನಲ್ಲಿ ಮಾನಸಿಕ ಹಾಗೂ ಭಾವನಾತ್ಮಕ ವೃತ್ತಿ ಈ ವಿವಿಧ ವಿಷಯಾಧ್ಯಯನ ದಿಂದ ಕ್ರಮವಾಗಿ ಸಂಸ್ಕಾರವನ್ನೂ ವಿಕಾಸವನ್ನೂ ಪಡೆಯಿತು. ಇದರ ಫಲವಾಗಿ ಮಗನ ನಡೆಯಲ್ಲಿ ನಯವೂ ಮಾನವ ಮೌಲ್ಯಗ್ರಹಣದಲ್ಲಿ ತಾರತಮ್ಯ ವಿವೇಕವೂ ಮಾನವ ಸಂಬಂಧಗಳ ನಿರ್ವಾಹದಲ್ಲಿ ನಿತ್ಯಜಾಗರೂಕತೆಯೂ ಪ್ರಸ್ಫುಟಗೊಳ್ಳುತ್ತ ಹೋಯಿತು–ಈ ಗುಣಮಾಲೆ ಪಿತ್ರಾರ್ಜಿತ ನಿಧಿಯಾಗಿ ಅಂತರಂಗದಲ್ಲಿ ನೆಲಸಿತು. ಕುಟುಂಬದಲ್ಲಿ ತಾಯಿ ನೆಲೆಗೊಳಿಸಿದ್ದ ಪ್ರಜಾಪ್ರಭುತ್ವ ಭಾವನೆಯನ್ನು ಮಗನು ವಿಶ್ವ ಕುಟುಂಬಕ್ಕೆ ಅನ್ವಯಿಸಬಲ್ಲವನಾದನು. ತಾಯ ಸತ್ಯನಿಷ್ಠೆ ಮಗನಲ್ಲಿ ಲೋಕ ಪ್ರೀತಿ ಯಾಗಿ ಬೆಳೆಯಲು ಸಾಧಕವಾಯಿತು. ಹೀಗೆ ಸ್ಕಾಟ್ ಬೆಳೆದದ್ದು ಪ್ರೇಮ-ಸತ್ಯ-ಜ್ಞಾನ ಗಳೆಂಬ,-ಜೀವನಕ್ಕೆ ನೇರವಾಗಿ ಸಂಬಂಧಿಸಿದ, ತ್ರಿಮುಖ ಶೀಲತತ್ತ್ವಕ್ಕೆ ನಿಷ್ಠೆ ಸಲ್ಲಿಸುತ್ತ ಬಂದ ತಾಯಿ ಒದಗಿಸಿದ, ಕುಟುಂಬ ಪರಿಸರದಲ್ಲಿ. ಆದದ್ದರಿಂದ ಮಗನ ಆಲೋ ಚನೆಗಳನ್ನೂ ದರ್ಶನಾಶಯಗಳನ್ನೂ ಅನುಷ್ಠಾನ ವಿವರಗಳನ್ನೂ ತಿದ್ದಿ ಆಕೆ ಅವನನ್ನು ಲೋಕ ಸೇವೆಗೆ ಒಪ್ಪಿಸಿದರು. ಒಳ್ಳೆಯ ಬಾಳನ್ನು ಬದುಕಲು ಮಗನಿಗೆ ಸತ್ಯದ ದಾರಿ ಯನ್ನು ತೋರಿಸಿ, ಆ ಮಾರ್ಗದಲ್ಲಿ ಗಟ್ಟಿ ಹೆಜ್ಜೆಯಿರಿಸಿ ಸಾಗಲು ಆಕೆ ಮಹಾ ಪ್ರಭಾವ ಬೀರಿದರು. ಈ ಹಿನ್ನೆಲೆ ಮಗನ ಭವಿಷ್ಯಜೀವನದ ಎಲ್ಲ ವಿವರಗಳನ್ನು ನಡಸುವ ಮೂಲ ಪ್ರಭಾವವಾಗಿ ಪರಿಣಮಿಸಿದ್ದರಿಂದ ಆತನ ಮನೋವಾಕ್ಕಾಯ ಗಳ ಚರಿತೆಯಲ್ಲಿ ಅನನ್ಯ ಸಾಧಾರಣವಾದ ಸಮನ್ವಯ ಸ್ವಾರಸ್ಯವನ್ನು ಆಗ ಮಾಡಿ ಸಿತು. ಪ್ರಾಯಶಃ ಈ ಸಾಧನ ಕಾಲದಲ್ಲೇ ಸ್ಕಾಟ್ ತನ್ನ ಕಾಯಕ ಸೂತ್ರವನ್ನು ರಚಿಸಿಕೊಂಡು ಬದುಕಿನ, ಉದ್ದಕ್ಕೂ ಅದನ್ನು ಅನುಸರಿಸಿಕೊಂಡುಬರುವ ದೃಢ ಸಂಕಲ್ಪ ಮಾಡಿರಬೇಕು: “ಯಾವುದಾದರೊಂದನ್ನು ಮಾಡುವುದು ಉಚಿತವಾದರೆ ಅದನ್ನು ಮಾಡುವವನು ತನ್ನ ಸತ್ಯನಿಷ್ಠಸಾಮರ್ಥ್ಯಗಳನ್ನೆಲ್ಲ ಶ್ರದ್ಧೆಯಿಂದ ಹೂಡಿ ಕಾರ್ಯನಿರ್ವಾಹ ಮಾಡಬೇಕು.” ಇದನ್ನೇ ನಮ್ಮ ಋಷಿಗಳು ‘ಯೋಗ’ ಎಂದು ತಿಳಿದಿದ್ದರು. ಕರ್ಮದಲ್ಲಿ ಸೇರಿ ಪ್ರಕಟವಾಗುವ ಮಾನಸ ನಯದಿಂದ ಯೋಗ ಸಿದ್ಧಿ:

> ಯೋಗಃ ಕರ್ಮಸು ಕೌಶಲಮ್ ॥
>
> ಗೀತೆ ೨-೫೦

ಮಾತೃ ಪ್ರಭಾವದ ಜೊತೆಗೆ ತರುಣನನ್ನು ಬೌದ್ಧಿಕವಾಗಿಯೂ, ಸಾಮಾಜಿಕ ವಾಗಿಯೂ ತಿದ್ದಿದ ಇತರ ಮೂವರು ಗುರುಗಳೆಂದರೆ ಆತನ ಪಿತಾಮಹ; ತಾನು ಓದಿದ ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದ ಅಧ್ಯಾಪಕನಾದ ಪ್ರೊಫೆಸರ್ ಪ್ಯಾಟೆನ್ ಹಾಗೂ ರಷ್ಯದ ಪ್ರತಿಭಟಕ ಸಾಹಿತಿ – ದರ್ಶನಕಾರ – ಕೌಂಟ್ ಲಿಯೋ ಟಾಲ್ಸ್ ಟಾಯ್.

## ತಾತನ ಮೇಲ್ಪಂಕ್ತಿ

ಸ್ಕಾಟ್ ಅವರ ಪಿತಾಮಹ ತನಗೆ ತಾನೇ ಮಾರ್ಗದರ್ಶಕನಾಗಿ ಸೃಷ್ಟಿ ಜ್ಞಾನದಲ್ಲಿ ಪಾರಂಗತರಾದವರು. ಅವರು ಹಿಡಿದದ್ದು ಇಂಜಿನಿಯರ್ ಕಸಬು. ಶಾಸ್ತ್ರಜ್ಞಾನ ಪಡೆದ ಮೇಲೆ ಪ್ರಯೋಗ ವಿವರಗಳಲ್ಲಿ ತನ್ನನ್ನು ತಾನೇ ನಂಬಿ ಕೊಂಡರು; ಆತ್ಮ ಪ್ರತ್ಯಯದಿಂದ ಮುನ್ನಡೆದರು. ಕಲ್ಲಿದ್ದಲ ಗಣಿಯೊಂದರಲ್ಲಿ ಮೇಲ್ವಿಚಾರಕ (ಸೂಪರಿಂಟೆಂಡೆಂಟ್) ಆಗಿ ಜೀವಿಕೆ ನಡಸಿದರು. ತಾತನ ಸದ್ಗ್ರಂಥ ಪ್ರೀತಿ ಮೊಮ್ಮಗನಿಗೆ ಮೇಲ್ಪಂಕ್ತಿಯಾಯಿತು. ತಾತನದು ಒಳ್ಳೆಯ ಪುಸ್ತಕ ಭಂಡಾರ. ಯೂರೋಪ್ ಖಂಡದ ವಿವಿಧ ದೇಶಗಳ ಪ್ರಾಚೀನ ಗ್ರಂಥಕರ್ತರ ಹಾಗೂ ಜನ ಪ್ರಿಯರಾದ ಅಮೆರಿಕನ್ ಸಾಹಿತಿಗಳ ಕೃತಿಗಳನ್ನು ತನ್ನ ಪುಸ್ತಕ ಭಂಡಾರದಲ್ಲಿ ಗಣ-ನೀಯವೆನ್ನಿಸುವಷ್ಟು ಸಂಖ್ಯೆಯಲ್ಲಿ ಶೇಖರಿಸಿದ್ದರು. ಇವುಗಳ ಜೊತೆಗೆ ಸೈನ್ಸ್ (ವಿಜ್ಞಾನ) ಮತ್ತು ಟೆಕ್ನಾಲಜಿ (ಪರಿಕರ್ಮಶಾಸ್ತ್ರ)ಗಳಿಗೆ ಸಂಬಂಧಿಸಿದ ಅನೇಕ ಜೀವನೋಪಯುಕ್ತ ಗ್ರಂಥಗಳನ್ನು ಸಂಗ್ರಹಿಸಿದ್ದರು. ಆತ ಭೋಗಪ್ರಿಯ. ಪ್ರಬಲವಾಗಿ ಸಮಕಾಲೀನ ಸಮಾಜ ಜೀವನವನ್ನು ಆಳಿದವರು. ಆದದ್ದರಿಂದಲೇ ಊರ ಜನ ಆತನನ್ನು “ತ್ಸಾರ್ ನಿಯರಿಂಗ್ (Tsar Nearing) ಎಂಬ ಅಡ್ಡ ಹೆಸರಿಟ್ಟು ಭಯ ಗೌರವಗಳನ್ನು ಸಲ್ಲಿಸುತ್ತಿದ್ದರು. ಆಲಿಗಾರ್ಕಿ (ಸ್ವಲ್ಪಜನಾಧಿಪತ್ಯ) ಜೀವನದ ವಿಧಾನಕ್ಕೆ ಇಂಬುಗೊಟ್ಟದ್ದವರಾದದ್ದರಿಂದ ಅದಕ್ಕೆ ಅವರು ಅಂದು ಪ್ರತಿನಿಧಿ ಸ್ವರೂಪರಾಗಿದ್ದರು. ತಾಯ ಸತ್ಪ್ರಭಾವಕ್ಕೆ ಒಳಪಟ್ಟು ಬೆಳೆದ ಸ್ಕಾಟ್ ಯುವಕ ನೀಗ ಬಹುಮುಖ ವಿಕಾಸನಾನುಕೂಲವನ್ನು ಕೊಡುವ ಕುಟುಂಬ ವಾತಾವರಣ ದಲ್ಲಿ ತಾತನ ದೊಡ್ಡ ಪ್ರಭಾವಕ್ಕೆ ಒಳಪಟ್ಟನು. ಪೂರ್ತಿ ಆತ್ಮಾವಲಂಬಿಯಾಗಿ, ಸ್ವತಂತ್ರನಾಗಿ, ಭರವಸೆಯಿಂದ ಬಾಳುವ ಹದವನ್ನು ತಾತನಿಂದ ಕಲಿತನು. ಪ್ರತಿಭಾ ಶಾಲಿಯಾದ ವಿಚಾರವಾದಿಯಾಗಿ, ಸಹಜ ಮನುಷ್ಯನಾಗಿ ಅರಳಿದನು. ಪ್ರಕೃತಿಯನ್ನು ನೋಡುವುದೂ, ಮನುಷ್ಯಾಭಿಪ್ರಾಯಗಳನ್ನು ಜಾಗರೂಕತೆಯಿಂದ ಆಲಿಸುವುದೂ ಅವನ ಪದ್ಧತಿಯಾಯಿತು. ಸರ್ವದಾ ಆಲೋಚನಾಪರನಾಗಿ, ತನ್ನಲ್ಲಿ ತಾನೇ ವಿಷಯ ವಿವೇಚನೆ ಮಾಡಿ ನಿರ್ಣಯಕ್ಕೆ ಬರುವ ಚತುರನೂ ಆದನು. ಅಂಕಿ ಅಂಶಗಳನ್ನು ಸಂಗ್ರಹಿಸುವುದರಲ್ಲಿ ಸತತ ಶ್ರದ್ಧೆಯುಳ್ಳವನಾಗಿ, ಅವುಗಳಿಗಿರುವ ಅನ್ಯೋನ್ಯ ಸಂಬಂಧವನ್ನು ಗ್ರಹಿಸುತ್ತ, ಸ್ವಬುದ್ಧಿ ಪ್ರಯೋಗದಿಂದ ತೀರ್ಮಾನ ಹೇಳು ವಷ್ಟು ನಿಪುಣನಾದನು. ತನ್ನ ನಿರ್ಣಯ ತಪ್ಪೆಂದು ತೋರಿಸುವ ಅನ್ಯ ಪ್ರಮಾಣವನ್ನು ಒಪ್ಪಿಕೊಳ್ಳುವುದಕ್ಕೆ ಹಿಂಜರಿಯದ ಆರ್ಜವವನ್ನೂ ಮೈಗೂಡಿಸಿಕೊಂಡನು. ಈ ಸತ್ಯೈಕನಿಷ್ಠೆ ತನ್ನ ಆರ್ಜಿಸಿದ ನೈಪುಣ್ಯದ ಪಕ್ಕದಲ್ಲೆ ಬಲಿಯುತ್ತ ಬಂತು. ಎಲ್ಲಕ್ಕಿಂತ ಹೆಚ್ಚಾಗಿ ಪ್ರಾಮಾಣಿಕವಾಗಿ ತನಗೆ ಸರಿಯೆಂದು ತೋರಿದ ಮನವರಿಕೆಗೆ (conviction) ನಿಷ್ಠೆಯಿಂದ ಅಂಟಿಕೊಂಡಿರುವ ಶೀಲಬಲವನ್ನು ಸಂಪಾದಿಸಿದನು.

ತಾತನು, ಮೊಮ್ಮಗನಿಗೆ ವಿಜ್ಞಾನ ಪರಿಕರ್ಮಗಳ ಅಧ್ಯಯನಕಾಲದಲ್ಲಿ ಗಟ್ಟಿ ತಳ ಪಾಯವನ್ನೊದಗಿಸುವ ಸಹಾಯವನ್ನು ಕೊಟ್ಟರು. ಕರ್ಮ ಕರಣದ ಮೂಲಕ ತಾತ್ತ್ವಿಕ ಜ್ಞಾನವನ್ನು ಬೇರೂರಿಸಿಕೊಳ್ಳುವ ಹದವನ್ನು ಮೊಮ್ಮಗನು ತಾತನಿಂದ ಕಲಿತನು. ಮನೆಯ ಒಂದು ಕೊಟಡಿ ತರುಣನಿಗೆ ನಕ್ಷೆ-ನಕಾಶೆಗಳನ್ನು ರೇಖಿಸಿ ಪೂರ್ವಾಲೋಚನೆ ಪೂರ್ವಸಿದ್ಧತೆಗಳ ಅನುಕೂಲವನ್ನೊದಗಿಸಿದರೆ, ಹೊರಗಡೆ ವಿಶಾಲ ವಾದ ಕರ್ಮಾಗಾರಗಳು ಕಾಯಕಾನುಕೂಲವನ್ನೊದಗಿಸಿದುವು. ಹೀಗೆ ತರುಣ ಸ್ಕಾಟ್ ಕ್ರಮವಾಗಿ ತಂತ್ರಜ್ಞಾನ, ಪ್ರಯೋಗ ವಿವರಗಳಲ್ಲಿ ಪರಿಣತನಾದನು. ಯೋಜನೆ ಮಾಡುವುದು, ನಕ್ಷೆ-ನಕಾಶೆಗಳನ್ನು ರೇಖಿಸುವುದು, ಉಚಿತವಾದ ಆಯುಧ ಸಾಧನೋಪಕರಣಗಳಿಂದ ಕಾರ್ಯ ನಿರ್ವಾಹ ಮಾಡುವುದು, ಜೊತೆಗೆ ತೋಟಗಾರಿಕೆ ಬೇಸಾಯಗಳಲ್ಲಿ ಸತ್ಕಾಲಕ್ಷೇಪ ಮಾಡುವುದು—ಇವೆಲ್ಲವನ್ನು ಸಮೀಚೀನವಾಗಿ ಗ್ರಹಿಸುವವನಾದನು. ತಾತನ ನಿದರ್ಶನವನ್ನು ಮೊಮ್ಮಗನು ಎಲ್ಲ ವಿವರಗಳಲ್ಲೂ ಅನುಸರಿಸಿ, ತನ್ನ ಅನುಸರಣೆಗೆ ಈತನಿಗಿಂತ ಬೇರೊಬ್ಬರ ನಿದರ್ಶನವನಾವಶ್ಯಕವೆಂದು ಬಗೆದನು. ಸ್ವಲ್ಪ ಜನಾಧಿಪತ್ಯದ "ಆಸ್ತಿ ಮತ್ತು ಅಧಿಕಾರ ಭಾವನೆಗಳಿಗೆ" ಪಿತಾ ಮಹನು ನಯೋಪಾಯಗಳಿಂದ ಕೂಡಿದ ಪ್ರತಿನಿಧಿಯೆಂದು ಆತನ ಮಾರ್ಗದರ್ಶನದಲ್ಲಿ ತನ್ನ ಜೀವನಶಿಲ್ಪವನ್ನು ಕಟ್ಟಿಕೊಳ್ಳುವ ಕುತೂಹಲ ತೋರಿಸಿದನು.

## ಪೋಲುಮಾಡದ ಬಿಡುವು ಹೊತ್ತು ಎಂಬುದು ಬದುಕಿಗೆ ಹೂಡಿದ ಬಂಡವಾಳ

ಸ್ಕೂಲು ಕಾಲೇಜುಗಳಿಗೆ ಬಿಡುವು (ವೆಕೇಷನ್) ಕೊಟ್ಟಿದ್ದ ಅವಧಿಗಳಲ್ಲಿ ವಿದ್ಯಾರ್ಥಿ ಸ್ಕಾಟ್ ತಾತನ ಉದ್ಯಮಾಗಾರಗಳಲ್ಲಿ ಕಾರ್ಮಿಕನಾಗಿ, ಉದ್ಯೋಗಿಯಾಗಿ ಭೃತಿ (ಕೂಲಿ)ಗಳಿಸುತ್ತಿದ್ದನು. ಕಾಡುಗಳಲ್ಲಿ ಮರ ಕಡಿಯುವುದು, ದಿಮ್ಮಿಗಳಿಂದ ತರಾಯಿ ರಿಪೀಸುಗಳನ್ನು ಸೀಳುವ ಯಂತ್ರಾಗಾರದಲ್ಲಿ ದುಡಿಯುವುದು, ಗಣಿಗಳೊಳಕ್ಕೆ ಇಳಿದು ಅದಿರೆತ್ತುವುದು, ಇತರ ಕರ್ಮಾಗಾರಗಳಲ್ಲಿ ಬಗೆಬಗೆಯ ಚಿಲ್ಲರೆ ಕೆಲಸಗಳನ್ನು ಕಲಿ ಯುವುದು- ಹೀಗೆ ತನ್ನ ಮಿದುಳನ್ನು, ಸ್ನಾಯುಗಳನ್ನು, ವಿವೇಕದಿಂದಲೂ, ದಕ್ಷತಾ ಕಾಂಕ್ಷೆಯಿಂದಲೂ ಹೂಡಿ, ವಿವಿಧ ಕೌಶಲಗಳನ್ನು ಗಳಿಸಿದ್ದಲ್ಲದೆ, ಸಮ್ಯಗ್‌ಜೀವನ ಚಾರಿತ್ರ್ಯಗಳಿಗೆ ಅವುಗಳಿಂದ ಪ್ರಯೋಜನಲಾಭವನ್ನು ತರುಣ ಸ್ಕಾಟ್ ಪಡೆದನು. ಸುದ್ದಿಯೊಯ್ದು ತರುವ ಆಳಾಗಿ, ಸರಕೊಯ್ಯುವ ಬಂಟನಾಗಿ, ಕಚೇರಿಯ ಗುಮಾಸ್ತ-ನಾಗಿ, ಮರಕಡಿಯುವ ಕಾರ್ಮಿಕನಾಗಿ, ಬಡಗಿಯಾಗಿ, ಕಮ್ಮಾರನಾಗಿ, ರಸ್ತೆ ವಿಂಗಡಿ ಸುವ, ಹಾಗೆಯೇ ರೆಯಿಲು(ಹಳಿ)ದಾರಿ ವಿಂಗಡಿಸುವ ಕಾಮಗಾರನಾಗಿ ವಿಶಾಲಾನು ಭವವನ್ನು ಪಡೆದನು. ಕುಟುಂಬದಲ್ಲಿ ಮೊಮ್ಮಗ ತಾನೆಂಬ ಮೋಹಕಾರಣದಿಂದ ವಿಶೇಷಗಮನಕ್ಕೆ ಕಾತರಿಸದೆ, ಪರಿಶ್ರಮಪೂರ್ವಕವಾಗಿ ಅನುಭವ ಪಡೆದವನೆಂಬ ಕಾರಣ

ದಿಂದ ತಾತನ ದಾರೂದ್ಯಮಗಳಲ್ಲಿ ಮೇಲ್ವಿಚಾರಕನ ಸ್ಥಾನವನ್ನು ಪಡೆಯುವುದಕ್ಕೆ ಅಧಿಕಾರಿಯಾದನು. ಸ್ಕಾಟ್ ಇನ್ನೂ ಹದಿನಾರು ವರ್ಷದ ಹರೆಯದವನಾಗಿದ್ದಾಗಲೇ ತಾತನು ಅವನನ್ನು "ಕಾರ್ಯಕ್ಲೇಶಭೇದಕ" (Trouble Shooter) ಪದವಿಗೇರಿಸಿದನು. ಈ ನೇಮಕದಿಂದ ತನಗೆ ಆದ ಪ್ರಯೋಜನವೇನೆಂದು ತರುಣನು ಪದೇಪದೇ ನೆನೆಯುತ್ತಿದ್ದನು. ಈ ಹುದ್ದೆಯಲ್ಲಿ ಅವನಿಗೆ ಸ್ವಲ್ಪಜನಾಧಿಪತ್ಯದ ಬಗೆಗೂ, ಸ್ವಲ್ಪ ಜನಾಧಿಪತ್ಯದ ಪ್ರಮುಖರ ಬಗೆಗೂ ತಿಳುವಳಿಕೆ ಪಡೆಯುವ ಅವಕಾಶ ದೊರೆಯಿತು, ಸ್ವಲ್ಪಜನಾಧಿಪತ್ಯದ ಪ್ರಮುಖರೊಡನೆ ನಿತ್ಯಸಂಪರ್ಕದಲ್ಲಿದ್ದು ಮರೆಯಲಾಗದ ಅನುಭವ ಪಡೆಯುವುದಕ್ಕೆ ಅವಕಾಶವಾಯಿತಂತೆ. ಹಾಗೆಯೇ ಕಾರ್ಮಿಕರೊಡನೆ ನಿತ್ಯನಿಕಟಸಂಪರ್ಕದಲ್ಲಿದ್ದು, ಅವರ ಅಂತಸ್ತಿಗಿಳಿದು ಅವರೊಡನೆ ಅವಿನಾಭಾವದಿಂದ ನಡೆದುಕೊಂಡು, ತನ್ನಿಂದ ಅವರು ಮಾರ್ಗದರ್ಶನ ಪಡೆದು ಮೊದಲಿಗಿಂತ ಚೆನ್ನಾಗಿ ದುಡಿಯಲು ಕಲಿತು ಇಷ್ಟದಿಂದ ತನಗೆ ನಿಕಟವಾಗುತ್ತಿರುವುದನ್ನು ನೋಡುವ ಸಂತೋಷವನ್ನನುಭವಿಸಿದನು. ಹೀಗೆ ಪರಸ್ಪರ ಗೌರವ ಬುದ್ಧಿಯಿಂದ ಮಾತ್ರ ಮಾನವ ಸಂಬಂಧಗಳನ್ನು ಕಟ್ಟಬಹುದೆಂಬ ಅನುಭವವನ್ನು ತರುಣ ಸ್ಕಾಟ್, ಕಾರ್ಮಿಕ ವ್ಯವಹಾರಕಾಲದಲ್ಲಿ ಸಂಪಾದಿಸಿದನು. ಕಾರ್ಮಿಕರ ಸಹವಾಸದಲ್ಲಿರುತ್ತ ತನ್ನ ಪ್ರಯೋಜಕ್ಕಾಗಿ ವಿವಿಧ ಸಾಮರ್ಥ್ಯಗಳನ್ನೂ ವೃತ್ತಿಜ್ಞಾನ ವಿವರಗಳನ್ನು ಗಳಿಸಿ, ಸಿವಿಲ್ ಇಂಜಿನಿಯರಿಂಗ್ ಜ್ಞಾನ ಶಾಖೆಯ ಮೂಲತತ್ತ್ವ ಮತ್ತು ಅನುಷ್ಠಾನಗಳ ಮರ್ಮವನ್ನು ಸ್ವಾಧೀನಪಡಿಸಿಕೊಂಡನು. ಈ ಎಲ್ಲ ಅನುಭವ ತರುಣನಿಗೆ ಬದುಕಿನ ಉದ್ದಕ್ಕೂ ನೆರವಾಗಿ ಆತನ ಚಟುವಟಿಕೆ ತುಂಬಿದ ಜೀವನದ ಮುಖ್ಯಾಂಶವಾಗಿ ಸೇರಿ ಬೆರೆತುಕೊಂಡಿತು. ಅದರಲ್ಲೂ ಆತ ಹೆಲೆನ್ ಎಂಬಾಕೆಯನ್ನು ಮದುವೆಯಾದಮೇಲೆ, ದಂಪತಿಗಳು ಕೈಯಾರೆ ಬೇಸಾಯವನ್ನು ಹಿಡಿದು ಬದುಕುವ ತೀರ್ಮಾನಮಾಡಿದಮೇಲೆ, ಈ ವ್ಯಾಪಕವಾದ ಅನುಭವದಿಂದ ಅವರಿಗೆ ತುಂಬ ಸಹಾಯವಾಯಿತು. ದಂಪತಿಗಳು ಸಮಾನೋದ್ದೇಶಕ್ಕೆ ಬದ್ಧರಾಗಿ ಕೃಷಿಕ್ಷೇತ್ರದಲ್ಲೂ, ತೋಟಗಾರಿಕೆಯಲ್ಲೂ ಸಿದ್ಧಿಯನ್ನೇ ಕಂಡರು. ಅನುಭವವನ್ನು ಕಾರ್ಯವಾಗಿ ಬೆಳಸಿ ಫಲದರ್ಶನಮಾಡುವ ಸಂತೋಷ ಅವರದಾಯಿತು. ಬೇಸಾಯದಲ್ಲಿ ತಮ್ಮೊಡನೆ ದುಡಿಯಲು ಬಂದ ಕಾರ್ಮಿಕರೊಡನೆ ಪ್ರಜಾಪ್ರಭುತ್ವತತ್ತ್ವದಂತೆ ಸಹೃದಯತೆಯಿಂದಲೂ ನಿಕಟ ಸಂಪರ್ಕದ ಸಮಾನ ಭಾವನೆಯಿಂದಲೂ ನಡೆದುಕೊಂಡು, ಕಾರ್ಮಿಕಸಮುಸ್ಯೆಯು ಕ್ಲೇಶಗಳಿಂದ ದೂರವಾಗುವ ಸವಿಯನ್ನನುಭವಿಸಿದರು. ಅನುಭವವೊಂದು ಮಧುರ ಪಾಕ. ಅದನ್ನು ಕೊಟ್ಟು ಪಡೆಯುವುದರಿಂದ ನಮ್ಮ ಅನುಭವದಲ್ಲಿ ಅತಿಶಯತೆಯೂ ಸಾರ್ಥಕ್ಯವೂ ಸೇರುತ್ತವೆ. ಕಾರ್ಮಿಕರಿಂದ ತಾನು ಕಲಿಯಬೇಕಾದದ್ದಿರುತ್ತವೆ, ಕಾರ್ಮಿಕರು ತನ್ನಿಂದ ಕಲಿಯ ಬೇಕಾದದ್ದಿರುತ್ತದೆ ಎಂದು ಸ್ಕಾಟ್ ಕಾರ್ಮಿಕರಿಗೆ ಸಹ್ಯನೂ, ಪ್ರಿಯನೂ ಆದಂತೆ ಕಾರ್ಮಿಕರೂ ತನಗೆ ಸಹ್ಯರೂ, ಪ್ರಿಯರೂ ಆಗುವಂತೆ ಮಾಡಿಕೊಂಡನು. ಉಭಯರಲ್ಲೂ ಅನುಭವಾಧಾರಪಡೆದ ಕೌಶಲಗಳ ವಿನಿಮಯವಾಗುವುದಕ್ಕೆ ಅವ

ಕಾಶ ಕೊಟ್ಟನು. ಕಾಯಕಜೀವನದ ಪ್ರಾರಂಭದಲ್ಲೇ ಈ ಬಗೆಯ ಹೃದಯ ವ್ಯಾಪಾರದಿಂದ ಔದ್ಯಮಿಕ ಕ್ರಾಂತಿಯ ಪ್ರತ್ಯಕ್ಷಜ್ಞಾನವನ್ನು ತರುಣನು ಹೀರಿದನಲ್ಲದೆ, ಕ್ರಾಂತಿ ಪರಿಚಯದಿಂದ ಕಾರ್ಮಿಕರ ಆಲೋಚನೆ ಹೃದಯಭಾವನೆ ಮನೋವೃತ್ತಿಗಳು ಎಂಥವೆಂಬ ನೇರರಿವನ್ನೂ ಪಡೆದನು. ಇದರಿಂದ ಕಾರ್ಮಿಕರಿಗೂ ತನಗೂ ನಡುವೆ ಒತ್ತಾಯ ಪುಸಲಾಯಿಕೆಗಳ ಪ್ರಯತ್ನವಿಲ್ಲದೆಯೇ ಸಹಜವಾಗಿ ಸಹಾಯ ಸಹಕಾರಗಳು ಲಭ್ಯವಾದುವು.

## ಬಡವರ ಬಂಧು

ಸ್ಕಾಟ್ ಪೂರ್ವವಯಸ್ಸಿನಲ್ಲಿ ಉದ್ಯಮ ಕ್ಷೇತ್ರದ ಕಾರ್ಮಿಕರ ಕಷ್ಟ ಜೀವನ ಸಂದರ್ಭಗಳನ್ನು ಕಂಡು ಅನುತಾಪ ಪಟ್ಟನು. ಎಲ್ಲ ಮಟ್ಟಗಳ ಜನಕ್ಕೂ ಸಮಾನವಾಗಿ ಅನ್ವಯವಾಗಬೇಕಾದ ಮೌಲ್ಯಗಳೂ ಸಾಮಾಜಿಕ ಪ್ರಜ್ಞೆಯೂ ಇಂಥ ದೀನ ಜನಕ್ಕೆ ಇನ್ನೂ ಅನ್ವಯವಾಗದೆ ಹೋಗಿರುವುದನ್ನು ನೋಡಿ ತುಂಬ ಸಂಕಟಪಟ್ಟನು. ಆಮೇಲೆ ಆತ ಉತ್ತರೋತ್ತರ ವಯಸ್ಸಿನಲ್ಲಿ–ಬಡವರನ್ನು ಸುಲಿಗೆ ಮಾಡಿ ಸಿರಿಗಳಿಸುವ ಜನವರ್ಗಗಳ ನಿಲುವನ್ನು ಕಂಡು, ತುಂಬ ನೊಂದನು. ಸಿರಿಯನ್ನು ಕುರಿತು ಸ್ಕಾಟ್ ಅವರ ಅಭಿಪ್ರಾಯ ಇದು: "ಒಡಲ ಹಸಿವುಗಳನ್ನು ಹೇಗೋ ಮುದ್ದಿಸಿ ಲಲ್ಲಯಿಸಿ ಕೆರಳದಂತೆ ಮಾಡಿ ತಣಿವುಕೊಡುವುದು ಸಿರಿಯ ದಾರಿ. ಈ ತಣಿವು ಮನಸ್ಸನ್ನು ಹೊಲೆಗೆಡಿಸುತ್ತದೆ, ಮತ್ತು ಸಿರಿಯೇರುವುದು ನೆರವನ್ನೆಳ್ಳಷ್ಟೂ ಕಾಣದ ಬಡವರ ಸುಲಿಗೆಯಿಂದ." ತನ್ನಂತೆ ಮೇಲ್ಮಟ್ಟದ ಜನವರ್ಗದಲ್ಲಿ ಸಿರಿಯುಂಟು, ಅರಿವುಂಟು, ಐಶ್ವರ್ಯವುಂಟು. ಆದರೆ ಬಡ ಕಾರ್ಮಿಕಗಣ ಕೊಳಕು ಕೊಂಪೆಗಳಲ್ಲೂ ಸೌಕರ್ಯ ಹೀನವಾದ ಗುಡಿಸಲು ಜೋಪಡಿಗಳಲ್ಲೂ ವಾಸಮಾಡುತ್ತ ಆರ್ಥಿಕವಾಗಿ ಹಿಂದುಳಿದಿರುತ್ತಾರೆ; ಅವರಲ್ಲಿ ದಾರಿದ್ರ್ಯವೂ ಅಜ್ಞಾನವೂ ಮನೆಮಾಡಿಕೊಂಡಿರುತ್ತದೆ ಎಂಬುದನ್ನು ಬಡವ–ಬಲ್ಲಿದ ವರ್ಗಗಳ ಹೋಲಿಕೆಯಿಂದ ಮನಗಂಡು ಸ್ಕಾಟ್ ಚುಚ್ಚು ಮಾತುಗಳನ್ನು ಉಚ್ಚರಿಸುವಷ್ಟು ಕೆರಳುತ್ತಿದ್ದರು. ಧನಾಢ್ಯರು ಏಕಮಾನ್ಯವಾಗಿ ಕಟ್ಟಿಕೊಂಡ ಉದ್ಯಮಗಳಲ್ಲಿ ಪೈಪೋಟಿ ನಡಸಿ ಸಿರಿಗಳಿಸುವ ಮೋಸದ ಚಟುವಟಿಕೆ ಹೆಚ್ಚುತ್ತಾ ಇರುವುದರ ಫಲವಾಗಿಯೇ ಜನವರ್ಗದಲ್ಲಿ ದೊಡ್ಡ ಪಾಲು ರೋತೆ ಬಾಳಿಗೆ ದೂಡಲ್ಪಟ್ಟಿದೆ ಎಂಬ ಸತ್ಯಾಧಾರವುಳ್ಳ ತೀರ್ಮಾನಕ್ಕೆ ಸ್ಕಾಟ್ ಬಂದರು. ಆದರೆ ಸ್ಪರ್ಧೆಯ ಸ್ಥಾನದಲ್ಲಿ ಸಹಕಾರವನ್ನು ಪ್ರತಿಷ್ಠಿಸಿದರೆ ಮಾತ್ರ ಕಾರ್ಮಿಕಗಣದಲ್ಲಿ ತೃಪ್ತಿ ಮೂಡೀತು. ಕಾರ್ಮಿಕರಲ್ಲಿ ಒಗ್ಗಟ್ಟು ಹೆಚ್ಚಿ, ಪ್ರಜಾಪ್ರಭುತ್ವ ತತ್ತ್ವಗಳಿಗೆ ಅನುಸಾರವಾಗಿ ಅವರು ಸಂಘಟನೆ ಮಾಡಿಕೊಂಡಲ್ಲಿ ಮಾತ್ರ ಕಾರ್ಮಿಕ ವರ್ಗದಲ್ಲಿ ಎಲ್ಲ ಮಟ್ಟದ ಜನವೂ ಸಂತೃಪ್ತ ಜೀವನವನ್ನು ಕಂಡಾರು ಎಂದು ಅವರು ಅಂತಿಮ ನಿರ್ಣಯಕ್ಕೆ ಬಂದರು. ಹೀಗೆ ಪರಸ್ಪರ ವಿಸದೃಶಗಳಾದ ಜೀವನ ಪರಿಸ್ಥಿತಿಗಳ ಅಧ್ಯಯನದ ಫಲವಾಗಿ ತಾನು ಶ್ರೀಮಂತ ವರ್ಗ

ದಿಂದ ದೂರವಾಗಿ ಬಡ ಕಾರ್ಮಿಕ ವರ್ಗಕ್ಕೆ ನಿಕಟವಾಗಿದ್ದುಕೊಂಡು ಅವರ ಆಶೆ ನಿರಾಶೆಗಳ ಬದುಕು ತನ್ನ ಬದುಕೂ ಆಗಲಿ ಎಂಬ ಅನನ್ಯ ಭಾವನೆಯನ್ನು ತಳೆಯು ವುದು ತನಗೆ ವಿಹಿತವಾದ ಜೀವನ ವ್ರತ ಎಂಬ ದೃಢ ನಿರ್ಧಾರಕ್ಕೆ ಬಂದರು. ವಿಚಾರ ಪರರೂ ಯುಕ್ತಾಯುಕ್ತ ವಿವೇಚನ ಪಟುಗಳೂ ಆದ ಸ್ಕಾಟ್ ಬಡವರ ಜೀವನ ಸ್ಥಿತಿಗತಿಗಳನ್ನು ಆರಯ್ದು ನೋಡಿ, ಉದ್ಯಮ ಸಂಸ್ಥೆಗಳ ಶೋಷಕ ಲಕ್ಷಣವನ್ನೂ, ನಿರ್ದಯ ಪದ್ಧತಿಯನ್ನೂ ಖಂಡಿಸುವುದೇ ತಮ್ಮಿಂದ ಪ್ರಕಟವಾಗಬೇಕಾದ ಯೋಗ್ಯ ಪ್ರತಿಕ್ರಿಯೆ ಎಂದು ಗಟ್ಟಿ ತೀರ್ಮಾನಕ್ಕೆ ಬಂದರು. ಕೂಡಲೆ ಅಮೇರಿಕದ ಕಾರ್ಮಿಕ ಜನವೇಕೆ ಇಂಥ ನೋವಿಡಿದ ಬದುಕನ್ನು ಬಾಳುತ್ತಿದ್ದಾರೆಂಬುದನ್ನು ಬುಡಮುಟ್ಟ ಶೋಧಿಸಿ ತಿಳಿಯಲು ಆತ ಎದೆಕುದಿಯಿಂದ ಕುತೂಹಲಿಸಿದರು. ಕಾರ್ಮಿಕ ಸಮಸ್ಯೆ ಗಳನ್ನು, ಸಮಾಲೋಚಿಸುವ ಪುಸ್ತಕ ವರದಿಗಳನ್ನು ತರಿಸಿಕೊಂಡು ಓದಿದರು. ಇಂಥ ಪುಸ್ತಕಗಳ ಸಹವಾಸ ಅವರಿಗೆ ತುಂಬ ಪ್ರಿಯವಾಗಿ ಅನೇಕ ಸಂಗತಿಗಳು ತಿಳಿವಳಿಕೆಗೆ ಬಂದವು. ಆಳವಾಗಿ ಓದು, ಸ್ನೇಹಿತರೊಡನೆ ನಿರಂತರವಾದ ಚರ್ಚೆ, ವಾಸ್ತವಾಂಶಗಳ ಯಥೇಷ್ಟ ಸಂಗ್ರಹ, ಈ ಅಂಕೆ ಅಂಶಗಳಿಗೂ ಕಾರ್ಮಿಕರ ಸಾಕ್ಷಾತ್ ಜೀವನಕ್ಕೂ ಇರುವ ಸಂಬಂಧ ವಿವೇಚನೆ, ನ್ಯಾಯವಾದ, ಸಮಸ್ತಜನಕ್ಕೆ ಅನ್ವಯಿ ಸುವ, ಜೀವಿತ ಸೂತ್ರದ ಕಲ್ಪನೆ– ಈ ಬಗ್ಗೆ ತನ್ನಲ್ಲಿ ತಾನೇ ಚರ್ಚೆಮಾಡುವುದಲ್ಲದೆ ಹೆರವರೊಡನೆಯೂ ಚರ್ಚೆಮಾಡಿ, ಅಮೆರಿಕದ ಕಾರ್ಮಿಕ ಪ್ರಶ್ನೆಯ ಪಕ್ಕದಲ್ಲಿ ಸಮಾಜದ ಧೋರಣೆಯನ್ನು ಇರಿಸಿ, – ಕಾರ್ಮಿಕರಿಗೆ ಆಗುತ್ತಿರುವ ಅನ್ಯಾಯಗಳ ಒಟ್ಟು ಚಿತ್ರವನ್ನು ಮನಸ್ಸಿಗೆ ಸ್ಪಷ್ಟಪಡಿಸಿಕೊಂಡರು. ಹೀಗೆ ಕಾರ್ಮಿಕ ಸಮಸ್ಯೆ ಗಿರುವ ಸರ್ವಮುಖಗಳನ್ನು ಪರಿಶೀಲಿಸಿ ಒಳ್ಳೆಯ ಬಾಳಿಗೆ ಅವಕಾಶ ಪಡೆಯದ ಕಾರ್ಮಿಕರ ಹಿತಸಾಧನೆಗೆ ತಮ್ಮನ್ನು ತೆತ್ತುಕೊಂಡರು. ಯಂತ್ರೋದ್ಯಮದ ಸಮಗ್ರ ವಾಸ್ತವ ಪರಿಸ್ಥಿತಿಯ ನಿಕಟ ಪರಿಚಯವನ್ನು ಪಡೆದು, ಅಂಥಸ್ಥಿತಿಗೆ ಕಾರಣ ವಾದ ಸಮಾಜದ ಧೋರಣೆಯ ಬಗ್ಗೆ ವಿಮರ್ಶನ ಪಟುತೆಯನ್ನೂ ಬೆಳಸಿಕೊಂಡು, ತನ್ನ ಜೀವಮಾನವನ್ನೆಲ್ಲ ಈ ಸಮಸ್ಯೆಯ ಪರಿಹಾರ ಪ್ರಯತ್ನಕೋಸ್ಕರ ಸ್ಕಾಟ್ ದೀಕ್ಷೆ ತಳೆದರು. ಕಾರ್ಯಕಾರಣ ಸರಣಿಯ ದೃಷ್ಟಿಯಿಂದ ಸಮಸ್ಯೆ ಹೇಗೆ ಕಗ್ಗಂಟಾ ಗುತ್ತಿದೆಯೆಂಬುದನ್ನು ಆಳವಾಗಿ ವಿಚಾರ ಮಾಡಿ, ವಸ್ತುನಿಷ್ಠವಾದ ನಿರ್ವಿಕಾರ ಬುದ್ಧಿಯಿಂದ ಸಮಸ್ಯೆಯನ್ನು ತಾಗಿ, ತರ್ಕಬದ್ಧವಾದ ಪರಿಹಾರ ಹೇಗೆಂಬುದನ್ನು ಮನಸ್ಸಿಗೆ ಸುಸ್ಪಷ್ಟಪಡಿಸಿಕೊಂಡರು.

## ಪ್ಯಾಟೆನ್ ಗುರು ಕೊಟ್ಟ ಅಧ್ಯಯನ ಸ್ಫೂರ್ತಿ

ಹೈಸ್ಕೂಲು ಶಿಕ್ಷಣವನ್ನು ಮುಗಿಸಿ ಸ್ಕಾಟ್ ಪೆನ್ಸಿಲ್ವೇನಿಯ ವಿಶ್ವವಿದ್ಯಾ ನಿಲಯದ ನಾಲ್ಕು ವರ್ಷಗಳ ಅವಧಿಯ ವಿದ್ಯಾರ್ಥಿವೇತನವನ್ನು ಪಡೆದು ಕಾಲೇಜು ಶಿಕ್ಷಣವನ್ನು ಮುಂದುವರಿಸಿದರು. ಆಮೇಲೆ ಸ್ನಾತಕೋತ್ತರ ಶಿಕ್ಷಣವನ್ನುಕೈಕೊಂಡು

ಕಾನೂನನ್ನು ಓದಲು ಪ್ರಯತ್ನಿಸಿದರಾದರೂ ಒಂದು ವರ್ಷದ ವ್ಯಾಸಂಗ ಮುಗಿ ದೊಡನೆ, ತಾನೆಲ್ಲಿ ಮುಂದೆ ಯಂತ್ರೋದ್ಯಮ ಹಾಗೂ ವಾಣಿಜ್ಯ ಕಾರ್ಪೊರೇಷನ್ ಸಂಸ್ಥೆಗಳ ವಕಾಲತ್ತನ್ನು ವಹಿಸಬೇಕಾದೀತೋ ಎಂಬ ಅಳುಕಿನಿಂದ ಕಾನೂನು ಶಿಕ್ಷಣವನ್ನು ಮುಗಿಸದೆ ಕೈಬಿಟ್ಟರು! ಉದ್ಯೋಗಾರ್ಥಿಯಾಗಿ ತನಗೆ ಒಗ್ಗುವ ಕಸುಬು ಯಾವುದೆಂದು ತುಂಬ ಯೋಚಿಸಿದರು. ಸರಕಾರಿ ನೌಕರಿಯೆ, ಅಧ್ಯಾಪಕ ವೃತ್ತಿಯೆ, ಸಾಹಿತ್ಯರಚನೆಯೆ, ವಿಜ್ಞಾನ ಸಂಶೋಧನೆಯೆ – ಎಂದು ಮುಂತಾಗಿ ಅಳೆದು ಸುರಿದು, ಕಡೆಗೆ 1903 ರಲ್ಲಿ ಅರ್ಥಶಾಸ್ತ್ರದ ಅಧ್ಯಾಪಕನಾಗುವುದು ತನ್ನ ಮನೋಧರ್ಮಕ್ಕೆ ಉಚಿತವೆಂದು ನಿರ್ಣಯಿಸಿದರು. ಈ ವೃತ್ತಿಯಾದರೆ ಆರ್ಥಿಕ ಶಕ್ತಿಗಳೂ ಅದರ ಚಲನವಲನಗಳೂ ಸಮಾಜವನ್ನು ಎಷ್ಟು ಮಟ್ಟಿಗೆ ಬಾಧಿಸುತ್ತವೆ, ಪೌರಜೀವನದ ಎಲ್ಲ ಮುಖಗಳನ್ನೂ ಮುಟ್ಟಿ ಎಂಥ ಬದುಕನ್ನು ನಿರ್ಬಂಧಿಸುತ್ತವೆ ಎಂಬುದನ್ನು ವಿಶದ ಪಡಿಸಿಕೊಳ್ಳಲು ತನಗೆ ಯಥೇಷ್ಟಾವಕಾಶಗಳಿರುತ್ತವೆ ಎಂದು ಅರ್ಥಶಾಸ್ತ್ರವನ್ನು ಪಾಠ ಹೇಳುವ ಕಸುಬನ್ನು ಸ್ಕಾಟ್ ಹಿಡಿದರು.

ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣ ಪಡೆಯಲು ಸೇರಿದಾಗ ಸ್ಕಾಟಿಗೆ ಪ್ರೊ॥ ಎಸ್. ಎನ್. ಪ್ಯಾಟೆನ್ ಎಂಬ ಗುರುವಿನ ಮಾರ್ಗದರ್ಶನ ದೊರೆಯಿತು. ಶಿಷ್ಯನಿಗೆ ಇತಿಹಾಸ, ಸಮಾಜಶಾಸ್ತ್ರ ಮತ್ತು ರಾಜ್ಯಶಾಸ್ತ್ರಗಳಲ್ಲಿ ಆಸಕ್ತಿಯಿರುವುದನ್ನು ಗುರು ಗುರುತಿಸಿದರು. ತನಗೆ ತಕ್ಕ ಗುರು ಇವರು ಎಂದು ಶಿಷ್ಯನೂ ಗುರುತಿ ಸಿದನು. ಅವರನ್ನು ತನ್ನ ಪ್ರೌಢ ವ್ಯಾಸಂಗಕಾಲದಲ್ಲಿ 'ಇಷ್ಟ ಗುರು' ಎಂದು ಸ್ವೀಕರಿಸಿದನು. ಗುರುವಿನ ಜ್ಞಾನ ನಿಷ್ಕೃಷ್ಟತೆಯನ್ನೂ, ಪ್ರವಚನ ಕಾಲದ ವಿಚಾರ ಪ್ರಚೋದಕ ವಿಧಾನವನ್ನೂ, ತಲಸ್ಪರ್ಶಿಯಾದ ಮೇಧಾಶಕ್ತಿಯನ್ನೂ, ಅನುಪಮ ಶಿಷ್ಯವಾತ್ಸಲ್ಯವನ್ನೂ ಕಂಡು ಶಿಷ್ಯರೆಲ್ಲ ಆತನನ್ನು ತುಂಬ ಗೌರವಿಸು ತ್ತಿದ್ದರು. ಆದರೆ ಸ್ಕಾಟ್ ಅವರ ಮಾರ್ಗದರ್ಶನವನ್ನು ಬಳಸಿಕೊಂಡದ್ದು ಹೀಗೆ: ವಿಷಯ ವರ್ಗೀಕರಣ, ವಿಷಯದ ಅಂಶಾಂಶ ವಿಭಜನೆ, ವಿಷಯದ ವಿವಿಧಾಂಶಗಳಲ್ಲಿ ರುವ ಅನ್ಯೋನ್ಯ ಸಂಬಂಧಗ್ರಹಣ, ವಿಷಯ ಸ್ವರೂಪದ–ವ್ಯಾಖ್ಯಾನ ಮತ್ತು ಆಖೈರಾಗಿ ತರ್ಕಬದ್ಧವಾದ ನಿರ್ಣಯಕ್ಕೆ ಬರುವ ಗುರುವಿನ ಚದುರು ಇವೆಲ್ಲ ಶಿಷ್ಯ ನಿಗೆ ಅನುಕರಣೀಯವಾಯಿತು. ಬಡವರೂ ನಿರುದ್ಯೋಗಿಗಳೂ ಅಜ್ಞಾನಿಗಳೂ ಸಂಘವ್ಯವಸ್ಥಾಹೀನರೂ ಆದ ನಿಮ್ನ ವರ್ಗದ ಜನರಲ್ಲಿ ಆರ್ಥಿಕ ಪುರೋಭಿ ವೃದ್ಧಿಯಾಗುವುದು ಜರೂರಾದ ಪ್ರಶ್ನೆ; ಮತ್ತು ಈ ಪ್ರಶ್ನೆಯ ಪರಿಹಾರವು ವ್ಯವಹಾರ ಸಾಧ್ಯವಾದದ್ದು ಎಂದು ಗುರು ತನಗೆ ಸ್ಪಷ್ಟವಾಗಿ ಮನವರಿಕೆಮಾಡಿಕೊಂಡೇ ಪಾಠ ಹೇಳುತ್ತಿದ್ದದ್ದನ್ನು ಶಿಷ್ಯ ಸ್ಕಾಟ್ ಗಮನಿಸಿದನು. ದುರ್ದೈವವಶಾತ್ ಅಮೆರಿಕದ ಸಮಾಜದಲ್ಲಿ ಸಿರಿಯಿರುವವ – ಸಿರಿಯಿಲ್ಲದವ (ಬಡವ–ಬಲ್ಲಿದ) ಎಂಬ ವಾಸ್ತವ ತಾರತಮ್ಯಸ್ಥಿತಿಯಿರುವುದನ್ನು ಮನಸ್ಸಿಗೆ ವಿಶದಪಡಿಸಿಕೊಂಡೇ ಗುರು ತನ್ನ

ಅಧ್ಯಾಪಕಸ್ಥಾನಕ್ಕಿರುವ ಮಹತ್ತ್ವವನ್ನು ಗುರುತಿಸಿಕೊಂಡು ಹೀಗೆ ಅದನ್ನು ಬಣ್ಣಿಸುತ್ತಿದ್ದರು. "ಅಧ್ಯಾಪಕನ ನೆಲೆ ಬವರದ ಮುಂಚೂಣಿಯಲ್ಲಿದ್ದು ಮುನ್ನಡೆಗಾಗಿ ಕಾಯಕ ಮಾಡುವುದು." ಆದದ್ದರಿಂದ ವಿದ್ಯಾರ್ಥಿ ಸ್ಕಾಟ್ ಈತನನ್ನು 'ಮಹಾಗುರು" ಎಂದು ಮೆಚ್ಚಿಕೊಂಡನು. ತರಗತಿಯಲ್ಲಿ ಗುರು ಪ್ರವಚನ ಮಾಡುವಾಗ ತನ್ನ ನಂಬಿಕೆಯ ಬೆಳಕಿನಲ್ಲೇ ವಿಷಯ ನಿರೂಪಣೆ ಹಾಗೂ ಪ್ರತಿಪಾದನೆ ಮಾಡುತ್ತಿದ್ದರು. 1917 ರ ಆದಿಯಲ್ಲಿ ಪ್ರಕಟವಾದ ಯುದ್ಧೋನ್ಮಾದಗಳಿಗೆ ಬಲಿಯಾಗಿದ್ದವರು ಇವರು. ಆಮೂಲಾಗ್ರ ಪರಿವರ್ತನವಾದಿ ( ರ್‍ಯಾಡಿಕಲ್ ) ಪ್ಯಾಟೆನ್ ಆಗ ಹೀಗೆ ಉದ್ಗಾರ ಮಾಡಿದ್ದರು. 'ರಷ್ಯಾಕ್ರಾಂತಿಗೆ ಉಘೆ'! ಸಮಕಾಲೀನ ಘಟನೆಗಳ ಬಗ್ಗೆ ಗುರುವಿನ ಈ ಎರಡು ಸೂಕ್ತಿಗಳು ತರುಣ ಸ್ಕಾಟಿಗೆ ಸಮಕಾಲೀನ ವಿದ್ಯಮಾನಗಳ ಬಗ್ಗೆ ಸಕಾಲಿಕ ಟೀಕೆಗಳೆನ್ನಿಸಿದುವು. ತರುಣನ ನಂಬಿಕೆಯನ್ನು ಬಲಪಡಿಸಿದುವು. "ಒಳ್ಳೆಯ ಬಾಳನ್ನು ಬದುಕಲು ಪ್ರತಿಯೊಬ್ಬನಿಗೂ ಅವಕಾಶವಿರಬೇಕು" ಎಂಬ ತರುಣನ ನಂಬಿಕೆಗೆ ಗುರು ಒಡಂಬಟ್ಟು ತನ್ನನ್ನು ಹರಸಿದರೆಂದು ಸ್ಕಾಟ್ ಭಾವಿಸಿದನು.

## ಸರ್ವಾಧಿಕಾರೀ ಶಾಸನಗಳ ಪ್ರತಿಭಟನೆ:
## ಟಾಲ್‌ಸ್ಟಾಯಿಯವರ ಆದರ್ಶ

ತಾಯಿ, ತಾತ, ಗುರು ಪ್ಯಾಟೆನ್ ಇವರ ಜೊತೆಗೆ ತರುಣ ಸ್ಕಾಟನ ಮೇಲೆ ದೊಡ್ಡ ಪ್ರಭಾವ ಬೀರಿದ ನಾಲ್ಕನೆಯ ಮಹನೀಯನೆಂದರೆ ಕೌಂಟ್ ಲಿಯೋ ಟಾಲ್‌ಸ್ಟಾಯ್. ಈತ ತಾನು ಜನ್ಮವೆತ್ತಿದ್ದ ಮೇಲ್ಮಟ್ಟದ ಸಾಮಾಜಿಕ ವರ್ಗದಲ್ಲಾದರೂ ಅ ವರ್ಗದ ಧ್ಯೇಯ ಧೋರಣೆಗಳ ವಿರುದ್ಧ ಬಂಡೆದ್ದವನಲ್ಲದೆ, ತ್ಸಾರ್ ಚಕ್ರವರ್ತಿಗಳ ಆಶ್ರಯದಲ್ಲಿ ಪೌರ ಪ್ರಭುತ್ವವೂ, ಮತಧರ್ಮ ಪ್ರಭುತ್ವವೂ ಹೊರಡಿಸುತ್ತಿದ್ದ ಸರ್ವಾಧಿಕಾರೀ ಶಾಸನಗಳ ವಿರುದ್ಧವಾಗಿ ಆಕ್ಷೇಪಕವಾಣಿಯನ್ನು ಮೊಳಗಿದನು. ಸೊತ್ತು, ವರ್ಗ, ಜಾತಿಭೇದಗಳು ಮತ್ತು ಇತರ ಇಂಥ ಭೇದ ಭಾವನೆಗಳಿಗೆ ಇಂಬುಗೊಟ್ಟು ಬೆಳೆದ ಸಂಸ್ಥೆ ಪದ್ಧತಿಗಳು, ಲಾಭೈಕನಿಷ್ಠ, ಸಂಪದಾರ್ಜನನಿಷ್ಠ ಹಾಗೂ ಸ್ಪರ್ಧಾತ್ಮಕ ಸಮಾಜದ ಕೇಡುಗಳು- ಇವುಗಳ ವಿರುದ್ಧ ಬಿರುಸಾಗಿ ಕಾಳಗವನ್ನೇ ನಡಸಿದನು. ಎಲ್ಲ ಬಗೆಯ ಜಾತಿ ಮತ್ತು ವರ್ಗ ಭೇದಗಳನ್ನು ರದ್ದು ಪಡಿಸಬೇಕೆಂದು ದೊಡ್ಡ ಚಳವಳಿಯನ್ನೇ ಹೂಡಿದನು. ತರುಣ ಸ್ಕಾಟಿನಲ್ಲಿ ಚಿಕ್ಕಂದಿನಿಂದ ಅನನ್ಯ ಸಾಧಾರಣವಾದ ಪ್ರತಿಭೆ ಪ್ರಕಟವಾಗುತ್ತ ಬಂದಿತ್ತು. ಆತನ ಕುತೂಹಲಪೂರ್ವಕವಾದ ವಸ್ತುಸಂದರ್ಭವೀಕ್ಷಣ ಕೌಶಲವೂ ಜನ ಮನೋಭಾವಗ್ರಹಣಶೀಲವೂ ಕ್ರಮವಾಗಿ ಬಲಿತಿದ್ದುವು. ಟಾಲ್‌ಸ್ಟಾಯಿಯವರ ವ್ಯಕ್ತಿತ್ವವನ್ನೂ, ಕೃತಿವಿಸ್ತರವನ್ನೂ ಪರಿಚಯ ಮಾಡಿಕೊಂಡಮೇಲೆ, ಎಲ್ಲೆಲ್ಲಿ ನಿರಂಕುಶಾಧಿಕಾರ, ದೀನಜನ ಶೋಷಣೆ, ನಿಷ್ಠುರ ಸ್ವಾಮಿ-ಭೃತ್ಯ ಸಂಬಂಧ ಮತ್ತು ಕಠೋರ ಅಪರಾಜ

ತನ ಕಂಡುಬರುತ್ತದೆಯೋ ಅಲ್ಲೆಲ್ಲ ಉಗ್ರ ಪ್ರತಿಭಟಕ ವಾಣಿಯನ್ನು ತಾರಸ್ಥಾಯಿ ಯಲ್ಲಿ ಎತ್ತುವುದು ತನಗೆ ಪರಮ ಕರ್ತವ್ಯವೆಂದು ಸ್ಕಾಟ್ ತೀರ್ಮಾನಿಸಿದನು. ರಷ್ಯದ ಕ್ರಾಂತಿ ಸಾಹಿತಿಗಳ ಆಕಾಶದಲ್ಲಿ ಬೆಳಗುವ ಮಹಾ ನಕ್ಷತ್ರಗಳಲ್ಲಿ ಟಾಲ್‌ಸ್ಟಾಯ್ ಒಬ್ಬನೆಂದು ಅವರಿಗೆ ಗೌರವ ಸಮರ್ಪಣೆ ಮಾಡಿದನು. ಅದರಲ್ಲೂ ಟಾಲ್‌ಸ್ಟಾಯ್ ಅವರ ನಿರಂತರ ಪರಿಪ್ರಶ್ನಕಮತಿ, ಸಂತತ ಪ್ರತಿಭಟಕವೃತ್ತಿ ಮತ್ತು ದಬ್ಬಾ ಳಿಕೆಗೆ ತಪ್ಪದೆ ನೀಡಿದ ಅಸಹಕಾರ ಎಂಬೀ ತ್ರಿಮುಖ ಪ್ರತಿಕ್ರಿಯಾತಂತ್ರಕ್ಕೆ ಸ್ಕಾಟ್ ತುಂಬ ಬೆಲೆ ಕೊಟ್ಟನು.

ತನ್ನ ವಿಚಾರಶಕ್ತಿಯ ವಿಕಾಸವನ್ನೂ ಜಾಗೃತಿಯನ್ನೂ ಕರ್ಮಕರಣ ಶಕ್ತಿಯ ನಿಶ್ಚಯವನ್ನೂ ಮೇಲ್ಕಂಡ ನಾಲ್ವರು ಗುರುಗಳ ಉಪದೇಶ ಪ್ರಭಾವ ಹೇಗೆ ಆಗಮಾಡಿಸಿತೆಂದು ಸ್ಕಾಟ್ ಮುಂದೆ ತಮ್ಮ ಜೀವನ ಚರಿತ್ರೆಯಲ್ಲಿ ವಿವರಿಸಿ ಕೃತಜ್ಞತೆ ಸಲ್ಲಿಸುತ್ತಾರೆ. ತನ್ನಲ್ಲಿ ಸತ್ಯನಿಷ್ಠೆ, ಪುರುಷಾರ್ಥ ವಿವೇಕ, ವೈಯಕ್ತಿಕ ನೀತ್ಯನುಷ್ಠಾನಕ್ಷಮತೆ, ಸಾಮಾಜಿಕ ಪ್ರಜ್ಞೆ ಮತ್ತು ತನ್ನ ಕಾಯಕವನ್ನು ಬಲ ಕೊಟ್ಟು ನಡಸುವ ನಂಬಿಕೆ – ಇವೆಲ್ಲ ತನ್ನ ಶೀಲಕ್ಕೆ ಒಂದು ರೂಪವನ್ನು ಕೊಡುವಂತೆ ಈ ಗುರು ಚತುಷ್ಟಯದ ಪ್ರಭಾವ ಉಪಕರಿಸಿತೆಂದು ಸ್ಕಾಟ್ ಅಡಿಗಡಿಗೆ ನೆನೆಯು ತ್ತಿರುತ್ತಾರೆ. ಮೊದಮೊದಲು ಅವರು ನಿಶ್ಚಲ ಮನಸ್ಸಿನಿಂದ ದುಡಿಯ ಹೊರಟಾಗ ತುಂಬ ದುಗುಡವನ್ನೂ, ತಳಮಳವನ್ನೂ ಅನುಭವಿಸಿದರು. ಆದರೆ ದುಗುಡವನ್ನು ಅದುಮಿ ಕ್ರಿಯಾತ್ಮಕವೂ, ತೃಪ್ತಿದಾಯಕವೂ, ಫಲಕಾರಿಯೂ ಆದ ಕಾಯಕವನ್ನು ಬದುಕಿನ ಉದ್ದಕ್ಕೂ ನಡಸುವ ಸ್ಫೂರ್ತಿಯನ್ನು ಈ ಗುರುಗಳಿಂದ ಪಡೆದರು. ಟಾಲ್‌ಸ್ಟಾಯ್ ಅವರ ಪಂಚಮುಖ ಕಾರ್ಯಕ್ರಮ ಸ್ಕಾಟ್ ಅವರಿಗೆ ಪ್ರಿಯ ವಾಯಿತು. ರಷ್ಯಾದ ಆ ಋಷಿ ರಾಷ್ಟ್ರದ ಮುಂದಿಟ್ಟ ಆ ಕಾರ್ಯಕ್ರಮವಿದು. (1)ಜನದ ಯಾತನೆಯನ್ನು ತಪ್ಪಿಸುವುದು, (2) ಯುದ್ಧಗಳಾಗುವುದನ್ನು ತಡೆದು ವಿಶ್ವಶಾಂತಿಗೆ ಅವಕಾಶ ಮಾಡುವುದು, (3) ಯಾರಿಗೂ ಕೇಡು ಮಾಡದೆ ಎಲ್ಲರನ್ನೂ ಪ್ರೀತಿ ಸುವುದು, (4) ಎಲ್ಲಾದರೂ ಬೆಂಕಿ ಬಿದ್ದರೆ ತಡಮಾಡದೆ ಆರಿಸುವ ಪ್ರಯತ್ನದಲ್ಲಿ ಸೇರಿ ಸಹಕರಿಸುವುದು, (5) ಅಧರ್ಮಕ್ಕೆ ವಿರುದ್ಧ ಅಹಿಂಸಾತ್ಮಕ ಪ್ರತ್ಯಾಚರಣೆಯನ್ನು ಸಂಘಟಿಸುವುದು. ಟಾಲ್‌ಸ್ಟಾಯಿಯವರ ಉಪದೇಶದ ಈ ಸಾಮಾಜಿಕ ಮುಖಕ್ಕೂ ಸ್ಕಾಟ್ ಅವರು ಮೆಚ್ಚಿಕೆ ಸಲ್ಲಿಸಿದರು. ಪೈಪೋಟಿಯನ್ನು ಹೋಗಲಾಡಿಸಿ, ಸೊತ್ತು ಗಳಿಕೆಯ ಮೋಹವನ್ನು ಬಿಡಿಸಿ, ಸಹಕಾರ ವೃತ್ತಿಯ ಮೂಲಕ ಸಾಮಾಜಿಕರು ಬೇರೆ ಬೇರೆ ಕಸಬುಗಳಲ್ಲೂ ವೃತ್ತಿಜ್ಞಾನಾರ್ಜನೆಯ ನಿರ್ವಾಹದಲ್ಲೂ ತೊಡಗಿ ಒಳ್ಳೆಯ ಬದುಕನ್ನು ಸಾಗಿಸಲು ಪ್ರಯತ್ನಪಡಬೇಕೆಂಬುದೇ ಟಾಲ್‌ಸ್ಟಾಯಿಯವರ ಪರಮ ವಿಶ್ವಾಸ. ಅವರ ವಿಶ್ವಾಸವನ್ನು ಸ್ಕಾಟ್ ತಮ್ಮ ವಿಶ್ವಾಸವಾಗಿ ಸ್ವೀಕರಿಸಿ ಅದಕ್ಕೆ ತಮ್ಮ ಹೃದಯಾಂಗೀಕಾರವನ್ನು ಕೊಟ್ಟರು. ಈ ತಮ್ಮ ಮನವರಿಕೆಯನ್ನವರು

ಜಾನ್ ರಸ್ಕಿನ್ ಮಹಾಶಯನ ಈ ಮುಂದಿನ ಮಾತುಗಳನ್ನು ಉಚ್ಚರಿಸಿ ಸ್ಥಿರೀಕರಿಸುತ್ತಾರೆ.

"ಅನಾವಶ್ಯಕವಾಗಿ ನಾನು ಯಾವ ಜೀವಂತ ಪ್ರಾಣಿಯನ್ನೂ ಕೊಲ್ಲುವುದಿಲ್ಲ, ಇಲ್ಲವೆ ಹಿಂಸಿಸುವುದಿಲ್ಲ. ಚೆಲುವಾದದ್ದನ್ನು ಅಳಿಯುವುದಿಲ್ಲ. ಎಲ್ಲ ಜೀವಭೂತಗಳ ಮೃದು ಜೀವನವನ್ನೂ ನಾಶಗತಿಯಿಂದ ಕೂಡಿದ ಮಟ್ಟಿಗೂ ಕಾಪಾಡಿ, ಪೃಥ್ವಿಯ ನೈಸರ್ಗಿಕ ಸೌಂದರ್ಯವನ್ನೂ, ಋತನಿಯಮವನ್ನೂ ಕಾವಲಿದ್ದು ಸಂರಕ್ಷಿಸುತ್ತೇನೆ."1

## ದೊಡ್ಡ ವಿಚಾರಗಳಿಗೆ ಋಣಿಯಾಗದೆ ಜೀವನ ವಿಕಾಸವಿಲ್ಲ

ಸ್ಕಾಟ್ ಅವರು ಇಳೆಯಲ್ಲಿ ಯಾರ್ಯಾರಿಗೆ ಯಾವಯಾವುದಕ್ಕೆ ಋಣಿಗಳೋ ಆ ಋಣವನ್ನು ಮುಕ್ತ ಹೃದಯದಿಂದ ಒಪ್ಪಿಕೊಳ್ಳುತ್ತಾರೆ. ಅವರು ತಮ್ಮ ವ್ಯಕ್ತಿತ್ವಕ್ಕೆ ಸಂಬಂಧಪಟ್ಟಂತೆಯೂ ಕೃತಿ ರಚನೆಗೆ ಸಂಬಂಧಪಟ್ಟಂತೆಯೂ ತಮ್ಮ ಋಣಾಂಗೀಕಾರವನ್ನು ಹೀಗೆ ಆತ್ಮ ಕಥೆಯಲ್ಲಿ ಬಿನ್ನೈಸಿದ್ದಾರೆ:—

"ಸೋಕ್ರೆಟೀಸ್ ಮತ್ತು ಆತನ ಸಾಧುತರ್ಕನಿಯಮ; ಬುದ್ಧ ಮತ್ತು ಆತನ ಪಾಪದೂರವಾದ ಅಹಿಂಸಾತತ್ತ್ವ; ಲಾಓಟ್ಸು ಮತ್ತು ಗಾಂಧಿ, ಹಾಗೂ ಅವರ ಅಹಿಂಸಾತತ್ತ್ವ; ಯೇಸು ಮತ್ತು ಆತನ ಸಮಾಜಸೇವೆ; ಕನ್ಫೂಷಸ್ ಮತ್ತು ಆತನ ಸುವರ್ಣಮಧ್ಯಮಾರ್ಗ; ತೋರೋ ಮತ್ತು ಆತನ ಸರಳಜೀವನ; ವಿಟ್ಮನ್ ಮತ್ತು ಇತರ ಪ್ರಕೃತಿ ಪೂಜಕರು; ಮಾರ್ಕ್ಸ್, ಎಂಗೆಲ್ಸ್ ಮತ್ತು ಲೆನಿನ್– ಈ ಮಹಾವ್ಯಕ್ತಿತ್ರಯವು ಶೋಷಣೆಯ ಬಗೆಗೂ, ಕ್ರಾಂತಿಯ ಬಗೆಗೂ, ಇಳೆಗೆ ಕೊಟ್ಟ ವಿಚಾರಧಾರೆಗಳು; ವಿಕ್ಟರ್‌ಹ್ಯೂಗೋ ಮತ್ತು ಮಾನವತಾವಾದ; ಬೆಲ್ಲಮಿ ಮತ್ತು ಇತರ ಆದರ್ಶ ರಾಜ್ಯವಾದಿಗಳು, ಆಲಿವ್ ಷ್ಕ್ರೀನರ್ ಮತ್ತು ಇತರ ತತ್ತ್ವರೂಪಕ ಪ್ರಿಯರು, ಬಕ್ ಅವರ ವಿಶ್ವ ಪ್ರಜ್ಞೆ; ಮತ್ತು ರೋಮೋ ರೋಲಾ ಅವರ ಜೀನ್ ಕ್ರಿಸ್ಟಫಿ" 2

ಸ್ಕಾಟ್ ಅವರ ಆತ್ಮಚರಿತ್ರೆಯಿಂದ ಉದ್ಧರಿಸಿದ ಈ ಮೇಲಣ ವಾಕ್ಯಗಳು ಅವರ ವ್ಯಾಪಕವಾದ ಲೋಕಾನುಭವದ ಸಾರಸಂಗ್ರಹಶೀಲವನ್ನು ಸರ್ವತ್ರಾನ್ವಯ ಕ್ಷಮವಾದ ಸಮೀಚೀನ ವಿಚಾರ ಸಂಪತ್ತನ್ನೂ ತಲಸ್ಪರ್ಶಿಯಾದ ಪಾಂಡಿತ್ಯದ

---

1 ಮತ್ತು 2 ಅಮೂಲಾಗ್ರ ಸುಧಾರಕನ ಸಾಧನೆ : ಒಂದು ರಾಜಕೀಯ ಆತ್ಮಕಥೆ : ಸ್ಕಾಟ್ ನಿಯರಿಂಗ್, ಹಾರ್ಪರ್ ಅಂಡ್ ರೋ, ನ್ಯೂಯಾರ್ಕ್. 1972 (ಪುಟ 29)

ಆಕರಗಳನ್ನೂ ಸ್ಥೂಲವಾಗಿ ಸೂಚಿಸುತ್ತವೆ. "ಮಂಗಳಕರವಾದ ಆಲೋಚನೆಯನ್ನು ಎಲ್ಲ ದಿಕ್ಕುಗಳಿಂದಲೂ ಬರಮಾಡಿಕೊಳ್ಳಲು ಅಣಿಯಾಗಿರು'' ಎಂಬ ಭಾರತೀಯ ವೇದಾನುಶಾಸನಕ್ಕೆ ವಿಶೇಷಗೌರವ ಸಮ್ಮಾನಗಳನ್ನು ಈ ಮನೋಭಾವ ಸಲ್ಲಿಸ ತಕ್ಕದ್ದಾಗಿದೆ.

ಆ ನೋ ಭದ್ರಾಃ ಕ್ರತವೋ ಯಂತು ವಿಶ್ವತಃ ।
—ಋಗ್ವೇದ 1-89-1

ಮೇಲೆ ಹೆಸರಿಸಿದ ನಾಲ್ವರು ಗುರುಗಳ ಸಂಗತಿಯನ್ನು ಸ್ಕಾಟ್ ತಮ್ಮ ಆತ್ಮ ಕಥೆಯಲ್ಲಿ ಪ್ರಸ್ತಾಪಿಸಿ, ಆ ಗುರುಚತುಷ್ಟಯದಿಂದ ತಮ್ಮ ಆಲೋಚನೆಯೂ ದರ್ಶನವೂ ಹೇಗೆ ವಿವಿಧಾಂಶ ಸಂಘಟನೆಯಿಂದ ಐಕ್ಯಸ್ವರೂಪ ಪಡೆಯಿತೆಂಬು ದನ್ನೂ, ಹೇಗೆ ತಮ್ಮ ಚಾರಿತ್ರ್ಯಕ್ಕೂ, ಜೀವನಕ್ಕೂ ಶೋಭೆಯೂ ಅರ್ಥವೂ ಅವರ ಉಪದೇಶದಿಂದ ಲಭ್ಯವಾಯಿತೆಂಬುದನ್ನೂ, ಮಾನವತಾ ಧರ್ಮ, ಸಮಾಜಧರ್ಮ ಮತ್ತು ವಿಶ್ವಶಾಂತಿಗಳಿಗೆ ತಮ್ಮ ಬದುಕನ್ನು ಮುಡಿಪು ಕಟ್ಟುವುದು ತಮಗೆ ಹೇಗೆ ಸಾಧ್ಯವಾಯಿತೆಂಬುದನ್ನೂ ಸ್ಪಷ್ಟವಾಗಿ ಹೇಳಿ, ಧನ್ಯತೆಯಿಂದ ಅವರನ್ನು ನೆನೆಯುತ್ತಾರೆ.

## ವೃತ್ತಿಯಲ್ಲಿ ಕೃತಕೃತ್ಯತೆ : ವಿಶ್ವವಿದ್ಯಾಲಯದಿಂದ ಬಹಿಷ್ಕರಣ ಶಿಕ್ಷೆ !

ಸ್ಕಾಟ್ ವಿದ್ಯಾರ್ಥಿಯಾಗಿ 1905 ರಲ್ಲಿ ಎರಡು ಉಪಾಧಿಗಳನ್ನು (ಡಿಗ್ರಿ) ಪಡೆದರು. ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯ ಅವರಿಗೆ ಅರ್ಥಶಾಸ್ತ್ರದಲ್ಲಿ ವಿಶೇಷಾ ಧ್ಯಯನಕ್ಕಾಗಿ ಬಿ.ಎಸ್.ಸಿ. ಡಿಗ್ರಿಯನ್ನು ಕೊಟ್ಟಿತು. ವಕ್ತೃತ್ವ ವಿಷಯದಲ್ಲಿ ಪಡೆದ ಪರಿಣತಿಗಾಗಿ ಟೆಂಪಲ್ ಕಾಲೇಜು ಅವರಿಗೆ 'ಬ್ಯಾಚುಲರ್ ಆಫ್ ಆರೇಟರಿ' ಎಂಬ ಡಿಗ್ರಿಯನ್ನು ಕೊಟ್ಟಿತು. ಈ ಡಿಗ್ರಿಗಳನ್ನು ಪಡೆಯುವ ಹೊತ್ತಿಗೆ ಸ್ಕಾಟ್ 22 ವರ್ಷ ವಯಸ್ಸಿನ ತರುಣ. ಸಾಮಾಜಿಕನ್ಯಾಯ, (Social Justice) ವೈಜ್ಞಾನಿಕ ಸಮತಾವಾದ (Scientific Socialism) ಮತ್ತು ಸಮುದಾಯ ಯೋಜನೆ (Community Planning) ಎಂಬ ಮೂರು ಕ್ಷೇತ್ರಗಳಲ್ಲಿ ಸ್ಕಾಟ್ ತಮ್ಮ ಮನಸ್ಸಿನ ಅವಧಾನವನ್ನು ಒಮ್ಮೊನೆಮಾಡಿ ವ್ಯಾಸಂಗವನ್ನು ಮುಂಬರಿಸುವು ದಾಗಿ ಪ್ರತಿಜ್ಞೆ ಮಾಡಿದರು. ತರುಣ ತನ್ನ ಜೀವನವನ್ನು ಸಾರ್ಥಕಪಡಿಸಲು ಕೈ ಕೊಂಡ ತೀರ್ಮಾನ ಇದು. ತನ್ನ ಸೂಕ್ಷ್ಮ ಸಂವೇದನಶಕ್ತಿ ಸಾಕಾದಷ್ಟು, ಪರಿಣತಿ ಪಡೆದಾಗ ಮಾತ್ರ ಇಂಥ ನಿರ್ಣಯವನ್ನೊಬ್ಬ ತರುಣನು ಕೈಕೊಂಡಾನು. 1906 ರಲ್ಲಿ ಅರ್ಥಶಾಸ್ತ್ರದಲ್ಲಿ ಪಿ.ಎಚ್.ಡಿ. (ಡಾಕ್ಟರೇಟ್) ಪ್ರಶಸ್ತಿಯನ್ನು ಈತ ತನ್ನ ವಿದ್ಯಾಮಾತೃಸಂಸ್ಥೆಯಾದ ಪೆನ್ಸಿಲ್ವೇನಿಯಾ ವಿಶ್ವವಿದ್ಯಾಲಯದಿಂದ ಪಡೆದರು. ಅಧ್ಯಾಪಕನಾಗಿ ತನ್ನ ಹೊಣೆಯೇನೆಂಬುದನ್ನು ಕುರಿತು ಆತ ಹೀಗೆ ಹೇಳಿದ್ದಾರೆ:

"ಅಧ್ಯಾಪಕ ವೃತ್ತಿ ನನಗೊಂದು ಸಂಪ್ರಾಪ್ತ ವ್ರತವಾಯಿತು. ಸ್ವಂತ ಪರಿಶ್ರಮ ದಿಂದ ಸತ್ಯವನ್ನು ಶೋಧಿಸಿ ಎತ್ತಿಕೊಳ್ಳುವುದು, ಎತ್ತಿಕೊಂಡ ಸತ್ಯದ ಸ್ವರೂಪ ವೇನೆಂದು ಶಿಷ್ಯರಿಗೆ ಬೋಧಿಸುವುದು, ಮತ್ತು ಸತ್ಯ-ನ್ಯಾಯ-ಕರುಣೆಗಳ ತಂತು ಗಳನ್ನು ಮಾನವ ಸಮಾಜ ವಸ್ತ್ರದ ನಿರ್ಮಾಣದಲ್ಲಿ ಹಾಸು ಹೊಕ್ಕಾಗಿ ಬಳಸುವುದು." ಪ್ರಾಪ್ತವಾದ ಈ ಕರ್ತವ್ಯ ಪಾತ್ರದಲ್ಲಿ ಅವರು ಯಶಸ್ಸು ಗಳಿಸಿದರು. ಅವರ ಪ್ರಭಾವಶಾಲಿಯಾದ ಜೀವನದ ಉದ್ದಕ್ಕೂ ಎದ್ದು ಕಾಣುತ್ತ ಬರುವುದು ಈ ಕೃತಕೃತ್ಯತೆಯ ಭಾವ. ಅರ್ಥಶಾಸ್ತ್ರ ಬೋಧನೆಯ ಕಾಲದಲ್ಲಿ ಅವರು ಜೀವಿತ ವಸ್ತು ವಿತರಣೆಯ ಸಮಸ್ಯೆಯನ್ನು ಪರಿಶೀಲಿಸಿದರು ; ಗಳಿಸುವ "ಹೇರಳ ಲಾಭ-ನೀಡುವ ಕಡಮೆ ಕೂಲಿ" ಎಂಬೀ ಏರ್ಪಾಟಿನಲ್ಲಿರುವ ವಿರೋಧವನ್ನೆತ್ತಿ ತೋರಿಸಿದರು; ಜೀವನದ ವೆಚ್ಚಗಳು ಹೆಚ್ಚುತ್ತಿರುವುದೇಕೆಂದು ಚರ್ಚಿಸಿದರು; ಸಿರಿವಂತರಿಗೂ ಬಡ ವರಿಗೂ ನಡುವೆ ಇರುವ ದೊಡ್ಡ ವ್ಯತ್ಯಾಸವೇನೆಂಬ ಸಂಗತಿಯನ್ನು ವಿಮರ್ಶಿಸಿದರು; ಬಂಡವಾಳವಾದಕ್ಕೂ ಕಾರ್ಮಿಕ ವ್ಯವಸ್ಥೆಗೂ ಏಕೆ ನಿರಂತರ ಘರ್ಷಣೆಯಿರುತ್ತದೆ ಎಂಬುದನ್ನು ತತ್ತ್ವತಃ ವಿಚಾರಿಸಿದರು. ಅಧ್ಯಾಪಕರಾಗಿ, ತಮ್ಮ ಮನನವರಿಕೆಯ ಆಧಾರದಿಂದ ಒಡಂಬಟ್ಟ ತತ್ತ್ವಸೂತ್ರಗಳನ್ನು ಅನುಷ್ಠಾನ ಮುಖವಾಗಿ ಸಾರ್ಥಕ ಪಡಿಸುವುದು ಆವಶ್ಯಕವೆಂದು ಬೋಧಿಸುತ್ತಾ ಬಂದರು. ಸ್ವೀಕೃತ ತತ್ತ್ವಗಳೂ ಅವುಗಳ ಅನುಷ್ಠಾನವೂ ಹೊಂದಿಕೊಂಡ ಹೊರತು, ಜೀವನಕ್ಕೆ ಅನ್ವಯಮಾಡಿ ಆಚಾರವನ್ನಾಗಿ ವಿಚಾರವನ್ನು ಮಾರ್ಪಡಿಸಿದ ಹೊರತು, ಬರಿಯ ಬುದ್ಧಿನಿಷ್ಠೆಯನ್ನು ಪಡೆದ ತತ್ತ್ವದಿಂದ ಯಾವ ಪ್ರಯೋಜನವೂ ಇಲ್ಲವೆಂದು ಸ್ಕಾಟ್ ನಂಬಿದ್ದರು, ನಂಬಿಕೆಯಂತೆ ನಡೆಯುತ್ತ ಯಥಾರ್ಥವನ್ನು ಸಾರುತ್ತ ಬಂದರು. ತತ್ತ್ವಾನುಷ್ಠಾನಗಳಗಳು ಹೀಗೆ ಪರಸ್ಪರ ಸಂಬಂಧವುಳ್ಳವು. ಆದದ್ದರಿಂದ ತತ್ತ್ವ ವನ್ನು ವಿಚಾರಮಾಡುವಾಗ ಅದರ ಪ್ರಯೋಗ ಮುಖಕ್ಕೆ ಗಮನ ಕೊಡದೆ ಕೇವಲ ಬುದ್ಧಿವ್ಯಾಯಾಮದಲ್ಲಿ ತೊಡಗಿದರೆ ಅಧ್ಯಾಪಕವೃತ್ತಿಗೆ ಅಪಚಾರವಾಗುತ್ತದೆಯೆಂದು ಸ್ಕಾಟ್ ನೆರೆನಂಬಿದ್ದರು. ಆದದ್ದರಿಂದಲೇ ತತ್ತ್ವವನ್ನು ಪ್ರಯೋಗ ಮುಖವಾಗಿ ಪರಿವರ್ತಿಸಲು ಅವಕಾಶಕೊಡುವ ಸಂದರ್ಭಗಳನ್ನು ಪರಿವರ್ತನೆಗೆ ಅನುಕೂಲ ವಾದ ಪ್ರಜಾಸತ್ತಾತ್ಮಕ ಮಾರ್ಗಗಳನ್ನು ಅವರು ತಪ್ಪದೆ ಬಳಸಿಕೊಳ್ಳುತ್ತಬಂದರು. ಮಕ್ಕಳ ಜೀತ, ನೀಗ್ರೋಜನಾಂಗದ ಪಾಪ್ತವ್ಯ (ಹಕ್ಕು)ಗಳು, ವಾಕ್‌ಸ್ವಾತಂತ್ರ್ಯ, ಸಭಾಸ್ವಾತಂತ್ರ್ಯ, ಪೌರಪ್ರಾಪ್ತವ್ಯ (ಹಕ್ಕು) ಗಳ ವ್ಯಾಪಕ ವಿಸ್ತರಣೆ ಮತ್ತು ಕಾರ್ಮಿಕ ಸಂಘ ಸಂಸ್ಥಾ ಸಂಘಟನೆ, ಕಾರ್ಮಿಕರಲ್ಲಿ ಬಲಿಯಬೇಕಾದ ಒಕ್ಕಟ್ಟು-ಇಂಥ ಪ್ರಶ್ನೆಗಳಿಗೆ ಸಂಬಂಧಿಸಿದ ಕಾರ್ಯಕ್ಕೆ ಸಾರ್ವಜನಿಕರಲ್ಲಿ ಆಸಕ್ತಿಯನ್ನು ಕೆರಳಿಸಿ, ಅವರ ಸಹಕಾರವನ್ನು ಗಳಿಸುವ ಪ್ರಯತ್ನಗಳಲ್ಲಿ ಸ್ಕಾಟ್ ಶ್ರದ್ಧೆಯಿಂದ ಸೇರಿ ಬಿರುಸಾಗಿ ಪ್ರಚಾರಕಾರ್ಯಮಾಡಿದರು. ಈ ವಿಷಯಗಳನ್ನೆತ್ತಿಕೊಂಡು ಅನೇಕ ಕರಪತ್ರಗಳನ್ನೂ ಲಘು ಪುಸ್ತಕಗಳನ್ನೂ ಬರೆದು ಪ್ರಕಟಿಸಿದರು. ಆವಶ್ಯಕತೆ

ಕಂಡಾಗ ತರ್ಕಬದ್ಧವಾಗಿ ತಮ್ಮ ವಿಚಾರಗಳನ್ನೂ, ಅಭಿಪ್ರಾಯಗಳನ್ನೂ ವೇದಿಕೆಗಳಿಂದ ಪ್ರತಿಪಾದಿಸಿದರು. ಹೀಗೆ ವಿಶ್ವವಿದ್ಯಾನಿಲಯದ ಅಧ್ಯಾಪಕನೊಬ್ಬನು ಬಹಿರಂಗವಾಗಿ ಸಾರ್ವಜನಿಕ ಪ್ರಶ್ನೆಗಳಲ್ಲಿ ಪ್ರತ್ಯಕ್ಷಾಸಕ್ತಿಯನ್ನು ತೋರಿಸಿ ಪಾತ್ರ ವಹಿಸುವುದನ್ನು ಅಧಿಕಾರಿಗಳು ಸ್ವಲ್ಪ ಕಾಲ ಸಹಿಸಿಕೊಂಡರಾದರೂ,—ಬಂಡವಾಳಗಾರರೂ ಯಂತ್ರೋದ್ಯಮಿಗಳೂ ವಿಶ್ವವಿದ್ಯಾನಿಲಯದ ಆಡಳಿತ ಮಂಡಳಿಯಲ್ಲಿ ವಿಶೇಷ ಶಕ್ತಿ ಪ್ರಭಾವಗಳನ್ನು ಪಡೆದಿದ್ದದ್ದರಿಂದ ಅಧ್ಯಾಪಕರು ಹೀಗೆ ಸಾರ್ವಜನಿಕ ವಿಚಾರಗಳಲ್ಲಿ ತಲೆಹಾಕುವುದು ಯುಕ್ತವಲ್ಲವೆಂದು ಆಕ್ಷೇಪಿಸಿದರು. ಸ್ಕಾಟ್ ಅವರ ಸಾರ್ವಜನಿಕ ಪಾತ್ರವು ಪರಿಣಾಮಕಾರಿಯಾದಂತೆ ಮೇಲ್ಕಂಡ ಹಿತಾಸಕ್ತಿಗಳಿಂದ ಆಕ್ಷೇಪಣೆಯ ಬಿರುಸೂ ಹೆಚ್ಚಾಯಿತು. ಕಡೆಗೆ ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದ ಆಡಳಿತ ಮಂಡಳಿಯು ಆಕ್ಷೇಪಕವೃಂದ ಪ್ರಚಂಡವಾಗಿ ತಂದ ನಿರ್ಬಂಧಕ್ಕೆ ವಶವಾಯಿತು. ಅಷ್ಟು ಹೊತ್ತಿಗೆ ಸ್ಕಾಟ್ ಒಂಬತ್ತು ವರ್ಷಗಳಷ್ಟು ಕಾಲ ವಿದ್ಯಾಪೀಠಕ್ಕೆ ಸೇವೆ ಸಲ್ಲಿಸಿದ್ದರು. ಪಾಠ ಪ್ರವಚನಗಳ ಜೊತೆಗೆ ಪ್ರಾಯೋಗಿಕವಾಗಿ ಕ್ಷೇತ್ರಕಾರ್ಯದ (field worK) ಸೇವೆ ಸಲ್ಲಿಸಿದ್ದರು. ಒಳ್ಳೆಯ ಅಧ್ಯಾಪಕರೆಂದು ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚಾಗಿದ್ದರು. ಸಹಾಯಕ ಪ್ರಾಧ್ಯಾಪಕ ಶ್ರೇಣಿಗೂ ಏರಿದ್ದರು. ಅಧ್ಯಾಪನ ಯಶಸ್ಸಿನ ಜೊತೆಗೆ ಕ್ಷೇತ್ರಕಾಯಕದ ಯಶಸ್ಸೂ ಸೇರಿಕೊಂಡು ಅವರ ಭವಿಷ್ಯ ಉಜ್ಜ್ವಲವಾಗಿತ್ತು. ಹೆಚ್ಚುತ್ತ ಹೋದ ಆಕ್ಷೇಪಕರ ಒತ್ತಾಯಕ್ಕೆ ಮಣಿದು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಪ್ರೊಫೆಸರ್ ಸ್ಕಾಟ್ ಅವರಿಂದ ಸಮಜಾಯಿಷಿಯನ್ನು ಕೂಡ ಪಡೆಯದೆ, ಆಪಾದನೆಗಳನ್ನೂ ಹೊರಿಸದೆ–ವಿಚಾರಣೆಯ ವಿಹಿತ ಕ್ರಮಗಳನ್ನೆಲ್ಲ ಒತ್ತರಿಸಿ, ಕ್ಷಿಪ್ರಕಾರ್ಯವನ್ನು ಕೈಕೊಂಡು, ಜನಪ್ರಿಯನಾದ ಅದ್ಯಾಪಕನೊಬ್ಬನ ಮಾರ್ಗದರ್ಶನವನ್ನು ವಿದ್ಯಾರ್ಥಿಗಣಕ್ಕೆ ತಪ್ಪಿಸಿ, ಆತನನ್ನು ಉದ್ಯೋಗದಿಂದ ತೆಗೆದು ಹಾಕಿದರು. ಏತನ್ಮಧ್ಯೆ ಸ್ಕಾಟ್ ದೈನಿಕ ವೃತ್ತಪತ್ರಿಕೆಗಳಿಗೂ ಇತರ ನಿಯತ ಕಾಲಿಕಗಳಿಗೂ ಅನೇಕ ವಿದ್ವಲ್ಲೇಖನಗಳನ್ನು ಬರೆದರು, ಮೂರು ಲಘು ಪುಸ್ತಕಗಳನ್ನೂ ಹನ್ನೆರಡು ಗ್ರಂಥಗಳನ್ನೂ ಬರೆದು ಪ್ರಕಟಿಸಿದರು. 1917 ರಲ್ಲಿ, ಅಮೆರಿಕಾ ಸಂಯುಕ್ತ ಸಂಸ್ಥಾನಗಳು ಮೊದಲನೆಯ ಮಹಾಯುದ್ಧದಲ್ಲಿ ಪಾತ್ರವಹಿಸುವುದಕ್ಕೆ ಮುಂಚೆ, ಮ್ಯಾಕ್ಮಿಲನ್ ಪ್ರಕಾಶನ ಸಂಸ್ಥೆ ಸ್ಕಾಟ್ ಅವರ ಆರು ಗ್ರಂಥಗಳನ್ನು ಪ್ರಕಟಪಡಿಸಿದ್ದರು. ಈ ಪ್ರಕಟಿತ ಗ್ರಂಥಗಳಲ್ಲಿ ಒಂದಾದ ಅರ್ಥಶಾಸ್ತ್ರವನ್ನು ಕುರಿತು ಒಂದು ಪಠ್ಯಪುಸ್ತಕವು 1908 ರಲ್ಲಿ ಪ್ರಕಟವಾದದ್ದು.

## ಯುದ್ಧವಿರೋಧವು ಅಪರಾಧವೇ?

ಟೋಲೆಡೋ ವಿಶ್ವವಿದ್ಯಾನಿಲಯವು ತರುಣ ಸ್ಕಾಟನ ಪ್ರತಿಭೆಯನ್ನು ಮನ್ನಿಸಿ, ತನ್ನ ಆರ್ಟ್ಸ್ ಕಾಲೇಜಿನಲ್ಲಿ 'ಡೀನ್' (ಮುಖ್ಯಾಧ್ಯಾಪಕ) ಪದವಿಯನ್ನು ಆತನಿಗೆ ಕೂಡಲೆ ಕೊಟ್ಟಿತಾದರೂ, ಶಾಂತಿವಾದಿಯಾದ ಆತನು 1917 ರಲ್ಲಿ ಅಮೆರಿಕವು

ಮಹಾಯುದ್ಧದಲ್ಲಿ ಪಾತ್ರವಹಿಸಬಾರದೆಂದು ಲೇಖನಗಳನ್ನು ಬರೆದು ಪ್ರಭುತ್ವ ವಿರುದ್ಧ ಪ್ರಚಾರಮಾಡಿದನೆಂದು ಅಧ್ಯಾಪಕ ಹುದ್ದೆಯಿಂದ ಆತನನ್ನು ವಜಾಮಾಡಿತು. ಆಮೇಲೆ ಈ ನಿರುದ್ಯೋಗಿ ತರುಣನಿಗೆ ಸ್ವಾತ್‌ಮೋರ್ ಕಾಲೇಜಿನಲ್ಲಿ ಮತ್ತು ರ್‍ಯಾಂಡ್ ಸ್ಕೂಲ್ ಆಫ್ ಸೋಷಲ್ ಸೈನ್ಸ್ ಎಂಬ ಸಮಾಜ ವಿಜ್ಞಾನ ವಿದ್ಯಾಪೀಠದಲ್ಲಿ ಸಿಕ್ಕಿದ್ದ ಅಧ್ಯಾಪಕ ಪದವಿ–ಅದೇ ಹಿಂದಿನಂತೆಯೇ, ಯುದ್ಧ ವಿರುದ್ಧ ಚಳವಳಿಯ ಮುಂಚೂಣಿಯಲ್ಲಿ ಕಾರ್ಯಮಾಡಿದನೆಂಬ ತಪ್ಪಿಗಾಗಿ, ಒಂದಾದ ಮೇಲೊಂದು ಕೈ ಬಿಟ್ಟು ಹೋಯಿತು. ಸ್ಕಾಟ್ ಎದೆಗೆಡಲಿಲ್ಲ. ರಾಷ್ಟ್ರದ ಪ್ರಜಾಧರ್ಮಕ್ಕೆ ಲೋಪಬಾರದಂತೆ ಯುದ್ಧ ವಿರೋಧಿ ಚಟುವಟಿಕೆಯನ್ನು ಮುಂಬರಿಸಿದರು; ಯುದ್ಧ ಸಂದರ್ಭಕ್ಕೆ ಪ್ರೋತ್ಸಾಹ ಕೊಡುವುದರ ಜೊತೆಗೆ ಅದನ್ನು ದುರುಪಯೋಗಪಡಿಸಿಕೊಂಡು, ಅತ್ಯಧಿಕ ಪ್ರಮಾಣದಲ್ಲಿ ಲಾಭಗಳನ್ನು ಬಾಚಿಕೊಳ್ಳುತ್ತಿದ್ದ ಶಸ್ತ್ರಾಸ್ತ್ರ ವರ್ತಕರ ಕುಟ್ಟತಂತ್ರವನ್ನು ಬಹಿರಂಗಪಡಿಸಲು ಒದಗಿದ ಒಂದೊಂದು ಅವಕಾಶವನ್ನೂ ತಪ್ಪದೆ ಬಳಸಿಕೊಂಡರು. "ಧರ್ಮಯುದ್ಧ" ದ ನೆಪದಲ್ಲಿ ವಿಶ್ವವ್ಯಾಪಿಯಾಗಿ ನಡೆಯುತ್ತಿದ್ದ ಕಗ್ಗೊಲೆಗೆ ಲಾಭಕೋರ ವರ್ತಕರೇ ಕಾರಣವೆಂದು ಸ್ಕಾಟ್ ತೀಕ್ಷ್ಣವಾಗಿ ಖಂಡಿಸಿದರು. ಆಮೇಲೆ ಸ್ಕಾಟ್ ಅವರು "ಶಾಂತಿ ಸ್ಥಾಪನೆ ಮತ್ತು ಪ್ರಜಾಪ್ರಭುತ್ವತತ್ತ್ವಾನುಷ್ಠಾನೋದ್ದೇಶದ ಜನತಾ ಸಮಿತಿಯಿಂದ (People's Council for Peace and Democracy) ಆಹ್ವಾನಿತರಾಗಿ ಆ ಸಂಸ್ಥೆಯ ಅಧ್ಯಕ್ಷ ಪದವಿಯನ್ನು ಪಡೆದರು. ಈ ಮನ್ನಣೆಗೆ ಸ್ಕಾಟ್ ಅವರು ಪಟ್ಟಾಗಿ ನಂಬಿದ ನಂಬಿಕೆಗಳೂ, ಅವರು ಇಂಥ ಧಾರ್ಮಿಕ ಚಳವಳಿಯ ನಾಯಕರಾಗಬಲ್ಲರೆಂಬುದೂ, ಕಾರಣ. ಈ ಗೌರವಸ್ಥಾನದಿಂದ ಸ್ಕಾಟ್ ಅನೇಕ ಲೇಖನಗಳನ್ನು ಬರೆದು ಜನದಲ್ಲಿ ಹಂಚಿಸಿದರು. ಯುದ್ಧಸಿದ್ಧತೆಯ ವಿರುದ್ಧವೂ ಯುದ್ಧಾಚರಣೆಯ ವಿರುದ್ಧವೂ ಪ್ರಚಂಡ ಚಳವಳಿಯನ್ನೇ ನಡಸಿದರು. 1918 ರಲ್ಲಿ ಅವರು ಪ್ರಭುತ್ವದ ಕೋಪಕ್ಕೆ ಪಾತ್ರರಾಗಿ, ಅಮೆರಿಕದ ಗ್ರ್ಯಾಂಡ್ ಜ್ಯೂರಿ ನ್ಯಾಯಾಲಯದ ಮುಂದೆ ಸೈನ್ಯಕ್ಕೆ ಭಟನಾಗಿ ಸೇರಲು ನಿರಾಕರಿಸಿದರೆಂದು ರಾಷ್ಟ್ರದ್ರೋಹದ ಆಪಾದನೆಗೂ ಯುದ್ಧ ವಿರುದ್ಧವಾಗಿ ಅವರು ಬರೆದ "ದೊಡ್ಡ ಹುಚ್ಚು: ಅಮೆರಿಕದ ಧನಿಕ ವರ್ಗಕ್ಕೆ ವಿಜಯ" ಎಂಬ ಲಘು ಪುಸ್ತಕವನ್ನು ಬರೆದು ಯುದ್ಧ ಕಾರ್ಯಕ್ಕೆ ವಿಘ್ನವೊಡ್ಡಿದರೆಂಬ ಆಕ್ಷೇಪಣೆಗೂ ಗುರಿಯಾಗಿ ವಿಚಾರಣೆಯನ್ನೆದುರಿಸಿ ಪ್ರಭುತ್ವದ ಖಂಡನೆವಾಗ್ದಂಡನೆಗಳಿಗೆ ಒಳಗಾದರು. ತರ್ಕಬದ್ಧವಾಗಿ ರಚಿತವಾಗಿದ್ದದ್ದು ಈ ಕಿರುಪುಸ್ತಕ. ಸ್ಪರ್ಧಾತ್ಮಕವೂ ವಿತ್ತಾರ್ಜನನಿಷ್ಠವೂ ಆದ ಅಲ್ಪ ಸಂಖ್ಯಾಕ ಜನವರ್ಗವು ಲಾಭಕಾಂಕ್ಷೆಯಿಂದ ನಡಸುವ ಚಟುವಟಿಕೆಗಳ ದುಷ್ಪರಿಣಾಮವೇ ಯುದ್ಧವೆಂದೂ ವ್ಯಕ್ತಿ ರಾಷ್ಟ್ರಗಳೂ ಸಾಮ್ರಾಜ್ಯಗಳೂ ತಮ್ಮ ತಮ್ಮ ಪರಮಾಧಿಕಾರ ವಿಸ್ತರಣಕ್ಕೂ ಅಸ್ತಿತ್ವ ಸಂರಕ್ಷಣೆಗಾಗಿಯೂ ಹೂಡುವ ಚಟುವಟಿಕೆಯ ದುರಂತ ಪರಿಣಾಮವೇ ಯುದ್ಧವೆಂದೂ ಈ ಪುಸ್ತಕದಲ್ಲಿ ಸಕಾರಣವಾಗಿ ಪ್ರತಿಪಾದಿಸಲಾಗಿತ್ತು. ಸ್ಕಾಟ್

ಅವರ ವಿಚಾರಣೆ ದೀರ್ಘಕಾಲ ನಡೆಯಿತು. ಆ ಕಾಲಕ್ಕೆ ಜನಮನವನ್ನು ಸೆಳೆದ ಅತಿಶಯ ಪ್ರಸಿದ್ಧಿಯನ್ನೂ ಪಡೆದಿತ್ತು. ಕಡೆಗೆ ಸ್ಕಾಟ್ ನಿರಪರಾಧಿ ಎಂದು ನಿರ್ಣಯ ವಾಗಿ ಎಲ್ಲ ಆಪಾದನೆಗಳಿಂದ ಬಿಡುಗಡೆ ಪಡೆದರು. ಸ್ಕಾಟ್ ಅವರ ಯುದ್ಧ ವಿರೋಧೀ ಚಟುವಟಿಕೆ ವಾಸ್ತವವಾಗಿ ಸಾಮ್ರಾಜ್ಯವಾದದ ಮತ್ತು ಯುದ್ಧದ ವಿರುದ್ಧವಾಗಿ, ಹಾಗೂ ಸಮತಾವಾದದ ಮತ್ತು ವಿಶ್ವಶಾಂತಿಯ ಪರವಾಗಿ, ಹೂಡಿದ ವಿಶೇಷ ಗಮ ನಾರ್ಹವಾದ ಹೋರಾಟವೇ ಆಗಿ, ತರುಣನಿಗೆ ಅದು ವೈಯಕ್ತಿಕವಾಗಿ ಮಹಾ ವಿಜಯವೆನ್ನಿಸಿ ಕೊನೆಗೊಂಡಿತು.

ಆದರೆ ಪ್ರಭುತ್ವದ ನಿರ್ದೇಶದಂತೆ ಸ್ಕಾಟ್ ಅವರ ವಿರುದ್ಧವಾಗಿ ರಾಷ್ಟ್ರಮಟ್ಟದಲ್ಲಿ ತೀವ್ರವಾದ ಅಪಪ್ರಚಾರ ನಡೆದು, ಜನ ಸಂಪರ್ಕ ಸಾಧನಗಳಿಂದ ಅವರು ಬಹಿಷ್ಕೃತ ರಾದರು. ಒಳ್ಳೆಯ ವಾಗ್ಮಿಯೆಂದೂ ಚುರುಕು ಬುದ್ಧಿಯ ವಿಮರ್ಶಕನೆಂದೂ ಸ್ಕಾಟ್ ಪ್ರಸಿದ್ಧರಾಗಿದ್ದರೂ ಅವರನ್ನು ಯಾರೂ ಯಾವ ಸಂಸ್ಥೆಯೂ ವೇದಿಕೆಗಳಿಗೆ ಬರಮಾಡಿ ಕೊಳ್ಳಲಿಲ್ಲ; ಆಕಾಶವಾಣಿಯವರೂ ತಮ್ಮ ಕಾರ್ಯಕ್ರಮಗಳಲ್ಲಿ ಅವರಿಗೆ ಪಾತ್ರ ವನ್ನು ನಿರಾಕರಿಸಿದರು. ಎಲ್ಲಕ್ಕಿಂತ ನೀಚ ಸಂಗತಿಯೆಂದರೆ ವಿಶ್ವವಿದ್ಯಾನಿಲಯ ಸಂಸ್ಥೆ ಗಳೂ ಸ್ಕಾಟ್ ಅವರ ಮುಖಕ್ಕೆ ಬಾಗಿಲು ಬಡಿದು ಅವರನ್ನು ದೂರವಿಟ್ಟದ್ದು. ಅಷ್ಟೇ ಅಲ್ಲ, ಅವರು ಬರೆದ ಪಠ್ಯಪುಸ್ತಕಗಳನ್ನು ಶಾಲೆ ಕಾಲೇಜುಗಳ ವಿದ್ಯಾರ್ಥಿಗಳು ಓದಬಾರದೆಂದು ನಿಷೇಧಿಸಿದರು. ಹೀಗೆ ಯುದ್ಧವನ್ನು ನಿಲ್ಲಿಸಲು ಚಳವಳಿ ನಡೆಸಿದ ಶಾಂತಿ ಪ್ರಿಯನ ಮೇಲೇ ಸುಸಜ್ಜಿತ ಸುವ್ಯವಸ್ಥಿತ ಯುದ್ಧವನ್ನು ಸಾರಲಾಯಿತು ಎಂಬುದು ಚೋದ್ಯದ ಸಂಗತಿ! ಸ್ಕಾಟ್ ನ್ಯಾಯವಾಗಿಯೇ ತಮ್ಮ ಆತ್ಮಕಥೆಯಲ್ಲಿ ಹೀಗೆ ಅಭಿಪ್ರಾಯ ಬರೆದು ಸಾಧುಕಾರ್ಯವನ್ನು ಮಾಡಿದ್ದಾರೆ:

"ಯಾವುದೇ ಬಗೆಯ ಯುದ್ಧದಲ್ಲಿ ಮೊದಲನೆಯ ಪೆಟ್ಟು ಬೀಳು ವುದು ಸತ್ಯಕ್ಕೇ ಎಂಬ ಗಾದೆಯುಂಟು. ನನ್ನ ಅನುಭವವಿದು; ಯುದ್ಧವು ಸತ್ಯವನ್ನು ಮಾತ್ರ ನಿರಾಕರಿಸುವುದಿಲ್ಲ; ಜೊತೆಗೆ ಸಭ್ಯತೆಯನ್ನೂ ಮಾನವ ದಯೆಯನ್ನೂ ನಿರಾಕರಿಸುತ್ತದೆ. ಸತ್ಯಶೋಧಕರಿಗೂ ಕೇಡನ್ನುಂಟು ಮಾಡುತ್ತದೆ. ಸಮಾಜವನ್ನು ಮೇಲಕ್ಕೆತ್ತಲು ತಮ್ಮಲ್ಲಿರುವ ಸಾಮರ್ಥ್ಯ ಗಳನ್ನು ಬಳಸುವ ಮನುಷ್ಯರನ್ನೂ ತಾಗಿ ಅವರಿಗೂ ಕೇಡು ಮಾಡುತ್ತದೆ. ಯುದ್ಧವೊಂದು ನರಕ. ಇಳೆಯಲ್ಲಿ ನರಕವನ್ನು ನೆಲೆಗೊಳಿಸುವುದಕ್ಕೆ ಮುನ್ನ ಯುದ್ಧವು ಮನುಷ್ಯ ಪ್ರಾಣಿಗಳನ್ನು ಅರಳಿಸಿ ಕಟ್ಟಿ ಬೆಳಸುವ

ಕರ್ತವ್ಯಗಳಿಂದ ಸೆಳೆದು ಒಟ್ಟೊಟ್ಟಾಗಿ ಅವರನ್ನು ವಿನಾಶಕರನ್ನಾಗಿಯೂ ಹಂತಕರನ್ನಾಗಿಯೂ ಮಾಡುತ್ತದೆ. ‡

ರಾಷ್ಟ್ರದ್ರೋಹ ಮೊಕದ್ದಮೆ ಮೊದಲಾದ ಕಾಲದಿಂದ ಸ್ಕಾಟ್ ಎಲ್ಲ ಶಿಕ್ಷಣ ಸಂಸ್ಥೆಗಳ ಕಣ್ಣಿಗೆ ಒಬ್ಬ ಕ್ಷೋಭಕಾರಿ, ಶಾಪಕ್ಕೆ ಅರ್ಹನಾದ ಬಹಿಷ್ಕೃತ ವ್ಯಕ್ತಿ. ಆದರೂ ಆತ ಹೆರವರು ತನ್ನನ್ನು ಹೇಗೆ ಎಣಿಸುವರೆಂದು ಚಿಂತಾಕ್ರಾಂತನಾಗಲಿಲ್ಲ. ತನ್ನ ಆಯ್ದುಕೊಂಡ ಇಷ್ಟಮಾರ್ಗದಲ್ಲಿ ಪಟ್ಟುಹಿಡಿದು ನಡೆಯುವುದು, ಕಲಿಯುವುದು, ಕಲಿತದ್ದನ್ನು ಜನಕ್ಕೆ ಕಲಿಸಲು ಸಾರಿಹೇಳುವುದು–ಇದು ಸ್ಕಾಟ್ ಅವರ ನಿತ್ಯ ಕರ್ಮವಾಯಿತು. ಸಾಮಾಜಿಕ ಆರ್ಥಿಕ ಜ್ಞಾನಗಳ ಎಲ್ಲ ಕ್ಷೇತ್ರಗಳಲ್ಲೂ ಅವರ ಮನಸ್ಸು ಸಂಚರಿಸಿ ತಿಳಿವಳಿಕೆಯನ್ನು ಸಂಗ್ರಹಿಸಿತು. ತಮ್ಮ ಸಮರ್ಥ ಲೇಖನಿ, ಸ್ಪಷ್ಟ ಶೈಲಿ, ನಿರ್ಮಲ ತರ್ಕನಿಷ್ಠ ವಾಣಿ- ಇವನ್ನು ಅವರು ಎಲ್ಲ ಬಗೆಯ ಯುದ್ಧಗಳ ವಿರುದ್ಧವಾಗಿ ಮಸೆದು ಬಳಸಿದರು; ಮತ್ತು ಆದರ್ಶವಾದಿಯಾಗಿ ಏಕವಿಶ್ವಪ್ರಭುತ್ವಸ್ಥಾಪನೆಗೋಸ್ಕರ, ವಿಶ್ವರಾಷ್ಟ್ರಗಳ ಐಕ್ಯಕ್ಕೋಸ್ಕರ ಮನುಷ್ಯನಲ್ಲಿ ಸಂಕುಚಿತ ಭಾವನೆಯನ್ನು ಅಡಗಿಸಿ, ವಿಶ್ವಸ್ತರದ ಸಭ್ಯತಾ ಸ್ಥಾಪನೆಗೋಸ್ಕರ– ಅವರ ಲೇಖನಿಯೂ ಕೊರಲೂ ನಿತ್ಯ ಕರ್ತವ್ಯ ಕರ್ಮದಲ್ಲಿ ನಿರತವಾದುವು. ಧನಾಢ್ಯತೆ ಮತ್ತು ದಾರಿದ್ರ್ಯಗಳ ನಡುವೆ ವ್ಯಕ್ತವಾಗುವ ನಿಷ್ಠುರ ಭೇದ ವೈಪರೀತ್ಯಗಳು, ಮನಸ್ಸಾಕ್ಷಿಗೆ- ಧರ್ಮೇಂದ್ರಿಯಕ್ಕೆ– ಅವಿಧೇಯವಾದ ಶೋಷಣ ವೃತ್ತಿಯ ಅನ್ಯಾಯಗಳು ಮತ್ತು ಯುದ್ಧಕಾಲದ ಉದ್ದೇಶಪೂರ್ವಕವಾದ ವಿನಾಶಕ್ರಿಯೆಗಳು ಹಾಗೂ ಮೊತ್ತಮೊತ್ತದಲ್ಲಿ ಜನಹತ್ಯೆಗಳು, ಸಾಲುಗೊಲೆಗಳು–ಇವುಗಳ ವಿರುದ್ಧ ಎಡೆಬಿಡದೆ ಬರವಣಿಗೆ ಬರೆಯುತ್ತ ಬಾಯಮಾತುಗಳನ್ನಾಡುತ್ತ, ಪ್ರಭುತ್ವದ ದೃಷ್ಟಿಯಲ್ಲಿ ಸಮಾಜದಿಂದ ಪ್ರತ್ಯೇಕಿಸಿ ಬಹಿಷ್ಕರಿಸಬೇಕಾದ ಪಟಿಂಗನೆನ್ನಿಸಿದರು. ಮೊದಲನೆಯ ಮಹಾಯುದ್ಧಕಾಲದಲ್ಲಿ ಅವರು ನಿರಂತರವಾಗಿ ಯುದ್ಧವಿರೋಧೀ ನಂಬಿಕೆಗಳನ್ನು ಕಾರ್ಯರೂಪಕ್ಕೆ ತಂದದ್ದರ ಫಲವಾಗಿ ಕೆಲವು ಆಜನ್ಮ ವ್ರತಗಳನ್ನು ಹಿಡಿಯುವ ತೀರ್ಮಾನಕ್ಕೆ ಬಂದರು. ಪರಸ್ಪರ ನಂಟುಗಳನ್ನು ಪಡೆದ ವ್ರತಗಳು ಇವು: ಇತಃಪರ ನಾನು ಸಸ್ಯಾಹಾರಿಯಾಗಿ ಬಾಳುತ್ತೇನೆ, ಶಾಂತಿವಾದಿಯಾಗಿರುತ್ತೇನೆ, ಸಮಾಜಸ್ವಾಸ್ಥ್ಯವನ್ನಾಗಮಾಡಿಸುವ ಸಮತಾವಾದಿಯಾಗಿಯೆ ಇರುತ್ತೇನೆ. ಈ ವ್ರತತ್ರಯದಲ್ಲಿ ಮೊದಲನೆಯ ವ್ರತದ ಅನುಷ್ಠಾನದಿಂದ ಪ್ರಾಣಿ ಹತ್ಯೆಯನ್ನು ತಡೆಯುವುದು, ಎರಡನೆಯ ವ್ರತದ ಅನುಷ್ಠಾನದಿಂದ ಮನುಷ್ಯ ಹತ್ಯೆಯನ್ನು ತಡೆಯುವುದು, ಮತ್ತು ಮೂರನೆಯ ವ್ರತದ ಅನುಷ್ಠಾನದಿಂದ ಮನುಷ್ಯವರ್ಗದಲ್ಲಿ ಒಕ್ಕಟ್ಟಿಗೋಸ್ಕರ ದುಡಿದು, ಸರ್ವಜೀವಾಧಾರವಾದ ಪೃಥ್ವಿಯಲ್ಲಿ ಶಾಶ್ವತಕಾಲೀನ

---

‡ ಆಮೂಲಾಗ್ರ ಸುಧಾರಕನ ಸಾಧನೆ. ಒಂದು ರಾಜಕೀಯ ಆತ್ಮಕಥೆ:- ಸ್ಕಾಟ್ ನಿಯರಿಂಗ್. ಹಾರ್ಪರ್ ಮತ್ತು ರೋ, ನ್ಯೂಯಾರ್ಕ್. [ಪುಟ 121]

ಶಾಂತಿಯನ್ನು ನೆಲೆಗೊಳಿಸುವುದು–ಇವೆಲ್ಲ ಕೈಗೂಡುತ್ತವೆ. ಜನರು ಸಮಾಜವಾದ ವನ್ನು ಅವಲಂಬಿಸಿದರೆ ಮಾತ್ರ ಸಾರ್ವತ್ರಿಕ ಯೋಗಕ್ಷೇಮ ಎಂಬ ತಮ್ಮ ದೃಢ ವಿಶ್ವಾಸವನ್ನು ಮಾನದಂಡವಾಗಿ ತಮ್ಮ ಮೇಲೆಯೇ ಪ್ರಯೋಗಿಸಿಕೊಂಡು, ತಮಗೆ ಬಸಲಿದ್ದ ಪಿತ್ರಾರ್ಜಿತ ಸೊತ್ತನ್ನು ಒಲ್ಲೆನೆಂದುಬಿಟ್ಟರು! ಅವಕಾಶ ಬಂದಾಗಲೆಲ್ಲ ಕಾರ್ಯಾಲಯಗಳಲ್ಲಿ ಕಾರ್ಮಿಕರಾಗಿ ದುಡಿದರು, ಸಂಸ್ಥೆಗಳಲ್ಲಿ ಕಾರ್ಯಕರ್ತರಾಗಿ ದುಡಿದರು, ಸ್ವತಂತ್ರ ಭಾಷಣಕಾರರಾಗಿ, ಖಾಸಗಿ ಅಧ್ಯಾಪಕರಾಗಿ ಎಲ್ಲೆಲ್ಲೂ ಅಲೆದಾಡಿ ದರು. ಆದರೆ ಎಡೆಬಿಡದೆ ಕಿರುಪುಸ್ತಕಗಳನ್ನೂ ಗ್ರಂಥಗಳನ್ನೂ ಬರೆದು ಪ್ರಕಟ ಪಡಿಸುತ್ತ ಹೋದರು.

## ಪಕ್ಷ ವಿಧೇಯತೆಗಿಂತ ಸತ್ಯವಿಧೇಯತೆ ದೊಡ್ಡದು

1930ರ ಹೊತ್ತಿಗೆ ದೊಡ್ಡ ಆರ್ಥಿಕ ಮುಗ್ಗಟ್ಟು (The Great Depression) ತನ್ನ ನಿಶ್ಚಲ ರೂಪದಲ್ಲಿ ನೆಲೆಗೊಳ್ಳುವ ಸೂಚನೆ ತೋರಿತು. ಸ್ಕಾಟ್ ಈಗ ನಿರುದ್ಯೋಗಿ. ಕವಲುದಾರಿಯಲ್ಲಿ ನಿಂತು, ಇನ್ನು ಮುಂದೆ ತಾನು ಹಿಡಿಯಬೇಕಾದ ದಾರಿ ಯಾವು ದೆಂಬ ಪ್ರಶ್ನೆಯನ್ನು ಬಗೆಹರಿಸಬೇಕಾಯಿತು. ವಿದ್ಯಾಸಂಸ್ಥೆಗಳು ಅವರನ್ನು ದೂರ ವಿರಿಸಿದ್ದವು, ಪತ್ರಿಕೆಗಳು ಅವರ ಲೇಖನಗಳನ್ನು ಸ್ವಾಗತಿಸಲಿಲ್ಲ. ಕಾಲೇಜುಗಳು ಅವರ ಪಾಠಪುಸ್ತಕಗಳನ್ನು ಬಹಿಷ್ಕರಿಸಿದ್ದುವು. ಪುಸ್ತಕ ಪ್ರಕಾಶಕರು ಅವರ ಹಸ್ತಪ್ರತಿಗಳನ್ನು ತಿರಸ್ಕರಿಸಿದರು. ಘನ ವಾಗ್ಮಿಯಾದರೂ ಪ್ರವಾಸದಲ್ಲಿದ್ದಾಗ ವೇದಿಕೆಗಳು ಅವರ ಉಪ ನ್ಯಾಸಗಳನ್ನು ಏರ್ಪಡಿಸದೆ ನಿರಾಕರಿಸಿದುವು. ಈ ಎಲ್ಲ ಬಹಿಷ್ಕರಣ ನಿರಾಕರಣಗಳಿಗೆ ಕಿರೀಟವೆಂಬಂತೆ ಅಮೇರಿಕದ ಕಾಮ್ಯುನಿಸ್ಟ್ ಪಕ್ಷವು ಸ್ಕಾಟ್ ಅವರನ್ನು ಪಕ್ಷದ ಸದಸ್ಯತ್ವದಿಂದ ಉಚ್ಚಾಟಿಸಿತು. ಇದಕ್ಕೆ ಕಾರಣ ಅವರು 1930ರಲ್ಲಿ ಬರೆದು ಪ್ರಕಟಿಸಿದ ಈ ಪುಸ್ತಕ: "ಸಾಮ್ರಾಜ್ಯದ ಸಂಜೆಬೆಳಕು; ಸಾಮ್ರಾಜ್ಯಸಂಸ್ಥೆ ಸುತ್ತಿಬರುವ ಆರ್ಥಿಕ ಲಕ್ಷಣಗಳು" (The twilight of Empire: An economic Interpretation of Imperialist Cycles.) ಸ್ವತಂತ್ರ ವಿಚಾರವಾದಿಯಾದ ಸ್ಕಾಟ್ ನಿಯರಿಂಗ್ ಅವರಿಗೆ ಈ ಬಹಿಷ್ಕರಣ ಪರಂಪರೆ ಕೇವಲ ಒಂದೇ ಮನೋಭಾವದ ಪುನರಾ ವರ್ತನೆಯೆಂಬ ಅನುಭವವನ್ನು ಗಳಿಸಿಕೊಟ್ಟಿತು. ಈ ಸಾರಿ ಒಂದು ರಾಜಕೀಯ ಪಕ್ಷವು ತನ್ನನ್ನು ಸದಸ್ಯತ್ವದಿಂದ ತೆಗೆದು ಹಾಕಿ ಬಹಿಷ್ಕರಿಸಿತು, ಪಕ್ಷವಿಧೇಯತೆಗಿಂತ ಸತ್ಯವಿಧೇಯತೆ ಹೆಚ್ಚಿನದು ಎಂದು ಸ್ಕಾಟ್ ಭಾವಿಸಿದ್ದು ಅವರ ತಪ್ಪಾಯಿತು. ಮನ ವರಿಕೆ (Conviction) ಎಂದಿಗೂ ರಾಜಿಕಬೂಲಿಗೆ (Compromise) ಒಳಪಡತಕ್ಕ ವಿಚಾರವಲ್ಲ. ಕಾಮ್ಯುನಿಸ್ಟ್ ಪಕ್ಷದ ಕಾರ್ಯವು ಅವಿಚಾರದಿಂದ ಕೂಡಿತ್ತೆಂಬುದನ್ನು ಯಾವ ಗ್ರಂಥ ಲೇಖನಕ್ಕೋಸ್ಕರ ಪಕ್ಷವು ಆಕ್ಷೇಪಿಸಿ ಶಿಸ್ತಿನ ಕಾರ್ಯಕ್ರಮವನ್ನು ಕೈಕೊಂಡಿತೋ ಆ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯವೇ ಸಾರುತ್ತಿತ್ತು. ಕಾಮ್ಯು ನಿಸ್ಟ್ ಪಕ್ಷದ ಧೋರಣೆಗೆ ಈ ಗ್ರಂಥ ವಿಷಯ ವಿರೋಧವಾಗಿರಲಿಲ್ಲ. ಪಶ್ಚಿಮ ನಾಗರಿ

ಕತೆಯ ಮುಖ್ಯ ಲಕ್ಷಣಗಳೇನೆಂದು ಗ್ರಂಥದಲ್ಲಿ ವಿವೇಚಿಸಿ, ಆ ಲಕ್ಷಣಗಳನ್ನವಲಂಬಿಸಿದ ಸಾಮ್ರಾಜ್ಯವಾದವು ಅನತಿಕಾಲದಲ್ಲೇ ನಾಶಹೊಂದುತ್ತದೆಯೆಂದು ಸ್ಕಾಟ್ ಭವಿಷ್ಯನುಡಿದಿದ್ದರು. ಸ್ಪರ್ಧಾತ್ಮಕ ಸಂಗ್ರಾಮಗಳಿಂದ ಮೂಡಿಬಂದದ್ದು ಸಾಮ್ರಾಜ್ಯವಾದ; ಧನಾರ್ಜನೆಗೆ, ಧನ ಲೋಭಕ್ಕೆ ಅಂಟಿಕೊಳ್ಳುವುದು ಸಾಮ್ರಾಜ್ಯ ತತ್ತ್ವಕ್ಕಿರುವ ಪ್ರಶಸ್ತಿ; ನಿತ್ಯ ವಿಸ್ತಾರಗೊಳ್ಳುತ್ತ ಹೋಗುವುದು ಅದರಿಂದ ಬೆಳೆಯುವ ನಿರಂಕುಶಾಧಿಕಾರ. ಸಾಮ್ರಾಜ್ಯದಾಹಕ್ಕೆ ಪ್ರಪಂಚದೇಶಗಳು ಆಹುತಿಯಾಗುತ್ತ, ಈ ತತ್ತ್ವದ ಪ್ರಯೋಗಕ್ಕೆ ಬಲಿಬಿದ್ದ ಪಶುಗಳಾದ ದೇಶಗಳು ಬೇಗನೆ "ದಿವಾಳಿಯೇಳುತ್ತವೆ; ಆಗ ಅಲ್ಲಿ ಪರಿವರ್ತನೆಗಳಿಗೂ ವಸಾಹತುಗಳು ದಂಗೆಯೇಳುವುದಕ್ಕೂ ಅವಕಾಶ ಹೆಚ್ಚುತ್ತದೆ. ವಿಶ್ವವ್ಯಾಪಕವಾದ ಈ ಘಟನೆಗಳು ಸಾಮ್ರಾಜ್ಯವಾದಕ್ಕೆ ಅಳಿವು ತಂದು. ಸಮಷ್ಟಿವಾದಿ (ಸೋಷಲಿಸ್ಟ್) ವಿಶ್ವಮಾನವ ಸಮಾಜದ ಉದಯಕ್ಕೆ ದಾರಿಮಾಡುತ್ತದೆ" ಎಂದು ಪ್ರಸ್ತುತ ಗ್ರಂಥದಲ್ಲಿ ಸ್ಕಾಟ್ ಮುಂಗಂಡು ಕಣಿ ನುಡಿದಿದ್ದರು. ಅದನ್ನು ಬರೆದಾದಮೇಲೂ ಸ್ಕಾಟ್ ಯುದ್ಧವನ್ನು ಕುರಿತು ಇನ್ನೊಂದು ಗ್ರಂಥವನ್ನು ಬರೆದರು. ಅದರ ಶೀರ್ಷಿಕೆ ಇದು: "ಯುದ್ಧ: ನಾಗರಿಕ ರಾಷ್ಟ್ರಗಳ ಸುವ್ಯವಸ್ಥಿತ ಪ್ರಯತ್ನಗಳಿಂದ ವಿನಾಶ ಮತ್ತು ಸಾಲುಗೊಲೆಗಳು" (War: Organized Destruction and Mass Murders, Vanguard -1913)ಈ ಗ್ರಂಥದಲ್ಲಿ ಸ್ಕಾಟ್ ಯುದ್ಧವನ್ನು ಸಮಾಜಶಾಸ್ತ್ರ, ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರ-- ಈ ಮೂರು ದೃಷ್ಟಿಗಳಿಂದವಿವೇಚಿಸಿದ್ದರು. ರವಸಾಮ್ರಾಜ್ಯ ದೇಶಗಳು ಸ್ವದೇಶಾಂಗ ಮತ್ತು ವಿದೇಶಾಂಗ ನೀತಿಗಳಿಗೆ ಯುದ್ಧವನ್ನೇ ಆಧಾರಬಿಂದುವಾಗಿ ಅನ್ವಯಿಸಿ ಕಾರ್ಯಾಚರಣೆ ನಡಸುತ್ತವೆ; ಕಡೆಗೆ, ಯುದ್ಧವೇ ಸಾಮ್ರಾಜ್ಯ ಪೋಷಕರ "ಸ್ಥಾನಮಾನ, ಅಧಿಕಾರ ಮತ್ತು ಧನಾಢ್ಯತೆಗಳಿಗೆ ಪರಮ ಗೌರವಪುರಸ್ಸರವೂ ಕ್ಷಿಪ್ರಸಾಧನೀಯವೂ ಆದ ಉಪಾಯ.'' ಇತಿಹಾಸದೃಷ್ಟಿಯಿಂದ ನೋಡಿದರೆ, ಯುದ್ಧಕ್ರಿಯಾ-ಯಂತ್ರ-ತಂತ್ರಗಳು ನಾಗರಿಕಸಮಾಜದ ವಿಶಿಷ್ಟ ಪದ್ಧತಿಗಳೆನ್ನಿಸಿ ಬೆಳೆದು ಬಂದಿವೆ; ಯಶಸ್ವಿಯಾಗಿ ಯುದ್ಧ ಕಾರ್ಯವನ್ನು ನಿರ್ವಾಹಮಾಡಬಲ್ಲವರು ಪ್ರಭುಗಳಾಗುತ್ತಾರೆ. ಹೀಗೆ ವಿಷಯ ವಿಶ್ಲೇಷಣೆಮಾಡಿ ಸ್ಕಾಟ್ ತಮ್ಮ ನಿರ್ಣಯವನ್ನು ಸೂತ್ರಪ್ರಾಯವಾಗಿ ಹೇಳುತ್ತಾರೆ- ಯುದ್ಧಕರ್ಮವು ''ರಾಜರ ಕ್ರೀಡೆ, ಮತ್ತು ಕ್ರೀಡೆಗಳ ರಾಜ!'' ಎಂದು.

## ಪಶ್ಚಿಮ ನಾಗರಿಕತೆಯ ಖಂಡನೆ

ಯುದ್ಧದ ಕರಾಳ ಚರಿತೆಯನ್ನು ಸ್ಕಾಟ್ ಇನ್ನಷ್ಟು ವಿಶದಪಡಿಸುತ್ತ, 1914 ರ ವಿನಾಶ ಪ್ರಾರಂಭವಾದ ಮೇಲೆ, ಸಾಮ್ರಾಜ್ಯತತ್ತ್ವವನ್ನೂ ಅದು ಆಗಮಾಡಿಸುತ್ತ ಬಂದ ಪರಿವರ್ತನೆಯ ಸಾಹಚರ್ಯದಲ್ಲಿ ಯುದ್ಧವನ್ನು "ಪಾಶ್ಚಾತ್ಯ ನಾಗರಿಕತೆಯ ನಾಟಕೀಯ ಹಾಗೂ ವಿಷಮ ಪರಿಣಾಮಕಾರಿ ಮುಖ" ಗಳೆಂದೂ, ಯುದ್ಧಸಿದ್ಧತೆಯೂ ಯುದ್ಧಕಾರ್ಯ ನಿರ್ವಾಹವೂ ನಾಗರಿಕ ಪ್ರಭುತ್ವಗಳಲ್ಲಿಯ ರಾಷ್ಟ್ರನೀತಿ ನಿರ್ಮಾಪಕರಿಂದ ಆದ್ಯತೆ ಪಡೆಯುತ್ತವೆಯೆಂದೂ ಹೇಳುತ್ತಾರೆ. ಪಶ್ಚಿಮ

ನಾಗರಿಕತೆಯು ಹುಟ್ಟು "ಔದ್ಯಮಿಕ ಕ್ರಾಂತಿ" ( Industrial Revolution ) ಯಿಂದ ಮೊದಲಾಯಿತು. ಈ ಕ್ರಾಂತಿ ಪೇಟೆಯ 'ವಾರ್ತೆ' (economy) ಯಲ್ಲಿ ಚಟುವಟಿಕೆ ತಂದಿತು. ಈ ಘಟನೆಗಳು 18 ನೆಯ ಶತಮಾನದ ಕಟ್ಟಕಡೆಯ ಭಾಗದಲ್ಲಿ ಆದುವು; ಮತ್ತು 1870 ರಿಂದ ಆಚೆಗೆ ಏಕಮಾನ್ಯ ಬಂಡವಾಳ ತತ್ತ್ವಕ್ಕೆ ವಿಕಸನಾವಕಾಶ ದೊರೆಯಿತು. ಔದ್ಯಮಿಕ ಕ್ರಾಂತಿ ನಡೆದದ್ದು ಪ್ರಕೃತಿ ಮತ್ತು ಸಮಾಜ ಜನಜೀವನಗಳ ನಡುವೆ–ಮನುಷ್ಯ ಸಂಬಂಧಗಳಲ್ಲಿ ಆದ ಪರಿವರ್ತನೆಗಳ ಫಲ; ಮತ್ತು ಔದ್ಯಮಿಕ ಕ್ರಾಂತಿಯ ಪರಮ ಪ್ರಯೋಜನವೆಂದರೆ ನಮ್ಮ ಪೂರ್ವಿಕರಿಗಿದ್ದ ಪ್ರಗತಿ ಕಂಟಕಗಳು ಪರಿಹಾರವಾಗಿ ಸಾಮಾನ್ಯ ಜನಕ್ಕೆ ಬಿಡುಗಡೆ ಲಭಿಸಿದ್ದು–ಎಂದು ಸ್ಕಾಟ್ ಒಡಂಬಡುತ್ತಾರೆ. ಮನುಷ್ಯನೂ, ಅವನ ಸಾಮಾಜಿಕ ಶಿಲ್ಪವೂ ಹೊಸ ಸ್ವರೂಪ ವನ್ನು ಪಡೆಯಲು ಮೊದಲಾಯಿತಾದರೂ ನಮ್ಮ ಆರ್ಥಿಕ ವ್ಯವಸ್ಥೆಯ ಮರ್ಯಾದೆ ಗಳೂ, ರಾಜಕೀಯ ವ್ಯವಸ್ಥೆಯ ಸ್ವರೂಪವೂ, ಪ್ರಭುತ್ವಗಳು ನಡೆಯುವ ರೀತಿ ನೀತಿ ಗಳೂ ಇನ್ನೂ ಪುರಾತನ ಶೃಂಖಲೆಗಳಿಗೇ ಬದ್ಧವಾಗಿವೆ ಎಂದು ಅವರು ದೃಢವಾಗಿ ಅಭಿಪ್ರಾಯ ಪಡುತ್ತಾರೆ. ಆದದ್ದರಿಂದ ಸ್ಕಾಟ್ ಕೊಡುವ ಎಚ್ಚರಿಕೆ:

"ವಸ್ತುಗಳ ಉತ್ಪಾದನೆಯ ಸಾಧನಗಳು ಏಕಸ್ವಾಮ್ಯವಾಗಿ ಖಾಸಗಿ ಒಡೆತನದಲ್ಲಿರುವುದಕ್ಕೆ ಅವಕಾಶ ಕೊಡುವುದೆಂದರೆ ಕೇಡಿಗೆ ಅವ ಕಾಶ ಕೊಟ್ಟಂತೆ ಎಂಬುದನ್ನು ಮರೆಯಬೇಡಿ. ಇಂಥ ಸಂದರ್ಭದಲ್ಲಿ ಪ್ರಕೃತಿ ಸಂಪನ್ಮೂಲಗಳು, ಸ್ವಾಮ್ಯದ ಸನ್ನದುಗಳು (ಪೇಟೆಂಟ್ಸ್), ಚಲಾವಣೆಯಲ್ಲಿರುವ ಹಣದ ಮೇಲಣ ಹತೋಟಿ–ಇವು ಖಾಸಗಿ ಒಡೆ ಯರ ಹಿತವನ್ನು ಮಾತ್ರ ಕಾಪಾಡುತ್ತವೆಯೇ ಹೊರತು ಗ್ರಾಹಕರ ಹಿತವನ್ನಲ್ಲ. ಖಾಸಗಿ ಒಡೆಯರ ದೌಲತ್ತು ನಿಷ್ಠುರವಾಗಿರುತ್ತದೆ. ಬಂಡವಾಳಕ್ಕೆ ಅವರು ನಿರೀಕ್ಷಿಸುವ 'ಬಡ್ಡಿ' ಎಂಬುದು ಈ ಒಡೆಯರಿಗೆ ಪ್ರಜೆ ತೊರುವ 'ಪೊಗದಿ' ಅಥವಾ 'ಕಪ್ಪ' ಆಗುತ್ತದೆ. ಉತ್ಪನ್ನವಾದ ವಸ್ತುಗಳ ಮಾರಾಟದ ಕೇಂದ್ರಗಳು ಜೂಜು ಕಟ್ಟೆಗಳಾಗಿ, ಗ್ರಾಹಕರ ಶೋಷಣೆ ಒಂದು ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತದೆ. ಒಡೆಯರ ಆಸ್ತಿ ಗಳು ಇಡುಗಂಟುಗಳು (ಸೆಕ್ಯೂರಿಟೀಸ್) ಗಳ ರೂಪದಲ್ಲಿ ಬೆಳೆಯುತ್ತವೆ. ಮನುಷ್ಯಚಿತ್ತಗಳನ್ನೂ ಪ್ರಭುತ್ವದ ಆಡಳಿತ ಯಂತ್ರಗಳನ್ನೂ ರೂಪಿ ಸುವುದರಲ್ಲಿ ಧನದ ಪಾತ್ರವು ನಿರ್ಣಾಯಕವಾಗುತ್ತದೆ. ಹಣಕ್ಕಾಗಿ ಹುರುಡು, ಅದರ ಗಳಿಕೆಗಾಗಿ ಸುಲಿಗೆಯ ಹೆಣಗಾಟಗಳು, ಮತ್ತು ನಿರ್ಬಂಧಕ ಸಮಾಜಿಕ ವ್ಯವಸ್ಥೆ-ಎಲ್ಲವೂ ಒಂದು ಗೊತ್ತಾದ ಏರ್ಪಾಟಿ ನಲ್ಲಿ ನಡೆಯುತ್ತದೆ. ಪೇಟೆಯ ಚಟುವಟಿಕೆಯೆಲ್ಲ ಸಿರಿವಂತರಿಗೆ ವರ ಮಾನ ತರುವ ಮೋಸದಿಂದ ತುಂಬಿರುತ್ತದೆ. ಬಲ್ಲಿದರ ದಬ್ಬಾಳಿಕೆಯ

ಪಟ್ಟು, ದಿನ ದಿನಕ್ಕೂ ಬಲಗೊಳ್ಳುತ್ತದೆ. ಬಡವರೂ ಬಲಹೀನರೂ ಬವಣೆ ತುಂಬಿದ ಬದುಕನ್ನು ಬಾಳುತ್ತಲೇ ಇರಬೇಕಾಗುತ್ತದೆ. ‡

## ಹೆಲೆನ್ನಿನೊಡನೆ ವಿವಾಹ

ಸ್ಕಾಟ್ ಅವರು ಭವಿಷ್ಯ ಹೇಳುವಂತೆ ತಮ್ಮ ನಿರ್ಣಯವನ್ನು ಸಾರುತ್ತಾರೆ: ಪಾಶ್ಚಾತ್ಯ ನಾಗರಿಕತೆಯ ಸುಗ್ಗಿಯ ಕಾಲದಲ್ಲಿ ವೈಶ್ವಾನರ(ವಿಶ್ವಮಾನವ)ಸಮೂಹವು ಸುಗ್ಗಿಯ ಸಮೃದ್ಧಿಯನ್ನು ಕಾಣದೆ ಹೇಗೋ ಬಾಳಿತು. ಆದರೆ ಪಾಶ್ಚಾತ್ಯ ನಾಗರಿಕತೆ ತನ್ನ ಅಭಿವೃದ್ಧಿಯ ಭಾರಕ್ಕೆ ಕುಸಿದು ಸಂಜೆಯನ್ನು ಸಮೀಪಿಸಿತು. ಸಮತಾವಾದದ ಉಷೆಯ ಮುಂಬೆಳಕನ್ನು ಬರಮಾಡಿಕೊಂಡದ್ದು ಬಳಲಿದ ಈ ಸ್ವಲ್ಪ ಜನದ ಭೋಗಾತಿರೇಕವೇ. ಈ ಒಂದು ಪರಿವರ್ತನ ಮುಹೂರ್ತದಲ್ಲಿ ಸ್ಕಾಟ್ ನ್ಯೂಯಾರ್ಕ್ ನಗರದಲ್ಲಿ ಹೆಲೆನ್ ನೋರ್ತ್ಸ್ ಎಂಬ ಯುವತಿಯನ್ನು ಭೇಟಿಯಾದರು. ಇವರಿಬ್ಬರ ಸಮಾಗಮವು ವಿವಾಹ ಮಂಗಲವಾಗಿ ಬೆಳೆಯಿತು. ಹೆಲೆನ್ ತರುಣಿ ಬುದ್ಧಿಶಾಲಿಗಳ ಮಧ್ಯಮವರ್ಗಕ್ಕೆ ಸೇರಿದಾಕೆ. ತನ್ನ ಸಮಾಜದ ಪಾಠ ಹಾಗೂ ಸಂಸ್ಕೃತಿಕ ಕಾರ್ಯಕಲಾಪಗಳಲ್ಲಿ ಸಕ್ರಿಯ ಪಾತ್ರವಹಿಸುತ್ತಿದ್ದ ಕುಟುಂಬದಲ್ಲಿ ಹುಟ್ಟಿಬೆಳೆದಾಕೆ. ಕಲೆ, ಸಾಹಿತ್ಯ, ಸಂಗೀತ ಆಕೆಯ ಹೊತ್ತನ್ನು ತುಂಬಿದ ಆಸಕ್ತಿಗಳು. ಆಕೆಯ ಪ್ರತಿಭೆಯನ್ನು ಗುರುತಿಸಿದ ತಾಯಿತಂದೆ ತವರಿನಲ್ಲಿಯೂ ಹೊರಗಡೆ ಆಸ್ಟ್ರಿಯಾ, ಹಾಲೆಂಡ್ ಮತ್ತು ಆಸ್ಟ್ರೇಲಿಯಾ ದೇಶಗಳಲ್ಲಿಯೂ ದೊರೆಯುವ ಅತ್ಯುತ್ತಮವಾದ ಶಿಕ್ಷಣವನ್ನು ಆಕೆಗೆ ಕೊಡಿಸಿ ಆಕೆಯ ಪ್ರತಿಭೆಯ ಅಭಿವೃದ್ಧಿ ವಿಕಾಸಗಳಿಗೆ ನೆರವು ಕೊಟ್ಟರು. ಥಿಯೊಸಫಿಸ್ಟ್ ಪಂಥಕ್ಕೆ ಸೇರಿದವರು ಹೆಲನ್ನಿನ ತಾಯಿ ತಂದೆ. ಅವರಿಗೆ ಭಾರತೀಯ ದರ್ಶನ ಶಾಸ್ತ್ರದಲ್ಲಿ ತೀವ್ರಾಸಕ್ತಿಯಿತ್ತು. ಶಾಕಾಹಾರವನ್ನವರು ವ್ರತವಾಗಿ ಹಿಡಿದಿದ್ದರು. ಮಗಳೊಡನೆ ಅವರು ಭಾರತಕ್ಕೆ ಪ್ರವಾಸ ಹೊರಟು ಅಡಿಯಾರ್ ಪಟ್ಟಣದಲ್ಲಿ ದೀರ್ಘಕಾಲ ತಂಗಿದ್ದರು. ಅಲ್ಲಿ ಹೆಲನ್ ದರ್ಶನ ಶಾಸ್ತ್ರದಲ್ಲೂ ಯೋಗಶಾಸ್ತ್ರ ಸಂಗೀತಕಲೆಗಳಲ್ಲಿಯೂ ತನ್ನ ಅಧ್ಯಯನವನ್ನು ಬಹು ಆಸಕ್ತಿಯಿಂದ ನಡಸಿದಳು. ಬಂಡವಾಳಕ್ಕೂ, ಕಾಯಕಕ್ಕೂ ನಡುವೆ ನಡೆಯುತ್ತಿದ್ದ ತಿಕ್ಕಾಟವಾಗಲಿ, ತತ್ಸಂಬಂಧವಾದ ತೊಡರು ತೊಡಕುಗಳಾಗಲಿ, ಸಾಮಾಜಿಕ ಆರ್ಥಿಕ ವ್ಯವಸ್ಥೆಗಳಿಗೂ ರಾಜಕೀಯಕ್ಕೂ ಇದ್ದ ನಂಟು ಗಂಟುಗಳ ಹಿನ್ನೆಲೆಯಾಗಲಿ ಹೆಲೆನ್ನಿನ ಪರಿಚಯಕ್ಕೆ ಬಂದ ಸಂಗತಿಗಳಲ್ಲ. ಗಂಡ ಹೆಂಡಿರ ಬೇರೆ ಬೇರೆ ಹಿನ್ನಲೆಗಳು ಬೆರೆತು ಇಬ್ಬರ ಕೂಡುಬಾಳಿಗೆ ತಕ್ಕ ಕಾಯಕ ಕ್ಷೇತ್ರವನ್ನು ಸಜ್ಜುಗೊಳಿಸಿದುವು.

---

‡ "ಒಳ್ಳೆಯ ಬಾಳನ್ನು ಬದುಕುವುದು"– ಹೆಲೆನ್ ಮತ್ತು ಸ್ಕಾಟ್. ಸೋಷಲ್ ಸೈನ್ಸ್ ಇನ್ಸ್‌ಟಟ್ಯೂಟ್, ಹಾರ್ಬರ್‌ಸೈಡ್. 1954 (ಪುಟ 186–187)

## ತೋರೋವಿನ ಆದರ್ಶಕ್ಕೆ ಸಮ್ಮತಿ

ನೂತನ ದಂಪತಿಗಳು ತಮ್ಮ ಬದುಕನ್ನು ಪಟ್ಟಣವಾಸದಲ್ಲಿದ್ದು ನಡಸುವುದು ಬೇಡ, ಬಡವರಾಗಿ ಗ್ರಾಮಜೀವನ ನಡಸೋಣ ಎಂಬ ತೀರ್ಮಾನಕ್ಕೆ ಬಂದರು. ಪಾಶ್ಚಾತ್ಯ ನಾಗರಿಕತೆಯಿಂದ ಭಿನ್ನವಾದ, ಪರ್ಯಾಯರೂಪದ, ಜೀವನ ಕ್ರಮವೊಂದನ್ನುಶೋಧಿಸಲು ನ್ಯೂಯಾರ್ಕ್ ಬೃಹನ್ನಗರವಾಸವನ್ನು ತೊರೆದರು. ಆ ಪಟ್ಟಣದ ಹಳಸಲಾದ, ಪುನರುಪಯೋಗಕ್ಕೆ ಬಾರದ, ಸಂಸ್ಕೃತಿ ಪರಿಸರದಿಂದ ದೂರಸರಿದರು. ಕಿಕ್ಕಿರಿದು ಜನಸಮ್ಮರ್ದ ಹೆಚ್ಚಿ ಸಾರ್ಥಕ ಕ್ರಿಯಾ ಚಲನವಲನಗಳಿಗೆ ಎಡೆಕೊಡ್ದುವ ಹಾಗೂ ಪದ್ಧತಿ ಬದ್ಧವೂ ಕಲುಷಿತವೂ ಆದ ಪಟ್ಟಣದ ನೆರೆಹೊರೆಯಲ್ಲಿ ಮರಳಿ ಅವರು ಉತ್ಸಾಹಗೊಳ್ಳಲಿಲ್ಲ. ಮಾಧುರ್ಯಹೊಮ್ಮದ ಮತ್ತು ಕೇವಲ ದ್ರವ್ಯಚಿಂತಾಕುಲವಾದ ಪ್ರಪಂಚದ ಬಹುದೊಡ್ಡ ನಗರಕ್ಕೆ ಬೆನ್ನುಮಾಡಿ, ಏಕಾಂತವನ್ನು ಕೊಡುವ ಗ್ರಾಮಾಂತರಕ್ಕೆ ಸರಿದರು. ಅವರ ಕಾಯಕಕ್ಕೆ ಅನುಕೂಲವಾದ ಪ್ರಶಾಂತವೂ ಪ್ರಕೃತಿ ಸುಂದರವೂ ಆದ ವನ್ಯಗ್ರಾಮೀಣ ಪರಿಸರವನ್ನು ಅಲೆದಾಡಿ ಹುಡುಕಿಕೊಂಡರು. ಕೈಯಾರ ದುಡಿದು ಉಣಿಸನ್ನು ಬೆಳೆದು, ಸ್ವಾವಲಂಬನದಿಂದ ಬಾಳುವ ಅವರ ದೀಕ್ಷಾಬದ್ಧ ಜೀವನಕ್ಕೆ ಹೊಂದಿಕೊಳ್ಳುವ ಚೆಲುವಾದ ನೆಲೆಯೊಂದು ಸಿಕ್ಕಿತು. ಸರಳತೆ, ಪ್ರಶಾಂತತೆ, ಉಪಯುಕ್ತತೆ ಮತ್ತು ಪ್ರಕೃತಿಯೊಡನೆ ಸಮರಸದ ಬಾಳಿಕೆ–ಇವು ಒಳ್ಳೆಯ ಜೀವನದ ಅಂಗಗಳು. ಇಂಥ ತಣಿವು ಹೊಮ್ಮುವ ಬಾಳನ್ನು ಭಾರತೀಯ ಋಷಿಗಳು ಮನುಷ್ಯಾಯುಷ್ಯದಲ್ಲಿ ಮೂರನೆಯ ಮಜಲು – ವಾನಪ್ರಸ್ಥ ಎಂದು ಸ್ಫೂರ್ತಿಯಿಂದ ಬಗೆದು ಬದುಕಿ ತಮ್ಮ ಸಂತಾನಕ್ಕೆ ಆ ಆಶ್ರಮವನ್ನು ನೇಮಿಸಿದರು. ನಿಯರಿಂಗ್ ದಂಪತಿಗಳು ಸ್ವದೇಶದಲ್ಲೇ ಈ ಜೀವನಾದರ್ಶವನ್ನು ಹೆನ್ರಿ ತೋರೋವಿನ ಬದುಕಿನಲ್ಲಿ ಕಂಡು ಉಲ್ಲಾಸ ಪಡೆದರು. ಸಾಧು ತೋರೋ ಪ್ರಕೃತಿ ಸಾನ್ನಿಧ್ಯದಲ್ಲಿರುತ್ತ ತನ್ನ ಕಾಯಕಕ್ಕೆ ಬೇಕಾದ ಕಸುವನ್ನು ಹೀರಿಕೊಂಡಾತ. ಪ್ರಕೃತಿ ಅನಂತ ಶಕ್ತಿಗರ್ಭೆ. ಬಳಲಿದವರಿಗೆ ಬಲ ಬರುವುದು ಹೇಗೆ? ಪ್ರಕೃತಿಯಲ್ಲಿ ಶಕ್ತಿಕೇಂದ್ರವೊಂದು ಶಾಶ್ವತವಾಗಿ ನೆಲಸಿ, ನಿರಂತರವಾಗಿ ಮಾನವನಿಗೆ ಬಲಪ್ರದವಾಗಿರುತ್ತ, ಋತು ಚಕ್ರವನ್ನುರುಳಿಸುತ್ತಿರುತ್ತದೆ. ಈ ಗುಟ್ಟನ್ನು ತೋರೋ ಪ್ರಕೃತಿಯಲ್ಲಿರುವುದನ್ನು ಗುರುತಿಸಿ, ಮನುಷ್ಯನಿಗೆ ಈ ಶಕ್ತಿ ಉತ್ತೇಜಕವಾಗಿ ಪ್ರವರ್ತಿಸುತ್ತಿರುವುದನ್ನೂ, ಸಕಲಚಲನೆಗೂ ಸತ್ತ್ವಯುಕ್ತ ಚೇತನದ ಪರಿವರ್ತನೆಗೂ ಆಗರವಾಗಿರುವುದನ್ನೂ ಕಂಡುಕೊಂಡು, ಈ ಅನುಭವದಿಂದ ನಲಿದವನು ಯೋಗಿ ತೋರೋ. ನಿಯರಿಂಗ್ ದಂಪತಿಗಳು ತೋರೋವಿನ ಬರವಣಿಗೆಗಳನ್ನು ವ್ಯಾಸಂಗಮಾಡಿ, ತಮ್ಮೊಡನೆ ಹುಟ್ಟಿನಿಂದ ಬೆಳೆದುಬಂದಿದ್ದ ಪ್ರಕೃತಿಯನ್ನು ಕುರಿತ ಪ್ರೇಮಗೌರವಗಳನ್ನುಬಲಪಡಿಸಿಕೊಂಡರು. ತಾಯಿ ಇಳೆ "ಸರಳ–ಸ್ವಸ್ಥ–ತೃಪ್ತ ಜೀವನ"ವನ್ನು ಮಕ್ಕಳಿಗೆ ನೀಡುತ್ತಾಳೆಂದು ನಿಯರಿಂಗ್ ದಂಪತಿಗಳು ಅನುಭವದಿಂದ ಕಲಿತು ತಮ್ಮ ಬಾಳಸಿರಿಯನ್ನು ಹೆಚ್ಚಿಸಿಕೊಂಡರು. ವ್ಯವಸಾಯ ಕ್ಷೇತ್ರಕ್ಕೆ ಭಕ್ತಿಯನ್ನೂ

ವಿವಿಧ ಸಸ್ಯಜೀವನ ಪ್ರಾಣಿಜೀವನಗಳಿಗೆ ವಿಸ್ಮಯವನ್ನೂ ತೋರುವುದರ ಜೊತೆಗೆ, ಇವುಗಳ ಪಕ್ಕದಲ್ಲೇ ಪ್ರಕೃತಿಯಲ್ಲಿ ಪ್ರಕಟವಾಗುವ ಅಪಾರ ಶಕ್ತಿ, ಭೌತವಸ್ತು ಸಂಪತ್ತು, ಇಂದ್ರಿಯ ವ್ಯಾಪಾರಕ್ಕೆ ಸಿಕ್ಕುವ ವಿಷಯವೈವಿಧ್ಯ ಮತ್ತು ಜಗದ್ದ್ರವ್ಯಗಳ ಜನ್ಮಪರಿಣಾಮಗಳು – ಇವುಗಳಲ್ಲೆಲ್ಲ ಮನುಷ್ಯನು ನಿತ್ಯ ಕುತೂಹಲಿಯಾಗಿರುವ ಪಾಠವನ್ನು ತೋರೊವಿನ ಬರವಣಿಗೆಯನ್ನೋದಿ ಕಲಿತರು. ಸ್ಕಾಟ್ ಅವರ ಅಭಿಪ್ರಾಯ ದಲ್ಲಿ ಜಗತ್ತು ಋತವನ್ನು–ವಿಶ್ವನಿಯಮವನ್ನು– ಅವಲಂಬಿಸಿ ಬಾಳುತ್ತಿರುತ್ತದೆ.

ಒಂದು ನಿಶ್ಚಿತ ಪೂರ್ವಾಲೋಚನೆ, ಜಾಗರೂಕಯೋಜನೆ, ಮಹಾದಕ್ಷ ಸಂಘಟನೆ, – ಒಂದೊಂದು ವಿವರದಲ್ಲೂ ಉದ್ದೇಶಕ್ಕೆ ಅನು ಸಾರಿಯಾದ ಅಭಿವ್ಯಕ್ತಿ, ಇವನ್ನು ನಾವು ಪ್ರಕೃತಿವ್ಯಾಪಾರದಲ್ಲಿ ನೋಡು ತ್ತೇವಾದರೂ ಪ್ರಕೃತಿ ಸರ್ವ ಸ್ವತಂತ್ರೆಯೂ ಅನಿಯಂತ್ರಿತೆಯೂ ಆದ ನಿರಂಕುಶೆಯಲ್ಲ. ಪ್ರಕೃತಿಯ ಎರಡು ಗಮನಾರ್ಹಗಳಾದ ಮುಖಗಳು ಇವು: ಒಂದುಕಡೆ, ತನ್ನಕರ್ತವ್ಯ ಕರ್ಮದಲ್ಲಿ ಶ್ರದ್ಧಾಪೂರ್ವಕವಾದ ನಿಷ್ಠೆ ಯನ್ನು ವ್ಯಕ್ತಪಡಿಸುತ್ತ ವಿಶ್ವ ಘಟನೆಗಳ ಸಾಂತತ್ಯವನ್ನು ನಮಗೆ ತೋರಿ ಸುತ್ತಾಳೆ; ಇನ್ನೊಂದುಕಡೆ, ಪ್ರಮಾಣಕ್ಲೃಪ್ತತೆಯಿಂದ ಕೂಡಿದ ನಿರಂ ತರ ಪರಿವರ್ತನ ಸರಣಿಯನ್ನು ಆಗಮಾಡಿಸುತ್ತ ಹಳತು ಹೊಸತುಗಳೆ ರಡನ್ನೂ ಸಮನ್ವಯಿಸಿ ನಮಗೆ ತೋರಿಸುತ್ತಾಳೆ. ನಮಗೆ ಗೋಚರಿಸು ವಂತೆ ನಮ್ಮ ವಿಶ್ವಜಗತ್ತು ಇರುತ್ತದೆ; ಮತ್ತು ಹಾಗೆ ಇರುವಕಾಲದಲ್ಲೇ ನಮಗೆ ಗೊತ್ತೇ ಆಗದಂತೆ ನಮ್ಮ ವಿಶ್ವಜಗತ್ತು ಆಗುತ್ತಿರುತ್ತದೆ.'' ‡

## ವೆರ್ಮಾಂಟ್ ಕಾಡ ಹೊಲಮನೆ

ಹೀಗೆ 1932ರಲ್ಲಿ ನಿಯರಿಂಗ್ ದಂಪತಿಗಳು ವೆರ್ ಮಾಂಟ್ ರಾಜ್ಯದ ಗ್ರೀನ್ ಮೌಂಟನ್ಸ್ ಪ್ರದೇಶದಲ್ಲಿ ಒಂದುಹೊಲಮನೆಯನ್ನು ಸ್ವಾಧೀನಕ್ಕೆ ಪಡೆದು, ನೆಲವನ್ನು ಆಶ್ರಯಿಸಿ ಒಳ್ಳೆಯ ಬಾಳನ್ನು ಬದುಕಲು, ಸರಳವಾಗಿ, ಕ್ರಿಯಾಪೂರ್ಣವಾಗಿ, ಪ್ರಶಾಂತ ವಾತಾವರಣದಲ್ಲಿ ಬದುಕಲು, ಮೊದಲುಮಾಡಿದರು. ಅವರಿಗೆ ಈವನ್ಯಪರ್ಣ ಶಾಲೆ ತಮ್ಮ ಧ್ಯೇಯಕ್ಕೆ ಹೊಂದಿಕೊಂಡಂತೆ ಲಭ್ಯವಾಯಿತೆಂದು ಸಂತೃಪ್ತಿ ಸಮನಿಸಿತು. ಒಳ್ಳೆಯ ಜೀವನಕ್ಕೆ ಇಬ್ಬರ ಅಭಿಮತವೂ ಒಂದಾಗಿ ಕಲೆಯಿತು. ಅವರವರ ಸಾಮರ್ಥ್ಯ ಗಳು ಬೇರೆ ಬೇರೆ ತೆರನಾಗಿದ್ದರೂ ಸಹಕಾರ ಪಥದಲ್ಲಿ ಕೂಡಿಕೊಂಡುವು. ಇಬ್ಬರೂ

‡ ಆಮೂಲಾಗ್ರ ಸುಧಾರಕನ ಸಾಧನೆ: ಒಂದು ರಾಜಕೀಯ ಆತ್ಮಕಥೆ—ಸ್ಕಾಟ್ ನಿಯ ರಿಂಗ್ಸ್, ಹಾರ್ಪರ್ ಅಂಡ್ ರೋ, ನ್ಯೂಯಾರ್ಕ್. (ಪು. 289)

ಕಂಡ ಕಾಯಕಾವಕಾಶವು ಪ್ರಯೋಗಕ್ಷಮವೆನ್ನಿಸಿ ಒಳ್ಳೆಯ ಬಾಳನ್ನು ಬದುಕುವ ಭರವಸೆಯನ್ನು ನೀಡಿತು. ಸ್ಕಾಟ್ ನಿಯರಿಂಗ್ ಒಳ್ಳೆಯ ಬಡಗಿ. ಮನಸ್ಸಿನಲ್ಲಿ ಕಲ್ಪಿಸಿಕೊಂಡದ್ದನ್ನು ನಕಾಸೆಗಿಳಿಸಿ ವಾಸ್ತು ಶಿಲ್ಪವನ್ನು ಎತ್ತಬಲ್ಲ ನಿಪುಣ. ಹಾಗೆಯೇ ತೋಟದ ಪಾತಿಗಳನ್ನು ವಿಂಗಡಿಸಿ ವಿವಿಧ ಸಸ್ಯಜಾತಿಗಳನ್ನು ಮೊಳೆಯಿಸಿ ಬೆಳೆಯಿಸಬಲ್ಲ ನಿಪುಣ ಕೃಷಿಕ. ಭೂಕ್ಷೇತ್ರದಲ್ಲಿ ಕೃಷಿಕನಾಗಿರುವುದರ ಜೊತೆಗೆ ಆತ ಮನಃಕ್ಷೇತ್ರದಲ್ಲಿ ವಿಚಾರವಾದಿಯೂ ಆಗಿದ್ದರು. ವಿಶ್ವಪ್ರಪಂಚದಲ್ಲಿ ಅಸ್ತಿತ್ವಕ್ಕೆ ಬಂದು ಇರುವ ಎಲ್ಲವನ್ನೂ ತನ್ನಂತೆ ಅವಿನಾಭಾವದಿಂದ ಬಗಯುತ್ತ, ವ್ಯಷ್ಟಿ ಪಿಂಡಾಂಡದಿಂದ ಹಿಡಿದು ಸಮಷ್ಟಿ ಬ್ರಹ್ಮಾಂಡದ ವರೆಗೆ ಜಗದ್ವಸ್ತುಗಳಲ್ಲಿ ಪರಸ್ಪರವಾಗಿ ಇರುವ ಸಂಬಂಧ ಸೂತ್ರವನ್ನು ಮರೆಯದೆ,—ಇರವಿಗೆ ಬಂದ ಯಾವುದಕ್ಕೂ ಬಾಧೆತರದೆ,—ವ್ಯಕ್ತಿ-ವಿಕಾಸಕ್ಕೆ ಅವಕಾಶಮಾಡಿಕೊಳ್ಳಬೇಕಾದವನು ಮನುಷ್ಯನೆಂದು ಸ್ಕಾಟ್ ಮನವರಿಕೆ ಮಾಡಿಕೊಂಡಿದ್ದರು. ಈ ಜಗದ್ವಸ್ತುಗಳಲ್ಲಿ ಪ್ರಕಟವಾಗುವ ಸಹಜ ನಿಕಟ ಬಾಂಧವ್ಯಗಳೂ ಪಕ್ಕಪಕ್ಕದಲ್ಲೇ ಇರುವ ಜಡಾಂಶ ಚೇತನಾಂಶಗಳೂ ವ್ಯಷ್ಟಿಚರಾಚರ ವಸ್ತುಗಳನ್ನೂ ಸಮಷ್ಟಿಯ ವಿವಿಧ ಖಗೋಳಗಳನ್ನೂ ಪರಸ್ಪರ ಸಂಬಂಧದಲ್ಲಿ ಇರಿಸಿ ನಡಸುತ್ತವೆ. ಭಿನ್ನಭಿನ್ನ ಪರಿಸರಗಳ ಅನಿವಾರ್ಯ ಪ್ರಭಾವಕ್ಕೆ ಎಲ್ಲ ಸಸ್ಯ-ಪ್ರಾಣಿ- ಜೀವರಾಶಿಗಳನ್ನು ಒಳಪಡಿಸಿ, ಸಮಗ್ರ ವಿಶ್ವ ಪ್ರಪಂಚದ ಸಂಕೀರ್ಣ–ಸಮನ್ವಯ - ವೈಭವವನ್ನು ಸಾರತಕ್ಕದ್ದು ಪ್ರಕೃತಿಯ ಋಷಿಶಕ್ತಿ ಈ ಘಟ್ಟದಲ್ಲಿ ಪ್ರಾಚೀನ ಸಂಸ್ಕೃತ ಶ್ಲೋಕವೊಂದು ಉಲ್ಲೇಖನೀಯವಾಗಿದೆ.

ಪಿಬಂತಿ ನದ್ಯಃ ಸ್ವಯಂ ನಾಂಭಃ
ಸ್ವಯಂ ನ ಖಾದಂತಿ ಫಲಾನಿ ವೃಕ್ಷಾಃ ।
ಧಾರಾಧರೋ ವರ್ಷತಿ ನಾತ್ಮಹೇತೋಃ
ಪರೋಪಕಾರಾಯ ಸತಾಂ ವಿಭೂತಯಃ॥

ನದಿಗಳು ತಮ್ಮ ನೀರನ್ನು ತಾವೇ ಕುಡಿದುಬಿಡುವುದಿಲ್ಲ; ಮರಗಳು ತೋರ ಗೊಂಚಲುಗಳಲ್ಲಿ ಬಿಡುವ ಹಣ್ಣುಗಳನ್ನು ತಾವೇ ತಿಂದುಬಿಡುವುದಿಲ್ಲ; ಮೋಡಗಳು ಸ್ವಂತ ಸುಖಕ್ಕೋಸ್ಕರ ಬಾನಿಂದ ಮಳೆಗರೆಯುವುದಿಲ್ಲ. ಹೀಗೆಯೇ ಸಂತರು ಸ್ವಾರ್ಥ ಲೇಶವಿಲ್ಲದೆ ಪರೋಪಕಾರಮಾಡುವ ಸಿರಿವಂತರು.

ಯಾವೊಬ್ಬ ವ್ಯಕ್ತಿಮನುಷ್ಯನು ಪರಹಿತವನ್ನು ಉಪೇಕ್ಷಿಸಿಯೋ ನಿರಾಕರಿಸಿಯೋ ಸ್ವಾರ್ಥದಿಂದ ನಡೆದುಕೊಳ್ಳತಕ್ಕದ್ದಲ್ಲ ಎಂಬುದನ್ನು ನಿಯಮನಿಸ್ಸ ಪ್ರಕೃತಿ ವ್ಯಾಪಾರ ಅವನಿಗೆ ನಿತ್ಯಪಾಠವನ್ನೊದಗಿಸುತ್ತಿರುತ್ತದೆ. ಸ್ವಾರ್ಥವಿಲ್ಲದವನು ವಿಶ್ವ ಕುಟುಂಬ ಭಾವನೆಯನ್ನು ಮೈಗೂಡಿಸಿಕೊಂಡು ಎಲ್ಲರ ಒಳತಿಗಾಗಿ ತನ್ನ ಬದುಕನ್ನು ಮುಡಿಪುಕಟ್ಟಬಲ್ಲನು. ಯಜುರ್ವೇದ ಮಂತ್ರದಲ್ಲಿ ಬರುವ ಈ ಆರ್ಯೋಕ್ತಿಯೂ ಇಲ್ಲಿ

ಉಲ್ಲೇಖನೀಯವಾಗಿದೆ: ಇದು ಐಕ್ಯಭಾವನೆಯನ್ನು ಅಡಕವಾಗಿ ಸಾರುತ್ತದೆ. “ಯತ್ರ ವಿಶ್ವಂ ಭವತ್ಯೇಕನೀಡಮ್,” (ತೈತ್ತಿರೀಯ ಸಂಹಿತೆ) ವಿಶ್ವ ಪ್ರಪಂಚವನ್ನು ಯಾರು ಒಂದುಗೂಡಾಗಿ, ಆಶ್ರಯಸ್ಥಾನವಾಗಿ ಎಣಿಸುತ್ತಾರೋ – ವೈಶ್ವಾನರ ಸಮುದಾಯವನ್ನು ಏಕ ಕುಟುಂಬದಲ್ಲಿ ಪರಿಭಾವಿಸಿ ಆ ಸಮುದಾಯದ ಅಭ್ಯುದಯದಲ್ಲಿ ತೀವ್ರಾಸಕ್ತರೋ–ಅವರು ಧನ್ಯರು. ಅಂಥವರು ಜಗನ್ಮೂಲ ರಹಸ್ಯವನ್ನು, ಜಗತ್‌ಸ್ಥಿತಿಯ ಉದ್ದೇಶವನ್ನು ಅರಿತವರು. ಅಂಥವರು ಮನುಷ್ಯಬಾಂಧವ್ಯವನ್ನೂ ಅನನ್ಯತೆಯನ್ನೂ ಸಹಜಾನುಭವಗಳನ್ನಾಗಿ ಮಾಡಿಕೊಂಡು, ವ್ಯಷ್ಟಿಯನ್ನು ಸಮಷ್ಟಿಯ ಪ್ರತಿನಿಧಿಯಾಗಿ ನಡಸಬೇಕೆಂಬ ಜಗದುದ್ದೇಶವನ್ನು ಸ್ವಂತಕ್ಕೆ ವಿಶದಪಡಿಸಿಕೊಂಡು, ಲೋಕಸೇವೆಮಾಡುತ್ತ ಚೆನ್ನಾಗಿ ಬಾಳುತ್ತಾರೆ.

## ನಾಗರಿಕತೆಯ ಶಬಲತೆ–ಪ್ರಗತಿ ವಿಮುಖತೆ

ನಿಯರಿಂಗ್ ದಂಪತಿಗಳ ವಾನಪ್ರಸ್ಥ ಜೀವನಕ್ಕೆ ಸ್ವದೇಶದಲ್ಲಿ ಪೂರ್ವನಿದರ್ಶನ ವಿರಲಿಲ್ಲ. ಅದು ಇಲ್ಲದೆ ಪ್ರಯೋಗ ನಡೆದದ್ದು ದೊಡ್ಡಸಂಗತಿ. ಪ್ರಯೋಗ ಪರೀಕ್ಷೆಯಾಗಿ, ಅಂಥ ಜೀವನದ ಸಾಧ್ಯತೆಯನ್ನು ಕಂಡುಕೊಳ್ಳಲು, ಅವರು ನಡಸಿದ್ದು ಈ ಸಾಹಸ. ಇಪ್ಪತ್ತನೆಯ ಶತಮಾನದಲ್ಲಿ ಇಂಥ ಜೀವನವು ಸಾಧ್ಯವೆಂದು ನಾಗರಿಕ ಸೌಕರ್ಯಲೋಲುಪರಾದ ಪಟ್ಟಣಿಗರಿಗೆ ಅನುಕರಣೀಯ ನಿದರ್ಶನವಾಗಿ ನಡೆದ ಪ್ರಯೋಗವಿದು. ಕ್ರಮಸರಣಿಯಲ್ಲಿ ವಿಕಾಸಗೊಂಡು ನಾನಾಕ್ಷೇತ್ರಗಳಲ್ಲಿ ವಿಸ್ಮಯಕಾರಿಯಾಗುವಷ್ಟು ಶಬಲ ಪ್ರಗತಿಯ ಸಿದ್ಧಿಯನ್ನು ತೋರಿಸುತ್ತ, ಪಟ್ಟಣಗಳಲ್ಲಿ ಪ್ರತಿಷ್ಠೆಪಡೆದ ನಾಗರಿಕತೆ ತಮ್ಮ ಮನಃಪ್ರಸಾದಕ್ಕೆ ಸಾಕಾಗುವುದಿಲ್ಲವೆಂದು ಪ್ರಕೃತಿಯ ಸರಲ ಶ್ಯಾಮಲ ಸನ್ನಿಧಿಯಲ್ಲಿ ಏಕಾಂತವಾಗಿ ನೆಲಸಿ, ಯಂತ್ರ ಸಂಧಾನವನ್ನು ಅನಾದರಿಸಿ, ಹಸ್ತ ಕೌಶಲವನ್ನು ಆಶ್ರಯಿಸಿ, ಜಗತ್ತಿನ ಯೋಗ ಕ್ಷೇಮದಲ್ಲಿ ನಿತ್ಯಕಾತರರಾಗಿ ಕೆಲಸಮಾಡುವ ಹೊಸ ವ್ರತವನ್ನು ಈ ದಂಪತಿಗಳು ಕೈಕೊಂಡು, ಶುಭಜೀವನದ ಬಗ್ಗೆ ಆದಿ ಪರಿಶೋಧನೆಗಳನ್ನು ಮಾಡಿ ಸ್ವದೇಶೀಯರಿಗೆ ಮಾರ್ಗದರ್ಶಕರಾದರು. ನಗರ ನಿವಾಸಿಗಳನೇಕರಿಗೆ ಇಂಥ ಹಳ್ಳಿ ಬದುಕು ವಿಪತ್ತಿಗೆ ಸ್ವಾಗತಕೊಡುವ ಏರ್ಪಾಟು ಎನ್ನಿಸದಿರದು. ಸೌಕರ್ಯಗಳನ್ನು ಹಿಂದೆ ಬಿಟ್ಟು ನಾವೇಕೆ ಆದಿಯುಗದ ಮಾನವರಂತೆ ಸಂಕಟದಲ್ಲಿ ಬಾಳುತ್ತ ಕಿರಿಕಿರಿಗೆ ತುತ್ತಾಗಬೇಕೆಂದು ಪಟ್ಟಣಿಗರನೇಕರಿಗೆ ತೋರಬಹುದು. ಆದರೆ ನಿಯರಿಂಗ್ ದಂಪತಿಗಳಿಗೆ ಇಂಥ ಗ್ರಾಮವಾಸವು ಸಂತೃಪ್ತ ಜೀವನಕ್ಕೆ ಒದಗಿದ ನೈಜಾವಕಾಶವೆನ್ನಿಸಿ ಸ್ವಾಗತಕ್ಕೆ ಅರ್ಹವಾದದ್ದು ಎಂದು ತೋರಿತು. ಹುಚ್ಚು ಪ್ರಪಂಚದಲ್ಲಿ ವಿವೇಕವಿದ್ದವರು ಸ್ವಸ್ಥವಾಗಿ ಬಾಳಲು ಸಾಧ್ಯವೆಂಬುದನ್ನು ಸ್ವನಿದರ್ಶನದಿಂದ ಇಳೆಗೆ ಸಾರುವ ಘನ ಪ್ರಯತ್ನವನ್ನವರು ಕೈಕೊಂಡು ಕೃತಾರ್ಥರಾದರು. ಜನನಿಬಿಡ ಸಮಾಜದೊಡನೆ ನಿತ್ಯ ಸಂಪರ್ಕವಿರಿಸಿಕೊಳ್ಳುವವರು ಪಡೆಯುವ ಸಮಾಧಾನಕ್ಕಿಂತ

ಕಡಿಮೆಯಿಲ್ಲದ ಸಮಾಧಾನವನ್ನು ಪ್ರಕೃತಿ ಸಂಪರ್ಕದಲ್ಲಿ ಮನುಷ್ಯಬುದ್ಧಿ ಪಡೆಯುವ ದೊಡ್ಡ ಅವಕಾಶ ಇದು ಎಂದು ಅವರು ಜನಕ್ಕೆ ತೋರಿಸಿಕೊಟ್ಟರು. ಕರ್ಮಯೋಗ ವನ್ನು ಜನಕ್ಕೆ ಕಲಿಸತಕ್ಕದ್ದೇ ಪ್ರಕೃತಿ. ಕರ್ಮವಿರತಿ ಎಂಬುದು ಪ್ರಕೃತಿಗೆ ಹೊರತು. ಇಂಥ ಪ್ರಕೃತಿಯೊಡನೆ ಸಹಭಾಗಿಯಾಗಿ ಬಾಳುವುದರಿಂದ ಆಗುವುದೇನು? ನಿಯರಿಂಗ್ ದಂಪತಿಗಳಿಗೆ ಇಂಥ ಬದುಕನ್ನು ಬಾಳುವುದಕ್ಕೆ ಇದ್ದ ಬಲವಂತ ಕಾರಣವಾದರೂ ಏನು? ಅವರ ದೈನಿಕ ಜೀವನಕ್ರಮವು ಹೊತ್ತನ್ನು ಬಳಸಿಕೊಂಡ ಪರಿಯೇ ಅವರು ಇರಿಸಿ ಕೊಂಡ ಗುರಿಯನ್ನು ಸಾರುತ್ತದೆ. "ನಾಲ್ಕುಘಂಟೆ ಆಹಾರಕ್ಕಾಗಿ ತಮ್ಮ ಕಾಯಕ; ನಾಲ್ಕುಘಂಟೆ ವೃತ್ತಿಯಾಗಿ ಹಿಡಿದ ಇತರ ಕಾರ್ಯಗಳ ನಿರ್ವಾಹಕ್ಕಾಗಿ ಕಾಯಕ– ಓದು, ಬರಹ ಮೊದಲಾದ ಚಟುವಟಿಕೆ; ನಾಲ್ಕುಘಂಟೆ ಸಹೋದ್ಯೋಗಿಗಳೊಡನೆ ಸಾಹಚರ್ಯ, ಸಂಭಾಷಣೆ– ಹೀಗೆ ದಿನಸಂಪೂರ್ತಿಗೆ– ಇರುಳು ವಿಶ್ರಾಂತಿಗೆ ಮುನ್ನ– ಹೊತ್ತನ್ನು ಹಂಚಿ, ಆಯಾ ದಿನವನ್ನು ಸಾರ್ಥಕ ಪಡಿಸುವುದು."

## ಪರಾಶ್ರಯದೂರ ಸರಳ ಜೀವನಕ್ಕೆ ಪೂರ್ವಸಿದ್ಧತೆ

1906 ರಲ್ಲಿ ಸ್ಕಾಟ್ ಅವರು ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದಲ್ಲಿ ಉಪಾಧ್ಯಾಯ ವೃತ್ತಿಯನ್ನು ಕೈಕೊಂಡ ತರುಣದಲ್ಲಿ ಸ್ವಾವಲಂಬನೆಯ ವ್ರತವನ್ನು ಹಿಡಿದರು. ಮಿತವ್ಯಯದಲ್ಲಿ ಬದುಕನ್ನು ಸಾಗಿಸಲು ದೃಢಸಂಕಲ್ಪ ಮಾಡಿದರು. ಸ್ಥಾನ ಮಾನಗಳ ಅಪೇಕ್ಷೆಯನ್ನು ಪೂರ್ತಿಯಾಗಿ ತೊರೆದರು. ಆದದ್ದರಿಂದ ತಮ್ಮ ಊಟ ವನ್ನು ತಾವೇ ಅಟ್ಟುಕೊಳ್ಳಲು ಮೊದಲುಮಾಡಿದರು, ತಮ್ಮ ಉಡುಗೆಯನ್ನು ತಾವೇ ಒಗೆದು ಮಡಿಮಾಡಿಕೊಂಡರು. ಇದರಿಂದ ಅವರಿಗೆ ಅನಾವಶ್ಯಕವಾದ ಪರಾಶ್ರಯ ತಪ್ಪಿತು. ಗೃಹಕೃತ್ಯದ ವೆಚ್ಚ ವರಮಾನ ಸಾಕಾಗದೆಹೋಗಿ, ಹೆಚ್ಚುವರಿ ಹಣ ಆವಶ್ಯಕವೆನ್ನಿಸಿದಾಗ, ಕರಪುಸ್ತಕಗಳನ್ನು ಬರೆದರು. ಪಠ್ಯಪುಸ್ತಕಗಳನ್ನು ಅಣಿಮಾಡಿ ದರು, ನಿಯತಕಾಲಿಕ ಪತ್ರಿಕೆಗಳಿಗೆ ಲೇಖನಗಳನ್ನು ಬರೆದರು. ಆಮಂತ್ರಣ ಬಂದಾಗ ಸಭೆಗಳಲ್ಲಿ ಮುಫತ್ತಾಗಿಯೇ ಸಭಾಸದರು ಕೊಡುವ ನಾಮಮಾತ್ರದ ಅತ್ಯಲ್ಪಪ್ರವೇಶ ಶುಲ್ಕ ಪಡೆದು ಭಾಷಣಮಾಡಿದರು. ಅರ್ಥಶಾಸ್ತ್ರಜ್ಞರಾಗಿ ಆಹೊತ್ತಿಗೇ ಅವರು ನೆಮ್ಮದಿಬಾಳಿಗೆ ಅವಕಾಶಕೊಡುವ ಒಂದು ಸಿದ್ಧಾಂತಕ್ಕೆ ಮನಸಾ ಒಪ್ಪಿಗೆಕೊಟ್ಟಿದ್ದರು. ಕಾಲ, ಬಲ ಮತ್ತು ಧನಗಳ ಮಿತವ್ಯಯದಿಂದ ಅಮಿತ ತೃಪ್ತಿ ಪಡೆಯಬೇಕು; "ನ್ಯಾಯ ವೂ ದಯಾರ್ದ್ರವೂ ಸರಳವೂ ಆದ ಜೀವನ ಯಾಪನೆ ಈ ತ್ರಿವಿಧ ಮಿತವ್ಯಯದಿಂದ ಮಾತ್ರ ಸಾಧ್ಯ" ಎಂದು ಅವರು ನೆರೆನಂಬಿದ್ದರು. ಉದಾಹರಣೆಗೆ, ಅಮೆರಿಕದ ನಿತ್ಯ ಜೀವನದಲ್ಲಿ ಮುಖ್ಯ ಪರಿಕರಗಳಾಗಿದ್ದ ಜರಿಪರದೆಗಳು, ಗಾಜಿನಹೊದಿಕೆಯುಳ್ಳ ಊಟದ ಮೇಜುಗಳು – ಇವೆಲ್ಲ ಮನುಷ್ಯನ ಚಿತ್ತಸ್ವಾಸ್ಥ್ಯವನ್ನು ಕೆಡಿಸುವ ದುರಾ ಕ್ರಮಣಗಳು ಎಂದು ತೀರ್ಮಾನಿಸಿ, ತಮ್ಮ ಮನೆಯಿಂದ ಈ ನಾಗರಿಕ ಭೋಗಾಡಂಬರ ಪರಿಕರಗಳನ್ನು ಬಹಿಷ್ಕರಿಸಿದ್ದರು. ತಮ್ಮ ನಿರಾಡಂಬರ ಸಸ್ಯಾಹಾರ ಭೋಜನಕ್ಕೆ

ಸಾಕಾದಷ್ಟು ನೆರವು ದೊರೆಯುತ್ತದೆಯೆಂದು ದಾರುಬೋಗುಣಿ ದಾರು ಚಮಚ ಗಳನ್ನು ಕೈಯಾರ ಅಣಿಮಾಡಿಕೊಂಡರು. ಸಾಗುವಾನಿಯಲ್ಲಿಮಾಡಿಕೊಂಡ ಈಪಾತ್ರೋ ಪಕರಣಗಳು ಇಂದಿಗೂ ಅವರ ಜೊತೆಗೆ ಇದ್ದು ಕೊಂಡಿವೆ. ಸರಳ ನಿರಾಡಂಬರ ಜೀವ ನಕ್ಕೆ ಹೊಂದತಕ್ಕವೂ ಬಳಕೆಗೆ ಸುಲಭವೂ ಆದ ಗೃಹೋಪಕರಣಗಳು ಎಂಥವೆಂಬ ಬಗ್ಗೆ ಈ ದಾರೂಪಕರಣಗಳು ಪ್ರತೀಕಗಳಾಗಿ ಅವರಿಗೆ ತೃಪ್ತಿಕೊಡುತ್ತಾ ಬಂದಿವೆ. ಆಕಸ್ಮಾತ್ತಾಗಿ ಬಿದ್ದರೆ ಒಡೆಯದೆ, ಕೊಳಕಾದರೆ ತೊಳೆಯಲು ಹೆಚ್ಚು ಕ್ಲೇಶ ಕೊಡವೆ, ತುಂಬ ಅನುಕೂಲ ಕೊಡುವ ವಸ್ತುಗಳು ಇವು, ಹೊತ್ತನ್ನು ಮಿಗಿಸತಕ್ಕವು, ಹೆಚ್ಚು ಉಪಯುಕ್ತವೂ ಆಗಿ, ಬಳಸುವವರು ಬೇಗ ಇತರ ಮುಖ್ಯ ಕರ್ತವ್ಯಗಳ ಕಡೆಗೆ ತಿರು ಗಲು ನೆರವು ಕೊಡುತ್ತವೆ.

ಸ್ಕಾಟ್ ಹೀಗೆ ಈ ಮಿತವ್ಯಯ ವ್ರತವನ್ನು ಪೂರ್ವದಲ್ಲಿಯೇ ಅಭ್ಯಾಸಕ್ಕೆ ತಂದು ಕೊಂಡಿದ್ದದ್ದರಿಂದ ದಂಪತಿಗಳು ಗ್ರಾಮಜೀವನ ನಡೆಸಲು ನಿರ್ಧರಿಸಿದಾಗ, ಸರಳ ಜೀವನ ನಿರ್ವಾಹಕ್ಕೆ ಉತ್ತರೋತ್ತರ ಬರಬಹುದಾದ ತೊಂದರೆಗಳನ್ನು ಮೊದಲೇ ತಪ್ಪಿಸಿಕೊಂಡರು. ಸರಳತೆಯ ನೇಮಕ್ಕೆ ಕಟ್ಟುಬಿದ್ದವರಿಗೆ–ಕಾಯಕ ದಲ್ಲಿ ಸುಸ್ವಾದ ಪಟ್ಟಣಿಗರನ್ನು ಸೆಳೆದು ಸೋಲಿಸುವ ನಾಗರಿಕತೆಯ ನಿದ್ರಾಜನಕ– ಪ್ರೋತ್ಸಾಹಕ–ವ್ಯರ್ಥಜೀವನೋದ್ದೀಪಕ ಸಾಧನಗಳ ಗೋಜು ತಪ್ಪುತ್ತದೆ. ಥಳುಕು ಪಳಕುಗಳನ್ನು ಬಳಸಿ ಮನಸ್ಸನ್ನು ಹಾಯಾಗಿ ಮಾಡಿಕೊಳ್ಳುವ ಹಾರೈಕೆಯಿರದು. ಬಹು ವೆಚ್ಚವನ್ನು ಅಪೇಕ್ಷಿಸುತ್ತ ಕೈಗಳಿಗೆ ಹೆಚ್ಚು ವಿಶ್ರಾಂತಿ ಕೊಡುವ ವಸ್ತುಗಳು ಬೇಕೆನ್ನಿಸವು. ಬೀಸುವ, ಕುಟ್ಟುವ, ಒಗೆಯುವ, ಇಸ್ತ್ರಿಮಾಡುವ ಯಂತ್ರಗಳ ಮೋಹ ಕವಿದರೆ ಸರಳಜೀವನ ಹೇಗೆ ಕೈಗೂಡೀತು? ನಿಯರಿಂಗ್ ದಂಪತಿಗಳು ತಮ್ಮ ಮನೆಗೆ ಅಳವಡಿಸಲು ದೂರವಾಣಿ, ಆಕಾಶವಾಣಿ, ದೂರದರ್ಶಿನಿ ಯಂತ್ರಗಳು –ಇಂಥವಕ್ಕೆ ಮನಸ್ಸು ಕೊಟ್ಟರೆ ಆಸ್ತಿಪ್ರೀತಿಗೂ ಧನಲೋಭಕ್ಕೂ ದುಂದುವೆಚ್ಚಕ್ಕೂ ಪೋಲು ವ್ಯಯಕ್ಕೂ ಅವಕಾಶ ಮಾಡಿಕೊಂಡಂತೆ ಆಗುತ್ತದೆ ಎಂದು ಗಂಡ ಹೇಳಿದರೆ, ಹೆಂಡತಿ ಹೌದೆಂದು ಒಡಂಬಟ್ಟು ತನ್ನ ಹೃದಯದ ಅನುಮೋದನೆಯನ್ನು ಸಲ್ಲಿಸಿದಳು. ಕುಟುಂಬದ ಯಜಮಾನಿಕೆಯನ್ನು ದಂಪತಿಗಳು ಹೀಗೆ ಉಭಯ ಸಮ್ಮತಿಯಿಂದ, ಸಮಾನ ಮನೋಧರ್ಮದಿಂದ ವಹಿಸಿಕೊಂಡು, ತಮ್ಮ ಅಪೇಕ್ಷೆಗಳನ್ನು ಕನಿಷ್ಠ ಮಿತಿಗೆ ಇಳಿಸಿದರು. ಸಂಸಾರದಲ್ಲಿದ್ದುಕೊಂಡು ವೈರಾಗ್ಯವನ್ನು ಕಟ್ಟುನಿಟ್ಟಾಗಿ ಅಭ್ಯಾಸ ಮಾಡಿದರು.

ಹೀಗೆ ದಂಪತಿಗಳು ಸಮಭಾಗಿಗಳಾಗಿ ಗೃಹಕೃತ್ಯವನ್ನು ನಿರ್ವಹಿಸುತ್ತ ಸಾರ್ಥಕ ಜೀವನವನ ನಡಸಿದರು, ಸ್ಕಾಟ್ ತಮ್ಮ 'ಆಮೂಲಾಗ್ರ ಸುಧಾರಕನ ಸಾಧನೆ' ಎಂಬ ಶ್ರೇಷ್ಠವರ್ಗದ ಆತ್ಮಕಥೆಯನ್ನು ಮಡದಿ ಹೆಲೆನ್ನಿಗೆ ಸಮರ್ಪಿಸಿದ್ದಾರೆ– ಆಕೆಯಿಂದ ದೊರೆತ ಸಹಕಾರ ಸಹವರ್ತನೆಗಳನ್ನು ಕೃತಜ್ಞತೆಯಿಂದ ನೆನೆದು: "ನಮ್ಮ

ಕೃತಿಶಿಲ್ಪದಲ್ಲಿ ಅರ್ಧಕಾರ್ಯವನ್ನು ಸ್ವತಃ ಮಾಡಿದ ಹೆಲನ್‌ಗೆ." ಗಂಡನು ಅರ್ಧಾಂಗಿಗೆ ಒಪ್ಪಿಸುವ ಎದೆ ಕಾಣಿಕೆ. ಒಂದೇ ಕಾಯಕವಾಗಿ ಬೆಳಸಿದ ಸತಿಪತಿಯರು ಮನಸ್ಸಿನಲ್ಲಿ ಒಬ್ಬರು. ಹೂಡಿದ ಕರಣಗಳು ಬೇರೆ ಬೇರೆಯಾದರೂ, ಒಬ್ಬರು ಇನ್ನೊಬ್ಬರನ್ನು ಪ್ರಶಂಸಿಸುವುದು ಬರಿಯ ಉಪಚಾರದ ಭಾವನೆಯಾಗದೆ ಪರಸ್ಪರ ಗೌರವವುಳ್ಳವರೆಂಬುದರ ಸೂಚನೆ ಇದು. ಇಬ್ಬರ ಮನೋಭಾವ ಒಂದಾದದ್ದರಿಂದಲೇ ಅವರು ಮಾರುಕಟ್ಟೆಯ ಆರ್ಥಿಕ ವ್ಯವಸ್ಥೆ ತಯಾರಿಸಿದ ವಸ್ತುಗಳಲ್ಲಿ ಹಲವನ್ನು ತಮ್ಮ ಮನೆಯಿಂದ ದೂರವಿಟ್ಟರು. ಸ್ಥಾನಮಾನ ಮೋಹದಿಂದ ಮುಕ್ತರಾದ ದಂಪತಿಗಳು ಸರಳ ಜೀವನಕ್ಕೆ ಅನಾವಶ್ಯಕವಾದ ಮನಃ ಪ್ರೇರಣೆಗಳನ್ನೂ, ಕಾಮನೆಗಳನ್ನೂ ಆಡಂಬರ ಪ್ರದರ್ಶಕವಾದ ವಸ್ತುಗಳ ಬಳಕೆಯನ್ನೂ, ಸೋಗು ಬಾಳಿನ ಗುರುತುಗಳನ್ನೂ ಮನೆಯೊಳಕ್ಕೆ ಬರಮಾಡಿಕೊಳ್ಳದೆ ಬಹಿಷ್ಕರಿಸಿದರು. ಜೀವನದ ಸರಳೀಕರಣ, ವಿತ್ತ ಸೊತ್ತುಗಳ ತಿರಸ್ಕರಣ–ಇವು ನಿಯರಿಂಗ್ ದಂಪತಿಗಳ ಪ್ರಬಲೋತ್ಸಾಹ ವೃತ್ತಿಗಳು. ಬಗೆತ - ಮಾತು - ಕೆಲಸಗಳಲ್ಲಿ ದಿಟವನ್ನೇ ತುಂಬುವುದು ದಂಪತಿಗಳಿಗೆ ಆಜೀವಪರ್ಯಂತವಾದ ಪ್ರಿಯೋದ್ಯಮವಾಯಿತು.

## ಯೂರೋಪಿನ ರಾಜಕೀಯ ಚಲನವಲನಗಳ ವ್ಯಾಸಂಗ

ಅರಣ್ಯಗ್ರಾಮದಲ್ಲಿ ಸ್ತಿಮಿತವಾಗಿ ನೆಲಸಿ ನಾಲ್ಕು ವರ್ಷಗಳು ಉರುಳಿದಮೇಲೆ ಸ್ಕಾಟ್ (1936ರಲ್ಲಿ) ಯೂರೋಪಿನ ರಾಜಕೀಯ ಚಲನವಲನಗಳ ಕಡೆ ಗಮನ ಹರಿಸಿದರು. ನಾನಾ ರಾಷ್ಟ್ರಗಳು ಹೊಸಹೊಸ ಮಿತ್ರಕೂಟಗಳನ್ನು ಕಟ್ಟಿಕೊಂಡದ್ದು, ಸ್ಪೈನ್ನಿನಲ್ಲಿ 1936–39 ವರೆಗಿನ ರುದ್ರ ನಾಟಕದ ರಂಗಪೂರ್ವದ ಚಟುವಟಿಕೆಗಳು, ಮ್ಯೂನಿಕ್ಕಿನಲ್ಲಿ ಬ್ರಿಟಿಷ್ ಪ್ರಧಾನಮಂತ್ರಿ ಚೇಂಬರ್ಲೇನರ ಪ್ರಯತ್ನದಿಂದ ಹಿಟ್ಲರಿನೊಡನೆ ಆದ ಒಪ್ಪಂದ (1939), 'ನಮ್ಮಕಾಲದಲ್ಲೇ ಶಾಂತಿ' ಎಂಬ ಚೇಂಬರ್ಲೇನರ ಭರವಸೆ, ಹಿಟ್ಲರು ತನ್ನ ರಕ್ಕಸ ಹಸಿವನ್ನು ತಣಿಸಲು ಸೋವಿಯತ್ ರಷ್ಯಾಕ್ಕೆ ಮುತ್ತಿಗೆ ಹಾಕಿ, ಅಲ್ಲಿಯ ನೆಲವನ್ನು ಬಾಚಿಕೊಂಡು ಸ್ವಬಲವನ್ನು ಹೆಚ್ಚಿಸಿಕೊಳ್ಳಲು ಪಡೆದುಕೊಂಡ ಯಥೇಷ್ಟಾವಕಾಶ– ಇವೆಲ್ಲವನ್ನೂ ಪರಿಣಾಮ ಸಂಭವ ದೃಷ್ಟಿಯಿಂದ ಸ್ಕಾಟ್ ವಿಮರ್ಶಿಸಿದರು. ಈ ಎಲ್ಲ ವಿದ್ಯಮಾನಗಳ ಅಧ್ಯಯನದಿಂದ ತಮಗೆ ಪ್ರೌಢ ಶಿಕ್ಷಣ ಲಭ್ಯವಾಗಲು ಆಸ್ಪದವಾಯಿತೆಂದೂ, ಈ ಶಿಕ್ಷಣದ ಅವಧಿ 1945ರ ವರೆಗೆ ಮುಂಬರಿಯಿತೆಂದೂ ಅವರು ಹೇಳಿಕೊಂಡು – ದ್ವಿತೀಯ ಮಹಾಯುದ್ಧಾನಂತರ ಯೂರೋಪಿನ ಸ್ಥಾನಮಾನಗಳು ಹೇಗೆ ಕೆಳಮಟ್ಟಕ್ಕಿಳಿದುವೆಂದು ವಿವರಿಸುತ್ತಾರೆ:–

> "1936–45 ರ ಅವಧಿಯ ಮಹಾಸಂಗ್ರಾಮದಲ್ಲಿ ಸಿಡಿದ ತೋಪುಗಳು ಪಾಶ್ಚಾತ್ಯ ನಾಗರಿಕತೆಯ ತಳಪಾಯವನ್ನು ತಾಗಿ ಅಲ್ಲಾಡಿಸಿದುವು. ಹತ್ತೊಂಬತ್ತನೆಯ ಶತಮಾನದ ಸಾಮ್ರಾಜ್ಯ ವೈಭವ

ಗಳನ್ನು ಕೆಳಮಟ್ಟಕ್ಕಿಳಿಸಿದುವು. ರಾಜಕೀಯಾಧಿಕಾರದ ಕೇಂದ್ರಗಳನ್ನು ಯೂರೋಪುಖಂಡದಿಂದ ತಪ್ಪಿಸಿ ಏಷ್ಯಾಖಂಡಕ್ಕೂ ಅಮೆರಿಕಾ ಖಂಡಕ್ಕೂ ವರ್ಗಾಯಿಸಿದುವು. ತತ್ಪರಿಣಾಮವಾಗಿ ಯೂರೋಪಿನಲ್ಲಿ ಅಧಿಕಾರ ಸಂಧಾನದ ರಾಜಕೀಯದಲ್ಲಿ ಶೂನ್ಯಾವರಣದ ಬಿರುಕುಗಳು ತೋರಿಕೊಂಡವು. ವಿಶ್ವನಾಯಕತ್ವದ ದಂಡಶಕ್ತಿ ಅಮೆರಿಕದ ತರುಣ ಪೀಳಿಗೆಯಲ್ಲಿಯ ಅನನುಭವಿಗಳೂ ಅಪಕ್ವಗಳೂ ಆದ ಸ್ವಲ್ಪ ಜನಾಧಿಪತ್ಯದ ಕೈಗೆ ಹೋಯಿತು ''

ಅಧಿಕಾರ ರಾಜಕೀಯದ ಲೆಕ್ಕಚಾರಗಳೂ ಅದಕ್ಕೆ ಸಂಬಂಧಿಸಿದ ಒಳತೋಟಿ ಹೊರ ಹೋರಾಟಗಳೂ ಅಮೆರಿಕಾಕ್ಕೆ ಪ್ರಧಾನ ಪಾತ್ರವನ್ನು ನೀಡಿದವು. ಈ ಘರ್ಷಣೆಗಳ ಸಂಗತಿಯನ್ನೆತ್ತಿಕೊಂಡು ಸ್ಕಾಟ್ ಅನೇಕ ಲಘು ಪುಸ್ತಕಗಳನ್ನೂ, ದೊಡ್ಡ ಗ್ರಂಥ ಗಳನ್ನೂ ಬರೆದಿದ್ದಾರೆ. ಈ ಪ್ರಕಟನೆಗಳ ಪೈಕಿ ಇಲ್ಲಿ ಕೆಲಸವನ್ನು ಪರಿಶೀಲಿಸಬಹುದು.

ಮೊದಲನೆಯ ವಿಶ್ವಸಂಗ್ರಾಮದ ಪರಿಣಾಮ ಫಲವಾಗಿ ಮೂಡಿದ ಸಮತಾವಾದ ವನ್ನೂ ಪಾಶ್ಚಾತ್ಯನಾಗರಿಕತೆಯಲ್ಲಿ ತೋರಿಕೊಂಡ ಮಾರ್ಪಾಟುಗಳನ್ನೂ ಕುರಿತು ವಿವರಾಂಶ ಪೂರ್ಣವೂ, ಸಮರ್ಥವೂ ನಿರ್ಣಯಘೋಷಕವೂ ಆದ ಒಕ್ಕಣೆಗಾರರಲ್ಲಿ ಪ್ರಾಯಶಃ ಸ್ಕಾಟ್ ಅವರು ತುಂಬ ದಕ್ಷರು, ಹಾಗೂ ಅಧಿಕಾರವಾಣಿಯಿಂದ ಭವಿಷ್ಯ ನುಡಿಯಬಲ್ಲ ವಿಮರ್ಶಕರು. ಉದ್ಯಮ ಕ್ರಾಂತಿಗೂ ಆಗ ಬಲಿತ ಸಾಮ್ರಾಜ್ಯ ಶಕ್ತಿ, ಯುದ್ಧಗತಿ ಮತ್ತು ಪರಿವರ್ತನ ಶಕ್ತಿಗಳಿಗೂ ನಡುವೆ ವ್ಯಕ್ತಪಟ್ಟ ಸಂಬಂಧ ಸೂತ್ರವೆಂಥಾದ್ದೆಂಬುದನ್ನು ಆಳವಾಗಿ ಅಧ್ಯಯನ ಮಾಡಿ, ವಸ್ತುನಿಷ್ಠೆಯಿಂದ ವಿಷಯ ವಿವೇಚನೆ ಮಾಡುತ್ತ ಇಂದಿಗೂ ಮೇಲ್ಮಟ್ಟದ ರಾಜಕೀಯ ವ್ಯಾಖ್ಯಾನ ಕಾರರೆನ್ನಿಸಿಕೊಂಡಿದ್ದಾರೆ. ಈ ಬಗ್ಗೆ ಅವರ ವಿವಿಧ ಗ್ರಂಥಗಳನ್ನು ಕ್ರಮವಾಗಿ ಒಂದು ಆನುಪೂರ್ವಿಯಲ್ಲಿ ವ್ಯಾಸಂಗ ಮಾಡಿದರೆ ಅಭಿನಂದನೆಗೆ ಸ್ಕಾಟ್ ಪಾತ್ರ ರೆಂಬುದು ಗೊತ್ತಾಗುತ್ತದೆ. ''ಯುದ್ಧ ಬೀಜಗಳು'' (1916), ''ಸೈನಿಕ ಶಕ್ತಿವಾದದ ವಿಪತ್ತು ಮತ್ತು ಲಾಭಕೋರರಿಗೆ ಬಹಿರಂಗ ಪತ್ರ'' (1917) ಇವುಗಳಲ್ಲಿ ಮೊದ ಲನೆಯ ವಿಶ್ವಸಂಗ್ರಾಮಕ್ಕೂ ದೊಡ್ಡ ವಣಿಜರಿಗೂ ಇದ್ದ ಸಂಪರ್ಕ ಸಂಬಂಧಗಳೇ ನೆಂಬುದನ್ನು ವಿವೇಚಿಸಿದ್ದಾರೆ. 1920 ರಲ್ಲಿ ಅವರು ತರ್ಕಬದ್ಧವಾಗಿ ವಿಚಾರ ಮಾಡಿ, ನಡೆದ ಘಟನೆಗಳನ್ನು ಬುಡ ಮುಟ್ಟ ಕೆದಕಿ ನೋಡಿ ಭವಿಷ್ಯ ಸಾರಿದ ಪ್ರಕಟನೆಗಳಿವು: ''ಯೂರೋಪ್ ಮತ್ತು ಇನ್ನೊಂದು ವಿಶ್ವಸಂಗ್ರಾಮ''; ''ಪರಿವರ್ತನೆಯ ಸುಳಿ ಯಲ್ಲಿ ಯೂರೋಪ್; ಕಾರ್ಮಿಕ ಸಮಸ್ಯೆ ಮತ್ತು ಪ್ರಪಂಚ ರಾಷ್ಟ್ರ ಸಂಸ್ಥೆ (ಲೀಗ್ ಆಫ್ ನೇಷನ್ಸ್)''; ''ಒಡಕಿನಲ್ಲಿ ಒದ್ದಾಡುವ ರಾಷ್ಟ್ರ''; ಧನಿಕರ ಪ್ರಭುತ್ವದ ವಿರುದ್ಧ ಪ್ರಜಾಪ್ರಭುತ್ವ''; ''ವಣಿಜರದೊಂದು ದೊಡ್ಡ ಒಕ್ಕೂಟ''; ''ನೂತನ ದಾಸ್ಯ: ಧನಿ ಕರ ಪ್ರಭುತ್ವದ ಬುಟ್ಟಿಗೆ ಬಿದ್ದ ವಿಶ್ವಜಗತ್ತು''.

"ಅಮೆರಿಕಾ ಸಾಮ್ರಾಜ್ಯ" (1921)ಮತ್ತು "ಡಾಲರ್ ನಾಣ್ಯದ ರಾಯಭಾರ" (ಅಮೆರಿಕವು ಸಾಮ್ರಾಜ್ಯವಾದದಕಡೆ ಧಾವಿಸಿದ ಸನ್ನಿವೇಶದ ವಿವೇಚನೆ; 1925)–ಇವೆರಡೂ ಪಶ್ಚಿಮಾರ್ಧಗೋಳದಲ್ಲೂ ಯೂರೋಪಿನಲ್ಲೂ, ಏಷ್ಯದಲ್ಲೂ ವ್ಯಾಪಕವಾಗಿ ಪ್ರಸಾರಗೊಂಡುವು.

1923ರಲ್ಲಿ ಪ್ರಕಟವಾದ ಅವರ "ತೈಲ ಮತ್ತು ಯುದ್ಧಬೀಜಗಳು" ಎಂಬ ಪುಸ್ತಕವು ತೈಲೋತ್ಪಾದಕ ರಾಷ್ಟ್ರಗಳ ಸ್ವಾರ್ಥವನ್ನು ಎತ್ತಿತೋರಿಸಿ, ಅವು ಕಚ್ಚಾ ಪದಾರ್ಥಗಳನ್ನು ಸರಬರಾಜು ಮಾಡುವ ದೇಶಗಳ ಮೂಲ ತೈಲ ಕೇಂದ್ರಗಳ ಮೇಲೆ ಸ್ವಾಮ್ಯಪಡೆದು ಹೇಗೆ ಯುದ್ಧಸಾಮಗ್ರಿಗಳ ತಯಾರಿಕೆಗೆ ಬಂಡವಾಳ ಹೂಡಬಲ್ಲಷ್ಟು ಧನಾಢ್ಯವಾದುವೆಂಬ ಬಗ್ಗೆ ಹೃದಯಸ್ಪರ್ಶಿಯಾದ ವಿವರಗಳನ್ನು ಕೊಡುತ್ತದೆ.

## ಕಲ್ಯಾಣಪ್ರದ ಕ್ರಾಂತಿಗೆ ಪಶ್ಚಿಮ ನಾಗರಿಕತೆಯ ಪ್ರತಿ–ಕ್ರಾಂತಿ

ಪಶ್ಚಿಮನಾಗರಿಕತೆ ಸಮಾಜವಾದಿ ಕ್ರಾಂತಿಗೆ ವಿರುದ್ಧವಾಗಿ ಕೈಕೊಂಡ ಪ್ರತಿ–ಕ್ರಾಂತಿಯ ಸ್ವರೂಪವೇನೆಂದು ಸ್ಕಾಟ್ ಮನಮುಟ್ಟುವಂತೆ ವರ್ಣಿಸುತ್ತಾರೆ. ಮಾನವ ಸುಖಕ್ಕೆ ಅದು ಮುಖ್ಯವಾದ ವಿಘ್ನವೆಂದು ಆತ ಹೇಳುತ್ತಾರೆ. ಏಕೆಂದರೆ ಈ ಪ್ರತಿ–ಕ್ರಾಂತಿಗೆ ಧನಬಲವನ್ನೊದಗಿಸತಕ್ಕದ್ದು. ಅಮೆರಿಕದ ಧನಾಢ್ಯವಾದ ಸ್ವಲ್ಪ ಜನಾಧಿಪತ್ಯ. ಈ ನಿಜಸ್ಥಿತಿಯ ಪುನಃ ಪರಿಶೀಲನೆಯನ್ನೂ, ಸ್ಥಿರೀಕರಣವನ್ನೂ ಅವರ "ಪಶ್ಚಿಮ ನಾಗರಿಕತೆಯ ನಡೆ ಎತ್ತ?" (1927) ಎಂಬ ಕೃತಿಯಲ್ಲೂ, "ಸಾಮ್ರಾಜ್ಯದ ಸಂಧ್ಯೆ: ಸಾಮ್ರಾಜ್ಯವಾದಿ ಯುಗಾವರ್ತಗಳನ್ನು ಕುರಿತ ಆರ್ಥಿಕ ವ್ಯಾಖ್ಯಾನ" (1930) ಎಂಬ ಕೃತಿಯಲ್ಲೂ ನಾವು ನೋಡಬಹುದು. ಮರುವರ್ಷ (1931ರಲ್ಲಿ) ಅವರು ಬರೆದ "ಯುದ್ಧದ ಫಲಶ್ರುತಿ: ನಾಗರಿಕ ರಾಷ್ಟ್ರಗಳಿಂದ ಸುವ್ಯವಸ್ಥಿತ ವಿನಾಶಕಾರ್ಯ ಮತ್ತು ಜನ ಹತ್ಯೆ" ಎಂಬ, ಬಹುಜನರ ಗಮನವನ್ನು ಸೆಳೆದ, ಕೃತಿಯಲ್ಲಿ ಸಮಾಜಶಾಸ್ತ್ರ ಅರ್ಥಶಾಸ್ತ್ರ ರಾಜ್ಯಶಾಸ್ತ್ರ ದೃಷ್ಟಿಗಳಿಂದ ಯುದ್ಧದ ವಿನಾಶಕಾರ್ಯ ಎಷ್ಟು ವ್ಯಾಪಕವಾದದ್ದೆಂದು ತೋರಿಸಿ, ಯುದ್ಧವು ಹೇಗೆ ಧನ ಮಾನಾಧಿಕಾರಗಳ ಪ್ರಾಪ್ತಿಗೆ ಕ್ಷಿಪ್ರ ಮಾರ್ಗವೆಂಬುದನ್ನೂ ಸ್ವದೇಶವಿದೇಶನೀತಿ ರೂಪಣದಲ್ಲಿ ಹೇಗೆ ಯುದ್ಧವು ನಿರ್ಣಾಯಕ ಪಾತ್ರವಹಿಸುತ್ತದೆ ಎಂಬುದನ್ನೂ ಸ್ಪಷ್ಟಪಡಿಸಿದ್ದಾರೆ.

## ಫ್ಯಾಸಿಸ್ಟ್—ನಾತ್ಸಿಸ್ಟ್

ಇಟಲಿಯ ಸರ್ವಾಧಿಕಾರ ತತ್ತ್ವವಾದ ಫ್ಯಾಸಿಸ್ಮನ್ನು ಕುರಿತು ಸ್ಕಾಟ್ 1922 ರಷ್ಟು ಹಿಂದೆಯೇ ವ್ಯಾಸಂಗವನ್ನು ಕೈಕೊಂಡಿದ್ದರು. ಆಮೇಲೆ ಯೂರೋಪಿಗೆ

ಪಯಣಮಾಡಿ, ಇಟಲಿಯಲ್ಲಿ ಕಪ್ಪು ಷರ್ಟಿನವರ ಚಳವಳಿಯನ್ನೂ ಆಸ್ಟ್ರಿಯ ಜರ್ಮನಿಗಳಲ್ಲಿ ಬೂದುಷರ್ಟಿನವರ ಚಳವಳಿಯನ್ನೂ ವ್ಯಾಸಂಗಮಾಡಿ ಅವುಗಳ ಮರ್ಮವನ್ನು ಭೇದಿಸಿದರು. ಈ ವ್ಯಾಸಂಗದ ಫಲವಾಗಿ ಫ್ಯಾಸಿಸ್ಮ್ ಮತ್ತು ಅದರ ಸೋದರ ನಾಜ್ಜಿಸ್ಮ್–ಎರಡೂ "ಶಿಥಿಲವಾಗುತ್ತಿರುವ ಬಂಡವಾಳ ತತ್ತ್ವದ ತರ್ಕಬದ್ಧವಾದ, ಕಾರ್ಯಕಾರಣ ಸರಣಿಯನ್ನನುಸರಿಸಿ ಹುಟ್ಟಿಕೊಂಡ, ಏಕಮುಖವೇ ಎಂಬುದನ್ನು ಮನಸ್ಸಿಗೆ ವಿಶದಪಡಿಸಿಕೊಳ್ಳಲು ಒಂದು ದಶಮಾನವೇ ಉರುಳಬೇಕಾಯಿತಂತೆ! 1933ರಲ್ಲಿ ಅವರು "ಫ್ಯಾಸಿಸ್ಮ್" ಎಂಬ ಒಂದು, ಪುಸ್ತಕವನ್ನು ಬರೆದು ಪ್ರಕಟಪಡಿಸಿದರು. ಅದನ್ನು 'ಸೋಷಲ್ ಸೈನ್ಸ್ ಇನ್‌ಸ್ಟಿಟ್ಯೂಟ್' ಸಂಸ್ಥೆ 1973ರಲ್ಲಿ ಪುನರ್ಮುದ್ರಿಸಿದೆ. ಫ್ಯಾಸಿಸ್ಮ್ ಜನ್ಮತಳೆಯುವುದು ಹೇಗೆ, ಈ ತತ್ತ್ವದ ಹಿಂದೆ ಅದರ ಪ್ರತಿಪಾದಕರು ತಳೆದು ಅಳವಡಿಸಿದ ಆರ್ಥಿಕ ಸಾಮಾಜಿಕ ಸೂತ್ರಗಳು ಯಾವುವು, ಮತ್ತು ಈ ಸೂತ್ರಗಳಿಗೆ ಪ್ರಪಂಚ ಚರಿತ್ರೆಯಲ್ಲಿ ಇರುವ ಪಾತ್ರವೇನು?— ಇವನ್ನೆಲ್ಲ ಈ ಪುಸ್ತಕದಿಂದ ನಾವು ತಿಳಿದುಕೊಳ್ಳಬಹುದು. "ಪಶ್ಚಿಮನಾಗರಿಕತೆ" ಎಂದು ಈಗ ಸ್ಪಷ್ಟ ರೂಪ ಪಡೆದಿರುವ ನಾಗರಿಕತೆ – ಅದಕ್ಕೆ ಮುಂಚೆ ರೂಪಗೊಂಡು ಸ್ವಲ್ಪಕಾಲ ಅಸ್ತಿತ್ವದಲ್ಲಿದ್ದು ಕಣ್ಮರೆಯಾದ ಗತನಾಗರಿಕತೆಗಳಿಂದ ಅದು ಹೇಗೆಭಿನ್ನ, ಉದ್ಯಮ ಕ್ರಾಂತಿಗೆ ತೆಕ್ಕೆಬಿದ್ದು ಈ ಸಾಂಪ್ರತ ನಾಗರಿಕತೆ ಸರಕು ಸಾಗಣೆ ಮತ್ತು ವಾರ್ತಾಪ್ರಸಾರ ಸಾಧನಗಳಲ್ಲಿ ಆದ ಮುನ್ನಡೆಯನ್ನು ಬಳಸಿಕೊಂಡು ಹೇಗೆ ದೇಶ ಕಾಲ ದೂರಗಳ ಎಡರುಗಳನ್ನು ದಾಟಿ ಜಗತ್ತಿನ ಉದ್ದ ಅಗಲಗಳಲ್ಲೂ ತನ್ನ ಪ್ರಭಾವವನ್ನು ಹರಡುತ್ತಿದೆ ಎಂಬುದನ್ನು ಲೇಖಕರು ಚೆನ್ನಾಗಿ ವಿವರಿಸಿದ್ದಾರೆ, ಈ ಪುಸ್ತಕದಲ್ಲಿ. ಹಿಟ್ಲರ್ ಮತ್ತು ಮುಸ್ಸೋಲಿನಿ ರೋಮ್–ಬರ್ಲಿನ್ ಸಖ್ಯವನ್ನುಕಟ್ಟಿ, ತಮ್ಮಂತೆಯೇ ಸರ್ವಾಧಿಕಾರಿಯಾದ ಸ್ಪೈನ್ನಿನ ಫ್ರಾಂಕೋವಿಗೆ ಹೇಗೆ ಬಹಿರಂಗವಾಗಿ ಬೆಂಬಲಕೊಟ್ಟು ಆ ರಾಷ್ಟ್ರದಲ್ಲಿ 1936 ರಿಂದ 1939ರ ವರೆಗೆ ನಡೆಯುತ್ತಿದ್ದ ಯಾದವೀ ಕಲಹವನ್ನು ನಿಲುಗಡೆಗೆ ತಂದರೆಂಬುದನ್ನೂ ಈ ಪುಸ್ತಕದಲ್ಲಿ ಸ್ಕಾಟ್ ಸ್ಪಷ್ಟವಾಗಿ ವಿವರಿಸಿದ್ದಾರೆ. ಈ ಘಟನೆಗಳೆಲ್ಲ ಯೂರೋಪಿನಲ್ಲಿ ನಡೆಯುತ್ತಿದ್ದಾಗ ಬ್ರಿಟನ್ ಮತ್ತು ಫ್ರಾನ್ಸ್ ದೇಶಗಳು ನಾವೇಕೆ ಈ ಗೊಂದಲದಲ್ಲಿ ತಲೆಹಾಕಬೇಕು ಎಂದು ತಟಸ್ಥ ನೀತಿಯನ್ನು ಅನುಸರಿಸಿ, ನಡೆಯುತ್ತಿದ್ದದ್ದಕ್ಕೆಲ್ಲ ಮೂಕಸಮ್ಮತಿಯನ್ನು ನೀಡಿದುವು. ಈ ಎಲ್ಲ ವಿದ್ಯಮಾನಗಳ ಫಲವಾಗಿ "ಎರಡನೆಯ ವಿಶ್ವ ಸಂಗ್ರಾಮ ಬಳಿಸಾರುತ್ತಿದೆ" ಎಂದು ಸ್ಕಾಟ್ ಭವಿಷ್ಯ ನುಡಿದದ್ದು ಸತ್ಯವಾಯಿತು. 1940 ರಲ್ಲಿ ಅವರು "ದ್ವಿತೀಯ ಮಹಾಯುದ್ಧ : ಒಂದು ವಿವೇಚನೆ" ಎಂಬ ಒಂದು ಲಘು ಪುಸ್ತಕವನ್ನು ಬರೆದರು. ಯುದ್ಧ ಆರುವರ್ಷ ನಡೆದು ಮುಗಿಯಿತು (1939–45). ಯುದ್ಧೋತ್ತರ ಪ್ರಕಟನೆಯಾಗಿ ಸ್ಕಾಟ್ "ಸಾಮ್ರಾಜ್ಯದ ಟ್ರ್ಯಾಜಡಿ" (1946) ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಸಾಮ್ರಾಜ್ಯಗಳ ಚರಿತೆಯನ್ನು ಕುರಿತ ಅದುವರೆಗಿನ ತಮ್ಮ ಶೋಧನೆ ಅಧ್ಯಯನಗಳನ್ನು ಮುಂಬರಿಸಿ, ಅದೇ ವರ್ಷ (1946) ತಮಗೆ ತೋಚಿದ ಪರಿಹಾರವನ್ನು ಸೂಚಿಸುವ

"ಸಂಯುಕ್ತ ಪ್ರಪಂಚರಾಷ್ಟ್ರ: ವಿಶ್ವಶಾಂತಿಗೆ ಮಾರ್ಗ" ಎಂಬ ಪುಸ್ತಕವನ್ನು ಬರೆದರು. ಈ ವಿವರವಾದ ಅಧ್ಯಯನಗಳಲ್ಲಿ ಸ್ಕಾಟ್ ಅವರು ಯುದ್ಧ ಸಂಭವವನ್ನು ಸಮಾಜ ಶಾಸ್ತ್ರ ಅರ್ಥಶಾಸ್ತ್ರ ರಾಜ್ಯಶಾಸ್ತ್ರಗಳ ದೃಷ್ಟಿಯಿಂದ ವಿಚಾರಮಾಡಿ, ಯುದ್ಧ ಯಂತ್ರವು ನಾಗರಿಕ ಸಮಾಜದ ಕಾರ್ಯಪದ್ಧತಿಯಾಗಿ ಬೆಳೆದಿದೆಯೆಂದು ವ್ಯಾಖ್ಯಾನ ಮಾಡಿದರು. ಅವರ ವಿಚಾರ ಸರಣಿ ನಿರ್ದುಷ್ಟವಾದದ್ದರಿಂದ ತಮ್ಮ ಆತ್ಮಕಥೆಯಲ್ಲಿ ಹೀಗೆ ಅಂತಿಮ ನಿರ್ಣಯವನ್ನು ಹೇಳುವುದು ಅವರಿಗೆ ಸಾಧ್ಯವಾಯಿತು:—

> "1939–45ರ ಯುದ್ಧಕ್ಕೆ ಪೂರ್ವದಲ್ಲಿ ರಾಷ್ಟ್ರರಾಷ್ಟ್ರಗಳ ನಡುವೆ ಮತ್ತೆಮತ್ತೆ ಸ್ನೇಹದ ಕಲಸಿಗೆಯಾಯಿತು. 1936–39 ರಲ್ಲಿ ಸರ್ವಾಧಿ ಕಾರಸ್ಥಾಪನೆಯ ಪೂರ್ವದಲ್ಲಿ ನೇಪಥ್ಯದ ಚಟುವಟಿಕೆಗಳು ನಡೆದುವು. ನಮ್ಮಕಾಲದಲ್ಲೇ ಶಾಂತಿಯನ್ನು ನೆಲೆಗೊಳಿಸುವ ಭರವಸೆಕೊಡಲು 1938ರಲ್ಲಿ ಹಿಟ್ಲರಿನೊಡನೆ ಬ್ರಿಟನ್ನು ಕಾರ್ಯಕಾರಿಯಾಗಬಲ್ಲುದೆಂದು ತೋಚಿದ ಒಪ್ಪಂದಕ್ಕೆ ಬಂದಿತು. ಆದರೆ ತಾತ್ಕಾಲಿಕ ಶಾಂತಿಸ್ಥಾಪನೆಗೂ ಅವಕಾಶವಾಗದೆ, ಸೋವಿಯತ್ ಒಕ್ಕೂಟ ಹಾಗೂ ಅದರ ಪ್ರಜೆಗಳಿಗೆ ನಷ್ಟಮಾಡುವ ಉದ್ದೇಶದಿಂದ ಹಿಟ್ಲರಿನ ಅಗಾಧವಾದ ಹಸಿವನ್ನು ತಣಿ ಸಲು ರಷ್ಯದ ನೆಲವನ್ನೂ ಅದರ ಮೇಲಿನ ಆಳಿಕೆಯನ್ನೂ ಚಾಚಿಕೊಳ್ಳಲು ಈ ಮ್ಯುನಿಕ್ ಒಪ್ಪಂದದಿಂದ ಅವನಿಗೆ ಅನುಮೋದನೆ ಕೊಡ ಲಾಯಿತು." (ಪು 185)

## ಮ್ಯೂನಿಕ್ ಒಪ್ಪಂದ

ಸ್ಕಾಟ್ ಅವರ ಅಭಿಪ್ರಾಯದಂತೆ ಮ್ಯೂನಿಕ್ ಒಪ್ಪಂದ ಪೂರ್ವ ಯೂರೋಪಿ ನಲ್ಲಿ ಯುದ್ಧವಾಗುವುದಕ್ಕೆ ಸಮ್ಮತಿ ಕೊಟ್ಟ ವೋಟು; ಹಾಗೆಯೇ ಪಶ್ಚಿಮ ಯುರೋ ಪಿನಲ್ಲಿ ಶಾಂತಿಯಿರುವುದಕ್ಕೂ ಕೊಟ್ಟ ವೋಟು! ಆದರೆ ದೊಡ್ಡ ರಾಷ್ಟ್ರಗಳ ಅಧಿಕಾರ **ಲೋಭ** ಮತ್ತು ದುರ್ಬಲ ರಾಷ್ಟ್ರಗಳನ್ನು ಸ್ವಾಧೀನ ಪಡಿಸಿಕೊಳ್ಳುವುದಕ್ಕೋಸ್ಕರ ಪರ ಸ್ಪರ ಅಸೂಯೆಯಿಂದ ಹೂಡಿದ **ಸ್ಪರ್ಧೆ** ಮತ್ತು ಆಯಾ ರಾಷ್ಟ್ರದ ಸೊತ್ತಾಗಿ ಸಾಮ್ರಾಜ್ಯಗಳನ್ನು ವಿಸ್ತರಿಸಿ ರೂಢಿಸಿಕೊಳ್ಳುವ **ಕಾತರ**—ಇವು ಮೂರೂ ಎಡೆಬಿಡದೆ ಸಾಗಿದವು. ಆದರೆ ಸ್ಕಾಟ್ ನಿರಾಶರಾಗಲಿಲ್ಲ. ಸಮತಾವಾದಿ ಧ್ಯೇಯಗಳನ್ನವಲಂಬಿಸಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿಕೊಳ್ಳುವ ಪ್ರಯತ್ನಗಳು ತಪ್ಪದೆ ಮುಂಬರಿಯುತ್ತವೆ ಯೆಂದು ಅವರು ಮುಂಗಂಡರು. ನಿತ್ಯ ವಿಸ್ತಾರವಾಗುತ್ತಿರುವ ವಿಶ್ವ ಜಗತ್ತಿನಲ್ಲಿ ಸರ್ವ ವ್ಯಾಪಕವಾಗಿ ಜನ ಒಳ್ಳೆಯ ಜೀವನವನ್ನು ನಡಸಲು ಕೃತಸಂಕಲ್ಪರಾಗಿ ಸಮತಾ ವಾದಕ್ಕೆ ತಿರುಗಿ ಸಮಾಜವನ್ನು ಕಟ್ಟಿಕೊಳ್ಳುತ್ತಾರೆಂದು ಭರವಸೆಪಟ್ಟರು. ಈ ಭರವಸೆ ಅವರಿಗೆ ಬಂದದ್ದಕ್ಕೆ ಕಾರಣ ಅವರು ತಮ್ಮ ಜೀವಮಾನವನ್ನೆಲ್ಲ ಸತ್ಯದ ಊಳಿಗಕ್ಕಾಗಿ

ಮುಡಿಪು ಕಟ್ಟಿದ್ದು—ಸಹಕಾರದ ಅವಲಂಬನದಿಂದ ಧರ್ಮನ್ಯಾಯಗಳು ಎಲ್ಲೆಲ್ಲೂ ಎಲ್ಲರಿಗೂ ಸಲ್ಲಬೇಕೆಂಬ ಮಹೋತ್ಸಾಹದಿಂದ ಉತ್ತೇಜಿತರಾಗಿ ಸತ್ಯೈಕ ಶರಣರಾದದ್ದು. ಅವರು ಮನುಷ್ಯ ಹೃದಯದಲ್ಲಿ ನೀತಿಗೆ ಗಟ್ಟಿ ನೆಲೆಯಿರುವುದನ್ನು ಕಂಡವರು; ಮತ್ತು ಪ್ರಪಂಚದ ನಾನಾ ರಾಷ್ಟ್ರಗಳಲ್ಲಿ ಸಮತಾವಾದಕ್ಕೆ ನಿಷ್ಠವಾದ ಸಮಾಜಗಳ ಉದಯವೇ ಜನಜೀವನ ವಿವಿಧ ಸಮಸ್ಯೆಗಳಿಗೆ ತರ್ಕಬದ್ಧವೂ ಕಲ್ಯಾಣಜೀವನಸಾರ್ಥಕವೂ ಗೌರವ ನೀಯವೂ ಆದ ಪರಿಹಾರ ಎಂದು ಅವರು ಸತ್ಯಾಧಾರದಿಂದ ನಂಬಿದ್ದಾರೆ. ಅದದ್ದರಿಂದ ಸಮತಾದ ನಿಷ್ಠವಾದ ಪ್ರಜಾಪ್ರಭುತ್ವ ಪದ್ಧತಿಗ ಕಾಲ ಕ್ರಮದಲ್ಲಿ ವಿಶೇಷ ಪ್ರಾಮು ಖ್ಯತೆ ಬರುತ್ತದೆ. ಏಕೆಂದರೆ ಈ ಬಗೆಯ ಜೀವನ ವಿಧಾನಕ್ಕೆ ಪೋಷಕವಾದದ್ದು ನಿತ್ಯ ಜೀವನದಲ್ಲಿ ಪರಸ್ಪರ ಸಹಕಾರ; ಮನುಷ್ಯ ಸಂಬಂಧಗಳಲ್ಲಿ ಪರಸ್ಪರ ಸಹಕಾರ; ಮತ್ತು ಪರಸ್ಪರ ವಿಚಾರ ವಿನಿಮಯದಿಂದ ಏಕಮತಕ್ಕೆ ಬರಲು ಅವಕಾಶ ಮಾಡಿಕೊಂಡು ಸಮಾಜದ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವವರೆಲ್ಲ—ಇತ್ತ ವ್ಯಕ್ತಿಯ ಘನತೆಗೆ ಪೆಟ್ಟು ಬೀಳದಂತೆ, ಅತ್ತ ಸಮಾಜದ ಒಟ್ಟು ಹಿತಕ್ಕೆ ಬಾಧಕವಾಗದಂತೆ ಸಮರಸನಿಷ್ಠ ಮನಸ್ಸಿನಿಂದ ಸಾರ್ವಜನಿಕವನ್ನು ನಿರ್ವಾಹ ಮಾಡಬಲ್ಲರು. ಇಂಥ ಸಂದರ್ಭದಲ್ಲಿ ಆಸ್ತಿ ಸಂಬಂಧವಾದ ಲೋಭವು ಹಂಚಿಕೊಳ್ಳುವ ಔದಾರ್ಯಕ್ಕೆ ದಾರಿಮಾಡುತ್ತದೆ, ಘರ್ಷಣೆ ಸಹಕಾರಕ್ಕೆ ದಾರಿ ಮಾದುತ್ತದೆ, ವ್ಯಕ್ತಿವೈಲಕ್ಷಣ್ಯವು ತಂಡದ ಒಕ್ಕಟ್ಟಿನ ಪ್ರಯತ್ನಕ್ಕೆ ಬಲಕೊಟ್ಟು ಒದಗುತ್ತದೆ. ಈ ಮನಃಪರಿಪಾಕವು ಕ್ರಮೇಣ ಸಾರ್ವತ್ರಿಕ ಯೋಗಕ್ಷೇಮದ ಪ್ರಯತ್ನಗಳನ್ನು ಅನಾಯಾಸವಾಗಿ ಸಾಗಿಸಿ ಧ್ಯೇಯ ಸಿದ್ಧಿಯನ್ನು ಕ್ಷಿಪ್ರವಾಗಿ ಬರಮಾಡುತ್ತದೆ.

## ಅಭಾವದಶೆಯಿಂದ ಪುಷ್ಕಲತೆಗೆ

ಸ್ಕಾಟ್ ಅವರ ಆತ್ಮಕಥೆಯಲ್ಲಿ ಮಿಂಚುವ ವಿಚಾರ ಪೂರ್ಣವಾದ ಇನ್ನಷ್ಟು ಸೂಕ್ತಿಗಳು ಇವು:—

> ಅಭಾವದಶೆಯಿಂದ ಮನುಷ್ಯ ಕುಲವನ್ನು ಪುಷ್ಕಲತೆಯ ಮಟ್ಟಕ್ಕೆ ಎತ್ತುವುದು; ಈ ಪುಷ್ಕಲತೆಯನ್ನು ಜನತೆಯಲ್ಲಿ ಹಂಚುವಾಗ ಯಾರು ಯಾರಿಗೆ ಅಭಾವದ ಕೋಟಲೆಯುಂಟೋ ಅವರಿಗೆ ಪುಷ್ಕಲತೆಯ ಲಾಭ ಮೊದಲು ಒದಗುವಂತೆ ಮಾಡುವುದು – ಇದೇ ಮನುಷ್ಯರಲ್ಲಿ ದೈನ್ಯ ವನ್ನು ತೊಡೆದುಹಾಕುವ ಉಪಾಯ.

> ಈ ಕಾರ್ಯಕ್ರಮಕ್ಕೆ ಒಂದು ರಾಷ್ಟ್ರವು ಬದ್ಧವಾದಾಗ, ಒಟ್ಟು ಜನತೆಯಲ್ಲಿ ಒಂದು ಭಾಗದಜನ ವರ್ಗಕ್ಕೆ ಮಾತ್ರ ಪ್ರಯೋಜನಕಾರಿ ಯಾದ ಸಂಸ್ಕೃತಿಯು ವಿವಿಧ ಜನವರ್ಗಗಳನ್ನು ಮುಟ್ಟುತ್ತ ವಿಸ್ತಾರ

ಗೊಂಡು ಎಲ್ಲ ಜನಕ್ಕೂ ಅದು ಒದಗುವಂತೆ ಆಗುತ್ತದೆ. ಆಗ ಪ್ರತಿಯೊಬ್ಬನೂ ತನ್ನ ತನ್ನ ಸಾಮರ್ಥ್ಯವನ್ನು ಸಮಾಜಕಲ್ಯಾಣಕ್ಕೋಸ್ಕರ ಬೆಳಸಿಕೊಂಡು, ಸಮುದಾಯದೊಟ್ಟಿನ ಸಮಾನಾನುಭವದಲ್ಲಿ ಪಾತ್ರವಹಿಸುವುದಕ್ಕೆ ತಕ್ಕವನಾಗುತ್ತಾನೆ. ಇದಕ್ಕೆ ಅವಕಾಶ ಕೊಡತಕ್ಕದ್ದು ನೈಸರ್ಗಿಕ ಪರಿಸರ. ಇದನ್ನು ಕಾಪಾಡಿಕೊಳ್ಳಬೇಕು. ನೈಸರ್ಗಿಕ ಪರಿಸರವನ್ನು ಸಂರಕ್ಷಿಸಿಕೊಂಡರೆ ಮನುಷ್ಯನು ತನ್ನ ಸಾಮಾಜಿಕ ಪರಿಸರವನ್ನೂ ರಕ್ಷಿಸಿಕೊಳ್ಳಬಹುದು. ಸಾಮಾಜಿಕ ಪರಿಸರ ರಕ್ಷಣೆಗೆ ಆರ್ಥಿಕ ವ್ಯವಸ್ಥೆಯ ನೆರವು ಬೇಕು. ಈ ಎಲ್ಲ ಬಗೆಯ ನೆರವುಗಳನ್ನು ಪಡೆದಾಗ ಮನುಷ್ಯ ಪ್ರತಿಭೆಗೂ, ವಿವಿಧ ಕೌಶಲಗಳಿಗೂ ಪ್ರಚೋದನೆ. ಮಾನವ ಕುಲಕ್ಕೆ ಬುದ್ಧಿಪೂರ್ವಕವಾದ ಸೇವೆ ಸಲ್ಲಿಸುವುದು ಎಂದರೆ ಸಮಾಜವನ್ನು ಬಳಸಿ, ಅದೇ ಸಮಾಜದ ಮೂಲಕ ಸಮಾಜವನ್ನು ಮೇಲ್ಮಟ್ಟಕ್ಕೆ ಎತ್ತುವುದು. ಇಡಿಯ ಜನವರ್ಗಕ್ಕೆ ಸೇವೆ ಸಲ್ಲಿಸುವುದು ಸಮತಾವಾದದ ಉದಾರ ದೃಷ್ಟಿಯಾದರೆ "ಒಬ್ಬೊಬ್ಬನೂ ಅವನವನ ಏಳಿಗೆಯಲ್ಲಿ ಆಸಕ್ತನು"ಎಂಬುದು ಬಂಡವಾಳವಾದದ ಸಂಕುಚಿತ ದೃಷ್ಟಿ. (ಪು 258)

ಆರ್ಥಿಕ ಮುಗ್ಗಟ್ಟು ಸ್ವತಂತ್ರ ಖಾಸಗೀ ಉದ್ಯಮನಿಷ್ಠ ಆರ್ಥಿಕ ವ್ಯವಸ್ಥೆಯ ಮುಗಿವನ್ನು ಆಗಮಾಡಿಸಿತೆಂದು ಸ್ಕಾಟ್ ಅವರು ಹೇಳುತ್ತಾರೆ. ಈ ಮುಗ್ಗಟ್ಟಿನಿಂದ ಆದ ಪ್ರಯೋಜನವೆಂದರೆ – ಸರಕಾರದ ಬೆಂಬಲವನ್ನು ಪಡೆದು ನಿರಶನಸ್ಥಿತಿಗೆ ಪರ್ಯಾಯ ಕಾರ್ಯಕ್ರಮವಾಗಿ ಸ್ವಲ್ಪಕಾಲಾವಧಿಯ ಸ್ವಲ್ಪ ಪ್ರದೇಶ ವ್ಯಾಪ್ತಿಯ ಯುದ್ಧಗಳಿಗೆ ಪ್ರೋತ್ಸಾಹಕೊಟ್ಟು, ಇನ್ನೊಂದು ದೊಡ್ಡ ಯುದ್ಧದ ಸಿದ್ಧತೆಗಳಲ್ಲಿ ತೊಡಗುವುದರ ಮೂಲಕ ಆರ್ಥಿಕ ವ್ಯವಸ್ಥೆಯನ್ನು ಅತಿಶಯ ಲಾಭಕರವಾಗಿ ನಿರ್ವಾಹ ಮಾಡುವುದು. ಪ್ರಥಮ ಮಹಾಸಂಗ್ರಾಮ ಮುಗಿದ ತರುಣದಲ್ಲಿ, ಸ್ಕಾಟ್ ಅವರು ಇನ್ನೂ ಮಾನಸ ಪಕ್ವತೆಯನ್ನು ಪಡೆಯುತ್ತಿದ್ದಾಗ, ಅಮೆರಿಕವು ಯೂರೋಪಿನ ಆರ್ಥಿಕ ಸಾಮಾಜಿಕ ಶಕ್ತಿಗಳ ಸೆಳತಕ್ಕೆ ಸಿಕ್ಕದೆ ಇರದೆಂದೂ, ಕ್ಷಿಪ್ರವಾಗಿಯೇ ಈ ಘಟನೆ ನಡೆದು, ಅಮೆರಿಕವು ಪ್ರಪಂಚದ ನಾಯಕ ರಾಷ್ಟ್ರವಾಗಿ ಮುನ್ನೆಲೆಗೆ ಬರುವುದೆಂದೂ ಶಂಕಿಸಿದ್ದರು. ಇನ್ನೊಂದು ಯುದ್ಧವೇನಾದರೂ ನಡೆದರೆ ಅಂತರ ರಾಷ್ಟ್ರೀಯ ಸ್ತರದಲ್ಲಿ ಸರ್ವನಾಶವೇ ಸಂಭವಿಸುವುದೆಂದು ಸ್ಕಾಟ್ ನಿರೀಕ್ಷಿಸಿದ್ದರು. ಅಮೆರಿಕವೋ ಸ್ಪಷ್ಟವಾಗಿ ಬಂಡವಾಳ ಪದ್ಧತಿಗೆ ಅಂಟಿಕೊಂಡಿತ್ತು. ವೈಜ್ಞಾನಿಕ ಹಾಗೂ ಪರಿಕರ್ಮ ತಂತ್ರಗಳಲ್ಲಿ ತುಂಬ ಪ್ರಗತಿಯನ್ನು ಯುದ್ಧದ ಮೂಲಕ ಉಪಯೋಗಮಾಡಿ ಸರ್ವನಾಶವನ್ನು ತರಬಲ್ಲಷ್ಟು ಬಲಿಷ್ಠವಾಗಿತ್ತು. ಇಂಥ ಪ್ರಭುತ್ವವು ಏಕಸ್ವಾಮ್ಯ – ಧನಾರಾಧಕ ಪದ್ಧತಿಯ ಪರವಾಗಿ ತನ್ನ ಸರ್ವಬಲವನ್ನೂ ಬಳಸುವುದು ಖಂಡಿತವಾಗಿತ್ತು. ಸ್ವಲಾಭಕ್ಕೂ ವೈರಿನಾಶಕ್ಕೂ ಈ ಬಲವು ವಿನಿಯೋಗವಾಗುತ್ತಿತ್ತೇ ಹೊರತು ಮನುಷ್ಯ ಗೌರವಕ್ಕೂ ಮನುಷ್ಯ ಕುಲಾಭಿವೃದ್ಧಿಗೂ ಸರ್ವತೋಮುಖ ಸಾಮಾಜಿಕಪ್ರಗತಿ

ಗಾಗಿಯೂ ಅಲ್ಲವೆಂಬುದು ಖಚಿತವಾಗಿತ್ತು. ವಿದ್ಯಮಾನಗಳ ಬೆಳವಣಿಗೆಗಳನ್ನು ಮುಂಗಂಡೇ ಸ್ಕಾಟ್ ಅವರು ಮೊದಲನೆಯ ವಿಶ್ವಸಮರದಲ್ಲಿ ಅಮೆರಿಕವು ಪಾತ್ರ ವಹಿಸಬಾರದೆಂದು ವಿರೋಧಿಸಿದರು. ಅಲ್ಲಿಂದೀಚೆಗೆ ಅವರು ನಿಷ್ಠುರ ಯುದ್ಧ ವಿರೋಧಿಗಳಾಗಿಯೇ ತಮ್ಮ ನಿಲುವಿಗೆ ಪಟ್ಟಾಗಿ ಅಂಟಿಕೊಂಡಿದ್ದಾರೆ.

## ಯುದ್ಧದಲ್ಲಿ ಆಟಂಬಾಂಬ್ ಪ್ರಯೋಗ

ಅಧ್ಯಕ್ಷ ರೂಸ್ವೆಲ್ಟರ ಮರಣಾನಂತರ ಹ್ಯಾರಿ ಟ್ರೂಮನ್ ಅಧ್ಯಕ್ಷ ಪೀಠವನ್ನು ಏರಿದರು. ರಾಷ್ಟ್ರಪತಿಯಾದ ಸ್ವಲ್ಪ ಕಾಲಾವಧಿಯಲ್ಲೇ ಟ್ರೂಮನ್ 6-8-1945 ರಲ್ಲಿ ಹಿರೋಷಿಮ ಪಟ್ಟಣದ ಮೇಲೆ ಮೊತ್ತಮೊದಲು ಆಟಂ ಬಾಂಬನ್ನು ಪ್ರಯೋಗಿಸಲು ಸೈನ್ಯಕ್ಕೆ ಅಪ್ಪಣೆಮಾಡಿ,–ಯುದ್ಧದಲ್ಲಿ ಅಣ್ವಸ್ತ್ರದ ಪ್ರಯೋಗ ಪರಿಣಾಮವನ್ನು ಪರೀಕ್ಷಿಸುವ ಪಾಪಾವಕಾಶ ಮಾಡಿಕೊಟ್ಟರು. ಸ್ಕಾಟ್ ಅವರ ಜೀವನದಲ್ಲಿ ಅದು ತುಂಬ ನೋವನ್ನು ತಂದ ದಿನ. ಅಣುಬಾಂಬನ್ನು ಹೀಗೆ ಯುದ್ಧದಲ್ಲಿ ಮೊತ್ತಮೊದಲಿಗೆ ಬಳಸಿದ ದಿನವೇ ಸ್ಕಾಟ್ ಅವರ ಅರವತ್ತೆರಡನೆಯ ಜನ್ಮದಿನ! ಸಂತೋಷ ಪಡಬೇಕಾದ ದಿನದಲ್ಲಿ ಸ್ಕಾಟ್ ಸಂಕಟಪಟ್ಟರು. ಈ ಪೆಟ್ಟು ಪಾಶ್ಚಾತ್ಯ ನಾಗರಿಕತೆಯ ಬಗ್ಗೆ "ರಾಗಾಭಿಮಾನ ವಿಕಾರದಿಂದಲೂ ಪರಿಸರ ನಿರ್ಬಂಧದಿಂದಲೂ ಸ್ವದೇಶಕ್ಕೆ ಬದ್ಧ" ರಾಗಿದ್ದ ಅವರನ್ನು ಕದಲಿಸಿ ದೂರ ಅಟ್ಟಿತು. ಈ ಒಂದು ಪ್ರಯೋಗ ಪರೀಕ್ಷಾ ಕರ್ಮವು "ಪಾಶ್ಚಾತ್ಯ ನಾಗರಿಕತೆಯ ನಾಶಕ್ಕೆ ಎಂದು ಕೊಟ್ಟ ಆಜ್ಞಾಪತ್ರ" ಎಂಬುದಾಗಿ ಸ್ಕಾಟ್ ಗುರುತಿಸಿದರು. ಏಕೆಂದರೆ ಬಾಂಬನ್ನು ಬಳಸಿದ್ದು ಯಾವ ಪೂರ್ವಸೂಚನೆಯನ್ನೂ ನೀಡದೆ, ನಿರಪರಾಧಿಗಳೂ ಸಹಾಯರಹಿತರೂ ಶಾಂತಿಪ್ರಿಯರೂ ಆದ ಪೌರ ಪ್ರಜೆಗಳಮೇಲೆ ಮತ್ತು ಪ್ರಯುಕ್ತವಾದ ಬಾಂಬು ಸರ್ವನಾಶಕವಾದದ್ದು; 89,134 ಜೀವಗಳನ್ನು ಬಲಿತೆಗೆದುಕೊಂಡಿತು. ಈ ಸುದ್ದಿ ಸ್ಕಾಟ್ ಅವರನ್ನು ತಲ್ಲಣಪಡಿಸಿತು. ರಾಕ್ಷಸೀ ಕೃತ್ಯ ಇದು ಎಂದು ತೀವ್ರವಾಗಿ ಪ್ರತಿಭಟಿಸಿ, ಅಧ್ಯಕ್ಷ ಟ್ರೂಮನ್ ಅವರಿಗೆ ಹೀಗೆ ಓಲೆ ಬರೆದರು:—

> "ನಿಮ್ಮ ಪ್ರಭುತ್ವ ಇತಃಪರ ನನ್ನ ಸಮ್ಮತಿಗೆ ಅರ್ಹವಾದ ಪ್ರಭುತ್ವವಲ್ಲ. ಇಂದಿನಿಂದ ಮುಂದಕ್ಕೆ ನಮ್ಮ ದಾರಿಗಳು ಬೇರೆಬೇರೆಯಾಗಿರುತ್ತವೆ. ನೀವು ಸಾಗುವುದು ಆತ್ಮಹತ್ಯೆಯ ದಾರಿಯಲ್ಲಿ. ಇಳೆಯನ್ನು ಸಿಡಿಯಿಸಿ, ಅಸ್ತಿತ್ವಕ್ಕೆ ಬಂದಿರುವ ಎಲ್ಲವನ್ನೂ ಶಪಿಸುತ್ತ ಹೋಗುವ ದಾರಿಯಲ್ಲಿ ನಿಮ್ಮ ನಡೆ. ನಾನೋ ಸಹಕಾರ, ಸಾಮಾಜಿಕ ನ್ಯಾಯ ಮತ್ತು ಮಾನವ ಕಲ್ಯಾಣಗಳ ಆಧಾರದ ಮೇಲೆ ಮಾನವ ಸಮಾಜವನ್ನು ಕಟ್ಟುವ ಕೆಲಸಕ್ಕೆ ಕೈಯಿಡುತ್ತೇನೆ." (ಪುಟ 203)

## ಅಮೆರಿಕದ ಜೀವನವಿಧಾನದ ಖಂಡನೆ

ಈ ನಿರ್ಣಯಕ್ಕೆ ಬಂದು ಸ್ಕಾಟ್ ''ಅಮೆರಿಕದ ಸ್ವಲ್ಪ ಜನಾಧಿಪತ್ಯದ ಕಡೆಗೆ, ಅಮೆರಿಕದ ಜೀವನದ ಕ್ರಮದ ಕಡೆಗೆ, ಅಮೆರಿಕದ ಸಾಮ್ರಾಜ್ಯವಾದದ ಕಡೆಗೆ, ಅಮೆರಿಕದ ಪ್ರಗತಿ ವಿರೋಧಿ ಶತಮಾನದ ಕಡೆಗೆ, ಪಾಶ್ಚಾತ್ಯ ನಾಗರಿಕತೆಯ ಕಡೆಗೆ" ತಮ್ಮ ಬೆನ್ನನ್ನು ತಿರುಗಿಸಿದರು. ಈ ಸ್ವಲ್ಪ ಜನಾಧಿಪತ್ಯದ ಚಟುವಟಿಕೆಗಳನ್ನು ಅಮೆರಿಕದ ಜೀವನ ಕ್ರಮವಾಗಲಿ, ಒಟ್ಟನಲ್ಲಿ ಪಾಶ್ಚಾತ್ಯ ನಾಗರಿಕತೆಯಾಗಲಿ ಸ್ವದೇಶ ಪ್ರಜೆಗಳ ಮುನ್ನಡೆಯ ಹಾರೈಕೆಗೆ ಸಾಕಾಗದವು ಎಂಬುದನ್ನು ಸ್ಕಾಟ್ ಆಖೈರಾಗಿ ನಿಶ್ಚಯಮಾಡಿಕೊಂಡರು. ಅವರು ತಮ್ಮ ಖಂಡನ ವಾಕ್ಯಗಳನ್ನು ಮುಂಬರಿ ಸುತ್ತಾರೆ:—

> ''ಪಾಶ್ಚಾತ್ಯ ನಾಗರಿಕತೆಯಿಂದ ನಾನು ಬೀಳ್ಕೊಳ್ಳುತ್ತೇನೆ.... ಅದರ ಒಡೆಯರೆಲ್ಲ ಪ್ರಕೃತಿ ವಿರೋಧೀ ಶಕ್ತಿಗಳ ಹಾಗು ಪ್ರತಿ-ಕ್ರಾಂತಿಯ ನಾಯಕರಾಗಿ ಸಮಾಜ ಘಾತಕರಿಗೆ ಪ್ರೋತ್ಸಾಹ ಕೊಡುವವರು. ಅವರು ಮುನ್ನಡೆಗೆ ಬೆನ್ನಿತ್ತು ಹಿಂದುಹಿಂದಕ್ಕೆ ಅಡಿಯಿಡುತ್ತ ಸಾಗಿ, ಅಧಿಕಾರ ದಂಡವನ್ನು ಲಾಭಕೋರರ ಕೈಗೂ ವಿನಾಶಕರ ಕೈಗೂ ಕೊಲೆ ಗಾರರ ಕೈಗೂ ಕೊಟ್ಟು, ತಮ್ಮ ಗೋರಿಯೊಳಕ್ಕೆ ತಾವೇ ಇಳಿಯು ತ್ತಾರೆ; ಅಲ್ಲದೆ ಗೋರಿಗೆ ಇಳಿಸುವ ಶವ ಪೇಟಿಕೆಗೆ ಮೊಳೆಗಳನ್ನು ಬಡಿದು ಭದ್ರಪಡಿಸುತ್ತಾರೆ..... ಅಮೆರಿಕದ ಜೀವನ ವಿಧಾನವು ಕುರೂಪ ಪಡೆಯಿತು, ಆಡಂಬರ ಪ್ರದರ್ಶಕವಾಯಿತು, ಮತ್ತು ಸಾರ್ವಜನಿಕ ವನ್ನು ಬೇಜವಾಬ್ದಾರಿಯಿಂದ ನಡಸುವ ಕೀಳುಮಟ್ಟಕ್ಕಿಳಿಯಿತು. ಇದರ ಪರಿಣಾಮವನ್ನರಿತು ರೋಸಿದ ತರುಣ ಅಮೆರಿಕನರನೇಕರು ಪಟ್ಟಣ ವಾಸವನ್ನು ತೊರೆದು, ತಮ್ಮ ಅನುಭವದಲ್ಲಿ ಕಟುವಾಗಿ ತೋರಿರುವ ಸೌಕರ್ಯ ಜಟಿಲತೆಗಳನ್ನು ಹಿಂದೆಬಿಟ್ಟು, ಸರಳ ವನವಾಸಕ್ಕೆ ತೆರಳು ತ್ತಿದ್ದಾರೆ. ಅವರಿಗೆ ಬೇಕಾದದ್ದು ನಾಗರಿಕತೆಯಿಂದ ದೂರವೂ ಕೃತಕ ಪಟ್ಟಣ ಜೀವನ ವಿಧಾನಕ್ಕಿಂತ ಭಿನ್ನವೂ ಆದ ಸರಳ–ನೂತನ–ಸಹಜ– ಜೀವನ. ಅದನ್ನು ಹುಡುಕಿಕೊಂಡು ಬಾಳುವುದು ಅವರಿಗೀಗ ಪ್ರಿಯ ವಾಗಿದೆ." (ಪು. 203-06)

## ಕೋಪ ಬೆರತ ಸಮಾಧಾನ

ಯುದ್ಧಗಳ ಮುಗಿತಾಯದ ಮತ್ತು ಅನಂತರದ ಘಟನೆಗಳ ಪರಿಣಾಮವಾಗಿ ಶಾಂತಿ ಪ್ರಿಯರಾದ ಸ್ಕಾಟ್ ಅವರಿಗೆ ಸಮಾಧಾನವಾಗಿರಬೆಕು. ಅಮೇರಿಕಕ್ಕೆ ಪ್ರತಿ

ಕೂಲವೆನ್ನಿಸುವ ರೀತಿಯಲ್ಲಿ ನಡೆದ ಈ ಘಟನೆಗಳನ್ನು ಸ್ವಾಭಾವಿಕವಾಗಿಯೇ ಸ್ಕಾಟ್ ಸ್ವಾಗತಿಸಿದರು. ಕ್ಯೂಬಾದ್ವೀಪದಲ್ಲಿ ಫೀಡೆಲ್ ಕ್ಯಾಸ್ಟ್ರೊವನ್ನು ಅಣಗಿಸಲು ಅಮೇರಿಕನರಿಗೆ ಆಗದೆ ಹೋದದ್ದು, ಚೀಣದಲ್ಲಿ ಚಿಯಾಂಗ್ ಕೈ-ಷೇಕನ ಅಧಿಕಾರಕ್ಕೆ ಊರುಗೋಲಾಗಿದ್ದುಕೊಂಡಿರುವುದು ತಪ್ಪಿದ್ದು, ಕೊರಿಯದ ರಾಜಕೀಯ ಸಮಸ್ಯೆ ಇತ್ಯರ್ಥಕ್ಕೆ ಬರದೆ ನೆನೆಗುದಿಗೆ ಬಿದ್ದದ್ದು ಮತ್ತು ಆಗ್ನೇಯ ಏಷ್ಯಾ ಪ್ರದೇಶದ ಯುದ್ಧಗಳಲ್ಲಿ ಐತಿಹಾಸಿಕ ಪರಾಭವವನ್ನು ಪಡೆದದ್ದು—ಇವೆಲ್ಲ ಅಮರಿಕನರು ನಿರೀಕ್ಷಿಸದೆ ಇದ್ದು ಅವರಿಗೆ ಪ್ರತಿಕೂಲವಾಗಿ ನಡೆದ ಘಟನೆಗಳು. ಅಮೇರಿಕಕ್ಕೆ ತಂದ ಮಹಾಕಷ್ಟಗಳ ಈ ವಿಸ್ಮಯಕಾರಿ ದಾಖಲೆಗಳು ಶಾಂತಿ (ಪ್ಯಾಸಿಫಿಕ್) ಸಾಗರದ ಮೇಲೂ ಪೂರ್ವಏಷ್ಯದ ಹಾಗೂ ಆಗ್ನೇಯ ಏಷ್ಯದ ರಾಷ್ಟ್ರಗಳ ಮೇಲೂ ಪರಮಾಧಿಕಾರವನ್ನು ಪಡೆಯುವುದನ್ನು ಅಮೇರಿಕಕ್ಕೆ ತಪ್ಪಿಸಿಬಿಟ್ಟವು. ಹಿಂದೆ ಅಮೇರಿಕದ ಇತಿಹಾಸದಲ್ಲಿ ನಡೆಯದ ಘಟನೆಗಳ ಸರಣಿ ಇದು. ಅಮೇರಿಕದ ಯುದ್ಧಯಂತ್ರವು ಮುರಿದು ಮಣ್ಣುಮುಕ್ಕಿತು. ಟ್ರೂಮನ್ನಿನಿಂದ ನಿಕ್ಸನ್‌ವರೆಗೆ ಅಧ್ಯಕ್ಷಪರಂಪರೆ ಪೆಂಟಗನ್ ಕೂಟಕ್ಕೂ ಅಮೇರಿಕದ ಸೈನ್ಯಕ್ಕೂ ಸ್ವತಂತ್ರ ಸಂಪೂರ್ಣಾಧಿಕಾರವನ್ನು ಕೊಟ್ಟು ಅವುಗಳ ಸ್ವೇಚ್ಛಾವರ್ತನೆಗೆ ಅವಕಾಶ ಮಾಡಿತ್ತು. ವಿಯಟ್ನಾಮಿನಲ್ಲಿ ಯುದ್ಧ ಮರ್ಯಾದೆಯನ್ನುಲ್ಲಂಘಿಸಿ ಸಾರದೆಯೆ ಸಾಗಿಸಿದ ಯುದ್ಧದಲ್ಲಿ – 1965ರಲ್ಲಿ ಮೊದಲಾದದ್ದು –ಜೀವಾಣು ಶಸ್ತ್ರಗಳನ್ನೂ ರಾಸಾಯನಿಕ ಶಸ್ತ್ರಗಳನ್ನೂ ಬಳಸಿತು, 'ನಾಪಾಳಂ' ವಿಷಬಾಂಬುಗಳನ್ನೂ ಬಳಸಿ, ಗಾಯಗೊಂಡವರು ನೊಂದು ತುಂಬ ಗಾಸಿಪಡುತ್ತ ಅಸುನೀಗುವಂತೆ ಮಾಡಿತು. ಈ ನಿರ್ದಯ ಯುದ್ಧದ ಧ್ಯೇಯ ಇಡಿಯ ಪ್ರದೇಶದಲ್ಲಿ ಸತ್ಯಹನನ, ಸ್ವಾತಂತ್ರ್ಯಹನನ, ಜನಹನನ, ಸಸ್ಯಹನನ ಮತ್ತು ಪರಿಸರ ಹನನ ದ್ವಾರಾ ಸರ್ವನಾಶವನ್ನು ಆಗ ಮಾಡಿಸುವುದು. ಅಮೆರಿಕದ ಕೇಡನ್ನು ತಡೆಯುವ ಕೈಯೊಂದು ಇಲ್ಲವಲ್ಲಾ ಎಂಬಷ್ಟು ಆತಂಕದ ಪರಿಸ್ಥಿಯನ್ನು ತಂದೊಡ್ಡಿದ ಘೋರ ಪ್ರಾದೇಶಿಕ ಯುದ್ಧ ಅದು.

## ಧರ್ಮಯುದ್ಧ ನಡಸಿ ಸ್ವತಂತ್ರವಾದ ಅದೇ ಅಮೆರಿಕದಿಂದ ಈಗ ಅಧರ್ಮಯುದ್ಧಗಳಿಗೆ ಪ್ರೋತ್ಸಾಹ

ಸ್ಕಾಟ್ ಅವರು ಚಿಕ್ಕಂದಿನಿಂದ ಮುಪ್ಪೇರುವ ವರೆಗೆ ಹೇಗೆ ಸೂಕ್ಷ್ಮಸಂವೇದಿಯಾಗಿದ್ದರೆಂಬುದು ಕುತೂಹಲಕಾರಿಯಾದ ಸಂಗತಿ. ಎಳವೆಯ ಓದಿನ ಹೊತ್ತಿನಲ್ಲಿ ಯಾವ ಯಾವ ಪಠ್ಯ ಪುಸ್ತಕದಲ್ಲಿ ಒಳ್ಳೆಯದು ಗಮನಕ್ಕೆ ಬಂದರೂ ಅದರ ಪ್ರಭಾವ ಮುದ್ರಿಕೆಯನ್ನು ಅವರ ಮನಸ್ಸು ಪಡೆದು ನಿಲ್ಲಿಸಿಕೊಳ್ಳುತ್ತಿತ್ತು. ಶಾಲೆಯಲ್ಲಿ ವ್ಯಾಸಂಗಮಾಡಿದ "ಮೇಫ್ಲವರ್ ಒಪ್ಪಂದ" ವನ್ನು ಕಂಠಪಾಠ ಮಾಡಿದರು. ಹಾಗೆಯೇ ವಿಲಿಯಂ ಪೆನ್ನಿನ ಪ್ರೇಮ ಮತ್ತು ಮಾನವ ಸೌಹಾರ್ದ ಭಾವನೆಗಳನ್ನು ಕುರಿತ ಅನುಶಾಸನ, ಥಾಮಸ್ ಜಫರ್ಸನ್ನಿನ ಪ್ರಾಪ್ತವ್ಯ (ಹಕ್ಕು ಬಾಧ್ಯತೆ)ಗಳ

ಘೋಷಣೆ, 1780ರ ರಾಷ್ಟ್ರಸಂವಿಧಾನ, ಅಧ್ಯಕ್ಷ ಲಿಂಕನ್ನಿನ ಗೆಟ್ಟಿಸ್‌ಬರ್ಗ್ ಭಾಷಣ, ಮತ್ತು ಎರಡನೆಯ ಸಾರಿ ಲಿಂಕನ್ ಅಧ್ಯಕ್ಷನಾದಾಗ ಮಾಡಿದ ಆದಿ ಭಾಷಣ – ಇವನ್ನೆಲ್ಲ ಕಂಠಪಾಠಮಾಡಿ ಸಂದರ್ಭೋಚಿತವಾಗಿ ಪುನರುಚ್ಚರಿಸುತ್ತ ಸಂತೋಷಪಡುತ್ತಿದ್ದರು. ಆದರೆ ಅಮೆರಿಕದ ಸ್ವಾತಂತ್ರ್ಯ ಘೋಷಣೆಯ ವಾಕ್ಯಮಾಲೆ ಸ್ಕಾಟ್ ಅವರ ಮೇಲೆ ಶಾಶ್ವತವೂ, ಗಂಭೀರವೂ, ಉದಾತ್ತವೂ ಆದ ಪ್ರಭಾವ ವನ್ನು ಬೀರಿತು. ಅದರಲ್ಲೂ ರಾಷ್ಟ್ರದಲ್ಲಿರುವ ಪ್ರತಿಯೊಬ್ಬ ಪ್ರಜೆಗೂ ಪರಭಾರೆ ಮಾಡ ಲಾಗದ ಹಕ್ಕಿದೆಯೆಂದು ಅನ್ವಯಿಸಲು ಸ್ವಾತಂತ್ರ್ಯ ಘೋಷಕ ವಾಕ್ಯಗಳಲ್ಲಿ ವಿಧಿ ವತ್ತಾಗಿ ಭರವಸೆಕೊಡುವ "ಪ್ರಾಣ–ಸ್ವಾತಂತ್ರ್ಯ–ಮತ್ತು ಮಾನವ ಸುಖಸಾಧಕ ಪ್ರಯತ್ನಗಳ ಪ್ರಸ್ತಾವವಂತೂ ಸ್ಕಾಟ್ ಅವರಿಗೆ ತುಂಬ ಪ್ರಿಯವಾಯಿತು. ಅದರಲ್ಲೂ ವಿಶೇಷವಾಗಿ ಯಾವಾಗ ಪ್ರಭುತ್ವವು ಪ್ರಜೆಗಳ ಹಕ್ಕುಗಳಿಗೆ ನಾಶಕಾರಿಯಾಗಿ ವರ್ತಿ ಸುತ್ತದೆಯೋ ಆಗ ಪ್ರಜೆಗಳು ಅಂಥ ಪ್ರಭುತ್ವವನ್ನು "ಮಾರ್ಪಡಿಸುವ, ಇಲ್ಲವೆ ತೊಡೆದು ಹಾಕುವ" ಹಕ್ಕುಳ್ಳವರು ಎಂದು ಸ್ವಾತಂತ್ರ್ಯ ಘೋಷಣೆಯಲ್ಲಿ ಉಕ್ತ ವಾಗಿರುವ ವಾಕ್ಯವಂತೂ ಅವರ ಎದೆಯನ್ನು ಮುಟ್ಟಿ ತೃಪ್ತಿಕೊಟ್ಟಿತು. ಹೀಗೆ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳನ್ನು ಸಾಧಿಸುವ ಬಗ್ಗೆ ನಡೆದ ಧರ್ಮ ಯುದ್ಧದ ಪರಿಣಾಮವಾಗಿ ಅಮೆರಿಕದ ಹದಿಮೂರು ವಸಾಹತು ರಾಜ್ಯಗಳು ಬ್ರಿಟಿಷ್ ಪ್ರಭುತ್ವದ ಪಟ್ಟಿನಿಂದ ಬಿಡುಗಡೆ ಪಡೆದುವು. ಇದೊಂದು ಐತಿಹಾಸಿಕ ಸಿದ್ಧಿಯಾಗಿ, ಪ್ರಜಾಪ್ರಭುತ್ವ ಸ್ಥಾಪನೆಗೆ ತಕ್ಕ ಭೂಮಿಕೆಯನ್ನೂ ಪರಿಸರವನ್ನೂ ಸ್ವದೇಶದಲ್ಲಿ ಕಟ್ಟಿದ್ದಲ್ಲದೆ, ಪರಾಧೀನಕ್ಕೆ ಒಳಗಾದ ಹಲವು ವಿದೇಶಗಳ ಜನರಿಗೆ ಬಿಡುಗಡೆ ಪಡೆಯುವ ಸ್ಫೂರ್ತಿಯನ್ನು ಕೊಡುವ ಮಹಾ ಮಂಗಳ ಸನ್ನಿವೇಶ ವಾಯಿತು. ಪ್ರಪಂಚದಲ್ಲಿ ಎಲ್ಲೆಲ್ಲಿ ಹತಭಾಗ್ಯ ರಾಷ್ಟ್ರಗಳು ಐರೋಪ್ಯ ಸಾಮ್ರಾಜ್ಯಗಳ ದಮನಕ್ಕೆ ಸಿಕ್ಕಿ ಪಾಡುಪಡುತ್ತಿದ್ದುವೋ ಆ ರಾಷ್ಟ್ರಗಳಲ್ಲೆಲ್ಲ ಅಮೆರಿಕದ ಈ ಘನ ನಿದ ರ್ಶನವು ಮಾರ್ಗದರ್ಶಕವೂ ಅನುಕರಣೀಯವೂ ಆಯಿತು. ಶೋಷಣೆಗೆ ಸಿಕ್ಕಿ ದೀನ ರಾದ ವಸಾಹತು ಜನವೆಲ್ಲ ವಾಸ್ತವವಾಗಿ ಚಂಚಲವಾಗಿದ್ದ ತಮ್ಮ ಮನಸ್ಸನ್ನು ದೃಢ ಪಡಿಸಿಕೊಂಡರು. ಪಾಶವೀಬಲದ ವಿರುದ್ಧ ತಮ್ಮ ಅಧ್ಯಾತ್ಮ ಬಲವನ್ನು ಹೆಚ್ಚಿಸಿ ಕೊಂಡರು. ಸಾಮ್ರಾಜ್ಯದ ಪರಮಾಧಿಕಾರದಿಂದ ವಿಮೋಚನೆಗೊಳ್ಳಲು ಪ್ರತಿಜ್ಞಾ ಬದ್ಧ ರಾಗಿ ಕಾರ್ಯಮುಖರಾದರು. ವಿಶ್ವವ್ಯಾಪಕವಾದ ಈ ವಸಾಹತು ಜನಪ್ರಯತ್ನಗಳು ಯಶಸ್ಸು ಪಡೆಯುತ್ತ ಸಾಮ್ರಾಜ್ಯಗಳು ಕುಸಿದು ಅಧಿಕಾರವನ್ನು ಬಿಡುತ್ತ ಬಂದುವು. ಇನ್ನು ಸ್ವಲ್ಪಕಾಲದಲ್ಲಿ ಸಾಮ್ರಾಜ್ಯಗಳು ನಿಶ್ಶೇಷವಾಗಿ ಗತೇತಿಹಾಸಕ್ಕೆ ಸೇರತಕ್ಕ ಸಂಗತಿಗಳಾಗುತ್ತವೆ.

## ಜನಾಂಗ ಮೈತ್ರಿಯ ಚಿಂತನೆ

ಹೀಗೆ ಮನುಷ್ಯ ಚರಿತ್ರೆಯಲ್ಲಿ 4–7–1876 ನೆಯ ದಿನಾಂಕವು ವರ್ಷವರ್ಷವೂ ಸ್ಮರಣೆಗೆ ಬರತಕ್ಕ ಪರ್ವದಿನವಾಯಿತು. ಅಮೆರಿಕದ ಸ್ವಾತಂತ್ರ ಘೋಷಣೆಯಾ

ದದ್ದೂ ಅಂದೇ. ಅದರಲ್ಲೂ "ಪ್ರಜೆಗಳಿಂದ ಪ್ರಜೆಗಳ ಪ್ರಭುತ್ವ, ಎಂಬ ಸಿದ್ಧಾಂತದ ಉಲ್ಲೇಖ ಆ ಘೋಷಣೆಯಲ್ಲಿ ಮುಖ್ಯ ಸ್ವರವಾಯಿತು. ಈ ಸಿದ್ಧಾಂತಕ್ಕೆ ಲಿಂಕನ್ – ನೀಗ್ರೋ ಜನಾಂಗಕ್ಕೆ ಮುಕ್ತಿದಾತ – 'ಪ್ರಜೆಗಳಿಗಾಗಿ' ಎಂಬ ಪದವನ್ನು ಸೇರಿಸಿ, ಅದಕ್ಕೆ ಅವಶ್ಯವಾಗಿದ್ದ ಜೀವಾಳವನ್ನು ತುಂಬಿದನು. ಸ್ವಾತಂತ್ರ್ಯ ಘೋಷಣೆಯಾಗಿ ಇನ್ನೂರು ವರ್ಷಗಳು ಸಂದುವೆಂಬುದರ ಜ್ಞಾಪಕಾರ್ಥಕವಾಗಿ ಪ್ರಪಂಚದಲ್ಲೆಲ್ಲ ದ್ವಿಶತಮಾನೋತ್ಸವವನ್ನು ಆಚರಿಸುವ ಹೊತ್ತಿನಲ್ಲಿ ನಾವು ಇನ್ನಷ್ಟು ಸಮಾಧಾನ ಪಡಬೇಕಾದ ಘಟನೆಗಳು ನಡೆಯುತ್ತಿವೆ. ಆಫ್ರಿಕಾ ಖಂಡವನ್ನು ಕಪ್ಪು ಖಂಡವೆನ್ನಿಸಿದ ಕರಿಯ ಜನಾಂಗವನ್ನು ಸ್ವದೇಶದಲ್ಲೇ ಪರಕೀಯರನ್ನಾಗಿ ಎಣಿಸಿ ಬಹಿಷ್ಕೃತವನ್ನಾಗಿ ಮಾಡಿದ ಕರಾಳ ಪದ್ಧತಿಯನ್ನು – ಅಪಾರ್ಥೀಡ್ (Apardheid) ಬುಡಮುಟ್ಟ ನಾಶಮಾಡುವ ಪ್ರಯತ್ನವನ್ನು ನೋಡುತ್ತಿದ್ದೇವೆ. ಧಿಕ್ಕಾರಕ್ಕೆ ಒಳಗಾದ ಕಪ್ಪು ಜನಾಂಗ ಈಗ ಒಗ್ಗಟ್ಟಾಗಿ ಬಿಳಿಯ ಆಳರಸರ ವಿರುದ್ಧ ಸೆಟೆದು ನಿಂತು ಹೋರಾಟ ನಡಸಿ ತಮಗಿದ್ದೂ ಕಳೆದುಕೊಂಡಿದ್ದ ಆಜನ್ಮಸಿದ್ಧಹಕ್ಕನ್ನೂ ಆತ್ಮಗೌರವವನ್ನೂ ಸಂಪಾದಿಸುತ್ತಿದ್ದಾರೆ. ದುರ್ಬಲರೂ ಅಜ್ಞಾನಿಗಳೂ ದರಿದ್ರರೂ ಆದ ಬಹುಸಂಖ್ಯಾಕರನ್ನು ಪಾಶವ ಸೈನ್ಯ ಶಕ್ತಿಯ ಅವಲಂಬನದಿಂದ ಸ್ವಾಧೀನ ಪಡಿಸಿಕೊಂಡಿದ್ದ ಸ್ಥಳೀಯರೇ ಆದ ಬಿಳಿಯ ಪರಮಾಧಿಕಾರವಾದಿಗಳಿಗೂ ಔದಾರ್ಯ ತೋರಿಸಿ ಪಾಪದಿಂದ ಬಿಡುಗಡೆ ಕೊಡುತ್ತಿದ್ದಾರೆ. ಈ ಸ್ವಾಗತಾರ್ಹ ಘಟನೆಗಳು ನಡೆಯುತ್ತಿರುವುದು ನಿಜವಾದ ಪ್ರಗತಿ ಸೂಚನೆಯೇ. ಆಫ್ರಿಕದ ಜನತೆ ಎಚ್ಚತ್ತು ತಮ್ಮ ಮಾನವ ಪ್ರಾಪ್ತವ್ಯ (ಹಕ್ಕು)ಗಳನ್ನೂ ಗೌರವವನ್ನು ಗೆದ್ದುಕೊಳ್ಳಲು ನಡಸಿದ ಚಟುವಟಿಕೆ ಸಾಮಾಜಿಕವಾಗಿ ನ್ಯಾಯಸಮ್ಮತವಾದದ್ದು, ಮತ್ತು ಪ್ರಜಾಸತ್ತಾತ್ಮಕವಾದ ಸಾಮಾಜಿಕ ಪದ್ಧತಿಗೆ ಆಧಾರಭೂಮಿಕೆಯನ್ನು ಕಲ್ಪಿಸುವಂಥಾದ್ದು. ಈ ಗಟ್ಟಿನಂಬಿಕೆಯಿಂದ ಆಫ್ರಿಕದ ಜನತೆ ಉತ್ಸಾಹಗೊಂಡು ಸಾಮ್ರಾಜ್ಯವಾದಿಗಳನ್ನುಎದುರಿಸಿ ಸೋಲಿಸುತ್ತಿದ್ದಾರೆ. ಆದದ್ದರಿಂದ ಆಫ್ರಿಕದ ಕಪ್ಪುಜನಾಂಗದ ಶ್ರೇಯಸ್ಸಿಗೋಸ್ಕರ ಅಮೆರಿಕದಲ್ಲಿ ಸ್ಕಾಟ್ ನಿಯರಿಂಗ್ ಅವರು ಎಂತಹ ಉಗ್ರಚಳವಳಿ ನಡಸಿದರೆಂಬುದನ್ನು ಇಲ್ಲಿ ದಾಖಲೆಯಿಡುವುದು ಉಚಿತವಾಗಿದೆ. ಲೇಖಕರಾಗಿ, ಭಾಷಣಕಾರರಾಗಿ, ಅಧ್ಯಾಪಕರಾಗಿ, ಜನಾಂಗ ಸಂಬಂಧಗಳ ಬಗ್ಗೆ ಕ್ರಿಯಾಶಾಲಿಯಾದ ಆಲೋಚಕರಾಗಿ ಸ್ಕಾಟ್ ಎಡೆಬಿಡದೆ ವಾದ ಮಾಡಿ, ಮಾನವ ನ್ಯಾಯನಿಷ್ಠೆ, ವೈಯಕ್ತಿಕ ಮನುಷ್ಯಗೌರವ ಹಾಗೂ ಸಾಮಾಜಿಕ ಋಜುತೆಗಳ ಯೋಗಕ್ಷೇಮಕ್ಕಾಗಿ ದುಡಿಯುತ್ತಾ ಬಂದಿದ್ದಾರೆ. ಸ್ವದೇಶದಲ್ಲೆ 1929 ರಿಂದ "ಕಪ್ಪು ಅಮೆರಿಕಾ" ಎಂಬ ತಮ್ಮ ಪುಸ್ತಕದ ಮೂಲಕ ಚಳವಳಿ ನಡಸುತ್ತ ಬಂದಿದ್ದಾರೆ. ಈ ಪುಸ್ತಕದಲ್ಲಿ ಅಮೆರಿಕದ ನೀಗ್ರೋಜನಾಂಗದ ಸ್ಥಾನವನ್ನು ಕುರಿತು ವ್ಯಾಪಕವಾದ ಪರಿಶೀಲನೆ ನಡಸಿ, ಅಮೆರಿಕದ ಬಿಳಿಯ ಪ್ರಭುತ್ವವು "ಮೌನವಾಗಿ, ತಟಸ್ಥವಾಗಿ, ಭಯೋತ್ಪಾದಕವಾಗಿ ಬಹಿಷ್ಕರಣವನ್ನೂ ಶೋಷಣೆಯನ್ನೂ ಒಪ್ಪಿಕೊಂಡು ಬಂದದ್ದನ್ನು" ಸ್ವದೇಶದಲ್ಲಿಯ "ಗುಲಾಮ ಪ್ರದೇಶ" ದಲ್ಲಿ ಸ್ವತಃ

ಅನುಭವ ಪಡೆದು, ಕಟುವಾಗಿ ಟೀಕಿಸಿದ್ದಾರೆ. ಈ ವಿಷಯವನ್ನು ಕುರಿತು ಅವರು "ಸ್ವತಂತ್ರವಾಗಿ ಜನ್ಮಕ್ಕೆ ಬಂದವರು" ಎಂಬ ತಮ್ಮ ಏಕಮಾತ್ರ ಕಾದಂಬರಿಯನ್ನು ಬರೆದು ಪ್ರಕಟಿಸಿದ್ದಾರೆ.

## ಸಂಪತ್ತಿನ ವಿಪತ್ತಿನಿಂದ ಪಾರಾದ ಬಗೆ

ಸ್ಕಾಟ್ ಅವರು ಹುಟ್ಟಿಬೆಳೆದದ್ದು ಶ್ರೀಮಂತ ಕುಟುಂಬದಲ್ಲಿ. ಎಳವೆಯಲ್ಲಿ ಬಾಲಕನಿಗೆ ಸೌಕರ್ಯಗಳ ಲಾಲನೆ ಪೋಷಣೆ ದೊರೆಯಿತು. ಯುವಕನಾಗಿ ಬೆಳೆದಂತೆ ಸಿರಿಯ ಸೆಳೆತವೂ ಕೇಡೂಗಳು ಎಂಥವೆಂಬ ಪ್ರಜ್ಞೆ ಆತನ ಪರಿಣತವಾಗುತ್ತಿದ್ದ ಚಿತ್ತದಲ್ಲಿ ಮೂಡಿತು. ಒಡಲ ಹಸಿವುಗಳಿಗೆ ತಣಿವು ನೀಡತಕ್ಕ ಈ ಹಣವೇನಿದ್ದರೂ ಬಡವರನ್ನೂ ಆಸರೆಯಿಲ್ಲದವರನ್ನೂ ಸುಲಿಗೆಮಾಡಿ ಗಳಿಸುವ ಹಣವೇ ಆದದ್ದರಿಂದ ಅದರ ದುರುಪಯೋಗದಿಂದ ಚಿತ್ತವು ಕಲುಷಿತವಾಗುತ್ತದೆ ಎಂಬುದನ್ನು ಯುವಕ ಸ್ಕಾಟ್ ಗಮನಿಸಿ, ಹಣದಿಂದ ನಡತೆ ಕೆಡುವ ಸಾಧ್ಯತೆ ಹೆಚ್ಚೆಂದು ಮನಸ್ಸಿಗೆ ಸ್ಪಷ್ಟಪಡಿಸಿಕೊಂಡನು. ಶರೀರ ಮೋಹದ ಜೊತೆಗೆ ಸ್ಥಾನಮೋಹ, ವಿತ್ತಮೋಹ, ಕೀರ್ತಿಕಾಮನೆ, ಅಧಿಕಾರ ಪ್ರತಿಷ್ಠೆಗಳ ಲಾಲಸೆ–ಇವೆಲ್ಲ ಆಡಂಬರ ಜೀವನದ ಸಂಗಾತಿಗಳು; ಮತ್ತು ಇವುಗಳನ್ನು ಅರಸುತ್ತ ಸುಖಪಡಲು ಚಟುವಟಿಕೆ ನಡೆಸಿದರೆ, ಕ್ರಿಯಾತ್ಮಕ ಜೀವನಕ್ಕೂ ಮನುಷ್ಯನ ಪವಿತ್ರಧ್ಯೇಯಸಿದ್ಧಿಗೂ ದೊಡ್ಡ ಎಡರು ಅಡ್ಡ ಬರುವುದೆಂದು ಸ್ಕಾಟ್ ನಂಬುತ್ತಾರೆ. ಆದದ್ದರಿಂದಲೇ ಅವರು ಸ್ಪರ್ಧೆ ತುಂಬಿದ ಹಾಗೂ ವಿತ್ತಾರ್ಜನನಿಷ್ಠವಾದ ಸಮಾಜದಲ್ಲಿ ಸ್ವಲ್ಪ ಜನಾಧಿಪತ್ಯವು ಈ ಹಸಿವು ಹಾರೈಕೆಗಳನ್ನು ಗಾಳವಾಗಿ ಬಳಸಿ ಬಹುಜನಕ್ಕೆ ಉಪದ್ರವ ತರುತ್ತಾರೆ. ಈ ಕಾರಣದಿಂದಲೇ ಪರಿಗ್ರಹ ಬೇರೆಯಲ್ಲ, ಸೊತ್ತಿನಿಂದ ಬರುವ ಅಪಾಯ ಬೇರೆಯಲ್ಲ ಎಂದು ಸ್ಕಾಟ್ ಪರಿಗ್ರಹವನ್ನೂ ಪರಿಗ್ರಹಿಸಿದ ಸೊತ್ತು ತರುವ ಕೇಡನ್ನೂ ಸಮೀಕರಿಸುತ್ತಾರೆ. ತಮ್ಮ ಮೂವತ್ತನೆಯ ವಯಸ್ಸನ್ನು ದಾಟಿದ ತರುಣದಲ್ಲಿ ಸ್ಕಾಟ್ ಅವರು ಸಂಪತ್ತಿನ ನಿಜವಾದ ವಿಪತ್ತನ್ನು ಎದುರಿಸಬೇಕಾಯಿತು. ಒಬ್ಬಾನೊಬ್ಬ ವೃದ್ಧ ಮಹಿಳೆ, ಉಪಕಾರಶೀಲೆಯಾದವಳು, ಸ್ಕಾಟನ ಪ್ರತಿಭಾ ಸಂಪತ್ತನ್ನು ಕಂಡವಳೆ, ತನ್ನ ಉಯಿಲಿನಲ್ಲಿ ಅವರಿಗೆಂದು ದೊಡ್ಡ ಹಣದ ಮೊತ್ತವನ್ನು ಬಿಟ್ಟಳಂತೆ. ಅದನ್ನು ಕೇಳಿದ ಸ್ಕಾಟ್ ಧನ್ಯವಾದ ಹೇಳಿ, ನನಗೆ ಈ ನಾನಾಗಿ ಗಳಿಸದ ಸಿರಿಬೇಡ ಎಂದು ಹೇಳಿದರಂತೆ. ಆಮೇಲೆ, ಮೊದಲನೆಯ ವಿಶ್ವಸಂಗ್ರಾಮ ನಡೆಯುತ್ತಿದ್ದಾಗ, ಸ್ಕಾಟ್ 800 ಡಾಲರುಗಳ ಬೆಲೆಯ ಜರ್ಮನ್ ಮ್ಯುನಿಸಿಪಲ್ ಬಾಂಡುಗಳನ್ನು ಕೊಂಡರಂತೆ. ಯುದ್ಧಾನಂತರ ಈ ಬಾಂಡುಗಳ ಮೌಲ್ಯ 60,000 ಡಾಲರುಗಳಾದದ್ದನ್ನು ಕೇಳಿದೊಡನೆ ಸ್ಕಾಟ್ ಹಿಗ್ಗಲಿಲ್ಲ. ಪೇಟೆಯಲ್ಲಿ ಆ ಬಾಂಡುಗಳನ್ನು ಮಾರಿ ಲಾಭಪಡೆಯಲಿಲ್ಲ. ಮಾರಿದ್ದರೆ ಮಿತಿಮೀರಿದ ಲಾಭ ಸಂಪಾದನೆಮಾಡಿ "ನೆಮ್ಮದಿ" ಪಡಬಹು

ದಾಗಿತ್ತು. ಆದರೆ ಅದು ಅನ್ಯಾಯದ ಸಂಪಾದನೆಯಾಗುತ್ತಿತ್ತು. ಜರ್ಮನರ ಕಾಯಕವ ದುರ್ಲಾಭಪಡೆವಂತೆ ಆಗುತ್ತಿತ್ತೆಂದು ಸ್ಕಾಟ್ ಬಾಂಡುಗಳನ್ನು ಒಲೆಗೆಸೆದು ಸುಟ್ಟು ಬೂದಿಮಾಡಿದರು. "ಮರಳಿ ನಾನು ಸಂಪತ್ತು ಒಡ್ಡಿದ ಸೆಳೆತದಿಂದ ತಪ್ಪಿಸಿಕೊಂಡೆನು'' ಎಂದು ಸ್ಕಾಟ್ ಈ ಘಟನೆಯನ್ನು ಸ್ಮರಿಸಿ ಅಡಕವಾಗಿ ಟೀಕಿಸುತ್ತಾರೆ. ವೆರ್ಮಾಂಟ್ ಹೊಲಮನೆಯಲ್ಲಿ ದಂಪತಿಗಳು ಬಾಳುತ್ತಿದ್ದಾಗ 4700 ಡಾಲರುಗಳ ಮೌಲ್ಯದ ಎರಡು ಅರಣ್ಯ ಪ್ರದೇಶಗಳನ್ನು ಕೊಂಡರು. ಆಗ್ಗೆ ಕೋರಿಯಾ ಯುದ್ಧ ನಡೆಯುತ್ತಿತ್ತು. ಅರಣ್ಯಸಂಪತ್ತು ಸ್ಟಾಕುಗಳ ರೂಪದಲ್ಲಿತ್ತು. ಸ್ಟಾಕ್ ಮಾರುಕಟ್ಟೆಯಲ್ಲಿ ಜರುಗಿದ ಸ್ಪೆಕ್ಯುಲೇಷನ್ (ಊಹಾಪೋಹಗಳ) ಫಲವಾಗಿ, ಸ್ಕಾಟ್ ಅವರ ಕಾಡುಸೊತ್ತಿನ ಬೆಲೆ 25,000 ಡಾಲರುಗಳಿಗೆ ಏರಿತು. ದಂಪತಿಗಳು ಸೊತ್ತನ್ನು ಮಾರಿ ಲಾಭಪಡೆಯಲು ಬಯಸಲಿಲ್ಲ. ಸ್ಟಾಕುಗಳನ್ನು ನೆರೆಯ ವಿನ್‌ಹಾಲ್ ಪಟ್ಟಣದ ಪೌರಸಭೆಗೆ ದಾನಮಾಡಿ ತಾವು ಹಿಡಿದ ಸರಳಜೀವನ ತತ್ತ್ವವನ್ನು ಸಂರಕ್ಷಿಸಿಕೊಂಡರು. ಮೂರನೆಯ ಸಾರಿಯೂ ಸ್ಕಾಟ್ ಉಬ್ಬರಿಸಿದ ಬೆಲೆಯ ಹಾಗೂ ಯುದ್ಧಕಾಲೀನ ಲಾಭಾರ್ಜನೆಯ ಪ್ರಲೋಭನದಿಂದ ಪಾರಾದರು.

ಸೊತ್ತಿನ ಉರುಲಿನಿಂದ ಪಾರಾದ ಮೇಲೆ ನಿಯರಿಂಗ್ ದಂಪತಿಗಳು ಪಡೆದ ಸೊತ್ತನ್ನೆಲ್ಲ ತಮ್ಮ ಸಂಪತ್ತಾಗಿ ಬೆಳಸಿದ ಸಂದರ್ಭವೂ ಇಲ್ಲಿ ಉಲ್ಲೇಖನೀಯ. ವೆರ್ಮಾಂಟ್ ಹೊಲ ಮನೆಯ ಸುತ್ತ 65 ಎಕರೆಗಳಷ್ಟು ಪ್ರದೇಶ ಅವರ ಸ್ವಾಧೀನದಲ್ಲಿತ್ತು. ಪ್ರಾರಂಭ ಸೇವೆ ಸಲ್ಲಿಸಿ ಅವರು ಆ ಕ್ಷೇತ್ರವನ್ನು ತುಂಬ ಅಭಿವೃದ್ಧಿಗೆ ತಂದಿದ್ದರು. ಈ ಕೃಷಿ ಕ್ಷೇತ್ರ ಸೇವೆಯಲ್ಲಿ ದೀಕ್ಷಾಬದ್ಧ ಶ್ರದ್ಧೆಯೂ ಪ್ರೀತಿಪೂರ್ವಕ ಕಾತರವೂ ಸೇರಿದ್ದುವು ಇಪ್ಪತ್ತು ವರ್ಷದ ಒಳ್ಳೆಯ ಬದುಕನ್ನು ಬಾಳಿ ಹೊಲದ ಸಿರಿಯನ್ನು ಹೆಚ್ಚಿಸಿದ್ದರು. ಈ ಗೆಯ್ಮೆ ಸದುದ್ದೇಶಪೂರ್ಣವಾಗಿ, ಯೋಜನಾ ಬದ್ಧವಾಗಿ, ವ್ರತ ದೀಕ್ಷೆಯಾಗಿ ಸಾಗಿಬಂದಿತ್ತು. ದಂಪತಿಗಳ ಏಕಮನಸ್ಸಿನ ಕಾಯಕದ ಪರಿಣಾಮವಾಗಿ ಫಲವಂತವೂ, ತೃಪ್ತಿಕರವೂ ಆಗಿ ಹೊಲವೂ, ತೋಪುಗಳೂ ಹುಲುಸಾಗಿ ಬೆಳೆದಿದ್ದವು. ಅರಣ್ಯ ಪ್ರದೇಶವಲ್ಲಿ ಉಪಯೋಗಕ್ಕೆ ಬಾರದೆ ಬೆಳೆದಿದ್ದ ಕಳಪೆ ಬೆಳಸನ್ನು ಕಡಿದು, ಬೇಸಾಯಕ್ಕೆ ನೆಲವನ್ನು ವಿಂಗಡಿಸಿ, ಬೆಳೆಯಿಟ್ಟು, ತಮಗೂ ಆಶ್ರಿತರಿಗೂ ಬೆಟ್ಟಗಾಡಿನ ನಡುವೆ ವಾಸಯೋಗ್ಯವಾದ ಹುಲುಸು ಬೆಳೆಯ ಪ್ರದೇಶವಾಗಿ ಭೂಮಿಯನ್ನು ಅಭಿವೃದ್ಧಿಗೆ ತಂದಿದ್ದರು. ಹೆಚ್ಚಾಗಿ ತಮ್ಮ ಕೈಗಳನ್ನು ಕೆಸರು ಮಾಡಿಕೊಂಡು ಕಾಯಿಸೊಪ್ಪುಗಳ ತೋಟವನ್ನೂ ಧಾನ್ಯಗಳನ್ನು ಬೆಳೆಯುವ ಹೊಲಗಳನ್ನೂ ಸಕ್ಕರೆ ತಯಾರಿಸಲು ಮ್ಯಾಪ್ಲ್ ಮರಗಳ ತೋಪನ್ನೂ ಬೆಳಸಿದ್ದರು. ಯೋಜನೆಯಂತೆ ಒಂಬತ್ತು ಕಲ್ಲಿನ ಕಟ್ಟಡಗಳನ್ನು ಕಟ್ಟಿ ಬೆಳೆದ ದವಸವನ್ನು ಕಾಪಾಡಿ ಇರಿಸಿಕೊಳ್ಳುವ ವ್ಯವಸ್ಥೆ ಮಾಡಿಕೊಂಡರು. ಕಾಯಿಗಳು, ಹಣ್ಣುಗಳು, ಕಂದಮೂಲಗಳೂ, ಧಾನ್ಯಗಳು, ಕಾಯಿತರಕಾರಿ ಸೊಪ್ಪುಗಳು—ವರ್ಷವೆಲ್ಲ ತಮ್ಮ ಬಳಕೆಗೆ

ಬರುವಂತೆ ಡಬ್ಬ ಪೊಟ್ಟಣಗಳಲ್ಲಿ ಶೀತಕಗಳಲ್ಲಿ ಇರಿಸಿ, ಆಹಾರ ಸಮೃದ್ಧಿಯನ್ನು ಕಂಡು ನಿಶ್ಚಿಂತರಾದರು. ವರ್ಷವೆಲ್ಲ ಬಾಡದ ಹಳಸದ ಹೊಸ ಉಣಿಸುಣ್ಣುವ ಭರವಸೆಯನ್ನು ಕಂಡರು. ಹೇಮಂತ ಶಿಶಿರಗಳಲ್ಲಿ ಒಕ್ಕಲಿರಲು ಬಿಸಿಲಕಾವನ್ನು ಉಳಿಸಿ ನೆಮ್ಮದಿಕೊಡುವ ಸಸ್ಯ ಶ್ಯಾಮಲ ಪರ್ಣಶಾಲೆಯನ್ನು ಕಟ್ಟಿದರು. ಚಳಿಗಾಲದಲ್ಲಿ ಸೂರ್ಯತಾಪವನ್ನು ಸಂಗ್ರಹಿಸಿ ಇರಿಸಿಕೊಳ್ಳುವ ವೈಜ್ಞಾನಿಕ ತಂತ್ರವನ್ನು ಬಳಸಿದರು. ಅನೇಕ ಹೇಮಂತ ಶಿಶಿರಗಳನ್ನು ಈ ಪರ್ಣಶಾಲೆಯಲ್ಲಿ ಕಳೆದರು. ಹಗಲು ಹಿಮಶೀತಲವಾತಕ್ಕೆ ತಡೆಯೂ ಸಂಗ್ರಹವಾಗಿದ್ದ ಸೂರ್ಯಶಾಖದಿಂದ ಇರುಳು ಕೊರೆಚಳಿಗೆ ತಡೆಯೂ ಅವರಿಗೆ ಒದಗಿ ಬರುತ್ತಿತ್ತು. ಗೃಹಪ್ರಮಾಣದಲ್ಲಿ ವೈಜ್ಞಾನಿಕ ಸೌಕರ್ಯ ಪ್ರಯೋಗ ಕೌಶಲ ಹೀಗೆ ದಂಪತಿಗಳಿಗೆ ಸಿದ್ಧಿಸಿತ್ತು. ಇದರಿಂದ ಯಾವ ಋತುವಿನ ಅತಿರೇಕ ವೈಪರೀತ್ಯ ಗಳಿಗಾದರೂ ಅವರು ಅಂಜಬೇಕಾಗಲಿಲ್ಲ.

## ಆರೋಗ್ಯ—ಆಹಾರ

ನಿಯರಿಂಗ್ ದಂಪತಿಗಳು ಒಳ್ಳೆಯ ಬಾಳಿಗೆ ಆರೋಗ್ಯವೇ ಬಹು ಮುಖ್ಯವಾದ ಅಂಶವೆಂದು ಅದಕ್ಕೆ ಬೆಲೆ ಕೊಟ್ಟಿದ್ದಾರೆ. ಆದದ್ದರಿಂದ ತಾವು ಸೇವಿಸುವ ಆಹಾರದ ಗುಣಕ್ಕೂ, ವೈವಿಧ್ಯಕ್ಕೂ, ಸಮತೂಕಕ್ಕೂ, ಅವರು ವಿಶೇಷ ಗಮನ ಕೊಡುತ್ತಾರೆ. ಒಳ್ಳೆಯ ಆಹಾರವನ್ನು ಹೊಲದಲ್ಲಿ ಬೆಳೆಯಬೇಕು; ಉಣುವುದಕ್ಕೆ ಮೊದಲು ಆಹಾರವನ್ನು ಪಾಕಾತಿರೇಕಕ್ಕೆ ಒಡ್ಡಬಾರದು. ಕೂಡಿದ ಮಟ್ಟಿಗೂ ತೋಟದಿಂದ ಬೆಳೆದು ಬಂದಂತೆ ಹೊಸತರಲ್ಲೇ ತಿಂದರೆ ನಾಲಿಗೆಗೆ ಉಣಿಸಿನ ಸವಿಯೂ ಹೆಚ್ಚು, ಒಡಲಿಗೆ ಪುಷ್ಟಿಯೂ ಹೆಚ್ಚು. ಕೃತಕ ವಿಧಾನಗಳಿಂದ ಆಹಾರವನ್ನು ಸಂಯೋಜಿಸಿ ಭವಿಷ್ಯೋಪಯೋಗಕ್ಕೆ ಇರಿಸಿಕೊಳ್ಳುವುದರಿಂದ ಆಹಾರದ ಗುಣರಕ್ಷಣೆಯೇನೂ ಆಗದು, ಗುಣ ನಷ್ಟಕ್ಕೇ ಆಸ್ಪದವಾಗುತ್ತದೆ. ಸಂಯೋಜಿತ ಆಹಾರವು ಸಂಗ್ರಹ ದೃಷ್ಟಿಯಿಂದಲೂ ವಿತರಣ ದೃಷ್ಟಿಯಿಂದಲೂ ಲಾಭಕರವೇನೋ ಹೌದು. ಆದರೆ ಈ ಲಾಭದ ಪಕ್ಕದಲ್ಲಿ ಶರೀರಕ್ಕೆ ತಕ್ಕಷ್ಟು ಪುಷ್ಟಿಕೊಡದಂಥ ಆಹಾರವನ್ನು ಭುಜಿಸುವ ನಷ್ಟವೇ ಹೆಚ್ಚಾಗಿರುತ್ತದೆ. ಆಹಾರದ ಗುಣ ರಕ್ಷಣೆಯ ನೆಪಮಾಡಿಕೊಂಡು, ಕೆಲವು ರಾಸಾಯನಿಕ ಮತ್ತು ಇತರ ಹೆಚ್ಚುವರಿ ದ್ರವ್ಯಗಳನ್ನು ಆಹಾರ ಪದಾರ್ಥಗಳೊಡನೆ ಬೆರಸುವುದುಂಟು. ಇದರಿಂದ ಆಹಾರದ ಶಕ್ತಿವರ್ಧಕ ಗುಣ–ವಿವಿಧ ಜೀವಸತ್ತ್ವಗಳ ಅಪಹರಣದಿಂದ–ಕುಗ್ಗುತ್ತದೆ. ನಿಯರಿಂಗ್ ದಂಪತಿಗಳು ಅನುಭವದಿಂದ ಹೇಳುವ ಮಾತು ಇದು: ಗೋಧಿ ಕಾಳುಗಳಿಗಂಟಿಕೊಂಡಿರುವ ಹೊಟ್ಟನ್ನು ಪೂರ್ತಿ ಬಿಡಿಸಿ ಧಾನ್ಯವು ಹೊಳೆಯುವಂತೆ 'ಪಾಲಿಷ್' ಮಾಡಿಸಿ ಹಿಟ್ಟನ್ನು ಬಳಸುವುದು, ಅಕ್ಕಿಯನ್ನು ತವುಡು ಕಳೆದು, ಮಿರುಗುವಂತೆ ಪಾಲಿಷ್ ಮಾಡಿಸಿ ಬಳಸುವುದು, ಸ್ವಾಭಾವಿಕವಾದ ಸಕ್ಕರೆಯ ಕೆಂಬೂದು ಬಣ್ಣವನ್ನು ಕಳೆದು ಬೆಳ್ಳಗೆ ಮಿನುಗುವಂತೆ ಮಾಡಿ ಬಳ

ಸುವುದು ಇವೆಲ್ಲ ಜನಾರೋಗ್ಯವನ್ನು ಹಾಳುಮಾಡುವ ಕೆಟ್ಟ ಪದ್ಧತಿಗಳೆಂದು ನಿಯರಿಂಗ್ ದಂಪತಿಗಳು ಖಂಡಿಸುತ್ತಾರೆ. ಹಾಗೆಯೇ ರಾಸಾಯನಿಕವಿಧಾನಗಳಿಂದ ಉಣಿಸುಗಳಿಗೆ ಬಣ್ಣ ಕಟ್ಟುವುದು, ಕಾಪಾಡುವ ಮತ್ತು ರುಚಿಕಟ್ಟುವ ರಕ್ಷಕಗಳನ್ನು ಬಳಸುವುದು ಕೂಡ ಅಪಾಯಕರವೇ. ಹಣ್ಣುಗಳಮೇಲೆ ರಾಸಾಯನಿಕ ದ್ರವಗಳನ್ನೋ ಚೂರ್ಣವನ್ನೋ ಸಿಂಪಡಿಸುವುದು ಮನುಷ್ಯ ಶರೀರಕ್ಕೆ ಉಪದ್ರವಕಾರಿಯಾದದ್ದು. ಆದದ್ದರಿಂದ ನಿಯರಿಂಗ್ ದಂಪತಿಗಳು ಆಹಾರ ವಸ್ತುಗಳಮೇಲೆ ಧೂಳುಗಳನ್ನಾಗಲಿ ದ್ರವಗಳನ್ನಾಗಲಿ ಚಿಮುಕಿಸರು. ದೋಷಯುಕ್ತವೋ ವಿಷಯುಕ್ತವೋ ಆದ ಉಣಿಸು ಒಡಲನ್ನು ಕೆಡಿಸುವುದಲ್ಲದೆ, ಮನಸ್ಸಿನ ಆರೋಗ್ಯವನ್ನೂ ಭಾವದಾರ್ಢ್ಯವನ್ನೂ ಹಾಳುಮಾಡುತ್ತದೆಯೆಂದೂ, ಹೊಲಕ್ಕೆ ರಾಸಾಯನಿಕಗೊಬ್ಬರಕ್ಕಿಂತ ಹಸಿರುಗೊಬ್ಬರ ಹಾಕಿ ಫಸಲು ತೆಗೆಯುವುದು ಉತ್ತಮವೆಂದೂ ಅವರು ಒತ್ತೊತ್ತಿ ಹೇಳುತ್ತಾರೆ. ಜನಾರೋಗ್ಯಕ್ಕೆ ಕಾರಣವೂ ಧಾರಕವೂ ಆದದ್ದು ಸಹಜ ನೂತನಾಹಾರ. ಬೆಳೆದ ರೂಪದಲ್ಲೇ ಕೂಡಿದ ಮಟ್ಟಿಗೂ ಭುಜಿಸುವುದು ಸರ್ವಥಾ ಕ್ಷೇಮಕರ. ದಂಪತಿಗಳು ಜೊತೆಯಾಗಿ ಬರೆದ ಪುಸ್ತಕವೊಂದರಲ್ಲಿ ಹೀಗೆ ಹೇಳುತ್ತಾರೆ:

> "ನಾವು ಯಾವಾಗಲೂ ಆರೋಗ್ಯವಾಗಿಯೇ ಇರುತ್ತಬಂದಿದ್ದೇವೆ. ಎಲ್ಲೋ ಅಪರೂಪವಾಗಿ, – ಶೀತಗಾಲ ಬಂದಾಗಮಾತ್ರ,–ಒಡಲಲ್ಲಿ ನಿತ್ರಾಣ ತೋರಿ ಕಸುವುಡುಗುತ್ತಿರುವ ಅನುಭವವಾಗುತ್ತಿತ್ತು. ಹೀಗೆ ನೆಮ್ಮದಿ ತಪ್ಪಿದಾಗ, ನಾವು ನೆರೆಹೊರೆಯ ಬೆಕ್ಕುಗಳೂ ನಾಯಿಗಳೂ ಮಾಡುವಂತೆ, ಚೇತರಿಸಿಕೊಳ್ಳುವವರೆಗೆ ಉಪವಾಸವಿರುತ್ತಿದ್ದೆವು." ‡

ವಾರವಾರವೂ ಸ್ಕಾಟ್ ಭಾನುವಾರದಂದು ಉಪವಾಸ ವ್ರತದಲ್ಲಿರುತ್ತಾರೆ. ತಮ್ಮ ಒಡಲನ್ನು ಚೊಕ್ಕಟ ಮಾಡಿಕೊಳ್ಳುವುದು ಉಪವಾಸೋದ್ದೇಶ. ವೈದ್ಯರು ಕೊಡುವ ಔಷಧದ ಚೀಟಿಯಾಗಲಿ ಮದ್ದಾಗಲಿ ತಮಗೆ ಬೇಕೆನ್ನಿಸದೆ ಸ್ವಾಭಾವಿಕವಾಗಿ ಬೆಳೆದು ಬಾಳಿಕೊಂಡು ಬಂದದ್ದಾಗಿ ಅವರು ಹೇಳುತ್ತಾರೆ. ಅನ್ನ ಸಂಪಾದನೆಗೋಸ್ಕರ ಕೈಯಾರ ಪರಿಶ್ರಮ, ಸ್ವಾಭಾವಿಕ ನೂತನಾಹಾರ ಭೋಜನ, ಒಂದು ಗೊತ್ತಾದ ಪದ್ಧತಿಯನ್ನು ಅನುಸರಿಸಿ ನಡಸುವಕ್ಲುಪ್ತ ಜೀವನ–ಇವನ್ನು ಇಪ್ಪತ್ತು ವರ್ಷಗಳವರೆಗೆ ತಪ್ಪದೆ ನಿರ್ವಾಹ ಮಾಡಿದ್ದರಿಂದ ತಮಗೆ ಆರೋಗ್ಯದ ಗುಟ್ಟು

---

‡ ಒಳ್ಳೆಯ ಬದುಕನ್ನು ಬಾಳುವುದು: ಹೆಲನ್ ಮತ್ತು ಸ್ಕಾಟ್ ನಿಯರಿಂಗ್, ಸೋಷಲ್ ಸೈನ್ಸ್ ಇನ್ಸ್ಟಿಟ್ಯೂಟ್, ಹಾರ್ಬರ್ ಸೈಡ್ (ಅಮೆರಿಕ), ಪು. 186.

ಗೊತ್ತಾಯಿತು ಎನ್ನುತ್ತಾರೆ ನಿಯರಿಂಗ್ ದಂಪತಿಗಳು. ವೆರ್ಮಾಂಟ್ ಶೀತಕಾಲವನ್ನು ಸಹಿಸಿಕೊಳ್ಳಲು ಕೇವಲ ಸಸ್ಯಾಹಾರವೇ ತಮಗೆ ಸಾಕಾಯಿತಂತೆ. ಸಸ್ಯಾಹಾರ ಪದ್ಧತಿಯನ್ನು ಅನುಸರಿಸಿಕೊಂಡು ಬಾಳುವ ಒಬ್ಬನು ಆರೋಗ್ಯವಾಗಿಯೂ, ಚಟುವಟಿಕೆಯಿಂದಲೂ ಉದ್ದೇಶ ಸಾಧಕವಾಗಿಯೂ ಬದುಕುವುದು ಸಾಧ್ಯ ಎಂಬುದನ್ನು ಸ್ವಾನುಭವಪ್ರಮಾಣದಿಂದ ಮತ್ತು ಕ್ರಮುವನ್ನು ತಪ್ಪದ ಸ್ವಜೀವನ ನಿದರ್ಶನದಿಂದ ನಿಯರಿಂಗ್ ದಂಪತಿಗಳು ಪ್ರತಿಪಾದಿಸಿದ್ದಾರೆ.

## ಅಸಾಮಾನ್ಯ ಪ್ರಯೋಗ ಪರೀಕ್ಷೆ

ಗ್ರಾಹಕರಾಗಿ ದಂಪತಿಗಳು ನಡಸಿದ ಮಿತವ್ಯಯನಿಷ್ಠ ಜೀವನತತ್ತ್ವಕ್ಕೆ ಅವರ ತೋಟವೇ ಮೂಲಾಧಾರವಾಗಿತ್ತು. ತಮ್ಮ ಆಹಾರವನ್ನು ತಾವೇ ಬೆಳೆಯುವುದರ ಜೊತೆಗೆ ಅವರು ಮ್ಯಾಪ್ಲ ಮರದ ತೋಪನ್ನು ಬೆಳಸಿ, ಆ ಮರದ ರಸದಿಂದ ಸಕ್ಕರೆಯನ್ನು ತಯಾರಿಸುವ ವಿಧಾನವನ್ನು ಒಂದು ಕಲೆಯಾಗಿ ಅಭಿವೃದ್ಧಿಪಡಿಸಿದರು. ಅದರಿಂದ ಮನೆವಾರ್ತೆಗೆ ಸಾಕಾಗುವಷ್ಟು ಸಕ್ಕರೆ ದೊರೆಯುತ್ತಿತ್ತು ನಿಜ. ಆದರೆ ಅದನ್ನು ಹೆಚ್ಚುಗಟ್ಟಲೆ ಕಸಬಾಗಿ ಅವಧಾನದಿಂದ ನಡಸಿದಲ್ಲಿ, ತಯಾರಿಸಿದ ಹೆಚ್ಚು ಸಕ್ಕರೆಯನ್ನು ಪೇಟೆಗೆ ಕಳಿಸಿ ಕುಟುಂಬಕ್ಕೆ ಹೆಚ್ಚಿಗೆ ವರಮಾನವನ್ನು ಪಡೆಯುವುದು ಸಾಧ್ಯವೆಂಬುದನ್ನು ಅವರು ತೋರಿಸಿದರು. ವೆರ್ಮಾಂಟಿನ ಹೊಲಮನೆಯಲ್ಲಿ ಅವರು ಕೈಕೊಂಡ ಪ್ರಯೋಗ ಪರೀಕ್ಷೆಗಳು ಎಂಥವು, ಪಡೆದ ಅನುಭವಗಳಾವುವು ಎಂಬ ಸಂಗತಿಯನ್ನು ಕುರಿತು ದಂಪತಿಗಳು ಎರಡು ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ. ಅವುಗಳಲ್ಲಿ ಒಂದು ಸಕ್ಕರೆ ತಯಾರಿಕೆಯನ್ನು ಕುರಿತದ್ದು-**“ಮ್ಯಾಪ್ಲ ಸಕ್ಕರೆ ಪುಸ್ತಕ”** (ಜಾನ್ ಡೇ ಪ್ರಕಾಶನ, 1950). ಈ ವಿಷಯದ ಬಗ್ಗೆ ಇದೇ ಪ್ರಮಾಣಗ್ರಂಥ ಎನ್ನಿಸಿ ಹೆಸರುಪಡೆದಿದೆ. ಸಕ್ಕರೆ ಷರಬತ್ತಿಗೋಸ್ಕರ ಮ್ಯಾಪ್ಲ ಮರದಿಂದ ರಸವನ್ನಿಳಿಸುವುದರಿಂದ ಹಿಡಿದು, ಸಕ್ಕರೆ ತಯಾರಿಕೆಯ ಹಾಗೂ ಕಲ್ಲುಸಕ್ಕರೆ ತಯಾರಿಕೆಯವರೆಗೆ ಎಲ್ಲ ಘಟ್ಟಗಳನ್ನೂ ಆ ಪುಸ್ತಕದಲ್ಲಿ ವಿವರವಾಗಿ ಕೊಟ್ಟಿದೆ. ಸಕ್ಕರೆ ತಯಾರಿಕೆಯ ಪೂರ್ವದ ಇತಿಹಾಸವನ್ನೂ, ಆಧುನಿಕ ನಿರ್ಮಾಣ ಪದ್ಧತಿಗಳನ್ನೂ ಕೊಟ್ಟು, ವಾಚಕರಿಗೆ ತುಂಬ ವಿವರಜ್ಞಾನದ ಪ್ರಯೋಜನ ಕೊಡುವ ಪುಸ್ತಕ ಅದು. ಎರಡನೆಯ ಪುಸ್ತಕ **“ಒಳ್ಳೆಯ ಬಾಳನ್ನು ಬದುಕುವುದು.”** ಈ ಪುಸ್ತಕ ದಂಪತಿಗಳ ಲೌಕಿಕ ವಾನಪ್ರಸ್ಥ-ಜೀವನದ ಪ್ರಾರಂಭಕರ್ಮವು ಫಲಿಸಿ, ಸಂಕಲ್ಪಾನುಸಾರವಾಗಿ ಅವರ ಬದುಕು ಒಳ್ಳೆಯದೆನ್ನಿಸಿದ್ದರ ಕಥೆ. ಕಲ್ಲುಕಲ್ಲಾದ ಹೊಲವನ್ನೂ, ಮಳೆನೀರಿಗೆ ಕೊಚ್ಚಿಹೋಗಿ ಸವೆದ ನೆಲವನ್ನೂ, ಜೌಗಾದ ತಗ್ಗು ಪ್ರದೇಶವನ್ನೂ ವ್ಯವಸಾಯೋದ್ದೇಶಕ್ಕೆ ಅನುಸಾರವಾಗಿ ಆಬಾದು ಮಾಡಿಕೊಂಡು ಕ್ಷೇತ್ರ ಸೇವೆಮಾಡಿ, ತೋಟವನ್ನು ಬೆಳದು, ಹೊಲಗಳಲ್ಲಿ ಪಯಿರಿಟ್ಟು, ಕಲ್ಲುಕಟ್ಟಡಗಳನ್ನು ಕಟ್ಟಿ, ನೆರೆಹೊರೆಯವರಿಗೆ ಸಹಕಾರ ಕೊಟ್ಟು, ಅವರಿಂದ ಸಹಕಾರ ಗಳಿಸಿ ಸಸ್ಯಾಹಾರಮಾತ್ರದಿಂದ ತೃಪ್ತರಾಗಿ

ಅಂಥ ಬದುಕಿನಲ್ಲಿ ನೆಮ್ಮದಿ ಕಂಡರು. ತಾತನ ಉದ್ಯಮಗಳಲ್ಲಿ ಕಷ್ಟತಾಡನೆಮಾಡಿ ಮಾಡಿ ನೋಡಿ ಮೊಮ್ಮಗ ಅನುಭವ ಪಡೆದಿದ್ದವನು. ಮುಂದೆ ಈ ಪೂರ್ವಾನುಭವ ಆತನಿಗೆ ಇನ್ನೂ ಹೆಚ್ಚಿನ, ದೊಡ್ಡ ದೊಡ್ಡ ಕಷ್ಟಗಳನ್ನೆದುರಿಸುವ ಶಿಸ್ತನ್ನೂ ಕೆಚ್ಚನ್ನೂ ಕೊಟ್ಟಿತು. ಯಂತ್ರ ಕಾರ್ಮಿಕನಾಗಿ, ರಿಪೇರಿಯಾಳಾಗಿ, (ಬಡಗಿ)ದಾರು ಶಿಲ್ಪಿಯಾಗಿ ವಾಸ್ತು ಶಿಲ್ಪಿಯಾಗಿ, ಬೇಸಾಯಗಾರನಾಗಿ, ತೋಟಗಾರನಾಗಿ, ಕಡೆಗೆ ಸರ್ವ ಕಾರ್ಯ ಕ್ಷೇತ್ರಗಳಲ್ಲೂ ಕುಶಲತೆಯಿಂದ ಆಗಬೇಕಾದ ಮೇಲ್ಪಾಡುಗಳನ್ನು ಊಹಿಸಿ ಯೋಜಿಸಿ ಯಶಸ್ವಿಯಾಗಿ ನೆರವೇರಿಸುವವರಾದರು. ದಶವಾರ್ಷಿಕ ಯೋಜನೆಯೊಂದನ್ನು ಗೊತ್ತು ಮಾಡಿಕೊಂಡು, ಹೊಲ, ತೋಟ, ತೋಪುಗಳಲ್ಲಿ ಗೆಯ್ಮೆಯಿಂದ ವರ್ಷವರ್ಷದ ಜೀವನ ವಿಧಾನವನ್ನು ಅದಕ್ಕೆ ಹೊಂದಿಸಿ, ಆತ್ಮಾವಲಂಬನದಲ್ಲಿ ಸಿದ್ಧಿಯನ್ನು ಕಂಡ ಕಥೆ ಈ ಪುಸ್ತಕದಲ್ಲಿದೆ. ಪ್ರತಿನಿತ್ಯದ ಯೋಜನೆ; ಋತು ಪರಿವರ್ತನೆಗೆ ತಕ್ಕಂತೆ ಜಾರಿಗೆ ತರುವ ಆಯಾಕಾಲದ ಯೋಜನೆಯಲ್ಲಿ ಮಾರ್ಪಾಟು, ತಿದ್ದುಪಾಟು; ವಾರ್ಷಿಕ ಯೋಜನೆಯ ಸಂಪೂರ್ತಿ—ಇವೆಲ್ಲ ಸಮಗ್ರ ದಶವಾರ್ಷಿಕ ಯೋಜನೆಯಲ್ಲಿ ನಿಯತಕಾಲಿಕ ವ್ಯಷ್ಟಿ(ಬಿಡಿ) ಯೋಜನೆಗಳಾಗಿ, ಅವರ ಸಮಷ್ಟಿ (ಒಟ್ಟು) ಯೋಜನೆಗೆ ಹೊಂದಿಕೊಂಡರೆತಪ್ಪದೆ ಯಶಸ್ಸನ್ನು ತಂದುವು. ಅನಾಯಾಸವಾಗಿ, ಅಕ್ಲಿಷ್ಟ ಕರ್ಮವೆಂಬಂತೆ, ದಕ್ಷತೆಯಿಂದ ಮಾಡಿದ ಕರ್ಮಕ್ಕೆ ತಕ್ಕ–ಉದ್ದೇಶಾನುಸಾರಿಯಾದ–ಸಾರ್ಥಕ ಫಲವನ್ನು ಪಡೆದರು. ಅರು ತಿಂಗಳು ಉಣಿಸಿಗಾಗಿ ಊಳಿಗ, ಆರು ತಿಂಗಳು ವಿಶ್ರಾಂತಿ, ಸಂಶೋಧನೆ, ಪ್ರವಾಸ ಮತ್ತು ಲೇಖನ, ಭಾಷಣ, ಅಧ್ಯಾಪನಗಳು ಅವರ ಹೊತ್ತನ್ನು ತುಂಬಿ ವರುಷಗಳನ್ನು ಉರುಳಿಸುತ್ತ ಬಂದುವು. ಎಲ್ಲಕ್ಕಿಂತ ಮೇಲಾಗಿ, ಉಪಯುಕ್ತವಾದ ಆರ್ಥಿಕ ವ್ಯವಸ್ಥೆಗೆ ಬದ್ಧರಾಗಿ, ಬೆಲೆ–ನಫೆಗಳ ಆರ್ಥಿಕ ವ್ಯವಸ್ಥೆಯ ನಿರ್ಬಂಧಗಳಿಂದ ಮುಕ್ತರಾಗಿ ಅವರು ಆತಂಕದೂರವಾದ ಒಳ್ಳೆಯ ಬದುಕನ್ನು ಸಾಧ್ಯಮಾಡಿಕೊಂಡಿದ್ದಾರೆ.

ನಿಯರಿಂಗ್ ದಂಪತಿಗಳು ಒಳ್ಳೆಯ ಬದುಕನ್ನು ನಡಸುವುದು ಹೇಗೆ ಎಂಬು ಹುಡುಕಾಟದಲ್ಲಿ ತೊಡಗಿದ್ದಕ್ಕೆ ಪ್ರೇರಣೆ ಬಂದದ್ದು "ದೇಹಾರೋಗ್ಯ, ಮನ ಸ್ಸ್ವಾಸ್ಥ್ಯ ಮತ್ತು ಸಾಮಾಜಿಕ ಮಧುರ ಬಾಂಧವ್ಯಗಳನ್ನು ಕಾಪಾಡಿ ಬೆಳಸುವ ದೊಡ್ಡ ಉದ್ದೇಶದಿಂದ." ಗೊತ್ತಾದ ಆರ್ಥಿಕ ಯೋಜನೆ, ಆರೋಗ್ಯ ದೃಷ್ಟಿ, ನೈತಿಕ ಸಾಮಾಜಿಕ ಉದ್ದೇಶಗಳು ಮನುಷ್ಯಜೀವನದಲ್ಲಿ ಸ್ಥಿರತೆ ದೃಢತೆಗಳನ್ನು ತರುತ್ತವೆ. ಇಂಥ ಬದುಕನ್ನು ಬಾಳುವುದೇ ಒಂದು ಸಂತೋಷ. ಒಳ್ಳೆಯ ಬದುಕನ್ನು ಹುಡುಕು ವವರಲ್ಲಿ ಈ ಭಾವನೆಗಳ ಪ್ರೇರಣೆಯಿರಬೇಕು. ವ್ಯಾಪಾರದಲ್ಲಿ ಲಾಭೈಕ ದೃಷ್ಟಿಯನ್ನೂ ದುಡಿಯದೆಯೇ ಗಳಿಸುವ ಮನಃ ಪ್ರವೃತ್ತಿಯನ್ನೂ ವಸ್ತೂತ್ಪಾದಕರಲ್ಲದವರಲ್ಲೂ ಇರುವ ಧನಲೋಭವನ್ನೂ ನಿಯರಿಂಗ್ ದಂಪತಿಗಳು ಖಂಡಿಸುತ್ತಾರೆ. ಉದಾಹರಣೆಗೆ, "ಲೇವಾದೇವಿ ಮಾಡುವ ಸಾಹುಕಾರರು ಯಾವ ಸರಕನ್ನು ಮಾಡುವ ಉದ್ಯಮ

ದಲ್ಲೂ ತೊಡಗದೆ ಸುಮ್ಮನೆ ದ್ರವ್ಯಾರ್ಜನೆ ಮಾಡಿ ಸ್ವಂತಕ್ಕೆ ಅನುಕೂಲ ಸೌಕರ್ಯ ಗಳನ್ನು ಅನುಭವಿಸುತ್ತಾರೆ. ಇಂಥ ಪೊಳ್ಳು ಬಾಳಿನಲ್ಲಿ ನಿಯರಿಂಗ್ ದಂಪತಿಗಳಿಗೆ ಆಕ್ಕರೆಯಿಲ್ಲ. ಆವರು ತಮ್ಮ ಕರ್ಮಕರಣಗಳನ್ನು ಬಳಸಿ ಜೀವಿಕೆ ನಡಸಲು ವ್ರತ ತೊಟ್ಟರು. ಜೀವನವುಸಮೃದ್ಧವಾಗುವುದು ಹೇಗೆ? ನೆಮ್ಮದಿಯನ್ನು ಹಾರೈಸುವುದರಿಂದ, ಹಂಚಿಕೊಳ್ಳುವುದರಿಂದ ಎಂಬ ನಂಬಿಕೆ ಈ ದಂಪತಿಗಳ ದೃಢವಿಶ್ವಾಸವಾಗಿತ್ತು. ಬಾಚಿ ಕೊಳ್ಳೋಣ, ಸೊತ್ತುಸೆಳೆಯೋಣ, ಸೊತ್ತಿಗೆ ಸೊತ್ತನ್ನು ಸೇರಿಸೋಣ ಮತ್ತು ಥೈಲಿ ಗಳ ಮೇಲೆ ಥೈಲಿಗಳನ್ನು ಅಡಕೋಣ ಎಂಬ ವಿತ್ತ ಪರಿಗ್ರಹ ಭಾವನೆಯನ್ನವರು ಪೂರ್ತಿಯಾಗಿ ತೊರೆದುಬಿಟ್ಟರು. ಅವರು ಹಿಡಿದದ್ದು ಸರಳ ಜೀವನದ ವ್ರತವನ್ನು. ಜೀವನ ಸಂದರ್ಭಗಳನ್ನು ಜಟಿಲೀಕರಿಸಿ, ಮನಸ್ಸನ್ನು ಗೊಂದಲದಲ್ಲಿ ಅದ್ದಿ ನಿತ್ಯಕಾತ ರಕ್ಕೆ ದೂಡುವ ವಸ್ತು ಬಾಹುಳ್ಯದ ತೊಡಕನ್ನು ಅವರು ತಪ್ಪಿಸಿಕೊಂಡರು. ಹೀಗೆ ಸರಳ ಜೀವನ ವ್ರತವನ್ನು ಶ್ರದ್ಧೆ ವಿಶ್ವಾಸಗಳಿಂದ ಹಿಡಿದು, ಮನಃಕ್ಲೇಶಕ್ಕೆ ಬದಲಾಗಿ ಮನಃಪ್ರಸಾದವನ್ನು ಗಳಿಸಿದರು; ಭಯದ ಸ್ಥಾನದಲ್ಲಿ ಉದ್ದೇಶದ ಸವಿಯನ್ನೂ ಸಿದ್ಧಿಯ ಭರವಸೆಯನ್ನೂ ಇರಿಸಿಕೊಂಡರು; ದ್ವೇಷದ ಸ್ಥಾನದಲ್ಲಿ 'ಜನಸುಖತಾದಾತ್ಮ್ಯದ' ಮಾಧುರ್ಯವನ್ನಿರಿಸಿಕೊಂಡರು. ಈ ದಾರಿಯಲ್ಲಿ ನಡೆದರೆ "ಜೀವನವನ್ನು ಸವೆಯಿಸಿ ಉಮ್ಮಳಪಡದೆ ತಣಿವೇರಬಹುದು" ಎಂದು ಕವಲು ದಾರಿಯಲ್ಲಿ ನಿಂತ ಅವರು ಇಷ್ಟ ದಿಂದ ಸರಿಯಾದ ದಾರಿಯನ್ನು ಹಿಡಿದು ಸಾಗಿದರು. ಈ ಮಾರ್ಗಶೋಧನೆಯಿಂದ, ಈ ಮಾರ್ಗಾನುಸರಣೆಯಿಂದ, ದಂಪತಿಗಳು ಬಾಳಿನೊಳಕ್ಕೆ ಸವಿ ತುಂಬಿದರು. ಬದುಕಿದ ಆ ಬಾಳಿನಿಂದ ತುಂಬು ನೆಮ್ಮದಿಯನ್ನು ಪಡೆದರು. ಇಂಥ ಬಾಳಿನಲ್ಲಿ ಕ್ರಿಯಾತ್ಮಕ ವಾದ ಅವಕಾಶಗಳು ಹೆಚ್ಚುತ್ತವೆ. ಸಹಾಯಕೊಡುವ, ಅಭಿವೃದ್ಧಿ ಪಡಿಸುವ, ನಿರ್ಮಾಣ ಮಾಡುವ ಕ್ಷೇತ್ರಗಳು ವಿಸ್ತಾರವಾಗುತ್ತವೆ. ವಾಸ್ತವವಾಗಿ ಇಂಥ ಸುಖಜೀವನಾವಕಾಶವನ್ನು ನಿಯರಿಂಗ್ ದಂಪತಿಗಳು ತಮ್ಮ ಜೀವನ ಯಾತ್ರೆಯ ಪ್ರಾರಂಭದಲ್ಲೇ ಸ್ವಾಗತಿಸಿದರು.

ನಿಯರಿಂಗ್ ದಂಪತಿಗಳಿಗೆ "ಹೊಟ್ಟೆಪಾಡೇ ಬಾಳಿನ ಗುರಿಯಲ್ಲ. ಅದು ಮಹಾಫಲಪ್ರದವಾದ ಜೀವನ ಮಂದಿರದೊಳಕ್ಕೆ ಪ್ರವೇಶವೊದಗಿಸುವ ಮುಖ ಮಂಟಪ. ಆದದ್ದರಿಂದ ಬಾಳಿನಲ್ಲಿ ಬಳಕೆಗೋಸ್ಕರ ತಯಾರಿಸುವ ಇಲ್ಲವೇ ಆಯ್ದು ಕೊಳ್ಳುವ ಸರಕು ಎಂಥಾದ್ದಾಗಿರಬೇಕೆಂಬ ಪದಾರ್ಥಪ್ರಯೋಜನದ ವ್ಯಾಪ್ತಿ ಜ್ಞಾನವೂ, ನಡತೆಯ ಬಗ್ಗೆ ಯುಕ್ತಾಯುಕ್ತ ವಿವೇಕವೂ ಒಳ್ಳೆಯ ಬದುಕನ್ನಾಯ್ದು ಕೊಂಡವನಿಗೆ ಇರಬೇಕು. ಯಾವಾಗ ಆಹಾರ ವಸ್ತೂತ್ಪಾದನೆಯ ಎಲ್ಲೆಯನ್ನು ಮುಟ್ಟಿದೆವೋ ಆಗ ನಮ್ಮ ಗಮನವನ್ನೂ ಶಕ್ತಿಯನ್ನೂ ಅನ್ಯಕಾಯಕದಿಂದ

ತಿರುಗಿಸಿ ವಿವಿಧ ಜ್ಞಾನ ಕಾಯಕಗಳಲ್ಲಿ ವಿನಿಯೋಗಿಸಿ; ಲೋಕಸಂಗ್ರಹೋದ್ದೇಶಗಳಲ್ಲಿ ನಮ್ಮ ಜೀವನವನ್ನು ಸಾರ್ಥಕಪಡಿಸಬೇಕು.'' ‡

ಸ್ಕಾಟ್ ಅವರ ಹೊಲಮನೆಯ ಸೌಕರ್ಯಗಳ ಒಳನೋಟವನ್ನಿಲ್ಲಿ ಕೊಡಬಹುದು. ಅವರು ಉರುವಲಿನ (ಇಂಧನಕ್ಕೆ) ಕೊರತೆಯನ್ನನುಭವಿಸಲಿಲ್ಲ; ವರ್ಷಕ್ಕೆ ಬೇಕಾಗುವ ಆಹಾರ ಪರಿಮಾಣದಲ್ಲಿ ಸೇಕಡ 85 ರಷ್ಟನ್ನು ಸಂಗ್ರಹಿಸುತ್ತಿದ್ದರು. ಆಗಾಗ್ಗೆ ಬಟ್ಟೆಬರೆಗೂ, ವ್ಯವಸಾಯದ ಮುಟ್ಟುಗಳಿಗೂ, ಬೇಸಾಯಕ್ಕೆ ಮತ್ತು ಮನೆಗೆಲಸಕ್ಕೆ ಬೇಕಾದ ಕಬ್ಬಿಣದ ಸಾಮಾನುಗಳನ್ನು ಕೊಳ್ಳಲು ಸಾಕಾಗುವಷ್ಟು ನಗದನ್ನಿರಿಸಿಕೊಂಡಿರುತ್ತಿದ್ದರು.

## ಸ್ವಕೃತಕಾರ್ಯ ಶೋಧನೆ ಪರಿಷ್ಕರಣಗಳು

ಸ್ಕಾಟ್ ಅವರ ಆರ್ಥಿಕ ವಿಜ್ಞಾನ ಹಾಗೂ ತಾಂತ್ರಿಕ ಪರಿಜ್ಞಾನ ಸಂಪತ್ತು ಅವರು ಕೈಕೊಳ್ಳುವ ಎಲ್ಲ ಚಟುವಟಿಕೆಗಳಿಗೂ ತ್ರಿಮುಖಗಳಲ್ಲಿ ಸಹಾಯ ಮಾಡುತ್ತ ಬಂತು. ಕಾಯಕ ನಿರ್ವಾಹಕ್ಕೆ ಬೇಕಾಗುವ **ಹೊತ್ತು**, ಬದುಕಿನಲ್ಲಿ ಬಳಸಲು ಬೇಕಾಗುವ **ಸರಕು**, ಮತ್ತು **ಕಾಯಕದ ನೊತ್ತ** ಎಷ್ಟೆಷ್ಟು ಎಂಬ ಲೆಕ್ಕವನ್ನಿಡುವಂತೆ ಈ ತಂತ್ರಜ್ಞಾನದಿಂದ ಪ್ರೇರಣೆಯಾಗುತ್ತಿತ್ತು. ಈ ಅಂಕಿ ಅಂಶಗಳ ದಾಖಲೆ ಅವರ ನಿಭಾಯಿಸುವ ಕರ್ಮವು ಆರ್ಥಿಕವಾಗಿ ದಕ್ಷತೆಯಿಂದ ಆಗಿ ಮುಗಿಯಬೇಕು, ಉದ್ದೇಶಕ್ಕೂ ಫಲಿತಾಂಶಕ್ಕೂ ತಾಳೆಯಿದ್ದು ಕರ್ಮವು ಸಾಂಗೋಪಾಂಗವಾಗಿ ಮುಗಿಯಬೇಕು ಎಂಬ ದೃಷ್ಟಿಗಳಿಂದ ಸ್ವಕರ್ಮ ಪರೀಕ್ಷಣ ಹಾಗೂ ಸಂಸ್ಕರಣಗಳಿಗೆ ನೆರವುಕೊಡುತ್ತ ಬಂತು. ಇದು ಅವರು ಕರ್ಮಸಾರ್ಥಕ್ಯದ ಬಗ್ಗೆ ಇರಿಸಿಕೊಂಡಿರುವ ಕಾತರವನ್ನೂ ಸೂಚಿಸುತ್ತದೆ. ಕಾತರವಿರಲಿ, ಅದಕ್ಕಿಂತ ಹೆಚ್ಚಾಗಿ,—ಇಂಥ ದಾಖಲೆಗಳನ್ನು ವ್ಯಾಸಂಗ ಮಾಡುವುದರಿಂದ, ಮುಂದೆ ಇಂಥ ಅಥವಾ ಇದಕ್ಕಿಂತ ಕ್ಲಿಷ್ಟವಾದ ಕಾರ್ಯಗಳನ್ನು ಕೈಕೊಂಡಾಗ ಹೇಗೆ ಸಾಧನ ಪರಿಕರಗಳನ್ನು ಅಣಿಮಾಡಿಕೊಳ್ಳಬೇಕು, ಕಾರ್ಯತಂತ್ರದ ವಿವರಗಳೇನು, ಎಂದು ಮುಂತಾಗಿ ಪರ್ಯಾಲೋಚಿಸಿ, ಪುನಃಪುನಃ ಪರಿಶೀಲಿಸಿ, ಮೇಲೆ ಹೇಳಿದ ಮೂರು ಕರ್ಮಾಂಗಗಳಾದ **ಹೊತ್ತು ಸರಕು** ಮತ್ತು **ಕಾಯಕದ ನೊತ್ತ**ಗಳನ್ನು ನಿರ್ಣಯಿಸಿ, ವಿಚಾರಸಿದ್ಧವಾದ ಕ್ರಮಗಳನ್ನನುಸರಿಸಿ, ಕ್ಷಿಪ್ರತೆದಕ್ಷತೆಗಳ ಮೂಲಕ ಒಟ್ಟು ಫಲಿತಾಂಶವನ್ನು ಪಡೆಯಲಾದೀತೆಂಬುದು ಅವರು ಇಡುತ್ತ ಬಂದಿರುವ ದಾಖಲೆಗಳ ಪ್ರಯೋಜನ. ಪ್ರಯತ್ನಪೂರ್ವಕವಾಗಿ ತಾವು ನಿರ್ವಾಹ ಮಾಡಿದ ಕಾರ್ಯಗಳ ಗುಣಮಟ್ಟ ದಕ್ಷತಾಮಟ್ಟ

‡ "ಒಳ್ಳೆಯ ಬದುಕನ್ನು ಬಾಳುವುದು"– ಹೆಲನ್ ಮತ್ತು ಸ್ಕಾಟ್ ನಿಯರಿಂಗ್ (ಪುಟ 146)

ಗಳನ್ನು ನಿಷ್ಕೃಷ್ಟವಾಗಿ ಅಳೆದು ಬೆಲೆಕಟ್ಟಲು ಅವರು ಕಾರ್ಯಕ್ಕೆ ಸಂಬಂಧಿಸಿದ ಯಾವ ಸಣ್ಣ ವಿವರಾಂಶವನ್ನೂ ಉಪೇಕ್ಷಿಸದೆ, ಎಲ್ಲವನ್ನೂ ಒಂದುಕಡೆ ಸಂಗ್ರಹಿಸಿ, ಈ ವಾಸ್ತವಾಂಶಗಳನ್ನು ವಸ್ತು ನಿಷ್ಠೆಯಿಂದ,–ಕರ್ತರಬಗ್ಗೆ ಪಕ್ಷಪಾತ ಎಳ್ಳಷ್ಟೂ ಪ್ರಕಟವಾಗದಂತೆ ಎಚ್ಚರವಹಿಸಿ,–ಆದ ಕೆಲಸದ ಬೆಲೆಯನ್ನು ತೀರ್ಮಾನಿಸುತ್ತ ಬಂದಿದ್ದಾರೆ. ಈ ಕೆಲಸದ ದಾಖಲೆಗಳಲ್ಲಿ ನ್ಯೂನಾತಿರೇಕಗಳು ನುಸುಳದಂತೆ, ಮಾಡಿ ಮುಗಿಸಿದ ಒಂದೊಂದು ಕೆಲಸಕ್ಕೂ ಬೇರೆಬೇರೆ ದಾಖಲೆಗಳನ್ನಿರಿಸಿ, ಅಳತೆಗೆ ತಮ್ಮದೇ ಆದ ಪ್ರಮಾಣವನ್ನು ಇಟ್ಟುಕೊಳ್ಳುತ್ತಾರೆ. ತಿದ್ದುಗೆಗೆ, ಹೋಲಿಕೆಗೆ, ಪುನರ್ವಿಮರ್ಶೆ ಪುನರ್ಮೌಲ್ಯ ನಿರ್ಣಯಗಳಿಗೆ ಅನುಕೂಲವಾಗುವಂತೆ ಸಾಧಿಸಿದ ಕಾರ್ಯ ಸ್ವರೂಪ ವನ್ನು ಎಲ್ಲ ಮುಖಗಳಿಂದಲೂ ನೋಡಿ,–ಮಿತವ್ಯಯ, ಕಾರ್ಯ ನಿರ್ವಾಹವಿಧಾನ, ಪ್ರಯೋಗ ತಂತ್ರಗಳಲ್ಲಿ ಪರಿಷ್ಕರಣ ಮತ್ತು ತದನುಸಾರವಾಗಿ ಕಾರ್ಯಕ್ಕೆ ಅಂತಿಮ ರೂಪದಾನ–ಇವನ್ನು ಪಾಲುಮೀರದೆ ನಡಸುತ್ತಾರೆ. ಹೀಗೆ ದಿನದಿನದ ಕೆಲಸಗಳ ದಾಖಲೆಯನ್ನು ಜಾಗರೂಕತೆಯಿಂದ ಪರಿಶೀಲಿಸುವುದರಿಂದ ಕೆಲಸವನ್ನು ಮಾಡಿ ಮುಗಿಸಲು ತೊಡಗಿಸಿದ ಬಂಡವಾಳವೆಷ್ಟೆಂದು ವೆಚ್ಚವಾದ ಹೊತ್ತು, ಸರಕು ಮತ್ತು ಕೈಗೂಡಿದ ಕಾಯಕಗಳ ಮೊತ್ತವೆಷ್ಟೆಂಬ ದೃಷ್ಟಿಯಿಂದ–ಲೆಕ್ಕಾಚಾರ ಮಾಡಿ, ತಮ್ಮ ಗೃಹೋದ್ಯಮದ ಲಾಭನಷ್ಟಗಳ ತಃಖ್ತೆಯನ್ನು ತೇಲಿಸುತ್ತಾರೆ. ಸ್ಕಾಟ್ ಅವರಿಗೆ ಕಾಲದ ವ್ಯರ್ಥಚಲನೆಗಳನ್ನು ಕುರಿತು ಕಾತರ; ಹೊಲದಿಂದಲೇ ಎತ್ತಿಕೊಂಡ ಕಚ್ಚಾ ವಸ್ತುಗಳ ಬಳಕೆಯಲ್ಲಿ ಮಿತವ್ಯಯ, ಮತ್ತು ಅವುಗಳ ವರ್ಗೀಕರಣ–ಇವನ್ನೆಲ್ಲ ಬಳಸು ವಾಗ ತುಂಬ ಎಚ್ಚರಿಕೆಯಿಂದ ಕಣ್‌ಕಾವಲಿರಿಸಿ ನೋಡಿ, ಕಾಯಕಕ್ಕೆ ಮುನ್ನವೇ ಕೈಯಾಡಿಸುವಾಗ ಬಳಸಿದ ಸರಕನ್ನೇ ಬಳಸದಂತೆ, ಮಾಡಿದ ಕೆಲಸವನ್ನೇ ಮಾಡ ದಂತೆ, ಸಂಭವನೀಯವಾದ ದುಂದನ್ನೂ ಕುಂದನ್ನೂ ಪೋಲು ವೆಚ್ಚವನ್ನೂ ನಿವಾರಿ ಸುತ್ತಿರುತ್ತಾರೆ. ಯೋಜನೆಯಂತೆ ಮಾಡಿ ಮುಗಿಸಬೇಕಾದ ಕೆಲಸಕ್ಕೆ ಅವಶ್ಯವಾದ ಬಗೆಬಗೆಯ ಕಚ್ಚಾ ಸರಕನ್ನು ಉಗ್ರಾಣದಲ್ಲಿ ವರ್ಗೀಕರಿಸಿ ಇರಿಸಿಕೊಂಡಿರುವುದರಿಂದ, ಕಾಲನಷ್ಟದ ಅಥವಾ ಪದಾರ್ಥನಷ್ಟದ ಭಯವಿಲ್ಲದೆ ಕೈಕೊಂಡ ಕಾರ್ಯವನ್ನು ಚೆನ್ನಾಗಿ ನಿಭಾಯಿಸುತ್ತಾರೆ. ಹೀಗೆ ಸಮಗ್ರ ಯೋಜನೆಗೆ ಹೊಂದಿಕೊಳ್ಳುವಂತೆ ಎಲ್ಲ ಅವಶ್ಯ ಗೌಣಾಂಗಗಳನ್ನೂ ಕ್ಷಿಪ್ರವಾಗಿ, ಅನಾಯಾಸವಾಗಿ, ಒದಗಿಸಿಕೊಳ್ಳುವ ಅವರ ಸಾಕಲ್ಯದೃಷ್ಟಿಯು ಪೂರ್ವಸಿದ್ಧತೆ ಅನುಕರಣೀಯವಾದದ್ದು. ದಿನಾವಧಿ ಯಲ್ಲಿ ಮಾಡಿ ಮುಗಿಸಬೇಕಾದ ಕಾರ್ಯದ ಯೋಜನೆಯಾಗಲಿ, ಸಾಪ್ತಾಹಿಕಾವಧಿ ಯಲ್ಲಿ ಮಾಡಿ ಮುಗಿಸಬೇಕಾದ ಕಾರ್ಯದ ಯೋಜನೆಯಾಗಲಿ–ನಿರೀಕ್ಷಿಸದೆ ಇದ್ದ ಸಂದರ್ಭವೊಂದು ಕಾಣಿಸಿ ಕೊಂಡಾಗ ಅದರ ಪ್ರತಿಕೂಲತೆಯನ್ನು ಕಳೆದು ಅನುಕೂಲ ವಾಗಿ ಮಾಡಿಕೊಳ್ಳುವುದಕ್ಕೆ ಅವರು ಸರ್ವದಾ ಸಿದ್ಧವಾಗಿರುತ್ತಾರೆ. ಇದಕ್ಕೋಸ್ಕರ ಅವರು ಪತ್ರ–ಕೋಶ filing ಪದ್ಧತಿಯನ್ನು ಕಾರ್ಯ ಸಹಾಯವಾಗಿ ಅಳವಡಿಸಿ ರೂಢಿಗೆ ತಂದುಕೊಂಡಿದ್ದಾರೆ. 'ಮಾಡಬೇಕಾದ ಕಾರ್ಯಗಳು', 'ನಿರ್ಮಲ ವಾತಾ

ವರಣದಲ್ಲಿ ಮಾಡಬೇಕಾದವು', 'ಮಳೆಗಾಲದಲ್ಲಿ ಮಾಡಬೇಕಾದವು' ಎಂದು ಮುಂತಾಗಿ ಪತ್ರಗಳಲ್ಲಿ ಕಾರ್ಯವಿವರವನ್ನು ನಮೂದಿಸಿ ಆಯಾ ಕೋಶಗಳಲ್ಲಿರಿಸುತ್ತಾರೆ. ಇದರಿಂದ ಅವರ ಕಾರ್ಯಕರಣದಲ್ಲಿ ಒಂದು ಕ್ರಮವೂ ಕ್ಲುಪ್ತತೆಯೂ ಸೇರಿಕೊಳ್ಳುತ್ತದೆ. ಕಾರ್ಯ ನಿರ್ವಾಹದ ಗತಿವೇಗ ಸಿದ್ಧಿಗಳನ್ನು ಮರೆಯದಂತೆ ಕರ್ತರಲ್ಲಿ ಜಾಗರೂಕತೆಯನ್ನು ಎಚ್ಚರವಾಗಿರಿಸುತ್ತದೆ. ಸಮಗ್ರಯೋಜನೆಗೆ ಈ ಸಣ್ಣಪುಟ್ಟ ವಿವರಗಳು ಸೇರುವುದು ಸಾಧು; ಚಂಚಲ ಮನಸ್ಸನ್ನೇ ನಂಬಿಕೊಂಡರೆ ಕೆಲಸ ಕೆಟ್ಟುಹೋದೀತು ಎಂದು ಕರ್ತರು ತಮ್ಮ ಮನಸ್ಸಿಗೆ ಮೊದಲು ಶಿಕ್ಷಣ ಕೊಟ್ಟು, ಕರಣಗಳನ್ನು ಅಂಕೆಯಲ್ಲಿರಿಸಿ, ಉಭಯವನ್ನೂ ಕಾರ್ಯಕ್ಕೆ ಹೂಡುತ್ತಾರೆ. ಈ ಒಂದು ಕರ್ಮಕೌಶಲ ಅವರು ತೋಟದಲ್ಲಿ ಗಿಡಗಳನ್ನು ಬೆಳೆಯುವಾಗ, ಕಾಡಿನಲ್ಲಿ ಪಿಂಗಡಿಸಿಕೊಂಡ ತೋಪಿನಲ್ಲಿ ಮಾಪ್ಲ್ ಮರಗಳನ್ನು ಬೆಳೆಯುವಾಗ–ಈ ಸ್ಥೂಲ ಸೂಕ್ಷ್ಮ ವಿವರಗಳನ್ನು ಸರಿಯಾಗಿ ಅವಧಾನದಿಂದ ಗಮನಿಸಿ–ಕೈಗೆತ್ತಿಕೊಂಡ ಕಾಯಕವನ್ನು ಸಮ್ಯಕ್ಕಾಗಿ ನಿರ್ವಾಹಮಾಡುತ್ತಾರೆ.

ನೆರೆಹೊರೆಯ ಜನರೊಡನೆ ಸಹಕಾರವೃತ್ತಿ, ಪರಸ್ಪರ ಸಹಾಯವೃತ್ತಿ—ಇವು ನಿಯರಿಂಗ್ ದಂಪತಿಗಳ ನಿತ್ಯಾನುಷ್ಠಾನ ಪದ್ಧತಿ. ಲಾಭದೃಷ್ಟಿಗೆ ಬೆಂಬಲ ಸಿಕ್ಕಿದಾಗ ಶೋಷಕ ಜೀವನವೇ ಒಂದು ಅಭ್ಯಾಸದ ನೆಲೆಗೇರಿ, ಜನಕ್ಕೆ ಇಷ್ಟವಾದ ಕಸಬಾಗಿ ಬಿಡುತ್ತದೆ. ಧನಶಕ್ತಿ, ಏಕಸ್ವಾಮ್ಯ ಮತ್ತು ಪ್ರಭುಶಕ್ತಿಯಕಡೆ ಅವಕಾಶಗಳನ್ನು ಇಂಥ ಜನ ಬಳಸಿಕೊಂಡು, ಇಡಿಯ ಆರ್ಥಿಕ ಸಾಮಾಜಿಕ ರಾಜಕೀಯ ಕ್ಷೇತ್ರಗಳಲ್ಲಿ ಕೈವಾಡ ನಡಸಿ, ತಮ್ಮ ಶೋಷಕ ವೃತ್ತಿಯಲ್ಲಿ ಏಳಿಗೆ ಪಡೆಯುತ್ತಾರೆ. ಗಳಿಕೆಗೆ ಮೇರೆಯನ್ನೇ ಇರಿಸಿಕೊಳ್ಳದ ಜನ ಇವರು. ಹಣದ ವಿಷಯದಲ್ಲಿ ಮನುಷ್ಯನ ಹಸಿವನ್ನು ಯಾರೂ ತೃಪ್ತಿಪಡಿಸಲಾರರು. ''ನ ವಿತ್ತೇನ ತರ್ಪಣೀಯೋ ಮನುಷ್ಯಃ॥(—**ಕಠೋಪನಿಷತ್ತು** 2.2.27). ಆದದ್ದರಿಂದ ನಿಯರಿಂಗ್ ದಂಪತಿಗಳು ಭೃತಿ ಸಂಬಂಧಗಳಿಂದ ದೂರರಾಗಿ, ಸುಲಿಗೆಗೆಳ್ಳಷ್ಟೂ ಆಸ್ಪದ ಕೊಡದೆ, ಸಹಕಾರ ತತ್ತ್ವಕ್ಕೆ ಬದ್ಧರಾಗಿ, ಪರಿಶ್ರಮವನ್ನು ವಿನಿಮಯ ಮಾಡಿಕೊಳ್ಳುವ ವಿಶೇಷ ಸಂಬಂಧಗಳಿಗೆ ಪ್ರೋತ್ಸಾಹ ಕೊಡುತ್ತಬಂದರು. ಈ ಬಗ್ಗೆ ಅವರಿಗೆ ಅಮೇರಿಕದ ವಿಚಾರಿ ತೋರೋ ಅನುಕರಣೀಯ ನಿದರ್ಶನವಾದನು. ವಿಶ್ವಾಸ ಧನಾಢ್ಯನಾದ ಮನುಷ್ಯನು ಜೀವಿಕಾ ನಿರ್ವಾಹಕ್ಕಾಗಿ ಸಹಕಾರವನ್ನು ಅದರ ಶ್ರೇಷ್ಠಾರ್ಥದಲ್ಲಿ ಮಾತ್ರವಲ್ಲ, ಅದರ ಕನಿಷ್ಠಾರ್ಥದಲ್ಲೂ ನೀಡುತ್ತ, ಬದುಕನ್ನು ಸಹಕಾರದ ಸವಿಯಿಂದ ತುಂಬಿ ಬಾಳುತ್ತ ಹೋಗುತ್ತಾನೆ. ವಿಘ್ನ ಪರಂಪರೆ ಅಡ್ಡ ಬಂದು ವಿಜಯವು ಅನಿಶ್ಚಯವೆನ್ನಿಸಿದರೂ ಮನವರಿಕೆಯಿಂದ ನಿಶ್ಚಯಿಸಿಕೊಂಡ ಯೋಜನೆಗಳನ್ನು ಶ್ರದ್ಧೆಯಿಂದ ಅವರು ಕಾರ್ಯಗತವನ್ನಾಗಿ ಮಾಡುವುದರಿಂದ ಜೀವನದ ಸಂಪತ್ತು ಹೆಚ್ಚುತ್ತದೆ ಎಂದು ನೆರೆ ನಂಬಿ ನಡೆಯತಕ್ಕವರು ನಿಯರಿಂಗ್ ದಂಪತಿಗಳು. ಆದದ್ದರಿಂದ ನೆರೆಹೊರೆಯವರೊಡನೆ ಅವರು ಪರಸ್ಪರಾನುಕೂಲಕ್ಕಾಗಿ ಸಹಕರಿಸಿ ಸ್ನೇಹವನ್ನು ಕಟ್ಟತಕ್ಕವರು.

ಹೆಲೆನ್ ಮತ್ತು ಸ್ಕಾಟ್ ನಿಯರಿಂಗ್ ಪ್ರಯೋಜನತಾನಿಷ್ಠ ಆರ್ಥಿಕ ವ್ಯವಸ್ಥೆಯ ಜೀವಂತ ಪ್ರತಿನಿಧಿಗಳು. ಆದದ್ದರಿಂದ ಸ್ವಾಭಾವಿಕವಾಗಿ ಅವರು ತಮ್ಮ ಸುತ್ತ ರೂಢಿಯಲ್ಲಿರುವ ಪದಾರ್ಥ ಮೌಲ್ಯ ಹಾಗೂ ಲಾಭ ನಿಷ್ಠ ಆರ್ಥಿಕ ವ್ಯವಸ್ಥೆಯನ್ನು ತೀರ ವಿರೋಧಿಸುವವರು. ಲಾಭಲೋಭದ ಮತ್ತು ಅತಿ ಲಾಭಾರ್ಜನೆಯ ಪದ್ಧತಿಯನ್ನೊಪ್ಪಿಕೊಂಡ ಆರ್ಥಿಕ ವ್ಯವಹಾರದಿಂದ ಗ್ರಾಹಕ ವರ್ಗಕ್ಕೆ ತುಂಬ ಅನ್ಯಾಯವಾಗುತ್ತದೆಯೆಂದೂ, ಆದದ್ದರಿಂದ ಸಮಾಜದ ಅಂಗೀಕಾರದಲ್ಲಿರುವ ನೀತಿ ಭಾವನೆಗೂ ಸಾಮಾಜಿಕ ಜೀವನ ಸ್ವಾಸ್ಥ್ಯಕ್ಕೂ ಈ ಲಾಭನಿಷ್ಠವಾದ ಆರ್ಥಿಕ ವ್ಯವಸ್ಥೆ ಉಗ್ರ ಪ್ರತಿಕಕ್ಷಿಯೆಂದೂ ಅವರು ಪರಿಗಣಿಸುತ್ತಾರೆ. ಹೀಗೆ ಅವರು–ಶೋಷಣೆ, ವಿತ್ತಾರ್ಜನೆ ಸೊತ್ತಿನ ಅತಿಪರಿಗ್ರಹಗಳ ಮೂಲಕ–ಚಟುವಟಿಕೆ ನಡಸುತ್ತ ಲಾಭ ಲೋಭದಿಂದ ಮಾತ್ರ ಪ್ರೇರಿತರಾಗಿ ವರ್ತಿಸುವ ವ್ಯಕ್ತಿಜನರನ್ನು ಅಂಕೆಯಲ್ಲಿಡದ ಸಾಮಾಜಿಕ ಪದ್ಧತಿಯನ್ನು ತೀವ್ರವಾಗಿ ವಿರೋಧಿಸುತ್ತಾರೆ. ಈ ಹಲವು ಕಾರಣಗಳಿಂದ ಅವರು ತಮ್ಮ ಜೀವಿಕೆಯನ್ನು ತಾವೇ ಸಂಪಾದಿಸಿಕೊಳ್ಳಲು ನಿರ್ಧರಿಸಿದರು; ಅವರ ದುಡಿಮೆಯೆಂದಿಗೂ ಶೋಷಣೆಯ ಪರಿಣಾಮವಾದ ಲಾಭೋದ್ದೇಶದಿಂದ ಕೂಡಿರಲಿಲ್ಲ. ಅವರ ಸಂಕಲ್ಪಗಳೂ ಅನುಷ್ಠಾನಗಳೂ ಪರಿಶುದ್ಧವಾಗಿದ್ದು ವೇದಕಾಲದ ಪ್ರಾರ್ಥನೆಯನ್ನು ನೆನಪಿಗೆ ತರುತ್ತದೆ—

ಮಾಹಂ ರಾಜನ್ ನ ಅನ್ಯಕೃತೇನ ಭೋಜಮ್॥
–ಋಗ್ವೇದ, 2-28-9

(ಓ ಸತ್ಯಋತಗಳ ಸ್ವಾಮಿಯೆ, ಇನ್ನೊಬ್ಬರ ದುಡಿಮೆಯಿಂದ
ನನ್ನ ಒಡಲಿಗೆ ಉಣಿಸು ಬಾರದಿರಲಿ!)

ಹೀಗೆ ನೀತಿನಿಷ್ಠ ಸಮಾಜ ದೃಷ್ಟಿಯೂ ಮಾನವ ಕಾರುಣ್ಯವೂ ವಾಸ್ತವಿಕ ಸಂದರ್ಭ ಪರಿಜ್ಞಾನವೂ ನಿಯರಿಂಗ್ ದಂಪತಿಗಳ ಗೃಹಾವರಣವು ಮರಳ್ಗಾಡಿನಲ್ಲಿ ಅಪರೂಪಕ್ಕೆ ಕಾಣಿಸಿಕೊಳ್ಳುವ ಬುಗ್ಗೆಯಂತೆ ಇದ್ದು, ಅವರ ಪರಿಚಯಕ್ಕೆ ಬಂದವರಲ್ಲಿ ಆಶಾವಾದವನ್ನು ಉಕ್ಕಿಸುವಂಥಾದ್ದಾಗಿದೆ. ಅವರ ಜೀವನವೂ ಸಂದೇಶವೂ ಒಳ್ಳೆಯ ಜೀವನ ತತ್ತ್ವವು ವಿಶ್ವವ್ಯಾಪಿಯಾಗಿ ವೈಶ್ವಾನರ (ವಿಶ್ವಜನ) ಸಮುದಾಯದಲ್ಲಿ ಅನುಷ್ಠಾನ ಮುಖವಾಗಿ ಹರಡಬಲ್ಲುದೆಂಬ ಹಾರೈಕೆಗೆ ಬಲಕೊಡತಕ್ಕದ್ದಾಗಿದೆ.

ಸ್ಕಾಟ್ ಅವರು ಆಚಾರಶೀಲರಾದ ಅರ್ಥಶಾಸ್ತ್ರಜ್ಞರು, ಸಮದರ್ಶನಪಾಟವವುಳ್ಳ ಸಮಾಜ ವಿಜ್ಞಾನಿ ಮತ್ತು ಕ್ರಿಯಾಕೌಶಲವುಳ್ಳ ಶಿಲ್ಪಿ. ತತ್ತ್ವಾನುಷ್ಠಾನಗಳಿಗೆ –ವಿಚಾರಆಚಾರಗಳಿಗೆ–ಇರುವ ಪ್ರತ್ಯಕ್ಷ ಸಂಬಂಧಗಳನ್ನು ಚೆನ್ನಾಗಿ ಬಲ್ಲವರು. ಕೃತಿ ಶಿಲ್ಪದಲ್ಲಿ ಕಾಲ, ಚಲನೆ, ಕಾಯಕ ಮತ್ತು ಗಣಕ ತಂತ್ರಗಳ ಹಿಂದೆ ಇರಬೇಕಾದ ತಾರ್ಕಿಕ ಪ್ರತಿಕ್ರಿಯೆಯನ್ನು ಸ್ವಾಧೀನಪಡಿಸಿಕೊಂಡವರು. ಇವೆಲ್ಲವನ್ನೂ ತಮ್ಮ

ಕಾಡು-ಹೊಲದಲ್ಲಿ ಬಳಸಿ ಬೇಸಾಯವನ್ನು ಚೆನ್ನಾಗಿ, ಫಲವಂತವನ್ನಾಗಿ, ಮಾಡಿದವರು.ಅವರು ಮಾಡಿದ್ದರಲ್ಲೆಲ್ಲ ಒಂದು ಕ್ರಮ, ಕ್ಲುಪ್ತತೆಯನ್ನು ಪೂರ್ವಾಪರ ಸಂಬಂಧವನ್ನು ಕಡಿದುಕೊಳ್ಳದ ಯೋಜನಾನುಸಾರವಾದ ಕರ್ಮಸಫಲತೆ-ಇವೆಲ್ಲವೂ ಎದ್ದು ಕಾಣುತ್ತವೆ. ಗೃಹಾವರಣದಲ್ಲಿ ಸ್ವಲ್ಪೋಪಕರಣಗಳಷ್ಟರ ಬಳಕೆಯಿಂದ ಪ್ರಕಟವಾಗುವ ಈ ಕರ್ಮ ಕೌಶಲವು ವಿಪುಲೋಪಕರಣಗಳಿಂದ ಆಢ್ಯವಾದ ರಾಷ್ಟ್ರದ ಮಹೋದ್ಯಮಗಳನ್ನು ನಡಸುವವರು ಅನುಸರಿಸಬೇಕಾದ ಗುಣ. ಈ ಗುಣವನ್ನು ಅಭ್ಯಾಸ ಮಾಡಿಕೊಂಡ ಒಬ್ಬ ಉದ್ಯಮ ಸಲಹೆಗಾರ, ಯೋಜನಾಧಿಕಾರವುಳ್ಳ ಶಿಲ್ಪಿ, ಉದ್ಯಮಗಳಲ್ಲಿಯ ಉತ್ಪಾದನ ವೆಚ್ಚಗಳ ಗಣಕ ಮತ್ತು ವ್ಯಾಪಕವಾಗಿ ಕೃಷಿ ಕರ್ಮವನ್ನು ನಿರ್ವಾಹ ಮಾಡುವ ಬೇಸಾಯಗಾರ, ತೋಟಗಾರ-ಇವರೆಲ್ಲ ಅವರವರ ಕ್ಷೇತ್ರದಲ್ಲಿ ಸಮಾಜಕ್ಕೆ ನಂಬಿಕೆ ಕೊಟ್ಟು ಹೆಸರು ಪಡೆಯುವುದರಲ್ಲಿ ಸಂದೇಹವಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ, ಸ್ಕಾಟ್ ಅವರ ವ್ಯಾಪಕ ವೈಶ್ವಾನರ ಪ್ರೇಮತತ್ತ್ವವೂ, ನಿತ್ಯ ಜಾಗರೂಕ ಜೀವನ ಶಿಲ್ಪವೂ ಅವರ ಕ್ರಿಯಾತ್ಮಕ ಹಾಗೂ ದೀಕ್ಷಾಬದ್ಧವಾದ ಮನಸವರಿಕೆಗಳು ಅನಿವಾರ್ಯವಾಗಿ ಕಾರ್ಯರೂಪ ಪಡೆದದ್ದನ್ನು ಅವರ ಬದುಕೇ ಸಾರುತ್ತವೆ.

## ಮಹಾತ್ಯಾಗ : ಪ್ರಯೋಗಪರೀಕ್ಷೆಗೆ ವಿಘ್ನ

ನಿಯರಿಂಗ್ ದಂಪತಿಗಳ ಕಾಡುಹೊಲದಲ್ಲಿಯ ಬದುಕು ಒಂದು ಕಾವ್ಯಕ್ಕೆ ಉಚಿತವಾದ ವಿಷಯವನ್ನೊದಗಿಸಬಲ್ಲುದು. ಅವರ ನೆಮ್ಮದಿಯ ಬದುಕನ್ನು ಕದಡುವ-ಸಿಡಿಲೇಟಿನಂಥ-ಪೆಟ್ಟನ್ನು ಅವರು ಅನುಭವಿಸಬೇಕಾಯಿತು. ಯಾವ ನಾಗರಿಕತೆಗೆ ಒಗ್ಗಿಕೊಳ್ಳಲಾಗದೆ ಕಾಡಿಗೆ ಪಯಣ ಮಾಡಿದರೋ ಅದೇ ನಾಗರಿಕತೆ ಅವರ ಸಹಜ ಪ್ರಶಾಂತ ಪರಿಸರಕ್ಕೆ ಮುತ್ತಿಗೆ ಹಾಕಿ ಅನಿರೀಕ್ಷಿತವಾದ ಅಪಾಯವನ್ನೊಡ್ಡಿತು. ಇವರ ಕಾಡು ಹೊಲದ ಪಕ್ಕದಲ್ಲಿ ಇದ್ದಕ್ಕಿದ್ದಂತೆ ಚಟುವಟಿಕೆ ಮೊದಲಾಗಿ ಇವರ ಅನುಭವದಲ್ಲಿದ್ದ ಶಾಂತಿಯನ್ನು ಸೀಳಿ ಗದ್ದಲವೆಬ್ಬಿಸುವ ಪೂರ್ವ ಸೂಚನೆಗಳು ಕಂಡುಬಂದುವು. ಇವರ ನಿವೇಶನದ ಒತ್ತಿನಲ್ಲಿ ಹೇಮಂತಋತು ಸುರಿಸಿ ಹೆಪ್ಪುಕಟ್ಟಿದ ಮಂಜುಗಡ್ಡೆಯಮೇಲೆ ಕ್ರೀಡಾರ್ಥಿಗಳು ಮರದ ಹಾವುಗೆಗಳನ್ನು ಮೆಟ್ಟಿ ಕ್ರೀಡಿಸುವ ಏರ್ಪಾಟು ಅದು. ಕಾಡುಪ್ರದೇಶವನ್ನು ಕಡಿದು ನೆಲದ ಹರವನ್ನು ಪಡೆದು, ಮಂಜುಗಡ್ಡೆಯ ಮೇಲೆ ಆಡ ಬರುವ ವಿಹಾರಾರ್ಥಿಗಳಿಂದ ಅರ್ಥಾರ್ಜನೆ ಮಾಡಲು ಪಶ್ಚಿಮ ನಾಗರಿಕತೆ ಹೂಡಿದ ಯೋಜನೆ ಅದು. ಈ "ಸ್ಕೈಯಿಂಗ್" ಯೋಜನೆ ಆಕಾರಪಡೆಯಲು ಮೊದಲಾಗಿ, ಅದರ ಪಕ್ಕದಲ್ಲಿದ್ದ ಖಾಸಗಿ ಕುಟುಂಬವೊಂದರ ಸಮ್ಯಗ್‌ಜೀವನದ ಯೋಜನೆಗೂ ಬಹಿರಂಗದಲ್ಲಿ ಪ್ರಕೃತಿಯ ಪ್ರಶಾಂತ ವಾತಾವರಣಕ್ಕೂ, ಅಂತರಂಗದಲ್ಲಿ ಮನಃಪ್ರಸಾದಕ್ಕೂ-ಒಟ್ಟಿನಲ್ಲಿ ಆರೋಗ್ಯಕ್ಕೆ ಉತ್ತೇಜಕವಾಗಿದ್ದ ಸುತ್ತುಮುತ್ತಿಗೂ ಅಪಾಯತರುವ ಭೀತಿ ತಲೆಯೆತ್ತಿತು. ಸಹಜ ಶ್ಯಾಮಲ ಶಾಂತ ಪರಿಸರವು ಆಡಂಬರ ಪ್ರಿಯರಿಂದ ಶಬಲೀಕೃತವಾಗಿ ಧ್ವಂಸವಾಗುವು

ದರಲ್ಲಿತ್ತು. ಜನಸಂತೆ ಸಮ್ಮರ್ದಗಳಲ್ಲಿ ಯಾರು ತಾನೆ ನೆಮ್ಮದಿಯಾಗಿ ಹೊತ್ತು ಕಳೆದಾರು? ಉದ್ದೇಶಾನುಸಾರವಾಗಿ ತಮ್ಮ ಪಾಡಿಗೆ ತಾವು ಒಳ್ಳೆಯ ಜೀವನ ಕ್ರಿಯೆಗಳಲ್ಲಿ ತೊಡಗಿರುವುದಕ್ಕೂ ಎಡರೊದಗಿತು. ಪಶ್ಚಿಮ ನಾಗರಿಕತೆ ಸಂಕೀರ್ಣ ಮನೋಭಾವಗಳ ಜನವನ್ನು ಸ್ಕಾಟ್ ಅವರ ಮನೆಯೊತ್ತಿಗೆ ಅಟ್ಟಿತು. ಸ್ಪರ್ಧಾ ಪ್ರಿಯ, ವಿತ್ತಪ್ರಿಯ, ದ್ರವ್ಯಲಾಭಪ್ರಿಯ, ಸ್ಥಾನಮಾನಪ್ರಿಯ, ಶಬ್ದಸಂರಂಭಪ್ರಿಯ ರಾದ ಜನ ಸಮೂಹದೊಡನೆ ಪುನಸ್ಸಂಪರ್ಕ ಒದಗಿದ್ದು ನಿಯರಿಂಗ್ ದಂಪತಿಗಳಿಗೆ ಜುಗುಪ್ಸಾಕರವೂ ಮಾನವತೆಯನ್ನು ಗೌರವಸ್ತರದಿಂದ ಪಶುದಶೆಗೆ ಇಳಿಸತಕ್ಕದ್ದೂ ಆಗಿ ತೋರಿತು. ದಂಪತಿಗಳು ಈ ಅಪಾಯಸಂಭವವನ್ನು ಕುರಿತು ಯೋಚಿಸಿದರು. ಇಲ್ಲಿ ಇಷ್ಟು ಕಾಲ ಒಳ್ಳೆಯ ಬದುಕನ್ನು ಬಾಳಲು ಪ್ರಯೋಗಪರೀಕ್ಷೆ ನಡಸಿದ್ದು ವ್ಯರ್ಥ ವಾಯಿತು. ಬೇರೆ ಕಡೆಗೆ ಹೋಗಿ ಮರಳಿ ಯತ್ನಮಾಡುವುದನ್ನು ಈಗ ತಪ್ಪಿಸಿ ಕೊಳ್ಳುವ ಹಾಗಿಲ್ಲ. ಇದಕ್ಕೆಸ್ಕಾಟ್ ಅವರ ನಿಷ್ಠುರ ಪ್ರತಿಕ್ರಿಯೆ ಸೊತ್ತನ್ನೆಲ್ಲ ಎರಡು ಚೀಲಗಳಲ್ಲಿ ತುಂಬಿಕೊಂಡು, ಸಾಧಿಸಿದ್ದನ್ನೆಲ್ಲ ಹಿಂದೆಬಿಟ್ಟು ಅನ್ಯತ್ರ ಅದೃಷ್ಟವನ್ನರಸಿ ಕೊಂಡು ಬೀದಿಯಲ್ಲಿ ಹೊರಟು ಸಾಗುವುದು ಎಂದು. ಈ ಒಂದು ತ್ಯಾಗ–ಸುಮಾರು ಎರಡು ದಶಕಗಳವರೆಗೆ ಕಟ್ಟಿ ಬೆಳಸಿದ ಕ್ರಿಯಾಶಿಲ್ಪದ ತ್ಯಾಗ ಇದು. ಯಾರಿಗಾದರೂ ಸಾಧ್ಯವೆಂದು ಊಹಿಸುವುದಕ್ಕೂ ಆಗದು. ಸಿದ್ಧಿಯಲ್ಲಿ ಸಂತೋಷಪಡೆದ ಸ್ಕಾಟ್ ಈಗ ತಮ್ಮ ಸಾಧನೆಯನ್ನು ಕುರಿತು ನಿರ್ಮಮ ಭಾವನೆಯನ್ನು ಪ್ರಕಟಮಾಡುತ್ತಿದ್ದಾರೆ. ಆದರೆ ಮಡದಿ ಹೆಲೆನ್ ಒಳ್ಳೆಯ ಉಪದೇಶಕಳಾಗಿ ಪಕ್ಕದಲ್ಲಿ ನಿಂತರು. ಆಕೆಯ ಬುದ್ಧಿವಾದಕ್ಕೆ ಒಡಂಬಟ್ಟು ಸ್ಕಾಟ್ ಕಾಡುಹೊಲವನ್ನು--ಎಚ್ಚರಿಕೆಯಿಂದ ತಾವು ಇರಿಸಿದ ಲೆಕ್ಕದಪುಸ್ತಕದಲ್ಲಿ ಸೊತ್ತು ಪಡೆದಿರುವ ಬೆಲೆಯಲ್ಲಿ ಅರ್ಧದಷ್ಟಕ್ಕೆ ತಮ್ಮ ಪರಿಚಯಕ್ಕೆ ಬಂದ ನೂತನ ದಂಪತಿಗಳಿಗೆ ಮಾರಿ ಕೈತೊಳೆದುಕೊಂಡರು. ತಾವು ಬಿಟ್ಟುಹೋದ ಆಸ್ತಿಯಬೆಲೆ ನಾಳೆ ಹೆಚ್ಚಿ ತಮಗೆಲ್ಲ ದುಡಿಯದೆಯೇ ದೊಡ್ಡ ಸಿರಿಯ ಸಂಪಾದನೆಯಾದೀತೋ ಎಂದು ಅಳುಕಿ, ಸೊತ್ತನ್ನು ಮಾರಿಬಿಡಲು ನಿಶ್ಚಯಿಸಿದರು. ಲಾಭಕೋರತನವಾಗಲಿ, ಜೂಜುಕೋರತನವಾಗಲಿ, ಅದು ಭ್ರಷ್ಟಾಚಾರವೆಂದೇ ಅವರು ಪರಿಗಣಿಸಿದ್ದರಲ್ಲವೆ? ಅರ್ಥಶಸ್ತ್ರಜ್ಞರಾಗಿ ಸ್ಕಾಟ್ ಇಡಿಯ ಅಮೆರಿಕದಲ್ಲಿ ಹಣದ–ನೋಟಿನ–ಹೆಚ್ಚಳಿಕೆ ವ್ಯಾಪಕವಾಗಿ, ಆರ್ಥಿಕ ಕ್ಷೇತ್ರದಲ್ಲಿ ಅವ್ಯವಸ್ಥೆಗೆ ಕಾರಣ ಮಾಡಿದ್ದನ್ನು ಕಂಡವರು. ತಾವೇಕೆ ಅವ್ಯವಸ್ಥೆಗೆ ತಮ್ಮ ಪಾಲನ್ನು ಸೇರಿಸಬೇಕು? ಸ್ಕಾಟ್ ಹೇಳುತ್ತಾರೆ :

> ರಾತ್ರೋರಾತ್ರಿ ಅದೃಷ್ಟಶಾಲಿ ಅಂದಾಜುಗಾರರು, ಜೂಜು ಗಾರರು ಅಥವಾ ಶೋಷಣ ಫಲಾನುಭವಿಗಳಾದ ಭಾಗ್ಯವಂತರು ಸೊತ್ತು ಗಳನ್ನು ಇದ್ದಕ್ಕಿದ್ದಂತೆ ಪಡೆದುಬಿಡುತ್ತಿದ್ದಾರೆ. ಹೆಚ್ಚು ಪ್ರಯತ್ನ ವಿಲ್ಲದೆಯೇ ಅವರಿಗೆ ಆಗುವ ಸಂಪಾದನೆ ಇದು. ಇವರಿಗೆ ಈ ಸಿರಿ ಹೇಗೆ

ಬಂದು ಹರಿಯುತ್ತವೆ? ನಿರೀಕ್ಷಿಸದೆ ಇರುವಷ್ಟು ಕ್ಷಿಪ್ರವಾಗಿ ಸ್ಥಿರ ಸೊತ್ತು ಗಳು ಬೆಲೆಯೇರುವುದರಿಂದ ನ್ಯೂಯಾರ್ಕ್ ಸ್ಟಾಕ್ ಮಾರುಕಟ್ಟೆಯಲ್ಲಿ ಜನರು-ಅದುವರೆಗೆ ಚಿಂದಿಬಟ್ಟೆಯುಟ್ಟವರಾಗಿದ್ದವರು ಧನಿಕರಾಗಿ ಅಂತ ಸ್ತಿನಲ್ಲಿ ಏರಿಬಿಡುತ್ತಾರೆ! ಅನೇಕ ವೇಳೆ ಹಣವಂತರು ಚಿಂದಿಯುಡುಗೆಗೆ ಇಳಿಯುತ್ತಾರೆ! ಮಾರುಕಟ್ಟೆಯಲ್ಲಿ ‹‹ಟಿಪ್ಪುಗಳು–ಸುಳಿವುಗಳು–ಪಗಡೆ ಹಾಸಿನ ಪಕ್ಕದಲ್ಲಿ ದಾಳವುರುಳಿ ಗರಗಳನ್ನೇರಿಸಿ ಇಳಿಸುವಂತೆ ಕಾರ್ಯ ಮಾಡುತ್ತವೆ.'' ‡

ಹದಿನಾಲ್ಕು ವರ್ಷವುರುಳುತ್ತದೆ. ನಿಯರಿಂಗ್ ದಂಪತಿಗಳಿಂದ ಅರ್ಧಕ್ರಯಕ್ಕೆ ಸೊತ್ತನ್ನು ಪಡೆದಿದ್ದನವದಂಪತಿಗಳು ಅದನ್ನು ಉಳಿಸಿಕೊಳ್ಳಲಾಗದೆ ಸ್ವಂತ ಕಾಯಕ ದಿಂದ ಕೊಳ್ಳಲಾಗದೆ ಬೆಳಸಿ ಕಟ್ಟಡಗಳಲ್ಲಿ ಕೆಲವನ್ನೂ ಹೊಲದಲ್ಲಿ ಒಂದು ಪಾಲನ್ನೂ 90,000 ಡಾಲರುಗಳ ಪ್ರತಿಫಲಕ್ಕೆ ಮಾರಿದರಂತೆ! ಅಧಿಕ ಲಾಭ ಬರುವಾಗ ಬಾಚಿ ಕೊಳ್ಳದೆ ಬಿಡುವವರಾರು? ಈ ವಿಕ್ರಯ ವಾರ್ತೆಯನ್ನು ಕೇಳಿದ ಸ್ಕಾಟ್ ಹೀಗೆ ಉದ್ಗಾರ ಮಾಡಿ ಟೀಕಿಸಿದರಂತೆ: "ಸಿರಿಯೊಡ್ಡುವ ಕೇಡು ಮರಳಿ ನನ್ನನ್ನು ಬಳಸಿ ಕೊಳ್ಳದಂತೆ ತಪ್ಪಿಸಿಕೊಂಡದ್ದಾಯಿತು!". ನಾಲ್ಕು ಸಾರಿಯೂ ಸಿರಿಯನ್ನು ತೊರೆದು ನಿಯರಿಂಗ್ ದಂಪತಿಗಳು ನಷ್ಟಾನುಭವಕ್ಕಿಂತ ನಾಲ್ಕು ಪಟ್ಟು ಹೆಚ್ಚು ಜೀವನೋ ತ್ಸಾಹವನ್ನು ಪಡೆದರು; ಗಳಿಸಿಕೊಂಡಿದ್ದ ಮನಃ ಪ್ರಸಾದವನ್ನು ಕಾಪಾಡಿಕೊಂಡರು. ಕರ್ಮಾನುಷ್ಠಾನದಲ್ಲಿ ದೃಢತೆಯನ್ನು ಸಂರಕ್ಷಿಸಿಕೊಂಡು ಜೀವನೋದ್ದೇಶವನ್ನು ಕಾರ್ಯಾಚರಣೆಯ ಮೂಲಕ ಅರ್ಥವಂತವನ್ನಾಗಿ ಮಾಡಿಕೊಂಡರು. ಇದು ನಿಜ ವಾಗಿ ಅನನ್ಯ ಸಾಧಾರಣವೂ ವ್ಯಕ್ತಿ ವೈಶಿಷ್ಟ್ಯ ಸೂಚಕವೂ ಆದ ಜೀವಿತಸಿದ್ಧಿ.

ಈ ಪುಟ್ಟ ಎರಡು ವೇದಸೂಕ್ತಿಗಳು ಇಲ್ಲಿ ಸ್ಮರಣೀಯವಾಗಿವೆ. ನಿಯರಿಂಗ್ ದಂಪತಿಗಳು ಮನವರಿಕೆಯನ್ನು ಕಾರ್ಯಗತ ಮಾಡುತ್ತ ಪಟ್ಟಿರಬಹುದಾದ ಸಂತೋ ಷಾನುಭವವೆಂಥಾದ್ದು ಎಂಬುದನ್ನು ಈ ವೇದವಾಣಿ ಸೂಚಿಸುತ್ತದೆ. ಈಶಾವಾಸ್ಯೋ ಪನಿಷತ್ತಿನ ಮಂತ್ರಗಳು ಇವು:

ತೇನ ತ್ಯಕ್ತೇನ ಭುಂಜೀಥಾಃ
ಮಾಗೃಧಃ ಕಸ್ಯಸ್ವಿದ್ಧನಮ್॥
ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇಚ್ಛತಂ ಸಮಾಃ॥

—ಈಶಾವಾಸ್ಯೋಪನಿಷತ್ 1, 2

ತೊರೆಹದಿಂದ ತಣಿಯಬೇಕೆಂದು ನಮ್ಮ ಋಷಿ ಹೇಳುತ್ತಾನೆ. ಇನ್ನೊಬ್ಬರ ಬಯಸಬೇಡ ಎಂದು ಜೀವಕ್ಕೆ ನೇಮವಿಡುತ್ತಾನೆ. ಕೆಲಸ ಮಾಡುತ್ತ ನೂರು ವರುಷ

‡ ಆಮೂಲಾಗ್ರ ಸುಧಾರಕನ ಸಾಧನೆ, ಸ್ಕಾಟ್ ನಿಯರಿಂಗ್. (ಪುಟ.48.)

ಹಾಯಾಗಿ ಬಾಳಬಹುದು ಎಂದು ಆಯುಸ್ಸಿಗಿರುವ ದೊಡ್ಡ ಅರ್ಥವನ್ನು ಒತ್ತಿ ಹೇಳು ತ್ತಾನೆ. ಋಷಿವಾಕ್ಯಕ್ಕೆ ನಿದರ್ಶನವಾಗಬಲ್ಲವರು ವಿರಳ. ಆದರ್ಶವಾಗಿ ಬಾಳಿ ಋಷಿ ಮಂತ್ರಾವತಾರಕ್ಕೆ ಕಾರಣವಾಗಬಲ್ಲವರೂ ವಿರಳ. ಸಾಂಪ್ರತ ಕಾಲದಲ್ಲಿ ಆ ವಿರಳ ಪಂಕ್ತಿಯಲ್ಲಿ ನಮ್ಮ ಮೊದಲೆಣಿಕೆಗೆ ಬರತಕ್ಕವರು ಈ ಕರ್ಮಯೋಗಿಗಳಾದ ಈ ನಿಯರಿಂಗ್ ದಂಪತಿಗಳು. ಕರ್ಮಕ್ಕೆ ಅವರು ಇರಿಸಿಕೊಂಡ ಉದ್ದೇಶವಾದರೋ ಕರ್ಮಕರಣದ ಫಲವಾಗಿ ಬಹುಜನ ಹಿತವನ್ನು ಕಾಣುವುದು. ಪರಾರ್ಥಗಣನೆ ತಾನೇ ಸಾಧು ಸ್ವಭಾವ?

## ಎರಡನೆಯ ಕಾಡ ಹೊಲಮನೆ : ಪ್ರಯೋಗ ಪರೀಕ್ಷೆಯ ಮುಂಬರಿವು

1952 ರಲ್ಲಿ ವಸಂತಋತು ತೊಡಗಿದಾಗ ನಿಯರಿಂಗ್ ದಂಪತಿಗಳು ಸುತ್ತ ಕಣ್ಣಾಡಿಸಿದರು. ಒಂದು ನೆಲೆಯನ್ನು ತಮ್ಮ ವಾಸಕ್ಕೂ ಕರ್ಮಕರಣಕ್ಕೂ ತಕ್ಕದ್ದೆಂದು ಗುರುತಿಸಿ ಅದನ್ನು ಕೊಳ್ಳಲು ತೀರ್ಮಾನಿಸಿದರು. ಇದು ಅವರ ಬೇಸಾಯಕ್ಕೆ ಎರಡ ನೆಯ ಕಾಡನೆಲಸಾಯಿತು. ಮೆಯ್ನ್ ಸಂಸ್ಥಾನದ ಕಡಲತಡಿಯಲ್ಲಿ ತಮ್ಮ ಮನಸ್ಸಿಗೆ ತೃಪ್ತಿಕೊಡುವ ಬೀಡು ಅದೆಂದು ನಿಯರಿಂಗ್ ದಂಪತಿಗಳು ಕೊಂಡು ಸ್ವಾಧೀನಕ್ಕೆ ಪಡೆದರು. ಇಲ್ಲೂ ಪ್ರಕೃತಿ ತನ್ನ ಶ್ಯಾಮಲ ಸಂಪತ್ತನ್ನು ಹರಡಿದೆ; ವಿವಿಕ್ತವಾಗಿ ದಂಪತಿಗಳ ಇಷ್ಟಕ್ಕೆ ಹೊಂದಿಕೆಯಾಗಿ, ಅವರು ವ್ರತವಾಗಿ ಹಿಡಿದ ಕರ್ತವ್ಯ ಕಾಯಕಕ್ಕೆ ಬೇಕಾದಷ್ಟು ಅವಕಾಶ ಕೊಡುತ್ತದೆಯೆಂಬ ಭರವಸೆಯನ್ನು ವರಿಗೆ ಕೊಟ್ಟಿತು. ಈ ನೂತನ ಅಪ್ರದೇಶದಲ್ಲಿ ಅವರು ತಮ್ಮ ಕರ್ತವ್ಯದ ಬೇರು ಗಳನ್ನಿಳಿಸಿ ದೃಢಪಡಿಸಿದರು. ನಂಬಿಕೊಂಡುಬಂದ ಕಾರ್ಯ ತತ್ತ್ವಗಳನ್ನೂ ಧ್ಯೇಯ ಗಳನ್ನೂ ಒಳ್ಳೆಯ ಜೀವನಕ್ಕೆ ಅನ್ವಯಿಸುವ ಪದ್ಧತಿಗಳನ್ನೂ ನೂತನ ಪರಿಸರದಲ್ಲಿ ಪುನಶ್ಶೋಧಿಸಿ ವಿಚಾರಮಾಡಿ, ಉಲ್ಲಾಸಗೊಂಡು, ಮರಳಿ ಒಳ್ಳೆಯ ಬಾಳನ್ನು ಮುಂಬ ರಿಸಲು ಎಲ್ಲ ಪರಿಕರಗಳನ್ನು ಸಂಘಟಿಸಿಕೊಂಡರು. ವಾಸ್ತವವಾಗಿ ಈ ದ್ವಿತೀಯ ಪ್ರಯ ತ್ನವು ಅಷ್ಟಿಷ್ಟು ಪರಿಷ್ಕಾರಗಳೊಡನೆ ಮುಂಬರಿಸಿದ ವೆರ್ಮಾಂಟ್ ಕ್ಷೇತ್ರದ ಪ್ರಥಮ ಪ್ರಯತ್ನದ ಅನುಭವವೇ ಅವರಿಗಾಯಿತು. ಒಗ್ಗಿಬಂದ ಕ್ರಮ ಕ್ಲುಪ್ತತೆಯ ಬಲೋರ್ಜಿತ–ಯೋಜನಾಬದ್ಧ – ಜೀವನಯಾಪನೆಯಲ್ಲಿ ಮರಳಿ ತೊಡಗಲು ಅವರಿಗೆ ಕಷ್ಟವೆಂದೇನೂ ತೋರಲಿಲ್ಲ. ಆತ್ಮಾವಲಂಬನನಿಷ್ಠವಾಗಿ, ಈಗಾಗಲೆ ಪರೀಕ್ಷೆಗೆ ಒಳಪಟ್ಟು ವ್ಯವಹಾರಸಾಧ್ಯವೆಂದು ನಂಬಿಕೆಕೊಟ್ಟ ಜೀವನ ವಿಧಾನವೇ ಅದು. ಸಂದರ್ಭೋಚಿತವಾಗಿ, ಅನುಭವದ ಪ್ರೇರಣೆಯಂತೆ ಅಲ್ಪಸ್ವಲ್ಪ ಮಾರ್ಪಾಟುಗಳನ್ನು ಮಾಡಿಕೊಳ್ಳಲು ಅವರು ಸ್ವತಂತ್ರರಾಗಿದ್ದರು. ಸ್ವ-ಪರಭೇದವಿಲ್ಲದೆ ಸಕಲ ಜನೋಪ ಯುಕ್ತವೂ ಪೂರ್ಣವೂ ಆದ ಆರ್ಥಿಕ ವ್ಯವಸ್ಥೆಯನ್ನು ರೂಢಿಗೆ ತಂದುಕೊಳ್ಳಲು ಮನುಷ್ಯರಿಗೆ ಕಷ್ಟವಾಗಬೇಕಾಗಿಲ್ಲವೆಂದು ಅವರು ತೋರಿಸಿಕೊಟ್ಟರು. ಸತ್ಯಕ್ಕೆ

ಬದ್ಧರಾಗಿ, ಬುದ್ಧಿ ಕಾರ್ಯಕ್ಕೆ ಘನತೆಯೂಡುವವರಾಗಿ, ಕಾಯಕವನ್ನು ಭವ್ಯತೆ ಗೇರಿಸುವವರಾಗಿ ಅವರು ಬೇಸಾಯದಲ್ಲಿ ಪುನರುದ್ಯಮಿಸಿದರು. ಹೊಲದ ಮೇಲ್ಮಣ್ಣಿಗೆ ಹಸಿರು ಗೊಬ್ಬರವನ್ನು ಬೆರಸಿ, ತಗ್ಗುನೆಲದಲ್ಲಿ ನಿಂತಿದ್ದ ನೀರನ್ನು ಹರಿಯಿಸಿ ನೆಲವನ್ನೊಣಗಿಸಿ, ಏರುತಗ್ಗುಗಳಿದ್ದ ನೆಲವನ್ನು ಮಟ್ಟಸ ಮಾಡಿಕೊಂಡು, ಹಲವು ಎಕರೆಗಳಷ್ಟು ಕಾಡನ್ನು ಬಿಡಿಸಿ ಹುಲ್ಲಿನ ಮೆದೆಗಳನ್ನು ಕಟ್ಟಿದರು. ಒಂದು ಕೊಳವನ್ನು ಅಗೆದು, ತಮ್ಮ ಬಳಕೆಗಾಗಿ ಉರುವಲನ್ನು ಕೊಡುವ ತೋಪನ್ನು ಬೆಳೆಯಲು ಭೂಮಿಯನ್ನು ವಿಂಗಡಿಸಿಕೊಂಡರು.

ಸೂರ್ಯಾತಪದಿಂದ ಸರ್ವಋತುಗಳಲ್ಲೂ ಕೃಷಿ ಸಾಮರ್ಥ್ಯವನ್ನೂ ಸೌಕರ್ಯಗಳನ್ನೂ ಕೊಡುವ 'ಹಸಿರು ಮನೆ' ಯೊಂದನ್ನು ದಂಪತಿಗಳು ಕಟ್ಟಿದರು. ದೀರ್ಘಕಾಲದ ಯೋಜನೆಯೊಂದನ್ನು ನಿರ್ಮಿಸಿಕೊಂಡು, ಎರಡು ದಶಕಗಳ ವರೆಗೆ ಪ್ರಯೋಗಾನುಭವ ಪಡೆಯಲು ದುಡಿದರು. ಇಲ್ಲಿ ಅವರ ಶೈಕ್ಷಣಿಕ–ಸಾಂಸ್ಕೃತಿಕ - ಸಾಮಾಜಿಕ ಸೇವೆಯ ಚಟುವಟಿಕೆಗಳಿಗೆ ಹೆಚ್ಚು ಅವಕಾಶ ಪಡೆದರು. ಅವರ ಯೋಜನೆ ಉದ್ದಿಷ್ಟಫಲವನ್ನು ಕೊಟ್ಟು ಮುಗಿಯುವ ಘಟ್ಟಕ್ಕೆ ಬರುತ್ತಿದೆ. ಅಧ್ಯಯನಕ್ಕೂ ಸಂಶೋಧನೆಗೂ ಸ್ವಂತಕ್ಕೆ ಜ್ಞಾನಾನಂದ ಸಂಪಾದನೆಗೂ ಆವಶ್ಯಕವಾದ ಆಕರಾಧಾರ ಗ್ರಂಥಗಳನ್ನು ಆಯ್ದು ಸಂಗ್ರಹಿಸಿಕೊಂಡರು. ಅನೇಕ ಪ್ರಗತಿ ಪರ ಸಂಘ ಸಂಸ್ಥೆಗಳ ಸದಸ್ಯರಾಗಿ ಜನಸಂಪರ್ಕವಿರಿಸಿಕೊಂಡರು. ಆ ಸಂಸ್ಥೆಗಳ ಪತ್ರಿಕೆಗಳನ್ನು ತರಿಸಿಕೊಳ್ಳುತ್ತ ಬಂದರು. ವಿಜ್ಞಾನ ಪರಿಕರ್ಮ, ಶಾಸ್ತ್ರ, ಕಲೆ, ವ್ಯವಸಾಯದ ಮಣ್ಣು ಮತ್ತು ಸಸ್ಯಜೀವನ, ಸಾಮಾಜಿಕ–ಆರ್ಥಿಕ–ಸಾಂಸ್ಕೃತಿಕ ವಿಷಯಗಳು–ಇಂಥ ವಿವಿಧ ವಿಷಯಗಳನ್ನು ಕುರಿತು ದೇಶವಿದೇಶಗಳಲ್ಲಿ ಹೊರಡುವ ನಾನಾ ಪತ್ರಿಕೆಗಳಿಗೆ ಚಂದಾದಾರರಾದರು. ನೆರೆಹೊರೆಯಲ್ಲಿ ಯಾರಿಗಾದರೂ ಆಸಕ್ತಿಯಿದ್ದರೆ ಅವರು ಈ ಪತ್ರಿಕೆಗಳನ್ನು ಓದಿಕೊಳ್ಳುವ ಅನುಕೂಲವನ್ನು ಕಲ್ಪಿಸಿದರು. ವೆರ್ಮಾಂಟ್ ಕಾಡು ಹೊಲಮನೆಯಲ್ಲಿ ಮೊದಲುಮಾಡಿದ ಕೃಷಿ, ಅರ್ಥ, ಶಿಕ್ಷಣ, ಸಮಾಜಸೇವಾ ಸಂಬಂಧವಾದ ಚಟುವಟಿಕೆಗಳನ್ನೆಲ್ಲ ಮೆಯ್ನ್ ಪ್ರಾಂತದ ಈ ಹೊಲಮನೆಯಲ್ಲಿ ಮುಂಬರಿಸಿ ವಿಸ್ತರಿಸಿದರು.

## ಗ್ರಂಥ ಪ್ರಕಾಶನಕ್ಕೆ ಬಂದ ವಿಘ್ನಗಳ ನಿವಾರಣೆ

ಹಿಂದೆ ಬೇರೆ ಬೇರೆ ಪ್ರಕಾಶಕರು ಸ್ಕಾಟ್ ಅವರ ಹಸ್ತಪ್ರತಿಗಳಿಗೆ ಸ್ವಾಗತ ನೀಡಿ ಅವನ್ನು ಪ್ರಕಟ ಮಾಡುತ್ತಿದ್ದರು. ಆದರೆ ಈಚೆಗೆ ಅವರಲ್ಲಿ ಆಮೂಲಾಗ್ರ ಸುಧಾರಣೆಯ (ರ್‍ಯಾಡಿಕಲಿಸಂ) ಕಠೋರ ಪ್ರವೃತ್ತಿಯನ್ನು ಗಮನಿಸಿದೊಡನೆ ಆ ಪ್ರಕಾಶಕರೆಲ್ಲ ಇನ್ನು ಮುಂದೆ ಇವರ ಗ್ರಂಥಗಳನ್ನು ಪ್ರಕಟಿಸುವುದಿಲ್ಲ ಎಂದು ನಿರಾಕರಿಸಿ ಬಿಟ್ಟರು. ಈ ಬೆಳವಣಿಗೆಯ ಫಲವಾಗಿ 1952ರಲ್ಲಿ ನಿಯರಿಂಗ್ ದಂಪತಿಗಳು

ಮೆಯ್ನ್ ಸಂಸ್ಥಾನದ ಕಾನೂನಿನ ಪ್ರಕಾರ ಹಾರ್ಬರ್‌ಸೈಡ್ ಪಟ್ಟಣದಲ್ಲಿ "ಸೋಷಲ್ ಸೈನ್ಸ್ ಇನ್‌ಸ್ಟಿಟ್ಯೂಟ್" ಎಂಬ ಸಮಾಜಶಾಸ್ತ್ರದ ಸ್ವಕೀಯ ಅಧ್ಯಯನ– ಪ್ರಕಟನ ಸಂಸ್ಥೆಯನ್ನು ಸ್ಥಾಪಿಸಿಕೊಂಡರು. ತಮ್ಮ ಬರೆದ ಬರೆವಣಿಗೆಗಳನ್ನು ಲಾಭ ದೃಷ್ಟಿ ಯಿಲ್ಲದೆ ಅಚ್ಚುಮಾಡಿಸಿ ಪ್ರಕಟಪಡಿಸಿ ವಿತರಿಸುವ ಏರ್ಪಾಟು ಮಾಡಿಕೊಂಡರು. ದಂಪತಿಗಳು ತಮ್ಮ ಎಲ್ಲ ಮುದ್ರಿತ ಗ್ರಂಥಗಳ ಮೇಲಣ ಅಧಿಕಾರಗಳನ್ನೂ ಈ ಸಂಸ್ಥೆಗೆ ಕೊಟ್ಟುಬಿಟ್ಟರು. ಲೇಖಕರಾಗಿ ತಮಗೆ ಬರುವ ರಾಯಲ್ಟಿಯನ್ನು ಗ್ರಂಥಾದಾಯ ವನ್ನು ಸಂಸ್ಥೆಯ ಖಜಾನೆಗೊಪ್ಪಿಸಿದರು. ಆಮೂಲಾಗ್ರ ಸು ಧಾ ರ ಣಾ ವಾ ದಿ ಯ ಧರ್ಮೇಂದ್ರಿಯ (The Conscience of a Radical) ಎಂಬ ಈ ಪುಸ್ತಕದ ಮೂಲವನ್ನು ಸಂಸ್ಥೆ 1965ರಲ್ಲಿ ಪ್ರಕಟಪಡಿಸಿದರು.

## ಏಕಾಂತದಿಂದ ಜನ ಸಂಪರ್ಕಕ್ಕೆ

ಇಂದು ಮೆಯ್ನ್ ಸಂಸ್ಥಾನದಲ್ಲಿ ನಿಯರಿಂಗ್ ದಂಪತಿಗಳು ಸ್ಥಳೀಯ ಸ್ತರದ ಹಾಗೂ ಸಂಸ್ಥಾನ ಸ್ತರದ ಎಲ್ಲ ಚಟುವಟಿಕೆಗಳಲ್ಲೂ ಪಾತ್ರವಹಿಸುತ್ತ ಜನದ ಅಭಿ ಮಾನ ಸೌಹಾರ್ದಗಳನ್ನು ಗಳಿಸಿದ್ದಾರೆ. ಈ ಪಾತ್ರ ತಮ್ಮ ಕಸಬಿಗೆ ತಕ್ಕದ್ದೆಂದು ಅವರು ಭಾವಿಸುತ್ತಾರೆ. ಒಳ್ಳೆಯ ಜೀವನದ ಮೂಲೋದ್ದೇಶ ಫಲಿತಾಂಶಗಳನ್ನು ಕುರಿತ ತಿಳಿವಳಿಕೆಯನ್ನು ಹರಡಲು ಎಲ್ಲೆಲ್ಲಿ ಅವಕಾಶವುಂಟೋ ಅಲ್ಲಿಗೆಲ್ಲ ತಾವೇ ಹೋಗಿಯೋ ತಮ್ಮ ಆಪ್ತಮಿತ್ರರನ್ನು ಕಳಿಸಿಯೋ ಸಭೆಗಳನ್ನು ಕರೆದು ಮಾತುಕತೆ ನಡ ಸುತ್ತಾರೆ. ಶಾಲೆ ಕಾಲೇಜು ಚರ್ಚೆಗಳಲ್ಲೂ ಖಾಸಗಿ ಮಿತ್ರಕೂಟಗಳಲ್ಲೂ ಸಾರ್ವಜನಿಕ ವಿಚಾರ ಗೋಷ್ಠಿಗಳನ್ನು ಸೇರಿಸಿ, ಪರಸ್ಪರ ಸಹಾಯ ಸಹಕಾರಗಳ ಮುತ್ತು ಸಮಾಜ ಕಲ್ಯಾಣದ, ಪ್ರಶ್ನೆಗಳನ್ನು ಚರ್ಚೆಗೆತ್ತಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಮೆಯ್ನ್ ರಾಜ್ಯದ ಕಲೆಗಳು ಮುತ್ತು ಮಾನವಿಕ ಶಾಸ್ತ್ರಗಳನ್ನು ಕುರಿತ ರಾಜ್ಯಸಮಿತಿ (State Commission) 1971ರ ಜನವರಿಯಲ್ಲಿ "ರಾಜ್ಯಕ್ಕೆ ವಿಶೇಷ ಸ್ಥಾನಗೌರವವನ್ನು ತಂದ ರಾಷ್ಟ್ರದ ಪ್ರಜೆಗಳ ಸಾಲಿನಲ್ಲಿ" ಸ್ಕಾಟ್ ಅವರನ್ನು ಎಣಿಸಿ ಪ್ರಶಸ್ತಿ ದಾನ ಮಾಡಿತು. ಆಗ ರಾಜ್ಯದ ಗವರ್ನರ್ ಕರ್ಟಿಸ್ ಅವರು "ತಮ್ಮ ಜೀವನವನ್ನು ಕಲೆ ಯಾಗಿ ಅರಳಿಸಿ ಬೆಳಸಿದವರು" ಎಂದು ಸ್ಕಾಟ್ ನಿಯರಿಂಗ್ ಅವರನ್ನು ಕೊಂಡಾ ಡಿದರು.

ಸ್ಕಾಟ್ ಅವರು ಅಧ್ಯಾಪಕ ವೃತ್ತಿಯನ್ನು ಹಿಡಿದ ತರುಣದಲ್ಲಿ ಫಿಲಿಡೆಲ್ಫಿಯಾ ರಾಜ್ಯದ ಯಂತ್ರೋದ್ಯಮಗಳಲ್ಲಿ ದುಡಿಯುವ ಕಾರ್ಮಿಕರ ಸಾಮಾಜಿಕ–ಆರ್ಥಿಕ– ಸಾಂಸ್ಕೃತಿಕ ಜೀವನ ಪರಿಸ್ಥಿತಿಯನ್ನು ಕುರಿತು ಪ್ರತ್ಯಕ್ಷವಾದ ತಿಳಿವಳಿಕೆಯನ್ನು ಪಡೆಯುವ ಉದ್ದೇಶದಿಂದ ಆಗಾಗ್ಗೆ ಉದ್ಯಮ ಕ್ಷೇತ್ರಗಳಿಗೆ ಭೇಟಿ ಕೊಡುತ್ತಿದ್ದರು. ಆಗ ಪ್ರಯೋಜನಕ್ಕೆ ಬಂದದ್ದು ತಾತನ ಉದ್ಯಮಗಳಲ್ಲಿ ಮೊಮ್ಮಗನು ಕಷ್ಟಭೇದಕ

ನಾಗಿ ಮಾಲಿಕ-ಕೂಲಿಯಾಳುಗಳ ಸಂಟುಗಳಲ್ಲಿ ಎದ್ದುಕೊಳ್ಳುವ ಕ್ಲಿಷ್ಟ ಸಂದರ್ಭಗಳನು ತಾಗಿ ಪರಿಹಾರಶೋಧನೆಯಿಂದ ಪಾರಾಗುವ ಹದವೇನೆಂದು ತಿಳಿದುಕೊಂಡದ್ದು. ಕಾರ್ಮಿಕರ ಕಷ್ಟಜೀವನ ಪರಿಚಯ ಆತನಿಗಾಯಿತು. ತಾನು ಕೇಳಿದ ಪ್ರಶ್ನೆಗಳಿಗೆ ಅವರು ಕೊಡುವ ಉತ್ತರಗಳನ್ನು ಸಾವಧಾನದಿಂದ ಆತ ಆಲಿಸಿದರು. ಅವರು ತಮ್ಮ ಕಷ್ಟ ಜೀವನವನ್ನು ಸ್ಪಷ್ಟವಾಗಿ ಸಾರಿದ್ದಲ್ಲದೆ ತಾನು ಅವರ ಸಮಸ್ಯೆಗಳನ್ನು ತಾಗಿ ಪರಿಹಾರವನ್ನು ಕಂಡುಹಿಡಿಯಲು ನೆರವನ್ನೂ ಕೊಟ್ಟರು. ತಮ್ಮ ಸಮಸ್ಯೆಗಳನ್ನು ಅರಿತು ನೆರವಾಗುವ ಶ್ರದ್ಧೆ ಕಾತರಗಳು ಈ ತರುಣ ವಿದ್ವಾಂಸನಿಗೆ ಇವೆಯೆಂದು ತಿಳಿದಕೂಡಲೆ ಕಾರ್ಮಿಕರು ಆತನೊಡನೆ ನಿಸ್ಸಂಕೋಚವಾಗಿ ಸಹಕರಿಸಿ, ತಿಳಿಸಬೇಕಾದ ಸಂಗತಿಗಳನ್ನೆಲ್ಲ ಎದೆಬಿಚ್ಚಿ ಮುಚ್ಚುಮರೆಯಿಲ್ಲದೆ ತಿಳಿಸಿದರು. ಅವರ ದಾರುಣ ಜೀವನದ ಕಥೆಯನ್ನು ಕೇಳಿ ಸ್ಕಾಟ್ ಕನಿಕರಿಸಿ, ತನಗೆ ತಿಳಿದು ಬಂದಿದ್ದ ತಿಳಿವಳಿಕೆಯನ್ನವರೊಡನೆ ಹಂಚಿಕೊಂಡರು. ಕಾರ್ಮಿಕರು ಆತನನ್ನು ನಂಬಿದರು. ಈ ನಂಬಿಕೆ ಆತನ ಅವ್ಯಾಜ ಸ್ನೇಹ, ನಿರ್ವಿಕಾರವಾದ ವಿಷಯ ವಿವೇಚನ ವೃತ್ತಿ ಮತ್ತು ಸಹಾನುಭೂತಿಪರ ಕಾತರವನ್ನು ಗೆದ್ದುಕೊಂಡಿತು. ಕಾರ್ಮಿಕರ ಸಭೆಗಳಲ್ಲಿ ಆತನ ಮಾತುಕಥೆ ಸಭಾಸದರಿಗೆ ಮೆಚ್ಚಿಕೆಯಾಯಿತು. ಆತನ ಸರಳ ಭಾಷಾಶೈಲಿ, ಜಟಿಲ ವಿಷಯುವನ್ನು ಸುಲಭಪಡಿಸಿ ಚರ್ಚಿಸುವ ರೀತಿ, ಮತ್ತು ಅತಿರೇಕಕ್ಕೆ ಹೋಗದೆ ಸಮತೂಕದಲ್ಲಿ ನಡಸುವ ಪ್ರವಚನ-ಪ್ರತಿಪಾದನ – ಗಾಂಭೀರ್ಯ – ಈ ಎಲ್ಲವನ್ನೂ ಕಾರ್ಮಿಕ ಸಭಾಸದರು ಮೆಚ್ಚಿ ತಲೆದೂಗಿದರು. ತತ್ಫಲವಾಗಿ ಮೆಯ್ನ್ ಪ್ರಾಂತದಲ್ಲೂ ಅದರೊತ್ತಿನ ನೆರೆಹೊರೆಯ ಪ್ರಾಂತಗಳಲ್ಲೂ ತಮ್ಮ ಸಭೆಗಳಿಗೆ ಬಂದು ಮಾತನಾಡಿ ತಿಳಿವಳಿಕೆ ಕೊಡಬೇಕೆಂದು ಸ್ಕಾಟ್ ಅವರಿಗೆ ಅಡಿಗಡಿಗೆ ಆಮಂತ್ರಣ ಕೊಡಲು ಕಾರ್ಮಿಕ ಗಣದಲ್ಲಿ ಸಡಗರ ವ್ಯಕ್ತವಾಯಿತು. ಹಾಗೆಯೇ ಸಮಾಜದ ಇತರ ಶ್ರೇಣಿಗಳವರೂ ಅವರನ್ನು ಪದೇಪದೇ ಆಹ್ವಾನಿಸುತ್ತಿದ್ದರು. ಉಪನ್ಯಾಸಗಳು, ಚರ್ಚೆಗಳು, ಸಮ್ಮೇಳನಗಳು, ಸಾಮಾಜಿಕ – ಆರ್ಥಿಕ – ರಾಜಕೀಯ ಪ್ರಶ್ನೆಗಳನ್ನೂ ಸಂಸ್ಕೃತಿ ವಿಷಯುವನ್ನೂ ಕುರಿತ ವಿಚಾರಗೋಷ್ಠಿಗಳು ನಡೆದಾಗಲೆಲ್ಲ ಜನರು ತಂತಮ್ಮ ಜೀವನ ಸಂದರ್ಭಗಳನ್ನು ಎತ್ತಿಕೊಂಡು ವರದಿಮಾಡಿ ಸ್ಕಾಟ್ ಅವರಿಂದ ಪರಿಹಾರ ಸೂಚನೆಯನ್ನು ಬೇಡುತ್ತಿದ್ದರು. ಹೀಗೆ ಜನಸಂಪರ್ಕದಲ್ಲಿರುತ್ತಬಂದದ್ದರಿಂದ ಸ್ಕಾಟ್ ಅವರ ಸಮಸ್ಯಾ ಪರಿಶೀಲನ ಸಾಮರ್ಥ್ಯವೂ ಪ್ರತಿಕ್ರಿಯಾ ವಿವೇಚನೆಯೂ ನಿರೂಪಣ ವಿಶದತೆ ನಿರ್ಣಯ ಶಕ್ತಿಗಳೂ ಕುದುರಿದವು. ಆದದ್ದರಿಂದ ಜನಸಂಪರ್ಕ ಅವರ ಬರವಣಿಗೆಗೆ ಬಹುವಸ್ತುಗಳನ್ನೊದಗಿಸಿದುವು; ಮತ್ತು ಅವರ ಬರವಣಿಗೆಗಳು ಅವರ ಜನಸಂಪರ್ಕವನ್ನೂ ಬಾಂಧವ್ಯಗಳನ್ನೂ ಶಾಶ್ವತ ಪಡಿಸಿದುವು.

ಸ್ವದೇಶದಲ್ಲಿ ಒದಗಿದ ಈ ಜನ ಸಂಪರ್ಕ ಮತ್ತು ಅಭಿಪ್ರಾಯ ವಿನಿಮಯಗಳ ಹಿನ್ನೆಲೆಯ ಬೆಲೆಯನ್ನರಿತು 1911 ರಷ್ಟು ಹಿಂದೆಯೇ ಸ್ಕಾಟ್ ಅವರು ಐರೋಪ್ಯ

ದೇಶಗಳಲ್ಲಿ ಸಂಚರಿಸಿ ಅಲ್ಲಲ್ಲಿಯ ಸ್ಥಿತಿಗತಿಗಳ ಅಧ್ಯಯನವನ್ನು ಕೈ ಕೊಳ್ಳಲು ಪ್ರೇರಣೆ ಪಡೆದರು. ಆಮೇಲೆ ಮಧ್ಯ ಹಾಗೂ ದಕ್ಷಿಣ ಅಮೆರಿಕಾ ದೇಶಗಳಲ್ಲೂ ಏಷ್ಯಾ ದೇಶಗಳಲ್ಲೂ ಸೋವಿಯತ್ ರಷ್ಯಾ ಒಕ್ಕೂಟದ ವಿವಿಧ ರಾಜ್ಯಗಳಲ್ಲೂ ಓಡಾಡಿ ತಮ್ಮ ಅಧ್ಯಯನ ಪರಿಶೀಲನ ಕ್ಷೇತ್ರವನ್ನು ವಿಸ್ತರಿಸಿಕೊಂಡರು. ಇದರಿಂದ ಸ್ಥಳೀಯ ಪರಿಸ್ಥಿತಿ ಪರಿಶೀಲನೆಗೂ ತಮಗೆ ವಿಶೇಷಾಸಕ್ತಿಯುಳ್ಳ ವಿಚಾರ ಗಳನ್ನು ಕುರಿತ ವಿವರಾಧ್ಯಯನಕ್ಕೂ ಸಹಾಯವಾಯಿತು. 1920 ರಿಂದ ಆಚೆಗೆ ಅವರ ವಿಶ್ವಪರ್ಯಟನೆ ಹೆಚ್ಚು ವಾಡಿಕೆಯಾಗಿ ನಡೆಯುತ್ತ ಬಂದಿದೆ. ಅವರು ಯಂತ್ರೋದ್ಯಮ ಕ್ಷೇತ್ರದ ಮುಖ್ಯ ಸಮಸ್ಯೆಗಳನ್ನು ಅಧ್ಯಯನ ಮಾಡಿದರಲ್ಲದೆ, ಬ್ರಿಟಿಷ್ ಮ್ಯೂಸಿಯಮ್ಮಿಗೂ ಪ್ಯಾರಿಸ್ ಬರ್ಲಿನ್ ಪಟ್ಟಣಗಳಲ್ಲಿಯ ಗ್ರಂಥಾಲಯ ಗಳಿಗೂ ಕೀಲ್ ಪಟ್ಟಣದಲ್ಲಿಯ ಪ್ರಪಂಚ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಗಳ ಹಾಗೂ ಯಂತ್ರೋದ್ಯಮಗಳ ಸಂಸ್ಥೆಗೂ ಹೋಗಿ, ವೃತ್ತಿ ಸಮಸ್ಯೆಗೆ ಸಂಬಂಧಿಸಿದ ಆಕರ ಗ್ರಂಥಗಳನ್ನು ಓದಿ ಟಿಪ್ಪಣಿ ಮಾಡಿಕೊಂಡರು.

ಮೆಯ್ನ್ ರಾಜ್ಯಕ್ಕೆ ಬಂದ ಮೇಲೆ ಸ್ಕಾಟ್ ಮತ್ತು ಹೆಲೆನ್ ತಮ್ಮ ಚಟು ವಟಿಕೆಗಳನ್ನು ಜಾಗರೂಕತೆಯಿಂದ ಯೋಜಿಸಿದರು; ಹೊಲದಲ್ಲಿ ಫಸಲು ಬೆಳೆಯುತ್ತಿರು ವಾಗ ಹೆಚ್ಚುವೇಳೆ ಮನೆಯಲ್ಲಿರುತ್ತ ಕೈತೋಟದ ಗಿಡಗಳ ಆರೈಕೆಗೆ ಗಮನ ಕೊಟ್ಟರು; ಆಹಾರವನ್ನು ಕಾಪಾಡಿ ಉಗ್ರಾಣದಲ್ಲಿ ಇರಿಸುವುದು, ಮಿಕ್ಕ ಹೊತ್ತಿನಲ್ಲಿ ದಿನ ಯೋಜನೆಯೆಂದು ನಿಷ್ಕರ್ಷೆ ಮಾಡಿಕೊಂಡ ಉಳಿದ ಕೆಲಸಗಳನ್ನು ಮಾಡುವುದು ಹೀಗೆ ದಿನದ ಕಾಯಕದ ಹೊತ್ತಿನಲ್ಲಿ ಹೆಚ್ಚು ಬಿಡುವನ್ನು ಬಯಸದೆ ಮಗ್ನರಾಗಿರು ತ್ತಿದ್ದರು. ಸಾಮಾನ್ಯವಾಗಿ ಅವರು ತಮ್ಮ ವಾರ್ಷಿಕ ಕಾರ್ಯವನ್ನು ಆರು ತಿಂಗಳು ಆಹಾರೋತ್ಪಾದನೆಗೂ ಇನ್ನಾರು ತಿಂಗಳನ್ನು ಪ್ರವಾಸಾಧ್ಯಯನ ಸಂಶೋಧನೆ ಗಳಿಗೂ ಹಂಚಿಕೊಂಡರು. ಈ ಏರ್ಪಾಟು ಅವರಿಗೆ ಚಳಿಗಾಲದಲ್ಲಿ ಸ್ವದೇಶದಲ್ಲೋ ವಿದೇಶಗಳಲ್ಲೋ ಅಧ್ಯಯನ ಪ್ರವಾಸಗಳಿಗೂ ಪ್ರವಚನಗಳಿಗೂ ಬಿಡುವು ಕೊಟ್ಟಿತು.

## ಕಿಡಿಗೆದರುವ ಬರವಣಿಗೆ

ಓದು ಓಡಾಟಗಳಲ್ಲಿ ಹತ್ತಿರ ಹತ್ತಿರ ಎಪ್ಪತ್ತು ವರ್ಷಗಳವರೆಗೆ ಅವರು ತೊಡಗಿ ದ್ದುದರಿಂದ, ಸ್ಕಾಟ್ ಅವರು ಅಂತರ ರಾಷ್ಟ್ರೀಯ ವಿಚಾರಗಳ ಬಗ್ಗೆ ಅಧಿಕಾರದಿಂದ ಮಾತನಾಡುವ ಸಾಮರ್ಥ್ಯವನ್ನು ಪಡೆದರು. ಅವರ ತಲಸ್ಪರ್ಶಿಯಾದ ಪ್ರಪಂಚ ಜ್ಞಾನ ವೈದುಷ್ಯವನ್ನು ಗಮನಿಸಿದ ನ್ಯೂಯಾರ್ಕ್ ಪಟ್ಟಣದ ( Monthly Review) ಎಂಬ ಸ್ವತಂತ್ರ ಸಮತಾವಾದಿ ಮಾಸಪತ್ರಿಕೆ—ತಿಂಗಳು ತಿಂಗಳೂ ನಮಗೆ ಅಂತರ ರಾಷ್ಟ್ರೀಯ ವಿದ್ಯಮಾನಗಳನ್ನು ಕುರಿತು ವಿಮರ್ಶಾತ್ಮಕ ಲೇಖನಗಳನ್ನು ಬರೆ ಯಿರಿ ಎಂದು ಆಮಂತ್ರಿಸಿತು. ಈ ಪತ್ರಿಕೆ ತುಂಬ ಖಂಡಿತವಾದಿಯೂ ಪಕ್ಷಪಾತ

ದೂರವು ಆಗಿದ್ದು, ಯಾವ ಖಾಸಗಿ ಸಂಸ್ಥೆಯ ಅಥವಾ ಸರಕಾರದ ನಿಯಂತ್ರಣಕ್ಕೆ ಒಳಪಡದೆ ನಡೆಯುತ್ತಿತ್ತು. ಆದದ್ದರಿಂದ ಸ್ವತಂತ್ರ ವಿಚಾರಗಳನ್ನೂ ಸವಿಮರ್ಶ ಮನೋಗತಗಳನ್ನೂ ಮಂಡಿಸಲು ಪತ್ರಿಕೆಯಲ್ಲಿ ಯಥೇಷ್ಟಾವಕಾಶವಿತ್ತು. ಸ್ಕಾಟ್ ಸ್ವಲ್ಪಕಾಲ ಲೇಖನಗಳನ್ನು ಬರೆದು ಕಳಿಸಿದರು. ಆಮೇಲೆ ಅವರು ಈ ಪತ್ರಿಕೆಯ ಅಂತರ ರಾಷ್ಟ್ರೀಯ ವಿಭಾಗದ ಹೊರೆ--ಹೊಣೆಗಳನ್ನು ಹೊತ್ತುಕೊಳ್ಳಬೇಕೆಂದು ಪತ್ರಿಕಾ ಕರ್ತರು ಆಮಂತ್ರಣ ಕೊಟ್ಟರು. ಏಪ್ರಿಲ್ 1953 ರಿಂದ ಜೂನ್ 1972 ರ ವರೆಗೆ—ಉಭಯರೂ ಮಾಡಿಕೊಂಡ ಕರಾರು ಮುಗಿಯುವವರೆಗೆ—ಸ್ಕಾಟ್ ಅವರು ಸಂತತವಾಗಿ, ಸರಣಿ ಮುರಿಯದೆ ವಿಚಾರ ಪೂರ್ಣವೂ ವಿಚಾರ ಪ್ರಚೋದಕರವೂ ಆದ ಲೇಖನಗಳನ್ನು ಬರೆಯುತ್ತ ಬಂದರು. ಅವರದು "ಕಿಡಿಗೆದರುವ ಬರವಣಿಗೆ" ಎಂದು ಹೆಸರು ಬಂತು. ಕರಾರನ್ನು ಮುಂಬರಿಸಿ ಬರೆಯುತ್ತ ಬರಬೇಕೆಂದು ಪತ್ರಿಕಾ ಕರ್ತರು ಮರಳಿ ಕೋರಿದರು. ಆದರೆ ಸ್ಕಾಟ್ ಮುಪ್ಪೇರುತ್ತಿದ್ದವರು – ಧನ್ಯವಾದ ಹೇಳಿ ಒಲ್ಲೆನೆಂದರು. ಸಮಕಾಲೀನ ಸಂತಪ್ತ ಸಮಸ್ಯೆಗಳನ್ನು ಕುರಿತು ಗಮನಾರ್ಹ ವಾದ ಟೀಕೆಗಳನ್ನೂ ಅಭಿಪ್ರಾಯಗಳನ್ನೂ ಒದಗಿಸಿ, ವರ್ತಮಾನದ ಚಲನವಲನಗಳ ಸಮಗ್ರ–ಸಂಕ್ಷೇಪ–ದಾಖಲೆಗಳನ್ನು ಕಟ್ಟಿ, ಸ್ಕಾಟ್ ನಿಜವಾಗಿ ಉಪಕಾರ ಮಾಡಿ ದರೆಂದು ಅಂತರ ರಾಷ್ಟ್ರೀಯ ವಿಚಾರಗಳಲ್ಲಿ ಪರಿಣತರಾದ ವಿದ್ವಾಂಸರೆಲ್ಲ ನೆಚ್ಚಿ ಕೊಂಡರು. ಇಡಿಯ ಪ್ರಪಂಚವನ್ನು ಪಟ್ಟಾಗಿ ಹಿಡಿದಿದ್ದ ರಾಯಭಾರಿ ಚಟುವಟಿಕೆ ಗಳ ಹಿನ್ನೆಲೆ ಮುನ್ನಡೆಗಳ ಬಗ್ಗೆ ಆಕರ ಜ್ಞಾನ ಸಂಪತ್ತನ್ನು ಸ್ಕಾಟ್ ಅವರ ಲೇಖನ ಗಳು ಒಳಗೊಂಡಿವೆ ಎಂದು ಸರ್ವತ್ರ ಪ್ರಶಂಸೆಗೆ ಅವು ಪಾತ್ರವಾದುವು. ಸಮಾಜ ವಿಜ್ಞಾನದ ವಿದ್ಯಾರ್ಥಿಗಳಿಗೆ, ಏಕಜಗತ್ತಿನ ಕಲ್ಪನೆಗೆ ಒಡಂಬಡುವವರಿಗೆ, ಅವರ ಈ ಮಾಸಿಕ ಲೇಖನ ಮಾಲೆ ತುಂಬ ಬೋಧಪ್ರದವಾಗಿರುತ್ತವೆ. ಈ ಲೇಖನಗಳಿಗೆ ಪೂರಕವಾಗಿ ಸ್ಕಾಟ್ ದೊಡ್ಡ ಪುಸ್ತಕಗಳನ್ನೂ, ಸಣ್ಣ ಕೈಪಿಡಿಗಳನ್ನೂ ಒಂದಾದ ಮೇಲೊಂದರಂತೆ ಬರೆದು ಪ್ರಕಟಿಸಿದರು. ಪ್ರಪಂಚಸ್ತರದಲ್ಲಿ ಬೆಳೆದು ಗೋಜು ಗೋಜೂ ಗಂಟು ಗಂಟೂ ಆಗಿ ಬಲಿಯುತ್ತಿರುವ ಗಹನ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿ, ದುರ್ಗಮವೆನ್ನಿಸಿಕೊಂಡವನ್ನು ಬಿಡಿಸಿಬಿಡಿಸಿ ತೋರಿಸಿ ಎಲ್ಲರಿಗೂ ತಿಳಿಯುವಂತೆ ವಿವರಿಸುವ ಜಾಣ್ಮೆಯನ್ನು ಈ ಬರವಣಿಗೆಗಳಲ್ಲಿ ನಾವು ನೋಡಬಹುದಾಗಿದೆ.

ನಿಯರಿಂಗ್ ದಂಪತಿಗಳು '50ರ ದಶಕದ ಮಧ್ಯಭಾಗದಲ್ಲಿ (ಸು.1953 ರಿಂದ 1958ರ ವರೆಗೆ) ತಮ್ಮ ಪರಿಶೋಧನೆ ಅಧ್ಯಯನಗಳನ್ನು ಅಮೆರಿಕಾ ಸಂಯುಕ್ತ ಸಂಸ್ಥಾನಗಳ ವಾಸ್ತವ ಪರಿಸ್ಥಿತಿಗಳ ಕಡೆಗೆ ತಿರುಗಿಸಿ, ಒಮ್ಮೊನೆಯಾದ ಮನಸ್ಸನ್ನು ಅವಕ್ಕೆ ಕೊಟ್ಟರು. ನೆರೆಯ ರಾಜ್ಯಗಳಲ್ಲಿಯ ವಿದ್ಯಮಾನಗಳ ಪರಿಶೀಲನೆಯಿಂದ ಮೊದಲುಮಾಡಿ ಇಡಿಯ ಅಮೆರಿಕಾ ಒಕ್ಕೂಟದ ಆಗಿನ 48 ರಾಜ್ಯಗಳ ವಿದ್ಯಮಾನ ಗಳನ್ನೂ ಒಳಕೊಳ್ಳುವಂತೆ ಓಡಾಡಿ ವಿಷಯಸಂಗ್ರಹಮಾಡಿದರು. ನಡೆಯುತ್ತಿರುವು

ದನ್ನೆಲ್ಲ ನೋಡಿ, ಓದಿ ಮನದಟ್ಟುಮಾಡಿಕೊಂಡು ವಿಮರ್ಶಿಸಿದರು. ಈ ವಿಸ್ತಾರ ಪ್ರವಾಸಕಾಲದಲ್ಲಿ ಅವರ ಗೆಳೆಯರೂ ಓದುಗರೂ ಮೆಚ್ಚುಗಾರರೂ–'ಮಂತ್ಲಿ ರೆವ್ಯೂ' (ಮಾಸಿಕ ವಿಮರ್ಶನ) ಪತ್ರಿಕೆಯ ವಾಚಕರೂ ಸೇರಿ–ಅವರಿಗೆ ವೇದಿಕೆಗಳನ್ನು ಒದಗಿಸಿದರು. ಮನೆಗಳಲ್ಲಿ, ಚರ್ಚುಗಳಲ್ಲಿ ನೀತಿ ಸಂಸ್ಥೆಗಳಲ್ಲಿ, ಮತ್ತು ಸ್ವತಂತ್ರ–ಮುಕ್ತ–ವಿಚಾರ ಪರಿಶೀಲನ ಕೇಂದ್ರಗಳಲ್ಲಿ ನಿಯರಿಂಗ್ ದಂಪತಿಗಳಿಗೆ ಮಾತನಾಡುವ ಅವಕಾಶ ದೊರೆಯಿತು. ಈ ಅಧ್ಯಯನ ಪ್ರವಾಸದಲ್ಲಿ ಪಡೆದ ಅನುಭವಗಳನ್ನೂ ಟೀಕೆ ಪರಾಮರ್ಶೆಗಳನ್ನೂ ಆಧಾರ ಮಾಡಿಕೊಂಡು, ದಂಪತಿಗಳು ಕಲೆತು "ಅಮೆರಿಕಾ ಸಂಯುಕ್ತ ಸಂಸ್ಥಾನಗಳು–ಇಂದು" (U.S.A. Today) ಎಂಬ ಗ್ರಂಥವನ್ನು ಬರೆದು 1955 ರಲ್ಲಿ ಪ್ರಕಟಪಡಿಸಿದರು. ಈ ಗ್ರಂಥ ಅಮೆರಿಕದಲ್ಲೂ ಇತರ ಕಡೆಯಲ್ಲೂ ತುಂಬ ಪ್ರಸಾರವನ್ನು ಪಡೆಯಿತು. ಹಿಂದಿ, ಜಪಾನಿ, ಚೀನಿ ಮತ್ತು ರಷ್ಯನ್ ಭಾಷೆಗಳಿಗೆ ಅದರ ಭಾಷಾಂತರವೂ ಆಯಿತು. ನಿಯರಿಂಗ್ ದಂಪತಿಗಳು ಕೈಕೊಂಡ ಪ್ರಪಂಚ ಪರ್ಯಟನದ ಫಲಿತವಾಗಿ "ಪ್ರವಾಸಮಾಡಲು ನಮಗಿರುವ ಹಕ್ಕು" (Our Right to Traval) ಎಂಬ ಲಘುಪುಸ್ತಕವನ್ನು ಬರೆದರು. ಹಾಗೆಯೇ "ಧೈರ್ಯಶಾಲಿ ನವ-ಜಗತ್ತು" (the Brave New work) ಮತ್ತು "ಪ್ರಪಂಚ ಪರ್ಯಟನದಲ್ಲಿರುವ ಸಮತಾವಾದಿಗಳು" (Socialists around the World) ಎಂಬೆರಡು ಪುಸ್ತಕಗಳನ್ನೂ ಬರೆದರು. ಸ್ಕಾಟ್ ಅವರದೇ ವೈಯಕ್ತಿಕ ಕೃತಿಗಳಿಗಂತೂ ಲೆಕ್ಕವಿಲ್ಲ. ಪತ್ರಿಕೆಗಳಿಗೆ ಲೇಖನಗಳು, ಪುಟ್ಟ ಪುಸ್ತಕಗಳು, ದೊಡ್ಡ ಪುಸ್ತಕಗಳು–ಎಲ್ಲದರಲ್ಲೂ ಅವರ ದಕ್ಷ ಸತ್ಯೈಕನಿಷ್ಠ ಪರಿಶೀಲನೆಗಳನ್ನೂ ಪ್ರತಿಕ್ರಿಯೆಗಳನ್ನೂ ನಿರ್ಣಯಗಳನ್ನೂ ಹೊರಗೆಡಹಿದ್ದಾರೆ.

## ಅಮರ ಜೀವನೋತ್ಸಾಹ

ಸಹನೆ - ಸಾಹಸ - ಸರಳತೆ - ನಿಯಮನಿಷ್ಠೆ - ನಿರ್ಭಯತೆಗಳೆಂಬೀ 'ಸ್ಪಾರ್ಟನ್' ಗುಣಗಳಿಂದ ಆಢ್ಯರಾದ ಸ್ಕಾಟ್ ಅವರು ತಮ್ಮ ಆತ್ಮ ಕಥೆಯಲ್ಲಿ ಹೀಗೆ ತಮ್ಮ ದೃಢ ವಿಶ್ವಾಸಕ್ಕೆ ಮಾತಿನ ರೂಪವನ್ನು ಕೊಟ್ಟಿದ್ದಾರೆ.

> "ಬಹುಕಾಲದಿಂದ ಕಷ್ಟ ಜೀವಿಗಳ ಪಾಡನ್ನು ನನ್ನ ಪಾಡಾಗಿ ಮಾಡಿಕೊಂಡಿದ್ದೇನೆ. ನನ್ನ ಸುಖಕ್ಕೋಸ್ಕರ ನಾನು ಹುಟ್ಟಿದವನಲ್ಲ. ಇತರರನ್ನು ದುಡಿಸಿ ಸುಖಪಡುವುದಕ್ಕೋಸ್ಕರವೂ ನಾನು ಹುಟ್ಟಿದವನಲ್ಲ. ಕರ್ಮ ಮಾಡಲು ಇಳೆಯಲ್ಲಿ ಹುಟ್ಟಿದವನು, ಬೇಗನೆಯೋ ತಡವಾಗಿಯೋ ನನ್ನೆಲ್ಲ ಶಕ್ತಿಗಳನ್ನೂ ಹೂಡಿ ಕರ್ತವ್ಯ ಮಾಡಲು ಬಂದವನು. ಆದರ್ಶವೊಂದನ್ನು ಗುರುತಿಸಿ ಅದನ್ನು ಮುಟ್ಟಲು ತಕ್ಕ ಪ್ರಯತ್ನ ಶ್ರದ್ಧೆಯನ್ನು ಅವಲಂಬಿಸುತ್ತೇನೆ. ಆ ಆದರ್ಶವನ್ನು ವ್ಯಕ್ತಿ

ಜೀವನದಲ್ಲೂ ಸಮುದಾಯ ಜೀವನದಲ್ಲೂ ಸಿದ್ಧಿಗೆ ತಂದುಕೊಳ್ಳಲು ಕಾತರಿಸುತ್ತೇನೆ. ಆ ಆದರ್ಶವು ನನ್ನ ಒಡಲಲ್ಲಿ ಸ್ನಾಯುಗಳಿಂದ ಹಿಡಿದು ಅಸ್ಥಿಗಳವರೆಗೆ ಹರಡಿ, ನನ್ನ ಇಡಿಯ ಇರವನ್ನು ತುಂಬಿ ನಡೆಸುವ ಚೇತನಕ್ಕೆ ಬಲವೂಡಲೆಂದು ಹಾರೈಸಿ ಪ್ರಯತ್ನ ಸಹಕಾರವನ್ನು ಆದರ್ಶಕ್ಕೆ ಸಲ್ಲಿಸುತ್ತೇನೆ. ಈ ಜೀವನೋತ್ಸಾಹ ಪ್ರಾಚೀನಕಾಲದಿಂದ ಮಾನವ ಸಂಸ್ಕೃತಿ ವಾಹಿನಿಗೆ ಪೋಷಣೆಕೊಟ್ಟು ಹರಿಯಿಸಿ ಕೊಂಡು ಬಂದಿದೆ; ಮತ್ತು ಸಾಂಪ್ರತ ಕಾಲದಲ್ಲಿ ಹರಿಯುತ್ತಿರುವ ಈ ಸಂಸ್ಕೃತಿ ಪ್ರವಾಹದಲ್ಲಿ ಈ ಉತ್ಸಾಹವು ಪುನಃ ಪರಿವರ್ತನೆಗಳನ್ನು ಆಗಮಾಡಿಸುತ್ತದೆ; ಮತ್ತು ಭವಿಷ್ಯತ್ಕಾಲದಲ್ಲೂ ಸಂಸ್ಕೃತಿಯನ್ನು ಹರಿಯಿಸಿ ಅದು ಉನ್ನತ ಶಿಖರಗಳನ್ನು ಮುಟ್ಟುವಂತೆ ಬಲಕೊಡತಕ್ಕದ್ದೂ ಈ ಅಮರ ಜೀವನೋತ್ಸಾಹವೇ." (ಪುಟ x)

ಸ್ಕಾಟ್ ಅವರೊಡನೆ ಆಯುಸ್ಸಿನ ಉದ್ದಕ್ಕೂ ಸರ್ವದಾ ಜೀವನ ನಿರ್ದೇಶಕ ತತ್ತ್ವವಾಗಿ ಜೊತೆಗಿರುವುದು ಈ ಜೀವನೋತ್ಸಾಹವೇ - ಆದದ್ದರಿಂದ ಅವರಿಗೆ ಬದುಕಿನಲ್ಲಿ ವಿಘ್ನಭಯವಿಲ್ಲ. ಅಪಾಯ ಶಂಕೆ ಅವರನ್ನು ಕಾಡುವುದಿಲ್ಲ. ಕರ್ಮಮಾಡಲು ದೀಕ್ಷೆತೊಟ್ಟು, ಕೈಕೊಂಡ ಕೃತಿಯನ್ನು ಗುರಿಮುಟ್ಟಿಸುವ ಧೀರ ಪ್ರಯತ್ನ ಅವರದು. ತಮ್ಮನ್ನು ಬಹುಮುಖದ ಶಿಸ್ತಿಗೆ ಒಳಪಡಿಸಿಕೊಂಡವರು ಅವರಾದದ್ದರಿಂದ ಅವರ ಕೃಷಿಕರ್ಮದಸಿದ್ಧಿ, ಪ್ರವಚನ ಕರ್ಮದಸಿದ್ಧಿಗಳನ್ನು ಒಕ್ಕಣಿಸಿದಮೇಲೆ ಅವರ ಸಾರಸ್ವತ ವ್ಯವಸಾಯ ಸಿದ್ಧಿಯನ್ನೂ ಇಲ್ಲಿ ಉಲ್ಲೇಖಿಸಬಹುದು.

ಅವರ ಆತ್ಮಕಥೆಯಲ್ಲಿ ಕೊಟ್ಟಿರುವ ಅನುಬಂಧವು 60 ಲಘು ಪುಸ್ತಕಗಳ ಹಾಗೂ 58 ದೊಡ್ಡ ಪುಸ್ತಕಗಳ ಪಟ್ಟಿಯನ್ನೊಳಗೊಂಡಿದೆ. ಅವರು ತಮ್ಮ ಲೇಖನ ವ್ಯವಸಾಯಕ್ಕೆ ಸಂಶೋಧಕನ ಅಥವಾ ಗುಮಾಸ್ತನ ನೆರವನ್ನು ಪಡೆಯರು. ಅನ್ನ ಕಾಯಕ, ಸಮಾಜಸಂಪರ್ಕ, ವಿಸ್ತಾರವಾಗಿ ಪ್ರವಾಸ--ಇವುಗಳ ನಡುವೆ ಹೇಗೆ ಇಷ್ಟು ಮೊತ್ತದ ಗ್ರಂಥಪರಿಶ್ರಮಕ್ಕೆ ಅವಕಾಶಮಾಡಿಕೊಳ್ಳುತ್ತಾರೋ ಏನೋ! ಸ್ಪಷ್ಟವಾಗಿ ಅವರು ಕೃಷಿ, ಅರ್ಥ, ಯೋಜನೆ, ಪರಿಶೀಲನೆ ಮತ್ತು ಕಾರ್ಯಕರಣ ಮೊದಲಾದ ಅನೇಕ ಕ್ಷೇತ್ರಗಳಲ್ಲಿ ಸಿದ್ಧರು. ದೈತ್ಯೋಪಮಸಿದ್ಧಿ ಇದು.

## ನಾಗರಿಕತೆಗಳ ಇತಿಹಾಸ

ತಾವು ಆರ್ಜಿಸಿದ ಜ್ಞಾನವನ್ನು ಜೊತೆಯ ಜನದೊಡನೆ ಹಂಚಿಕೊಳ್ಳಬೇಕೆಂಬ ಅವರ ತವಕದಿಂದ ಕೂಡಿದ ಆಸಕ್ತಿಗೆ ಈಚಿನದೊಂದು ಉದಾಹರಣೆಯನ್ನು ಕೊಡಬಹುದು. 1975 ರಲ್ಲಿ, ತಮ್ಮ 92ನೆಯ ಪರಿಪಕ್ವ ವಯಸ್ಸಿನಲ್ಲಿ ಅವರು "ನಾಗರಿಕತೆ

ಮತ್ತು ಅದರಾಚೆಗೆ: ಇತಿಹಾಸದಿಂದ ಕಲಿಯಬೇಕಾದ ಪಾಠ (Civilization and Beyond: Learning from History) ಎಂಬ ಗಮನೀಯವಾದ ಉದ್ಗ್ರಂಥ ವೊಂದನ್ನು ಬರೆದರು. ಅವರ ಹಿಂದಿನ ಅನೇಕ ಹಸ್ತಪ್ರತಿಗಳ ಪಾಡೇ ಈ ಹೊಸ ಪುಸ್ತಕದ ಹಸ್ತಪ್ರತಿಗೂ ಆಯಿತು. ಹಸ್ತಪ್ರತಿಯನ್ನು ಒಬ್ಬರಾದ ಮೇಲೆ ಒಬ್ಬ ರಂತೆ ಏಳು ಮಂದಿ ಪ್ರಕಾಶಕರು ಕಣ್ಣಾಡಿಸಿ ನೋಡಿದರು. ಇದಕ್ಕೆ ಗಣನೀಯ ಸಂಖ್ಯೆಯಲ್ಲಿ ವಾಚಕರು ದೊರೆಯಲಾರರು ಎಂದು ನೆಪ ಹೇಳಿ ಪ್ರಕಾಶನದ ಹೊರೆಯನ್ನು ಹೊರಲು ಯಾರೂ ಒಡಂಬಡಲಿಲ್ಲ. ಲಾಗಾಯಿತಿನಿಂದಲೂ ಮನುಷ್ಯ ಕುಲದ ಭವಿಷ್ಯತ್ತು ಅದೃಷ್ಟಾಧೀನವೂ ಅನಿಶ್ಚಯವೂ ಆಗಿ ನಡೆದುಬಂದದ್ದು. ಆದದ್ದರಿಂದ ಗ್ರಂಥ ಪ್ರಕಟನೆಯ ಹಾಗೂ ಹಂಚಿಕೆಯ ಹೊರೆಯನ್ನು ಸ್ಕಾಟ್ ಅವರೇ ಹೊತ್ತು ಕೊಂಡರು. ಅವರು ಅಧ್ಯಕ್ಷರಾಗಿ ನಡಸುತ್ತಿರುವ ಸೋಷಲ್ ಸೈನ್ಸ್ ಇನ್ಸ್ ಟಿಟ್ಯೂಟ್ ಸಂಸ್ಥೆಯ ಆಶ್ರಯದಲ್ಲಿ ಈ ಪುಸ್ತಕವನ್ನು ಹೊರತಂದರು. ಈ ಕೃತಿ ಜನ ಪ್ರಿಯವಾಗಬಲ್ಲ ಪ್ರಬಂಧವೂ ಅಲ್ಲ, ವಿದ್ಯಾರ್ಥಿಗಳಿಗೆ ಪಠ್ಯವಾಗುವ ಕೃತಿಯೂ ಅಲ್ಲ. ಅದರಲ್ಲಿ ಲೇಖಕರು ವಿವೇಚನೆಗೆ ಎತ್ತಿಕೊಂಡಿರುವ ಸಂಗತಿಗಳಿವು: ಗತ ನಾಗರಿಕತೆಗಳ ಹುಟ್ಟು, ಅವನ್ನು ಕಟ್ಟಿದವರು ನಡಸಿದ ಪ್ರಯೋಗ ಪರೀಕ್ಷೆಗಳು, ಪಾಶ್ಚಾತ್ಯ ನಾಗರಿಕತೆ ಬಾಳಿದ ಯುಗಾವರ್ತಗಳು, ಮತ್ತು ಪ್ರಪಂಚದ ಎಲ್ಲ ನಾಗರಿಕತೆಗಳಲ್ಲಿ ಕಾಣಬರುವ ಸಾಮಾನ್ಯಲಕ್ಷಣಗಳು, ಹಾಗೆಯೇ ರಾಜ್ಯಶಾಸ್ತ್ರ ಅರ್ಥಶಾಸ್ತ್ರಗಳ ಮತ್ತು ಹೃದಯಭಾವನೆಗಳ ಸಮುಚ್ಚಯ ದೃಷ್ಟಿಯಿಂದ ಸಾಮಾಜಿಕ ಜೀವನದ ವಿಭಜನೆ ವಿಶ್ಲೇಷಣಗಳೂ ಸಮಾಲೋಚನೆಗಳೂ ಈ ಪುಸ್ತಕದಲ್ಲಿ ಬರುತ್ತವೆ. ಕಡೆಯ ದಾಗಿ ಶಕ್ತಿಯ ಮತ್ತು ಖನಿಜಗಳ ಸಂಪನ್ಮೂಲಗಳನ್ನು ಹೊಸಹೊಸದಾಗಿ ಕಂಡು ಹಿಡಿದು ವ್ಯಾಪಕವಾಗಿ ಅವುಗಳನ್ನು ಉದ್ಯಮಗಳಲ್ಲಿ ಬಳಸುತ್ತಿರುವುದರಿಂದಲೂ, ಕ್ಷಿಪ್ರಗತಿಯಲ್ಲಿ ಅಭಿವೃದ್ಧಿ ಹೊಂದುತ್ತಿರುವ ಪರಿಕರ್ಮ ವಿಜ್ಞಾನವನ್ನು (ಟೆಕ್ನಾಲಜಿ) ಬಳಸಿ ವಸ್ತುಗಳ ಉತ್ಪಾದನೆಯನ್ನು ಹೆಚ್ಚಿಸುತ್ತಿರುವುದರಿಂದಲೂ, ಆರ್ಥಿಕ ಚಟು ವಟಿಕೆ ಹೆಚ್ಚಿ ಉದ್ಯಮಗಳ ಪುರೋಭಿವೃದ್ಧಿಗೆ ಬಂಡವಾಳ ಶೇಖರವಾಗುತ್ತಿರುವುದ ರಿಂದಲೂ, ಪ್ರಯಾಣ ಸಾಧನಗಳೂ ಸಮಾಚಾರ ವಾಹಕಗಳೂ ಹೆಚ್ಚಿ, ಉತ್ಪನ್ನ ವಾದ ವಸ್ತುಗಳ ವಿಕ್ರಯಕ್ಕಾಗಿ ವ್ಯಾಪಾರ ವಾಣಿಜ್ಯ ಕ್ಷೇತ್ರಗಳು ಚಟುವಟಿಕೆಯನ್ನು ಹೆಚ್ಚಿಸುತ್ತಿರುವುದರಿಂದಲೂ, ರೂಢಮೂಲ ಸಾಮಾಜಿಕ ಪದ್ಧತಿಗಳಲ್ಲಿ ಮಾರ್ಪಾಟು ಗಳಾಗುತ್ತಿವೆ ಎಂಬ ಸಂಗತಿಯನ್ನು ಪುಸ್ತಕದಲ್ಲಿ ಚರ್ಚಿಸಿ, ಪಶ್ಚಿಮ ನಾಗರಿಕತೆಗೆ ಈಗ ಪ್ರಭಾವಬಲವೂ ಬಳಕೆಯೂ ತಪ್ಪಿ ಬೇಗ ಅದು ಖಿಲವಾಗುವ ಸೂಚನೆ ಕಂಡು ಬರುವುದೆಂದು ಲೇಖಕರು ಸಾರುತ್ತಾರೆ. ಈ ಪುಸ್ತಕ ವಾಸ್ತವವಾಗಿ ಸ್ಕಾಟ್ ಅವರ ಆತ್ಮಕಥೆಯನ್ನು ಒಳಗೊಂಡು, ಅವರ ಹಿಂದಿನ ಕೃತಿಗಳಲ್ಲಿ ಪ್ರತಿಪಾದಿತವಾದ ವಿಚಾರ ಗಳ ಸಾರಸಂಗ್ರಹವೂ ಆಗಿದೆ. ಈ ಸಂದರ್ಭದಲ್ಲಿ ಅವರ ಆತ್ಮಕಥೆಯಲ್ಲಿ ಬರುವ ಈ ಕೆಳಗಿನ ವಾಕ್ಯಗಳನ್ನು ಸಂಗತವೆಂದು ಇಲ್ಲಿ ಎತ್ತಿಕೊಡಬಹುದು:—

"ಪಾಶ್ಚಾತ್ಯ ನಾಗರಿಕತೆ ಕಟ್ಟಿ ಹರಡಿದ ಸಂಸ್ಕೃತಿ ವಿಧಾನ ಎಷ್ಟು ಕಾಲ ಬಾಳಬಹುದೋ ಅಷ್ಟು ಕಾಲ ಬಾಳಿದೆ. ಅದರ ಪ್ರಯೋಜನಾವಧಿ ಮುಗಿದ ಮೇಲೂ ಅದನ್ನು ಬಾಳಗೊಡಲಾಗುತ್ತಿದೆ. ಪಾಶ್ಚಾತ್ಯ ನಾಗರಿಕತೆಯು ಮಹಾಯುದ್ಧ ಸಂದರ್ಭದಲ್ಲಿ ಪಡೆದ ಅನುಭವವನ್ನಾದರೂ ಬಳಸಿ ಸಂಸ್ಕೃತಿ ಸ್ವರೂಪವನ್ನು ಮಾರ್ಪಡಿಸುವುದಕ್ಕೆ ನೆರವು ಕೊಡಬೇಕಾಗಿತ್ತು. ಗೊತ್ತಾದ ಯೋಜನೆಯಂತೆ ವಿಶ್ವವ್ಯಾಪಕವಾಗಿ ನಾಶಹತ್ಯೆಗಳನ್ನು ವ್ಯವಸ್ಥೆಗೊಳಿಸುವುದೇ ಪಾಶ್ಚಾತ್ಯ ನಾಗರಿಕತೆ ಮನುಷ್ಯಕುಲಕ್ಕೆ ಮಾಡಬಹುದಾದ ಉತ್ತಮ ಸೇವೆಯಾದರೆ; ಅಂಥ ನಾಗರಿಕತೆಯನ್ನೂ ಅದರ ಆಟ ಹೂಟಗಳನ್ನೂ ವೀಕ್ಷಿಸುತ್ತ ಬಂದ ಜಗತ್ತಿನ ಪ್ರೇಕ್ಷಕಜನಕ್ಕೆ ಬಾಗಿ, ಜಗದ್ರಂಗದಿಂದ ಕಣ್ಮರೆಯಾಗುವುದೇ ವೈಶ್ವಾನರ ಸಮುದಾಯ ಹಿತದೃಷ್ಟಿಯಿಂದ ಒಳ್ಳೆಯದು."

ಅವರ ಇತೀಚಿನ ಕೃತಿ "ನಾಗರಿಕತೆ ಮತ್ತು ಅದರಾಚೆಗೆ: ಇತಿಹಾಸದಿಂದ ಕಲಿಯಬೇಕಾದ ಪಾಠ" (1975)ದಲ್ಲಿ ಜರ್ಮನಿ ಅಮೆರಿಕಾ ಮತ್ತು ಜಪಾನ್ ರಾಷ್ಟ್ರಗಳ ಚರಿತ್ರೆಯನ್ನು ವ್ಯಾಸಂಗ ಮಾಡಿ ಸ್ಕಾಟ್ ಪಶ್ಚಿಮ ನಾಗರಿಕತೆಯ ಸಾಧನೆಗಳನ್ನು ಹೀಗೆ ಟೀಕಿಸಿ, ತಮ್ಮ ವಿಭಜನ–ವಿಶ್ಲೇಷಣ ಸಾಮರ್ಥ್ಯವನ್ನು ಮುಪ್ಪಿನಲ್ಲೂ ಕಾಪಾಡಿರುವುದನ್ನು ತೋರಿಸುತ್ತಾರೆ.

"ಗತನಾಗರಿಕತೆಗಳು ನಡೆದಾಗ ಹೇಗೋ ಹಾಗೆಯೇ ಪಶ್ಚಿಮ ನಾಗರಿಕತೆ ನಡೆಯುತ್ತಿರುವ ಸಾಂಪ್ರತಾವಧಿಯಲ್ಲಿ ನಮಗೆ ಕಂಡು ಬರುವುದು ಆಸ್ತಿಯನ್ನೂ ಅಧಿಕಾರವನ್ನೂ ಸಂಪಾದಿಸಲು ವ್ಯಕ್ತಿ ಜನದಲ್ಲೂ ಗುಂಪು ಸಮುದಾಯಗಳಲ್ಲೂ ಪ್ರಕಟವಾಗುವ ಸ್ಪರ್ಧಾತ್ಮಕ ಘರ್ಷಣೆ. ಈ ತಿಕ್ಕಾಟದ ಗುರಿ ಧನಾಧಿಕಾರ ಪ್ರಭಾವಗಳ ವಿಸ್ತರಣೆ ಮತ್ತು ಅವನ್ನುಳ್ಳ ಆಢ್ಯರಲ್ಲಿ ಅನಾಢ್ಯರನ್ನು (ಅವು ಇಲ್ಲದ ರಿಕ್ತರನ್ನು) ಸುಲಿಯುವ ಪ್ರವೃತ್ತಿಯ ಅಭಿವೃದ್ಧಿ. ಈ ಆಢ್ಯರನ್ನು ಗುರಿಮುಟ್ಟಿಸುವ ಕಾರ್ಯ ಸಾಧನಗಳೋ ಯುದ್ಧ ಹಾಗೂ ಯುದ್ಧ ಸಂಭವದ ಭೀತಿ. ....ನಾಗರಿಕತೆಯ ಮುಖ್ಯ ಧ್ಯೇಯಗಳಲ್ಲಿ ಯಾವ ಮಾರ್ಪಾಟೂ ನಡೆಯದೆ -- ಮೌಲ್ಯಗಳನ್ನು ಕುರಿತು ಪುನರ್ನಿರ್ಣಯವಾಗದೆ–ಅವನ್ನು ಇದ್ದ ಹಾಗೆಯೇ ಇರಿಸಿಕೊಂಡು ಕಾಲಕಾಲಕ್ಕೆ ಯುದ್ಧ ಮಾಡಿಯೋ ಯುದ್ಧಭಯವನ್ನೊಡ್ಡಿಯೋ ಆಢ್ಯರು ಧ್ಯೇಯಸಿದ್ಧಿಯನ್ನು ಪಡೆಯುತ್ತಿದ್ದಾರೆ. ಆಳಲು ಭೌಗೋಲಿಕವಾಗಿ ಪ್ರದೇಶಾಕ್ರಮಣದ ಆಕಾಂಕ್ಷೆ; ಸೈನಿಕವಾಗಿ ಆರ್ಥಿಕವಾಗಿ ಸಾಂಸ್ಕೃತಿಕವಾಗಿ ರಾಷ್ಟ್ರಗಳನ್ನು ಸ್ವಾಧೀನಪಡಿಸಿಕೊಳ್ಳುವಿಕೆ ; ಹೊಸದಾಗಿ ಆಕ್ರಮಿಸಿಕೊಂಡ ಪ್ರದೇಶ

ಗಳನ್ನೂ ಪ್ರಜೆಗಳನ್ನೂ ಶೋಷಣೆಗೆ ಈಡುಮಾಡುವಿಕೆ- ಇವು ಅಪ್ರತಿಹತವಾಗಿ ಸಾಗಿ ಬಂದಿವೆ. ಇದುವರೆಗೆ ಸಾಗಿಬಂದು ಕಣ್ಮರೆಯಾದ ಒಂದೊಂದು ನಾಗರಿಕತೆಯೂ ಕಟ್ಟಿ ಕಾಪಾಡಿದ್ದು ವೃತ್ತಿನಿರತ ಸೈನ್ಯ ಬಲದ ಯಂತ್ರವನ್ನು. ಈ ಯಂತ್ರವನ್ನು ಅಮೋಘವಾಗಿ ಬಳಸುತ್ತ ಬಂದು ಸ್ವರಾಷ್ಟ್ರ-ಪರರಾಷ್ಟ್ರ ನೀತಿ ನಿರ್ಣಯದಲ್ಲಿ ಅದಕ್ಕೆ ಪ್ರಧಾನ ಪಾತ್ರವನ್ನು ಕೊಡುತ್ತ ಬಂದಿದೆ. (ಪುಟ 184) ಪರಾಧೀನವಾಗಿ ಸೇನಾಕ್ರಮಣ ಗೆದ್ದುಕೊಂಡ ಅಧಿಕಾರದ ಸುಲಿಗೆಗೆ ಬಲಿಯಾದ, ಜನತೆ ವಿದೇಶೀಯರ ದಬ್ಬಾಳಿಕೆಯ ವಿರುದ್ಧ ಬಂಡೆದ್ದದ್ದೂ ಇತಿಹಾಸದ ಪುಟಗಳಲ್ಲಿ ಮಿಂಚುತ್ತಿದೆ. ಮತ್ತು ಸ್ವಾತಂತ್ರ್ಯಕ್ಕೂ ಸ್ವಯಮಾಧಿಕಾರ ಸ್ಥಾಪನೆಗೂ ಎಲ್ಲೆಲ್ಲಿ ಜನ ಪ್ರಯತ್ನಗಳು ಚಳವಳಿಯಾಗಿ ಹಬ್ಬಿದುವೋ ಅಲ್ಲೆಲ್ಲ ಪಶ್ಚಿಮ ನಾಗರಿಕತೆ ಸೋಲನ್ನನುಭವಿಸುತ್ತ ಬಂದಿದೆ. 1946ರ ಯುದ್ಧಾನಂತರ ಐರೋಪ್ಯ ಸಾಮ್ರಾಜ್ಯಗಳ ಪರಾಭವವು ಈ ಪರಿಣಾಮ ಫಲಗಳನ್ನು ಸ್ಪಷ್ಟವಾಗಿ ಎತ್ತಿ ತೋರಿಸುತ್ತಿವೆ (ಪುಟ 185)....ಪಶ್ಚಿಮ ನಾಗರಿಕತೆ ಅದರ ಹಿಂದಿನ ನಾಗರಿಕತೆಗಳಿಂದ ಒಂದು ಮುಖ್ಯ ದೃಷ್ಟಿಯಲ್ಲಿ ಭಿನ್ನವಾದದ್ದು. ಹಿಂದಿನ ನಾಗರಿಕತೆಗಳು ಪ್ರಾದೇಶಿಕವಾಗಿ ಪ್ರಭಾವಶಾಲಿಗಳಾಗಿದ್ದರೆ ಪಶ್ಚಿಮ ನಾಗರಿಕತೆ ಪ್ರಪಂಚ ವ್ಯಾಪಿಯಾದ ಪ್ರಭಾವ ಬಲವನ್ನು ಪಡೆಯಿತು. ಹಿಂದಿನ ನಾಗರಿಕತೆಗಳ ವ್ಯಾಪ್ತಿಯನ್ನು ಕಡಲುಗಳೂ ಕಾಡುಗಳೂ ಇತರ ಭೌಗೋಲಿಕ ಪ್ರತಿಬಂಧಕಗಳೂ ತಡೆದುವು. ವಾರ್ತಾಸಾಧನದಲ್ಲೂ ಮಾರ್ಗಸಾಧನದಲ್ಲೂ ಆದ ಮಹಾ ಪರಿವರ್ತನೆ ಈ ಭೌಗೋಲಿಕ ಪ್ರತಿಬಂಧಕಗಳನ್ನು ಒಡೆದು ಹಾಕಿದೆ (ಪು. 187).... ಸಾಂಪ್ರತಕಾಲದಲ್ಲಿ ಪ್ರಕಟವಾಗುತ್ತಿರುವ ಮಹಾ ಕ್ರಾಂತಿದಿನಗಳ ಒತ್ತಾಯ ಜಂಜಾಟಗಳು ಪಾಶ್ಚಾತ್ಯ ನಾಗರಿಕತೆಯ ಶಿಲ್ಪದಲ್ಲಿ ದೊಡ್ಡ ಬಿರುಕುಗಳನ್ನು ಬಿಡಿಸಿ ಅದರ ಕುಸಿತಕ್ಕೆದಾರಿ ಮಾಡಿವೆ. ಬಂಡವಾಳ ಶಾಹಿಗೂ ಮಾರ್ಕ್ಸ್‌ವಾದಕ್ಕೂ ಈಗ ನಡೆಯುತ್ತಿರುವ ಘರ್ಷಣೆ ವ್ಯಾಪಕವಾಗಿ, ವಿಭಾಜಕವಾಗಿ, ಪಶ್ಚಿಮ ನಾಗರಿಕತೆಯನ್ನು ಶಿಥಿಲಿಸಿ ಒಡೆದು ಕೆಡಹುವುದರಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುವುದಾಗಿದೆ (ಪುಟ.252)....ಶಾಂತಿ ಸಾಗರದಲ್ಲೂ ಇಡಿಯ ಏಷ್ಯಾ ಖಂಡದಲ್ಲೂ ತಾನು ಅಧಿಕಾರಿಯಾಗಿ ದರ್ಪನಡಸುತ್ತೇನೆಂಬ ವಾಷಿಂಗ್‌ಟನ್ ಪ್ರಭುತ್ವದ ಸುಸಂಘಟಿತಪ್ರಯತ್ನಕ್ಕೆ ಪರಾಜಯದ ಮುನ್ಸೂಚನೆ ಕಾಣಬಂದದ್ದು 1950-53ರ ವರೆಗೆ ನಡೆದ ಕೊರಿಯಾ ಯುದ್ಧದ ಕಾಲದಲ್ಲಿ ಜನರಲ್ ಮೆಕ್‌ಆರ್ಥರಿಗೂ ಆತನ ಅಂತರರಾಷ್ಟ್ರೀಯ ಸೇನೆಗೂ ಆದ ಅಪಯಶಸ್ಸಿನ ಅಂತಿಮ ಸಂದರ್ಭದಲ್ಲಿ.

ಈ ಪರಾಜಯದ ಇನ್ನೊಂದು ಪೂರ್ವಸೂಚನೆ ಆಗ್ನೇಯ ಏಷ್ಯಾ ಪ್ರದೇಶ ದಲ್ಲಿ (ವಯೆಟ್-ನಾಮ್) ಫ್ರಾನ್ಸಿನ ಸಾಮ್ರಾಜ್ಯದ ಒತ್ತಾಯದೆಡೆ ಯಲ್ಲಿ ಅಮೆರಿಕದ ಒತ್ತಾಯವನ್ನು ನೆಲೆಗೊಳಿಸಲು ವಾಷಿಂಗ್‌ಟನ್ ಪ್ರಭುತ್ವ ನಡಸಿದ ಸಂಚನ್ನು ಮುರಿಯಲು ಅನಿರೀಕ್ಷಿತವಾಗಿಯೂ ನಂಬಿಕೆಗೆ ಮೀರಿದ್ದೂ ಆಗಿ, ಆ ಪ್ರದೇಶಜನ ಒಡ್ಡಿದ ಪ್ರತಿಭಟನೆ. ಇದು ಪಶ್ಚಿಮ ನಾಗರಿಕತೆಗೆ ಇನ್ನೊಂದು ದೊಡ್ಡ ಪೆಟ್ಟನ್ನು ಕೊಟ್ಟಿತು. .... ಆಗ್ನೇಯ ಏಷ್ಯದಲ್ಲಿ ಪಶ್ಚಿಮ ನಾಗರಿಕತೆ ನಡಸಿದ ಯುದ್ಧಗಳ ಪರಿಣಾಮ ವಾಗಿ 1954 ರಲ್ಲಿ ಫ್ರೆಂಚರನ್ನು ವಸಾಹತುಗಾರರ ಕೆಚ್ಚು ಓಡಿಸಿ ಬಿಟ್ಟಿತು. ಆದರೆ ಈ ಯುದ್ಧಗಳಿಗೆ ವ್ಯವಸ್ಥಾಬಲವನ್ನೂ ಧನಬಲ ವನ್ನೂ ಸೈನ್ಯಬಲವನ್ನೂ ಒದಗಿಸಿದ್ದು ವಾಷಿಂಗ್‌ಟನ್ ಪ್ರಭುತ್ವ. ಮಾರ್ಕ್ಸ್‌ವಾದವು ಆಗ್ನೇಯ ಏಷ್ಯಾದಲ್ಲಿ ಬೇರುಬಿಡದಂತೆ ಅದನ್ನು ಧ್ವಂಸಮಾಡಬೇಕೆಂಬುದು ವಾಷಿಂಗ್‌ಟನ್ ಪ್ರಭುತ್ವದ ಧ್ಯೇಯ.... ಪಶ್ಚಿಮ ನಾಗರಿಕತೆಯ ಪ್ರತಿಕ್ರಾಂತಿಯ ಉದ್ದೇಶ ದೂರ ಪ್ರಾಚ್ಯದಲ್ಲಿ ಏಕಸ್ವಾಮ್ಯದ ಬಂಡವಾಳ ಶಾಹಿಯನ್ನೂ ಸಾಮ್ರಾಜ್ಯ ಶಾಹಿಯನ್ನೂ ಪುನಸ್ಸ್ಥಾಪನೆ ಮಾಡುವುದೇ. ಆದರೆ ಈ ಉದ್ದೇಶಕ್ಕೆ ಆ ಪ್ರದೇಶದಲ್ಲಿ ನಿರ್ಣಾಯಕವೂ ಅಪಮಾನಕರವೂ ಆದ ಪರಾಜಯವಾಯಿತು. (ಪು.250-4)

"ಬಾಳುತ್ತಿರಬೇಕು, ಕಟ್ಟುತ್ತಿರಬೇಕು, ಕ್ರಿಯಾಜನಕವಾಗಿರಬೇಕು. ವಿಘ್ನ ಗಳನ್ನೂ ಮಿತಿಗಳನ್ನೂ ಪಕ್ಕಕ್ಕೆ ತಳ್ಳಿ ಮುಂದಕ್ಕೆ ಸಾಗಬೇಕು. ನಾಗರಿಕತೆಯ ಸ್ವರೂಪವೂ ಕರ್ತವ್ಯವೂ ಮನುಷ್ಯನಲ್ಲಿ ನೆಲಸಿರುವ ರಚನಾತ್ಮಕ ಪ್ರತಿಭೆಯನ್ನು ಚೋದಿಸಿ ಮುನ್ನಡಸುತ್ತವೆ. ಇದು ಮಾನವತೆಗಿರುವ ದೈವನಿಯಾಮಕ, ಮಾನವತೆ ತಳೆಯಬೇಕಾದ, ಉತ್ತಮವಾದಿತ್ವ".-ಎಂಬುದನ್ನು ತಮ್ಮ ಜೀವನ ಸಂದೇಶದ ಪಲ್ಲವಿ ಯಾಗಿ ಮಾಡಿಕೊಂಡು ಸ್ಕಾಟ್ ಅವರು ತಮ್ಮ ಈ ವಿದ್ವತ್ಪೂರ್ಣವಾದ ಗ್ರಂಥ ವನ್ನು ಮುಕ್ತಾಯಗೊಳಿಸುತ್ತಾರೆ.

ಸ್ವಾವಲಂಬನ, ಪರಸ್ಪರಸಹಾಯ ಮತ್ತು ಸಮಾಜದ ಒಕ್ಕಟ್ಟು-ಇವನ್ನು ಸಾಧಿಸಲು ಬಾಳಿನ ಉದ್ದಕ್ಕೂ ಶ್ರದ್ಧೆ ನಿಷ್ಠೆಗಳಿಂದ ಆಚಾರ ಶೀಲರಾದ ಅವರು ಜನಕ್ಕೆ ಕೊಡುವ, ಭಾರತೀಯ ಗಾಯತ್ರಿಯಂಥ, ಶುಭಸಂದೇಶ ಇದು:—

"ನಮ್ಮನಮ್ಮ ಸಾಮರ್ಥ್ಯಗಳಿಗನುಸಾರವಾಗಿ ನಾವೆಲ್ಲ ಸಹೋ ದ್ಯಮದಲ್ಲಿ ಸೇರಿ, ಏಕದೀಕ್ಷೆಯಿಂದ ದುಡಿಯಲು ದೃಢಸಂಕಲ್ಪ ಮಾಡೋಣ. ಇದಕ್ಕೆ ಬೇಕಾದ ಬೆಳಕು, ಕಾವು ಮತ್ತು ಕ್ರಿಯಾ

(ಪ್ರಾಣ) ಶಕ್ತಿ ನಮಗೆ ಸೂರ್ಯನಿಂದ ಬರುತ್ತದೆ. ಈ ಸೂರ್ಯ ಪ್ರದತ್ತ ಶಕ್ತಿತ್ರಯವನ್ನು ಬಳಸಿ ನಾವು ಈಗ ರೂಢಿಯಲ್ಲಿರುವ ಸಂಸ್ಕೃತಿಯಲ್ಲಿ ಆಚಾರಯೋಗ್ಯವೆನ್ನಿಸುವ ಪರ್ಯಾಯ ರೂಪವನ್ನು ತಂದುಕೊಳ್ಳೋಣ. ವೈಶ್ವಾನರಸ ಮುದಾಯದಲ್ಲಿ ನೂತನ ಸಂಸ್ಕಾರವನ್ನೂ ಪುನಸ್ಸಾಹಸಕ್ಕೆ ಅವಶ್ಯವಾದ ಜೀವಕಳೆಯನ್ನೂ ನಾವು ತುಂಬಿಕೊಡಬೇಕಾಗಿದೆ. ಇಂಥ ಪಾತ್ರವಹಿಸಲು ನಮ್ಮಲ್ಲಿ ಹುಟ್ಟುವಾಗಲೇ ಪ್ರತಿಭೆ ಮೇಧಾಶಕ್ತಿಗಳನ್ನು ಮೂಲಧನವಾಗಿ ಪಡೆದು ಹುಟ್ಟಿದ್ದೇವೆ. ನಾವು ಬಾಳುವ ಬದುಕೇ ಈ ಬಂಡವಾಳವನ್ನು ಹೆಚ್ಚಿಸುತ್ತದೆ. ಹೀಗೆ ನಮಗೆಲ್ಲ ಸವಾಲಾದ ಮುಂದಿನ ಬದುಕನ್ನು ಎದುರಿಸಲು ಸಮರ್ಥರಾಗುತ್ತೇವೆ. ಸವಾಲನ್ನು ಎದುರಿಸಿ ನಿತ್ಯ ವಿಸ್ತಾರಗೊಳ್ಳುತ್ತಿರುವ ನಮ್ಮ ವಿಶ್ವ ಜಗತ್ತನ್ನು ಮಂಗಳದಲ್ಲಿ ನಡಸುವುದಕ್ಕೋಸ್ಕರ ನಾವು ನಿರ್ವಾಹ ಮಾಡಬೇಕಾದ ಕರ್ತವ್ಯದಲ್ಲಿ ತೊಡಗಿ ಕೃತಕೃತ್ಯರಾಗಲು ನಮ್ಮಲ್ಲಿ ಕಲ್ಪನಾಶಕ್ತಿಯನ್ನೂ ಕೆಚ್ಚನ್ನೂ ಎದೆಗಾರಿಕೆಯನ್ನೂ ಎಚ್ಚರಿಸಿ ಮರೆಯಬಲ್ಲೆವೆ? (ಪು.255)

ಸ್ಕಾಟ್ ಅವರು ಮನುಷ್ಯನಿಗೆ ನೇಮಿಸುವ ಕರ್ತವ್ಯವು ನಿಜವಾಗಿ ಅವರ ಲೋಕಾನುಭವದಿಂದ ಕಂಡುಕೊಂಡದ್ದು. ವಿಚಾರ ಸಿದ್ಧವಾದ ಕರ್ತವ್ಯ ಅದು. ಜಗತ್ತಿನಲ್ಲಿ ಉಳಿಸಿಕೊಳ್ಳಬೇಕಾದದ್ದನ್ನು ಕಾಪಾಡಿಕೊಂಡು, ಜೊತೆಜನರೊಡನೆ ಹಂಚಿಕೊಂಡು, ವಿವಿಧ ಜಗದ್ದ್ರವ್ಯಗಳನ್ನು ಚೆಲುವುಗೊಳಿಸುವ, ಸಾಧ್ಯವಾದರೆ ಇನ್ನಷ್ಟು ಚೆಲವುಗೊಳಿಸುವ ಮಹಾ ಕರ್ತವ್ಯ ಪಾತ್ರ ಅದು. ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲೂ ಪ್ರಪಂಚದ ಇತರ ರಾಷ್ಟ್ರಗಳಲ್ಲೂ ಜನ ಜೀವನವು ಅವಿಚಾರದ ನಿಯಮಕ್ಕೆ ಬದ್ಧವಾಗಿ, ಅನ್ಯಾಭಿಪ್ರಾಯಗಳ ನಿರ್ಬಂಧಕ್ಕೆ ಸಿಕ್ಕಿ, ವ್ಯಕ್ತಿ ಘನತೆ ಸ್ವಾತಂತ್ರ್ಯಗಳ ವಿಕಾಸಕ್ಕೂ ವಿಚಾರ ಸ್ವಾತಂತ್ರ್ಯದ ವಿಕಾಸಕ್ಕೂ ಸಾಮಾಜಿಕ ಪ್ರಜ್ಞೆಯ ವಿಕಾಸಕ್ಕೂ ಅವಕಾಶವನ್ನು ತಪ್ಪಿಸಿ ಕೇವಲ ಮಾನುಷ್ಯಹೀನವಾಗಿ ಬಿಟ್ಟಿದೆ. ಹುಟ್ಟಿನಿಂದ ಸಾಯುವವರೆಗೆ ಜನರು ಯಾಂತ್ರಿಕವಾಗಿ ಬಾಳುತ್ತ ಲಾಭ ದೃಷ್ಟಿಯ ಆರ್ಥಿಕ ವ್ಯವಸ್ಥೆಯ ಹಿತರಕ್ಷಣೆಗಾಗಿ ಚಟುವಟಿಕೆ ನಡಸುತ್ತಿದ್ದಾರೆ. ಇಂಥ ಪರಸ್ಥಿತಿಯಲ್ಲಿ ಸ್ಕಾಟ್ ಅವರ "ನಾಗರಿಕತೆ ಮತ್ತು ಅದರಾಚೆಗೆ" ಎಂಬ ಕೃತಿಯನ್ನು ವ್ಯಾಸಂಗಕ್ಕೆ ಎತ್ತಿಕೊಂಡರೆ ನಿಯರಿಂಗ್ ದಂಪತಿಗಳ ವೈಶ್ವಾನರ ಹಿತದರ್ಶನ, ಆ ಧ್ಯೇಯಕ್ಕನುಸಾರವಾದ ಚರಿತೆ ಮತ್ತು ಸಾಧು–ಜೀವನ–ವಿಧಾನಗಳ ಪರಿಚಯವನ್ನು ಪಡೆಯಬಹುದು. ಸಂಕುಚಿತ ಹೃದಯದ ಸಮಕಾಲೀನ ಮಾನವತೆ ಎತ್ತ ಸಾಗಿದೆ ಎಂಬ ಯಕ್ಷಪ್ರಶ್ನೆಯನ್ನುವರು ಎತ್ತಿರುವುದರ ಔಚಿತ್ಯವನ್ನು ನಾವು ಒಪ್ಪಿಕೊಳ್ಳಬೇಕೆನ್ನಿಸುತ್ತದೆ.

## ಪ್ರಕೃತಿ ಸನ್ನಿಧಿಯಲ್ಲಿ ಮನುಷ್ಯ ವಿಕಾಸ

ಹೆನ್ರಿ ಡೇವಿಡ್ ತೋರೋ ಅಮೆರಿಕದ ಪ್ರಕೃತಿಯ ದೊಡ್ಡ ಅರ್ಚಕ. ಆತ ನಮ್ಮ ಭಾರತೀಯ ಋಷಿಗಳಂತೆ ಕಾಡಿನ ಏಕಾಂತವನ್ನಾಶ್ರಯಿಸಿ ಸರಳ ಜೀವನವನ್ನು ನಡಸಿದಾತ. ಅಮೆರಿಕದಲ್ಲಿ ಸರಳ ಜೀವನವೆಂದೊಡನೆ ತೋರೋ ನೆನಪಿಗೆ ಬರುತ್ತಾರೆ. ಸ್ಕಾಟ್ ಅವರಿಗೆ ಬದುಕಿನ ಉದ್ದಕ್ಕೂ ತೋರೋವೇ ಗುರು. ತೋರೊವಿನೊಡನೆ ಪ್ರಕೃತಿದೇವಿ ಸಂಭಾಷಿಸುತ್ತಿದ್ದಳಂತೆ. ಈ ಸಂಭಾಷಣದ ಫಲವೇ ಆತ ಗಳಿಸಿದ್ದ ವೀರ್ಯ ಓಜಸ್ಸು ತೇಜಸ್ಸುಗಳು. ಆತನ ಶ್ರದ್ಧೆ ದರ್ಶನಗಳ ಶಿಲ್ಪವೂ ಈ ಸಂವಾದದ ಫಲವೇ. ಗಡಿಬಿಡಿ ಸದ್ದು ಗದ್ದಲಗಳಿಂದ ದೂರವಾಗಿ ಪ್ರಕೃತಿ ಸನ್ನಿಧಿಯಲ್ಲಿ ಸುಖ ಶಾಂತಿಗಳನ್ನು ಕಾಣಲು ತೋರೋ ತುಂಬ ಹೆಣಗಿದರು. ಸ್ಕಾಟ್ ನಿಯರಿಂಗ್ ಅವರ ದರ್ಶನ, ಜೀವನ ಮತ್ತು ನಿಯರಿಂಗ್ ದಂಪತಿಗಳ ಅವಿನಾಭಾವದ ಚಟುವಟಿಕೆಗಳು–ಇವನ್ನು ನೋಡಿದರೆ, ಅವರಿಗೆ ಗುರುವಾದ ತೋರೋವಿನ ಒಂದು ವಾಕ್ಯವನ್ನು ಉದಾಹರಿಸಬೇಕು ಎನ್ನಿಸುತ್ತದೆ.

> "ಒಂದಾನೊಂದು ವರ್ಣಚಿತ್ರವನ್ನು ರೇಖಿಸುವುದು ಅಥವಾ ಒಂದು ಶಿಲ್ಪಾಕೃತಿಯನ್ನು ಕಡೆಯುವುದು ಒಬ್ಬನಿಗೆ ಸಾಧ್ಯವಾದಾಗ ಅದನ್ನು **ಸಾಮಾನ್ಯ ಸಿದ್ಧಿ** ಎಂದು ಕರೆಯಬಹುದು. ಆದರೆ ಒಂದು ಪರಿಸರವನ್ನೋ ಮಾಧ್ಯಮವನ್ನೋ ನೋಡಿದ ನಾವು ಅದನ್ನು ಯಥಾವತ್ತಾಗಿ ರೇಖಿಸಿಯೋ ಕಡೆದೋ ನಿಲ್ಲಿಸಬಲ್ಲೆವಾದರೆ, ಅದು ನಿಜವಾಗಿ **ವಿಶೇಷ ಸಿದ್ಧಿ** ಎನ್ನಿಸಿ ಕಲಾವಿದನ ಮಹಿಮೆಯನ್ನು ಸಾರುತ್ತದೆ."

## ತಿರಸ್ಕರಿಸಿದವರಿಂದ ಪುರಸ್ಕಾರ

58 ವರ್ಷಗಳ ಹಿಂದೆ, 1915 ರಲ್ಲಿ, ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯವು ಅಸಿಸ್ಟೆಂಟ್ ಪ್ರೊಫೆಸರ್ ಸ್ಕಾಟ್ ನಿಯರಿಂಗ್ ಅವರನ್ನು ಅವರ ಕ್ರಾಂತಿಕಾರಕ ವೃತ್ತಿಗಳಿಗೋಸ್ಕರ ಸ್ವತಃ ಇಷ್ಟವಿಲ್ಲದಿದ್ದರೂ ಪ್ರತಿಗಾಮಿಗಳ ಬಲಾತ್ಕಾರಕ್ಕೆ ಮಣಿದು ಕೆಲಸದಿಂದ ತೆಗೆದು ಹಾಕಿತಷ್ಟೆ? ಕಾಲ ಚಕ್ರವುರುಳಿದಂತೆ, ಈ ಕೋಪದ ಕಾವು ಇಳಿದು ಉದಾರ ಪ್ರೀತಿಯಾಗಿ ಮಾರ್ಪಟ್ಟಿತು. ಈ ಒಂದು ಮಧುರ ಪರಿವರ್ತನೆ ಅತ್ತ ವಿಶ್ವವಿದ್ಯಾನಿಲಯಕ್ಕೆ ಘನತೆಯನ್ನು ತಂದುಕೊಡುತ್ತದೆ, ಇತ್ತ ಸ್ಕಾಟ್ ನಿಯರಿಂಗ್ ಅವರ ಸಾಧನೆಗೆ ಮನ್ನಣೆ ದೊರೆತದ್ದರಿಂದ ಅವರು ವಿಶ್ವವಿದ್ಯಾನಿಲಯದ ಬಗ್ಗೆ ತಳೆದ ನಿರ್ವಿಕಾರ ಧನ್ಯತಾಭಾವಕ್ಕೆ ಎಡೆಮಾಡುತ್ತದೆ. ವಿಶ್ವವಿದ್ಯಾನಿಲಯದ ಮುಖ್ಯಸ್ಥರೂ ಧರ್ಮದರ್ಶಿಗಳ ಸಮಿತಿಯ ಅಧ್ಯಕ್ಷರೂ, ನಿಯರಿಂಗ್ ದಂಪತಿಗಳ ಎರಡನೆಯ ಕಾಡು ತೋಟದ ಮನೆಗೆ ಚಿತ್ತೈಸಿದರು, ಅವರೊಡನೆ ವಿಶ್ವವಿದ್ಯಾನಿಲಯದ ಬೇರೆ ಬೇರೆ

ಅಧ್ಯಯನ ವಿಭಾಗಗಳ ಅಧಿಕಾರಿಗಳೂ ಪೌರಸಭಾ (ಕಾರ್ಪೊರೇಶನ್) ಸಂಸ್ಥೆಯ ಅಧಿಕಾರಿಗಳೂ ಬಂದು ಸ್ಕಾಟ್ ನಿಯರಿಂಗ್ ಅವರಿಗೆ ಪರಮಗೌರವವನ್ನು ಸಲ್ಲಿಸಿದರು. ಗೌರವ ಪ್ರಾಧ್ಯಾಪಕ ಪದವೀದಾನಕ್ಕೆ ಸಂಬಂಧಪಟ್ಟ ಸಮರ್ಥರ ಪ್ರಸ್ತುತಿ ಹೀಗಿದ್ದಿತು :-

"ಪೆನ್ಸಿಲ್ವೇನಿಯಾ ವಿಶ್ವವಿದ್ಯಾನಿಲಯದ ವ್ಹಾಟ್ಮನ್ ಸ್ಕೂಲಿನ ಅರ್ಥಶಾಸ್ತ್ರ ವಿಭಾಗದಲ್ಲಿ ಪ್ರಾರಂಭವಾದ ಅಧ್ಯಾಪಕ ವೃತ್ತಿಯ ಅಸಾಧಾರಣತೆಯನ್ನು ಗಮನಿಸಿ, ಜೀವನದ ಪರಮಧ್ಯೇಯವು ಸತ್ಯಾನ್ವೇಷಣೆಯೇ ಎಂದೂ, ವ್ರತಪೂರ್ವಕವಾದ ಸಾಧನೆಯಿಂದ ಕಂಡುಕೊಂಡು ಹಾಗೆ ಕಂಡುಕೊಂಡ ಸತ್ಯದ ಪ್ರತಿಪಾದನೆಯೇ ಜೀವನಕ್ಕಿರುವ ಪರಮಲಕ್ಷ್ಯವೆಂದೂ ನಂಬಿ, ಆ ನಂಬಿಕೆಯ ಬಲದಿಂದ ಬದುಕಿನ ಎಲ್ಲ ಚಟುವಟಿಕೆಗಳನ್ನು ಪರಿಷ್ಕರಿಸಿ ನಡಸುತ್ತಿರುವ ಸ್ಕಾಟ್ ನಿಯರಿಂಗ್ ಅವರನ್ನು ಏಪ್ರಿಲ್ 13, 1973ರಿಂದ ಅರ್ಥಶಾಸ್ತ್ರದ ವಿಶ್ರಾಂತ ಗೌರವ ಮಹೋಪಾಧ್ಯಾಯರನ್ನಾಗಿ ನೇಮಿಸಿದೆ."

ಈ ಮೇಲಿನ ಪ್ರಮಾಣವಾಕ್ಯ ಮುಂಡಕೋಪನಿಷತ್ತಿನ ಮಂತ್ರಾರ್ಥವನ್ನು ಪ್ರಕಾಶ ಪಡಿಸು ವ್ಯಾಖ್ಯಾನದಂತೆ ಇದೆ. "ಸತ್ಯಮೇವ ಜಯತೇ ನಾನೃತಮ್" (2. 36)–ಸತ್ಯವೊಂದೇ ಗೆಲ್ಲುತ್ತದೆ, ಅನೃತವಲ್ಲ. ನಿಜವಾಗಿ ಸ್ಕಾಟ್ ಅವರು ವಿಶ್ವಮಾನ್ಯ ವ್ಯಕ್ತಿ, ಮತ್ತು ಇಪ್ಪತ್ತನೆಯ ಶತಮಾನದ ಋಷಿ. ಅವರ ಅಂತರ್ದರ್ಶನ, ಮನೋವಾಕ್ಕಾಯಗಳ ಸಮರಸ ಸಾಂಗತ್ಯವನ್ನು ತೋರಿಸುವ ಅವರ ಅನನ್ಯ ಸಾಧಾರಣವಾದ ಜೀವನ, ಮನುಷ್ಯನ ಏಳಿಗೆಗೆ ಒದಗುವ ಉತ್ತಮೋಪದೇಶವನ್ನು ಅನುಷ್ಠಾನದಲ್ಲಿರಿಸಿಕೊಳ್ಳುವ ಅವರ ಅತುಲಸಾಮರ್ಥ್ಯ ಮತ್ತು ವೈಶ್ವಾನರ ಸಮುದಾಯದ ಐಕ್ಯಕ್ಕಾಗಿಯೂ ವಿಶ್ವಸಂಸ್ಕೃತಿ ಶಿಲ್ಪದ ರಚನೆಗಾಗಿಯೂ ಅವರು ಸೂಚಿಸುವ ದೀಕ್ಷಾಬದ್ಧ ಮಹಾ ಪ್ರಯತ್ನ – ಇವೆಲ್ಲ ಕಲೆತು ಅವರ ವ್ಯಕ್ತಿತ್ವಕ್ಕೆ ಘನತೆಯನ್ನು ತಂದುಕೊಟ್ಟಿವೆ. ನಿಯರಿಂಗ್ ದಂಪತಿಗಳ ಎರಡನೆಯ ಕಾಡು ತೋಟದ ಮನೆ ಒಳ್ಳೆಯ ಜೀವನದ ಹದವನ್ನು ಹುಡುಕುತ್ತಿರುವ ಅನೇಕ ಅಮೆರಿಕದ ತರುಣರಿಗೂ, ಹಾಗೆಯೇ ಹೊರದೇಶಗಳ ಕೆಲವರಿಗೂ ನೆಮ್ಮದಿಕೊಡುವ ಯಾತ್ರಾಸ್ಥಳವಾಗಿದೆ. ಇವರೆಲ್ಲ ನಿಯರಿಂಗ್ ದಂಪತಿಗಳನ್ನು ಕಂಡಾಗ ತಮ್ಮ ಅನ್ವೇಷಣೆಗೆ ಇನ್ನೂ ಲಭ್ಯವಾಗದ್ದನ್ನು ಪಡೆಯುವ ಭರವಸೆಯನ್ನು ತಳೆಯುತ್ತಿದ್ದಾರೆ. ದಂಪತಿಗಳ ಸ್ಫೂರ್ತಿ ತುಂಬಿದ ಮಾತನ್ನು ಕೇಳಿ ಪ್ರಭಾವ ಪಡೆಯುತ್ತ, ತಮ್ಮ ಜೀವನದಲ್ಲಿ ಕಂಡುಬಂದ ಬೇಸರವನ್ನಿಳಿಸಿಕೊಂಡು ಉಲ್ಲಾಸಗೊಳ್ಳುತ್ತಿದ್ದಾರೆ. ನೆಲಕ್ಕೆ ಹತ್ತಿರವಾಗಿ, ಆದರೆ ಮನುಷ್ಯನಿಗೆ ಅಂಟಿಕೊಳ್ಳುವ ಹೊಲಸಿನಿಂದ ದೂರವಾಗಿ, ಲೋಭದಿಂದಲೂ ಭೌತ ವಿತ್ತಗಳಿಂದಲೂ ಬದುಕನ್ನು ಬಗ್ಗಡಿಸಿಕೊಳ್ಳದೆ, ಪೈಪೋಟಿಯಿಂದ ಬದುಕಿಗೆ ಹಾನಿ ತಂದುಕೊಳ್ಳದೆ, ನೆಮ್ಮದಿಯಾಗಿ ಬಾಳುವ ಹದನನ್ನು ಕಲಿಯುತ್ತಿದ್ದಾರೆ. ಬಂಡ

ವಾಳಶಾಹಿಯನ್ನು ನೆಮ್ಮಿಕೊಂಡಿರುವ ಸಮಾಜವು ದ್ವೇಷಘರ್ಷಣೆಗಳನ್ನೂ ಯುದ್ಧ ನಾಶಗಳನ್ನೂ ಹೇರುತ್ತದೆ. ನಿಯರಿಂಗ್ ದಂಪತಿಗಳನ್ನು ಸಂದರ್ಶಿಸಲು ತವಕಿಸು ವವರೆಲ್ಲ ಹುಡುಕುತ್ತಿರುವುದು ಸಹಕಾರ ನಿಷ್ಠವಾದ ಜೀವನಮಾರ್ಗವನ್ನು ; ಒಮ್ಮತ ದಿಂದ ಬಾಳುವ ಬಗೆಯನ್ನು, ಪರಹಿತ – ಸರ್ವಜನ ಹಿತ – ಕಾತರ ಬೆರೆತ ಬದುಕನ್ನು ಬಾಳುವ ಬಗೆಯನ್ನು; ಪ್ರಾಮಾಣಿಕತೆಯಿಂದ ಕಾಯಕಮಾಡುತ್ತ, ಮಾನವ ಘನತೆ ಭ್ರಾತೃತ್ವಗಳನ್ನೂ ಶಾಂತ ಜೀವನ ಸಾಧ್ಯತೆಯನ್ನೂ ವ್ಯಷ್ಟಿಜೀವನ–ಸಮಷ್ಟಿ ಜೀವನ ಗಳೆರಡರ ಸಾರ್ಥಕ್ಯವನ್ನೂ ಆಗಮಾಡಿಸುವ ಜೀವನ ವಿಧಾನವನ್ನು. ಅವರು ಇದನ್ನು ಹುಡುಕಿ ಹುಡುಕಿ ಕಾಣದೆ ಬೇಸತ್ತವರು. ಪ್ರತಿಯೊಂದು ಬೇಸಗೆಯಲ್ಲೂ ನೂರಾರು ಮಂದಿ ತರುಣರು ನಿಯರಿಂಗ್ ದಂಪತಿಗಳ ಕಾಯಕದ ಬೀಡಿಗೆ ಬಂದು, ಅವರ ಕೆಲಸ ಗಳನ್ನು ನೋಡಿ, ಕಲಿಯಲು ಕೆಲಸದಲ್ಲಿ ಪಾಲ್ಗೊಳ್ಳುತ್ತಾರೆ. ಅವರ ಮಾತುಕತೆ ಯನ್ನಾಲಿಸಿ ಉಲ್ಲಾಸಗೊಂಡು ಹಿಂತಿರುಗುತ್ತಾರೆ. ಹೀಗೆ ಬಂದುಹೋಗುವ ಎಲ್ಲ ರಲ್ಲೂ ದಂಪತಿಗಳ ಜೀವನ ವಿಧಾನವನ್ನು ಅನುಕರಿಸುವ ಚಿತ್ತವೃತ್ತಿಯಾಗಲಿ, ಚಿತ್ತ ದಾರ್ಢ್ಯವಾಗಲಿ ಇರುವುದಿಲ್ಲ. ಆದರೆ ಅವರಲ್ಲಿ ಅನೇಕರು ಒಳ್ಳೆಯ ಜೀವನವೊಂದು ಅಲ್ಲಿ ಸಾಕ್ಷಾತ್ತಾಗಿ ನಡೆಯುತ್ತಿರುವುದನ್ನು ನೋಡಿ ಅಪೂರ್ವಾನುಭವವನ್ನು ಪಡೆದು ಹಿಂತಿರುಗುತ್ತಾರೆ.

## ನಮೋ ಅರ್ಭಕೇಭ್ಯಃ

1974ರಲ್ಲಿ ಮೆಯ್ನ್ ರಾಜ್ಯದ ಬೇಥೆಲ್ ಜಿಲ್ಲೆಯ ಗೌಲ್ಡ್ ಅಕಾಡೆಮಿಯ ಡಿಗ್ರಿ ಪರೀಕ್ಷೆಗೆ ಕುಳಿತಿದ್ದ ಪ್ರೌಢ ವಿದ್ಯಾರ್ಥಿಗಳು ಸ್ಕಾಟ್ ಅವರನ್ನು ಕಂಡು, ತಮಗೆ ಬುದ್ಧಿವಾದ ಹೇಳಬೇಕೆಂದು ಕೋರಿದರು. ವಿದ್ಯಾರ್ಥಿಗಳ ಕೋರಿಕೆಯನ್ನು ನೆರವೇರಿಸಲು ಒಪ್ಪಿ ಸ್ಕಾಟ್ ಅವರು ಕೊಟ್ಟ ಪ್ರವಚನದಿಂದ ಈ ಮಾತುಗಳನ್ನು ಇಲ್ಲಿ ಎತ್ತಿಕೊಟ್ಟಿದೆ :–

"ಈ ತರಗತಿಯ ವಿದ್ಯಾರ್ಥಿಗಳನ್ನು ಉದ್ದೇಶಿಸಿ ನಾನು ಮಾತ ನಾಡುತ್ತೇನೆಂದರೆ ಈ ರಾಷ್ಟ್ರದ ಎರಡು ಕೋಟಿ ಹೈಸ್ಕೂಲು ಹಾಗೂ ಕಾಲೇಜು ವಿದ್ಯಾರ್ಥಿಗಳನ್ನು ಗಮನದಲ್ಲಿರಿಸಿಕೊಂಡೇ ಮಾತನಾಡು ತ್ತೇನೆ. ಪ್ರಾಯಶಃ ಈ ರಾಷ್ಟ್ರದ ಹೊರಗಿರುವ ಕೆಲವು ತರುಣರಿಗೂ ನನ್ನ ಮಾತು ಅನ್ವಯಿಸುತ್ತದೆಯೆಂದು ನಂಬಿಕೊಂಡಿದ್ದೇನೆ.

"ಪದವೀಧರರಾದಮೇಲೆ ನೀವು ವಯಸ್ಕರಿಗೆ ವಿಹಿತವಾದ ಜೀವನ ರಂಗವನ್ನು ಪ್ರವೇಶಿಸುತ್ತೀರಿ. ಈ ರಾಷ್ಟ್ರದಲ್ಲೂ ಜಗತ್ತಿನ ಇತರ ರಾಷ್ಟ್ರ ಗಳಲ್ಲೂ ಆರ್ಥಿಕ–ರಾಜಕೀಯ – ಸಾಮಾಜಿಕ – ನೈತಿಕ ಕ್ಷೇತ್ರಗಳಲ್ಲೂ ಹುಟ್ಟಿರುವ ವಿಷಮ ಪರಿಸ್ಥಿತಿಯ ಪರಿಚಯ ನಿಮಗೆ ಆಗಿ ಅದರ ಕಾವು

ಬೇವುಗಳಿಗೆ ನೀವು ಸಿಕ್ಕುತ್ತೀರಿ....ಅಣ್ವಸ್ತ್ರಗಳನ್ನು ಬಳಸಿ ಹೂಡುವ ಮೂರನೆಯ ಮಹಾಯುದ್ಧಕ್ಕೆ ವ್ಯಾಪಕವಾದ ಸಿದ್ಧತೆ ಈ ಪ್ರಪಂಚದ ನಾನಾ ರಾಷ್ಟ್ರಗಳಲ್ಲಿ ಪ್ರಕಟವಾಗುತ್ತಿದೆ.''

ಈ ಸಾಮಾನ್ಯ ಸಾಮಾಜಿಕ ವಿಷಮ ಪರಿಸ್ಥಿತಿಗೆ ಕಾರಣ: ಪಾಶ್ಚಾತ್ಯಗೆ ಜಗತ್ತಿನಲ್ಲಿ ವ್ಯಕ್ತಿಮನುಷ್ಯ-ಮನುಷ್ಯರ ನಡುವೆಯೂ ರಾಷ್ಟ್ರ-ರಾಷ್ಟ್ರ ಗಳ ನಡುವೆಯೂ ಧನಾಧಿಕಾರ ಸಂಪಾದನೆಗೋಸ್ಕರ ಹುರುಡಿನಿಂದ ಕೂಡಿದ ಹೋರಾಟ ಕಳೆದ ಐದು ಶತಮಾನಗಳಿಂದ–ಸುಮಾರು 1450 ರಿಂದ 1974 ರವರೆಗೆ–ನಡೆಯುತ್ತ ಬಂದಿರುವುದೇ ಈ ಪರಿಸ್ಥಿತಿಗೆ ಕಾರಣ. ಈ ಪರಿಸ್ಥಿತಿ ದುಷ್ಟ ಶಕ್ತಿಗಳ ಕ್ರಿಯೆ ಪ್ರತಿಕ್ರಿಯೆಗಳಿಂದ ತುಂಬ ಜಟಿಲವಾಗಿ ಹೆಣೆದು ಬೆರೆತುಕೊಂಡದ್ದಾಗಿ, ಪರಸ್ಪರಾವಲಂಬ ಕವಾಗಿ ಸಮಾಜದಲ್ಲಿ ತೋರಿಕೊಂಡಿರುವ ಅವ್ಯವಸ್ಥೆಯನ್ನು ಸೂಚಿ ಸುತ್ತದೆ. ಈ ಅವ್ಯವಸ್ಥೆಯನ್ನು ತಿದ್ದಲು ಅಸಮರ್ಥರೂ ಜವಾಬ್ದಾರಿ ಯನ್ನು ತಿಳಿಯದವರೂ ಆದ ನಾವು ನಿಮ್ಮ ತಲೆಮೊರೆಯೇ ತಾಗಿ ಬಗೆ ಹರಿಸಲೆಂದು ನಿಮಗೆ ಬಿಟ್ಟುಕೊಡುತ್ತಿದ್ದೇವೆ. ಆರ್ಥಿಕ ಅಭದ್ರತೆ ಯನ್ನೂ, ಸಾಮಾಜಿಕ ಅಸ್ಥಿರತೆಯನ್ನೂ ನಿವಾರಿಸಲು ನಮಗೆ ಯಾವ ಮಾರ್ಗೋಪಾಯವೂ ಹೊಳೆಯಲಿಲ್ಲ; ಮತ್ತು ನ್ಯಾಯ, ದಯೆ, ಪ್ರೇಮ ಮತ್ತು ಸಮ್ಯಗ್ ಜೀವನಗಳ ಆಧಾರದ ಮೇಲೆ ಸಮಾಜವನ್ನು ಕಟ್ಟಲು ನಮ್ಮಿಂದ ಯಾವ ಪ್ರಯತ್ನವೂ ಅಗಲಿಲ್ಲವಲ್ಲಾ ಎಂದು ನಮಗೆ ತಲೆ ತಲೆತಗ್ಗಿಸುವಂತಾಗಿದೆ.

"ಸ್ಥಳೀಯವಾಗಿಯೂ ವಿಶ್ವವ್ಯಾಪಕವಾಗಿಯೂ ನಮ್ಮನ್ನು ನಾವು ಆಳಿಕೊಳ್ಳುವುದು ಹೇಗೆಂಬುದನ್ನು ಕಲಿಯಬೇಕು. ರಾಷ್ಟ್ರವಾಗಿ ನಾವು ನಮ್ಮನ್ನು ಆಳಿಕೊಳ್ಳಬೇಕು. ಮನುಷ್ಯಕುಟುಂಬವಾಗಿ ನಾವು ನಮ್ಮನ್ನು ಆಳಿಕೊಳ್ಳಬೇಕು. ಪಾಶ್ಚಾತ್ಯ ಮನುಷ್ಯನು ಕಳೆದ ಹತ್ತು ಶತಮಾನಗಳಿಂದ ಕಟ್ಟಿ ನಿಲ್ಲಿಸಿದ ಸಮಾಜ ಇಂದು ಶಿಥಿಲವಾಗಿ ಕುಸಿದು ಬೀಳುತ್ತಿದೆ. ಈ ಸರ್ವತ್ರ ಸಾಮಾನ್ಯವಾದ ಸಾಮಾಜಿಕ ವಿಷಮ ಪರಿಸ್ಥಿತಿಯ ಪ್ರಭಾವಕ್ಕೆ ನೀವು ಅನಿವಾರ್ಯವಾಗಿ ಸಿಕ್ಕುತ್ತೀರಿ.

"ಈ ಸಾಮಾನ್ಯ ಸಾಮಾಜಿಕ ವಿಷಮ ಪರಿಸ್ಥಿತಿಯಲ್ಲಿ ಸಮಾಜ ಸ್ವರೂಪವೂ ಅರ್ಥವ್ಯವಸ್ಥೆಯೂ ಭದ್ರತೆಯನ್ನು ಕಳೆದುಕೊಂಡಿದೆ. ಅವಿಚಾರದ ಪದ್ಧತಿನಿಷ್ಠವಾದ ಕುಟುಂಬ ಜೀವನದಲ್ಲಿ ಒಡಕು–ಬಿರುಕು ಗಳು ಕಾಣಿಸಿಕೊಳ್ಳುತ್ತಿವೆ. ಸಮಾಜ ವಿರೋಧಿ ಅಪರಾಧಗಳ ಸಂಖ್ಯೆ ಹೆಚ್ಚುತ್ತಿದೆ. ಆತ್ಮಹತ್ಯೆ ಮಾಡಿಕೊಳ್ಳುವವರ ಸಂಖ್ಯೆಯೂ ಹೆಚ್ಚು

ತ್ತಿದೆ. ಅದರಲ್ಲೂ ತರುಣ ಪೀಳಿಗೆಯಲ್ಲಿ ಕೈಸಾವಿಗೆ ತಿರುಗುತ್ತಿರುವವರ ಸಂಖ್ಯೆ ಹೆಚ್ಚುತ್ತಿದೆ. ಈ ವಿಷಮ ಪರಿಸ್ಥಿತಿಯ ದುಷ್ಪ್ರಭಾವವನ್ನು ಕಟ್ಟಿ ಹರಡಿದವರಲ್ಲಿ ನಮ್ಮ ಪ್ರಭುತ್ವವೂ ಸೇರಿದೆ. ಈ ಪ್ರಭುತ್ವದಲ್ಲಿ ಶಾಸನೋಲ್ಲಂಘಕರಾದ ವಕೀಲರು ಪರಸ್ಪರ ವಿರುದ್ಧ ಪಾತ್ರವಹಿಸುತ್ತ ಸೇರಿಕೊಂಡಿದ್ದಾರೆ. ನಾವಾಗಿ ಆಯ್ದು ಜನಪ್ರತಿನಿಧಿಸಭೆಗೆ ಕಳಿಸಿದ ಶಾಸನಕರ್ತರು ಈ ವಕೀಲರ ನಾಯಕರು. ಇವರ ಚಟುವಟಿಕೆಗಳಿಗೆ ಬಂಡವಾಳವೊದಗುತ್ತಿರುವುದು ದೊಡ್ಡದೊಡ್ಡ ವಾಣಿಜ್ಯ ಕೂಟಗಳಿಂದ.

"ಈ ಸರ್ವ ಸಾಮಾನ್ಯ ಸಾಮಾಜಿಕ ವಿಷಮ ಪರಿಸ್ಥಿತಿಯು ಅಮೆರಿಕ ಸಂಯುಕ್ತ ಸಂಸ್ಥಾನಗಳಷ್ಟಕ್ಕೇ ಸೀಮಿತವಾಗಿಲ್ಲ. ಪಶ್ಚಿಮ ನಾಗರಿಕತೆ ಹಬ್ಬಿರುವ ಎಲ್ಲ ದೇಶಗಳಲ್ಲೂ ಅದರ ದುಷ್ಪ್ರಭಾವ ಕಂಡು ಬರುತ್ತಿದೆ. ಪ್ರಭುತ್ವಗಳ ದಾರ್ಢ್ಯ ಹೀನತೆ, ಹಣದ ಹೆಚ್ಚಳಿಕೆ, ಒಂದೇ ತಲೆಮೊರೆಯಲ್ಲಿ ಎರಡು ಯುದ್ಧಗಳು (1914 ರಲ್ಲಿ ಒಮ್ಮೆ, 1939 ರಲ್ಲಿ ಇನ್ನೊಮ್ಮೆ) ನಡೆದದ್ದಲ್ಲದೆ, ಅಣ್ವಸ್ತ್ರಗಳನ್ನು ಬಳಸಿ ಮೂರನೆಯ ಮಹಾಸಂಗ್ರಾಮಕ್ಕೆ ಆಗುತ್ತಿರುವ ಸಿದ್ಧತೆಗಳು–ಇವೆಲ್ಲ ಈ ಸಾಮಾನ್ಯ ವಿಷಮ ಪರಿಸ್ಥಿತಿಯನ್ನು ಸೂಚಿಸುವ ಘಟನೆಗಳು.

"ನೀವು ಸಂಕಲ್ಪಿಸಿದಿರಾದರೆ ನಿಮ್ಮನ್ನು ನೀವು ಆಳಿಕೊಳ್ಳಬಹುದು....ನೀವೆಲ್ಲ ಸಹಕರಿಸಿ ಈ ಭೂಗ್ರಹವನ್ನು ಮಾನವರ ಬದುಕಿಗೆ ತಕ್ಕ ಬೀಡನ್ನಾಗಿ ಮಾಡಬಹುದು, ಮತ್ತು ಮನುಷ್ಯರೊಂದಿಗೆ ಜೊತೆಯಲ್ಲಿ ಬಾಳಲು ಹುಟ್ಟುವ ಇತರ ಜೀವಪ್ರಕಾರಗಳಿಗೂ ಇಳೆಯು ಯೋಗ್ಯವಾದ ನೆಲೆವೀಡಾಗಬಹುದು.

"ಪರಮೋತ್ತಮವಾದದ್ದಕ್ಕೆ ಒಪ್ಪಿಕೆಯನ್ನು ಕೊಟ್ಟು ತಣಿಯಿರಿ. 'ಕಡಮೆ ಕೇಡು' ಎಂದೋ, ಎರಡನೆಯ ವರ್ಗದ ಉತ್ತಮವೆಂದೋ ಬೇರೆ ಯಾವುದಕ್ಕೂ ಒಪ್ಪಿಕೆ ಕೊಡಹೋಗಬೇಡಿರಿ. ಪರಮೋತ್ತಮವೇ ನಿಮ್ಮ ಲಕ್ಷ್ಯದಲ್ಲಿರಲಿ; ಅದು ಕೈವಶವಾಗುವ ವರೆಗೆ ಹೆಣಗುತ್ತ ಹೋರಾಡಿರಿ."

ಇಂಥ ಅಣಿಮುತ್ತಿನ ಮಾತುಗಳನ್ನಾಡಿ, ಕಡೆಗೆ ಸಾಧು ಸ್ಕಾಟ್ ಹೀಗೆ ಯುವಕರ ಬುದ್ಧಿಶಕ್ತಿಯನ್ನು ಪ್ರಚೋದಿಸಿ ಉಪದೇಶವನ್ನು ಮುಗಿಸಿದರು:—

"ಪರಿಶೀಲಿಸಿ ನೋಡಿರಿ, ವಿಷಯ ವಿಭಜನೆ ಮಾಡಿರಿ, ಆಲೋಚಿಸಿರಿ, ನಿರ್ಣಯಿಸಿರಿ, ಸಂಘಟಿಸಿರಿ, ಕೃತಿಕರಣದಲ್ಲಿ ತೊಡಗಿರಿ. ನಿಮ್ಮ

> ತಲೆಮೊರೆಯಲ್ಲಿ ನೀವು ಕಟ್ಟುವ ಪ್ರಪಂಚವು ಮನುಷ್ಯನನ್ನು ಘನತೆಗೇರಿಸುತ್ತದೆ; ಇಂಥ ನೂತನ ಪ್ರಪಂಚವು ಮಾನವತೆಯನ್ನು ಯೋಜಕರನ್ನಾಗಿ ರಚಕರನ್ನಾಗಿ ಮಾಡಿ, ಪ್ರಪಂಚ ಸ್ತರದಲ್ಲಿ ಏಕಕುಟುಂಬ ಭಾವನೆಯನ್ನು ತಂದುಕೊಡುವ ಸಾರ್ವತ್ರಿಕ ಸಮ್ಯಗ್‌ಜೀವನಕ್ಕೆ ಸಮಸ್ತರನ್ನೂ ಅಣಿಮಾಡುತ್ತದೆ."

ಈ ಮೇಲ್ಕಂಡ ಗಟ್ಟಿಮನವರಿಕೆ ಅವರ ಬಾಳದಾರಿಗೆ ಉದ್ದಕ್ಕೂ ಹೆಬ್ಬೆಳಕಾಗಿದ್ದು ಅವರನ್ನು ನಡಸುತ್ತ ಬಂದಿದೆ. ಆದದ್ದರಿಂದ ಸಹಜವಾಗಿಯೇ ಅವರು ತಮ್ಮ ಒಳ್ಳೆಯ ಬದುಕನ್ನು ಕಟ್ಟಿ ನಿಲ್ಲಿಸುವುದಕ್ಕೆ ಮೂಲಾಧಾರವಾದ ಮೂರು ಸೂತ್ರಗಳನ್ನು ರಚಿಸಿಕೊಂಡಿದ್ದಾರೆ—

> ಸತ್ಯವನ್ನು ಕಲಿತು ತಿಳಿಯುವುದು, ಅರಿತ ಸತ್ಯವನ್ನು ಇತರರಿಗೆ ತಿಳಿಯ ಹೇಳುವುದು, ಸಮಾಜದಲ್ಲಿ ಸತ್ಯಸ್ಥಾಪನೆ ಮಾಡಲು ತೊಡಗಿದವರಿಗೆ ನೆರವು ಕೊಡುವುದು–ಇವು ಸಮಗ್‌ಜೀವನದಲ್ಲಿ ಕುತೂಹಲವುಳ್ಳವರಿಗೆ ಇರುವ ಕರ್ತವ್ಯತ್ರಯ. ಸಮಾಜದಲ್ಲಿ ಶೋಷಕ ವೃತ್ತಿಯೂ ಭ್ರಷ್ಟಾಚರಣೆಯೂ ಪ್ರಕಟವಾದಾಗ ಅಂಥ ಸಮಾಜದ ಪರಿಷ್ಕರಣಕ್ಕಾಗಿ ಕೊರಲೆತ್ತಿ ಆಕ್ಷೇಪಿಸುವುದು ನನಗೆ ಧರ್ಮವಾಗುತ್ತದೆ. ‡

ಸ್ಕಾಟ್ ಅವರ ಪ್ರವಚನ ಧಾಟಿ ಕಠೋಪನಿಷತ್ತಿನ ಋಷಿವಾಣಿಯನ್ನು ನೆನಪಿಗೆ ತರುತ್ತದೆ:—

> ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ ನಿಬೋಧತ।
> —ಕಠೋಪನಿಷತ್ತು. 2. 3. 4.

(ಎದ್ದು ನಿಲ್ಲು, ಎಚ್ಚರವಾಗು, ಶ್ರೇಷ್ಠವಾದದ್ದನ್ನು ಹುಡುಕಿ ಸ್ವಾನುಭವಕ್ಕೆ ತಂದುಕೊ.)

ಈ ಪುಸ್ತಕಕ್ಕೆ ಪ್ರಸ್ತಾವನಾ ರೂಪವಾಗಿ ಕೊಟ್ಟಿರುವ ಈ ವ್ಯಕ್ತಿಚಿತ್ರದ ಮೊದಲಲ್ಲಿ ಪತಂಜಲಿ ಋಷಿಯ ಎರಡು ಸೂತ್ರಗಳನ್ನು ಸ್ಮರಿಸಿದೆವು. ಈಗ ಅದೇ ಋಷಿಯ ಇನ್ನೊಂದು ಸೂತ್ರವನ್ನು ಸ್ಮರಿಸಿ ಸ್ಕಾಟ್ ನಿಯರಿಂಗ್ ಅವರು ಯೋಗಸದೃಶವಾಗಿ ನಡಸಿದ ಜೀವನದ ಆಧಾರ ಭೂಮಿಕೆಯನ್ನು ಹಿಡಿಯೋಣ:

---

‡ ಆಮೂಲಾಗ್ರ ಸುಧಾರಕನ ಸಾಧನೆ; ಒಂದು ರಾಜಕೀಯ ಆತ್ಮಕಥೆ, ಸ್ಕಾಟ್ ನಿಯರಿಂಗ್. ಹಾರ್ಪರ್ ಅಂಡ್ ರೋ, ನ್ಯೂಯಾರ್ಕ್, 1972 (ಪುಟ.56).

ಸತ್ಯ ಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯತ್ವಮ್॥
–ಯೋಗ ಸೂತ್ರಗಳು, ಸಾಧನ ಪಾದ, 2–36.

“ಸತ್ಯದಲ್ಲಿ ಅವನು ಪ್ರತಿಷ್ಠಿತನಾದಮೇಲೆ ಕ್ರಿಯೆಗಳ ಫಲವು ಅವನನ್ನು ಅವಲಂಬಿಸುತ್ತದೆ.” (ಸ್ವಾಮೀ ಆದಿದೇವಾನಂದರ ಭಾಷಾಂತರ)

ಸತ್ಯಸಂಧರ ಮಾತುಗಳು ಅಮೋಘವಾಗುತ್ತವೆ ಎಂದು ಯೋಗಸೂತ್ರಕಾರರ ಮತ.

ಮನುಷ್ಯಜೀವನದ ಎಲ್ಲ ಚಟುವಟಿಕೆಗಳ ಗುರಿಯೂ ನೆಮ್ಮದಿ. ಇದನ್ನೇ ವೇದಗಳಲ್ಲಿ ಶಾಂತಿಯೆಂದೂ, ಅದೇ ಮನುಷ್ಯನ ಹುಡುಕಾಟಕ್ಕೆ ತಕ್ಕ ನೆಲೆಯೆಂದೂ, ನಮ್ಮ ಋಷಿಗಳು ಕೊಂಡಾಡುತ್ತಾರೆ. ಸ್ಕಾಟ್ ನಿಯರಿಂಗ್ ಅವರು ಒಳ್ಳೆಯ ಕುಟುಂಬದಲ್ಲಿಯ ಸದಸ್ಯರಂತೆ ನಿರ್ಮತ್ಸರರಾಗಿ, ಜಗದ್ರಾಷ್ಟ್ರಗಳಲ್ಲಿ ಒಂದೊಂದೂ ಒಂದುಮರ್ಯಾದೆಗೆ ಬದ್ಧವಾಗಿ ಒಟ್ಟು ಪ್ರಪಂಚವನ್ನು ಸುಸ್ಥಿತಿಯಲ್ಲೂ ಪರಸ್ಪರ ಸಹಕಾರ ನಿಷ್ಠ ಶಾಂತಿಯಲ್ಲೂ ಇರಿಸಬೇಕೆಂಬ ಕಾತರದಿಂದ ಲೋಕ ಸಂಗ್ರಹ ಕಾರ್ಯದಲ್ಲಿ ನಿರತರಾಗಿರುವವರು. ಆದದ್ದರಿಂದ ವೇದಗಳಲ್ಲಿ ಬರುವ ವಿಶ್ವಶಾಂತಿ ಪಾಠವನ್ನುಚ್ಚರಿಸಿ ಸಮ್ಯಗ್‌ಜೀವನದ ಶಿಲ್ಪಿಯಾದ ಇವರ ವ್ಯಕ್ತಿತ್ವ ಸಿದ್ಧಿಗಳನ್ನೊಳಗೊಂಡ ಈ ಪ್ರಸ್ತಾವನೆಯನ್ನು ಮುಗಿಸಬಹುದು.

ಓಂ ದ್ಯೌಃ ಶಾಂತಿರಂತರಿಕ್ಷಂ ಶಾಂತಿಃ।
ಪೃಥಿವೀಶಾಂತಿರಾಪಃ ಶಾಂತಿರೋಷಧಯಃ ಶಾಂತಿಃ।
ವನಸ್ಪತಯಃ ಶಾಂತಿರ್ವಿಶ್ವೇದೇವಾಃ ಶಾಂತಿ-।
ಬ್ರಹ್ಮ ಶಾಂತಿಃ ಸರ್ವಂ ಶಾಂತಿಃ
ಶಾಂತಿರೇವ ಶಾಂತಿಃ ಸಾ ಮಾ ಶಾಂತಿರೇಧಿ॥
ಓಂ ಶಾಂತಿಃ ಶಾಂತಿಃ ಶಾಂತಿಃ॥

ಓಂ ಊರ್ಧ್ವ ಲೋಕದಲ್ಲಿ ಶಾಂತಿ ನೆಲಸಲಿ; ಅಂತರಿಕ್ಷದಲ್ಲಿ ಶಾಂತಿ ನೆಲಸಲಿ ನೀರಿನಲ್ಲಿ ಶಾಂತಿ ನೆಲಸಲಿ; ಗಿಡಮರ ಬಳ್ಳಿಗಳಲ್ಲಿ ಶಾಂತಿ ನೆಲಸಲಿ; ದೇವತೆಗಳಲ್ಲಿ ಶಾಂತಿ ನೆಲಸಲಿ; ಬ್ರಹ್ಮನಲ್ಲಿ ನೆಲಸಲಿ; ಎಲ್ಲೆಲ್ಲಿಯ ಶಾಂತಿ ನೆಲಸಲಿ; ಶಾಂತಿಗೆತ್ತಣಿಂದಲೂ ಉಪಟಳವಿಲ್ಲದಿರಲಿ. ಅಂತಹ ಪ್ರಶಾಂತವೂ ಪೂರ್ಣವೂ ಆದ ಶಾಂತಿ ನನ್ನದಾಗಲಿ.

**ವಸುಧೈವ ಕುಟುಂಬಕಂ**

ಜಯನಗರ
ಬೆಂಗಳೂರು.

ಬೋಲಾ ದತ್ತ ಪಂತ್

# ಮುನ್ನುಡಿ

## ನನ್ನ ಧರ್ಮೇಂದ್ರಿಯದೊಡನೆ ನಾನು

ಈ ಹೊತ್ತು ಪ್ರಪಂಚ ರಾಷ್ಟ್ರಗಳ ಜನತೆ ಗೊತ್ತಾದ ಗುರಿಯಿಟ್ಟುಕೊಳ್ಳದೆ ಅಪಾಯತುಂಬಿದ ಮಾರ್ಗದಲ್ಲಿ ಸಾಗುತ್ತ, ಆತ್ಮವಿನಾಶದ ಪ್ರಾಪ್ತಿಗೆ ಅಣಿಯಾಗುತ್ತಿರುವುದನ್ನೂ, ಈ ಜಗನ್ನಾಟಕದಲ್ಲಿ ಅಮೆರಿಕಾ ಸಂಯುಕ್ತ ಸಂಸ್ಥಾನಗಳು ಸೈತಾನ ಪಾತ್ರ ವಹಿಸುತ್ತಿರುವುದನ್ನೂ ಕಂಡು ನನ್ನ ಕಾನ್ಷನ್ಸ್–ಪ್ರಬುದ್ಧ ಧರ್ಮೇಂದ್ರಿಯ ಕೆರಳಿದೆ, ನೊಂದು ಕಳವಳಗೊಂಡಿದೆ. ಅಂತರ್ಯಾಮಿಯಾಗಿ ಸರ್ವಸಾಕ್ಷಿಯಾಗಿ ಇರುವ ನನ್ನ ಧರ್ಮೇಂದ್ರಿಯದ ತಿವಿತಕ್ಕೆ ನಾನು ಸಿಕ್ಕಿದ್ದೇನೆ; ನನ್ನ ಕರ್ತವ್ಯವೇನೆಂದು ವಿಚಾರಮಾಡುತ್ತಿದ್ದೇನೆ. ಈ ವಿಷಯದಲ್ಲಿ ಮೌನವಾಗಿರುವುದು ನನಗಿನ್ನು ಸಾಧ್ಯವಿಲ್ಲ. ಅನ್ಯೋಪಾಯವಿಲ್ಲದೆ, ನನ್ನ ಮನೋಗತವನ್ನು ಬಿಚ್ಚುಮಾತಿನಲ್ಲಿ ಹೇಳುವುದು ಈಗ ನನಗೆ ಅನಿವಾರ್ಯವಾಗಿದೆ.

ಅರುವತ್ತು ವರ್ಷಗಳಿಗೂ ಹಿಂದೆ, ನಾನು ಇನ್ನೂ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ, ನನ್ನ ಸುತ್ತುಮುತ್ತಿನ ಪರಿಸರದಲ್ಲಿ ಕಣ್ಣಾಡಿಸಿ,–"ಇಂಥ ಸೊಂಪೂ ಸುಂದರವೂ ಫಲಸಮೃದ್ಧವೂ ಆದ ಇಳೆಯಲ್ಲಿ ಬಹುಸಂಖ್ಯಾಕ ಜನರೇಕೆ ಕಷ್ಟಪಡುತ್ತಿದ್ದಾರೆ, ನಿರಾಶೆಯಿಂದ ಕೃಪಣರಾಗಿ ಅದೇಕೆ ನಿರರ್ಥಕ ಜೀವನ ನಡಸುತ್ತಿದ್ದಾರೆ? –ಎಂದು ಆಶ್ಚರ್ಯಪಡಲು ಮೊದಲು ಮಾಡಿದೆ. ನನ್ನ ಒಬ್ಬನ ಸ್ವಂತ ಹಿತಗಳು, ಕೋರಿಕೆಗಳು, ತೃಪ್ತಿಗಳಿಗಿಂತ ಒಟ್ಟು ಜನಜೀವನವು ವ್ಯಾಪಕವಾದದ್ದೆಂದೂ; ನನ್ನ ಸುತ್ತ ಮುತ್ತಣ ಎಲ್ಲವೂ ಎಲ್ಲ ಮಟ್ಟಗಳಲ್ಲೂ ತಲೆಯೆತ್ತಿ ಪರಿಹಾರವನ್ನು ಬೇಡುವ ಸಾಮಾಜಿಕ ಪ್ರಶ್ನೆಗಳೆಂದೂ ಆ ಎಳಮೆಯಲ್ಲೇ ನನಗೆ ಹೊಳೆದುವು. ಜನದೊಟ್ಟಿನ ಕಲ್ಯಾಣಸಾಧನೆಯ ವಿಷಯದಲ್ಲಿ ಜನರು ಸಾಮಾನ್ಯವಾಗಿ ಕಠಿನಹೃದಯಿಗಳಾಗಿಯೇ ವರ್ತಿಸುತ್ತಿರುತ್ತಾರೆ ಎಂಬುದು ನನ್ನ ಅನುಭವವಾಗಿತ್ತು. ನಮ್ಮ ಕುಟುಂಬ ವೇನೋ ತಕ್ಕಮಟ್ಟಿಗೆ ಅನುಕೂಲ ಸ್ಥಿತಿಯಲ್ಲಿತ್ತು. ಆದದ್ದರಿಂದ ಅದರ ಯೋಗಕ್ಷೇಮದ ವಿಷಯದಲ್ಲಿ ನನಗೆ ಯಾವ ಚಿಂತೆ ಆತಂಕಗಳಿಗೂ ಆಸ್ಪದವಿರಲಿಲ್ಲ. ಆದರೆ ನನ್ನ ಸುತ್ತಮುತ್ತ ಜನರು ಹೊಲಸು ಕೇರಿಗಳಲ್ಲಿ ಸೌಕರ್ಯವಿಲ್ಲದೆ ಜೀವನಯಾಪನೆ ಮಾಡುತ್ತಿದ್ದರು. ಅವರ ಮಕ್ಕಳು ಯಂತ್ರಾಗಾರಗಳಲ್ಲಿ ಜೀತಮಾಡುತ್ತ, ಹಾಗೆಯೇ

ಕಲ್ಲಿದ್ದಲ ಗಣಿಗಳಲ್ಲಿ ಕಷ್ಟದ ಕಾಯಕ ಮಾಡುತ್ತ ಇದ್ದರು. ಈ ಜನ ಸಮುದಾಯ ದಲ್ಲಿ ವಯಸ್ಕರಿಗೂ ಬಾಲಕರಿಗೂ ಕೆಲಸದ ವೇಳೆ ದೀರ್ಘಾವಧಿಯದು; ಕೂಲಿ ಸ್ವಲ್ಪ ಮೊತ್ತದ್ದು. ಸರಕು ಬೆಲೆಗಳೂ, ದಣಿಗಳಿಗೆ ಬರುವ ನಫೆಗಳೂ ಹೆಚ್ಚಾಗಿದ್ದುವು. ದೊಡ್ಡ ವ್ಯಾಪಾರ ಸಂಸ್ಥೆಗಳು ಸಣ್ಣ ವ್ಯಾಪಾರಿಗಳನ್ನು ಮೂಲೆಗೊತ್ತರಿಸಿ, ಪೇಟೆಯನ್ನು ವಶ ಪಡಿಸಿಕೊಂಡು ಆಳುತ್ತಿದ್ದುವು–ಕೂಟ ಸಂಸ್ಥೆಗಳನ್ನೂ (ಕಾರ್ಪೊರೇಷನ್ಸ್) ಟ್ರಸ್ಟ್ (ವಿಶ್ವಸ್ಥ) ಸಂಸ್ಥೆಗಳನ್ನೂ ಕಟ್ಟಿಕೊಂಡು. ಇಂಥ ಆಢ್ಯರ ಪಕ್ಕದಲ್ಲಿ ಕೃಪಣರಾದ ವ್ಯಷ್ಟಿಜನವೂ ಕುಟುಂಬಗಳೂ ಹೇಗೋ ಬಾಳುತ್ತಿದ್ದುವು. ತಮ್ಮ ಹಾಗೆಯೆ ನೆಮ್ಮದಿ ಕಾಣವೆ ಹೀಗೆ ಕಷ್ಟ ಕಾರ್ಪಣ್ಯಗಳ ಬದುಕನ್ನು ಬಾಳುತ್ತಿರುವ ಇತರ ವ್ಯಷ್ಟಿಜನ ವನ್ನೂ ಕುಟುಂಬಗಳನ್ನೂ ಕುರಿತೇಕೆ ಈ ದೀನ ಜನ ಚಿಂತಿಸುತ್ತಿಲ್ಲ? "ನಾನು, ನನ್ನ ಮಡದಿ, ನನ್ನ ಮಕ್ಕಳು; ನಾವು ಜಾನ್ ದಂಪತಿಗಳು; ನಮ್ಮ ಮಕ್ಕಳೂ ಸೇರಿ ನಮ್ಮದು ನಾಲ್ವರ ಕುಟುಂಬ; ಇಷ್ಟು ಸಾಕು. ಇನ್ನು ಹೆರವರ ಗೋಜು ನಮಗೇಕೆ? ಬೇಡವೇ ಬೇಡ!" ಈ ಪ್ರತ್ಯೇಕತಾ ಧೋರಣೆ ಏಕೆ? ಗ್ರಾಹಕವರ್ಗವಾಗಿರುವ ಜಗತ್ತಿನ ಎಲ್ಲ ಜನರೂ ಸೌಖ್ಯದಲ್ಲೇಕೆ ಪಾಲುಗಾರರಾಗಬಾರದು?

ಈ ವಿವಿಧ ಜೀವನ ವಿಧಾನವೂ ಭಿನ್ನಭಿನ್ನ ಜೀವಿಕಾ ಸಂದರ್ಭಗಳೂ ಚಿಕ್ಕಂದಿ ನಲ್ಲೇ ಹೀಗೆ ನನ್ನ ಕುತೂಹಲವನ್ನು ಕೆರಳಿಸಿದ್ದರಿಂದ, ನಾನು ಕ್ರಮೇಣ ಅವುಗಳ ನಿಕಟ ಪರಿಚಯ ಮಾಡಿಕೊಂಡೆ. ಆ ಬಗ್ಗೆ ಓದಿದೆ. ಹೆರವರಿಂದ ಕೇಳಿ ತಿಳಿದುಕೊಂಡೆ. ನನ್ನ ಆಯುಷ್ಯವನ್ನೆಲ್ಲ ಜೀವನ–ಜೀವಿಕಾ ಸಮಸ್ಯೆಗಳ ವ್ಯಾಸಂಗಕ್ಕೂ ಪರಿಹಾರ ಶೋಧನಕ್ಕೂ ಮುಡಿಪು ಕಟ್ಟಿ, ಮನುಷ್ಯನ ಬದುಕಿನಲ್ಲಿ ರಕ್ಷಣೆಯೂ ಸೌಖ್ಯವೂರ ಹೆಚ್ಚುವ ದಾರಿ ಯಾವುದೆಂದು ಚಿಂತಿಸುತ್ತಾ ಬಂದೆ. ನನ್ನ ಅಧ್ಯಯನವೂ ವೈಯ ಕ್ತಿಕ ಅನುಭವವೂ ನನ್ನನ್ನು ಕೃತಕವಾದ, ಆಪಾತ - ಸುಖದಾಯಕವಾದ ಜೀವನ ವಿಧಾನಗಳನ್ನು ತ್ಯಜಿಸುವಂತೆ ಮಾಡಿದುವು; ವೈಯಕ್ತಿಕ ಜೀವನ ಹಾಗೂ ಸಾಮಾಜಿಕ ಸಮಸ್ಯೆಗಳ ಬೇರಿಗಿಳಿದು, ಬಿದಕಿನೋಡುವ ಬಗೆಯನ್ನು ಚೋದಿಸಿದುವು. ಎಂದರೆ, ನನ್ನನ್ನು "ರ್‍ಯಾಡಿಕಲ್" - ಎಂದರೆ ಆಮೂಲಾಗ್ರಶೋಧಕನನ್ನಾಗಿ ತೀವ್ರ ಸುಧಾರಣಾವಾದಿಯನ್ನಾಗಿ, ಮಾಡಿದುವು. ಇಂದಿಗೂ ನಾನು ರ್‍ಯಾಡಿಕಲ್ ವಿಚಾರಿಯಾಗಿಯೇ ಸಾಗಿಬಂದಿದ್ದೇನೆ.

ಚಿಕ್ಕಂದಿನಲ್ಲಿ ನಾನು ಸ್ಲಮ್ (slum–ಹೊಲಸು–ಕೊಳಕು ಬೀಡು) ಗಳಿಗೆ ಹೋಗಿ ಬರುತ್ತಿದ್ದೆ. ಜೊತೆಗೆ, ವಸತಿ ಹೀನರಿಗೂ ದೀನರಿಗೂ ಕಟ್ಟಿದ 'ಸೆಟ್ಲ್ ಮೆಂಟ್' ಎನ್ನಿಸಿಕೊಂಡ ವಸತಿಶ್ರೇಣಿಗಳಲ್ಲಿದ್ದ ಜನರನ್ನು ಕಂಡು, ಅವರ ಯೋಗ ಕ್ಷೇಮವನ್ನು ವಿಚಾರಿಸಿ, ನಾನು ಕೊಡಬಹುದಾಗಿದ್ದ ಕೊಂಚ ನೆರವನ್ನು ಈ ಬಡ ಜನಕ್ಕೆ ಕೊಟ್ಟೆ. ಗಣಿಗಳಲ್ಲೂ ಕಾರ್ಖಾನೆಗಳಲ್ಲೂ ಸ್ವಲ್ಪವರಮಾನ ತರುವ ದೀರ್ಘಾ

ವಧಿಯ ಕಾಯಕಕ್ಕೆ ಸೇರಿ ದುಡಿದು ಅನುಭವಗಳಿಸಿದೆ. ನಿಕಟ ಪರಿಚಯದ ಪರಿಸ ಗಳಲ್ಲಿದ್ದು ಜನದ ಕಷ್ಟಕಾರ್ಪಣ್ಯಗಳು ಏನೆಂದು, ಎಷ್ಟೆಂದು ತಿಳಿದುಕೊಂಡೆ. ಅವರುರು. ಬೆವರು ಸುರಿಸುವುದೆಷ್ಟು, ಅವರಿಗೆ ನೆಮ್ಮದಿಯೆಷ್ಟು ಕಡಮೆ, – ಅವರನ್ನು ರುಬ್ಬು ತ್ತಿರುವ ಬಡತನ ಹಾಗೂ ಅವರ ವಿಕಾಸವನ್ನು ತಡೆಯುತ್ತಿರುವ ರೋತೆ ಎಂಥಾದ್ದು ಎಂಬುದನ್ನು ಅರಿತುಕೊಂಡೆ. ಪಿತ್ರಾರ್ಜಿತ ಧನ ಭೋಗಗಳಲ್ಲಿ ಮುಳುಗಿ ಮೈಗಳ್ಳ ರಾದ ಶ್ರೀಮಂತರನ್ನೂ, ಅವರು ಗುರಿಗೆಟ್ಟು ಪೊಳ್ಳು ಬದುಕನ್ನು ಬಾಳುತ್ತಿರು ವುದನ್ನೂ ನೋಡಿದೆ. ಅವರು ಯಾರೂ ಉಪಯುಕ್ತವಾದ ಯಾವುದನ್ನೂ ಮಾಡ ತ್ತಿರಲಿಲ್ಲ. ಎಳೆಯ ಮಕ್ಕಳು ಚಿಟ್ಟೆಗಳನ್ನು ಬೆನ್ನಟ್ಟಿ ಹಿಡಿಯುವ ಧಾಟಿಯಲ್ಲಿ ಅವರು ಸುಖಲೋಲುಪರಾಗಿರುವುದನ್ನು ಕಂಡೆ. ಬಡವರಿಗಿಂತ ಹೇಯವಾದ ಜೀವನ ಮಾರ್ಗ ಅವರದು; ಮತ್ತು ಬಡತನದ ಬವಣೆಗಿಂತ ಹೆಚ್ಚು ಬರಡಾದ ಬಾಳು ಈ ಸಿರಿ ವಂತರದು ಎಂಬುದನ್ನು ಕಂಡುಕೊಂಡೆ.

ನನ್ನ ಗಮನಕ್ಕೆ ಬಂದ ಅಸಮಾನತೆಗಳೂ ಅನ್ಯಾಯಗಳೂ ನನ್ನನ್ನು ಬೇನೆಯಂತೆ ಬಾಧಿಸಿ ಆತಂಕಪಡಿಸಿದುವು. ನನ್ನನ್ನು ನಾನೇ ಕೇಳಿಕೊಂಡೆ: "ಈ ಸಸ್ಯಶ್ಯಾಮಲೆ ಯಾದ ಭೂಗ್ರಹದಲ್ಲಿ ಜೀವಿತವು ಒದಗಿಸಿರುವ ಕರ್ತವ್ಯಾವಕಾಶಗಳನ್ನು ನಾವು ಮನುಷ್ಯರು ಬಳಸಿಕೊಳ್ಳುವುದು ಇಷ್ಟು ಮಾತ್ರವೇಯೆ? ಇದಕ್ಕಿಂತ ಮೇಲಾಗಿ ನಾವು ಬಾಳಲಾರೆವೆ? ಮನುಷ್ಯನು ಜನ್ಮಕ್ಕೆ ಬಂದದ್ದು ಈ ಒಂದು ಮೂಷಿಕ–ಮಾರ್ಜಾಲ ಸ್ಪರ್ಧೆಯನ್ನು ತೋರುವ ಜೂಜೋಟಕ್ಕೋಸ್ಕರವೆ? ಮನುಷ್ಯನು ಈ ವರೆಗೆ ನಡಸಿ ಕೊಂಡು ಬಂದ ಜಗದ್ವಸ್ತು ಶೋಧನೆ ಹಾಗೂ ನೂತನವಸ್ತುಗಳ ನಿರ್ಮಾಣ ಪ್ರಯತ್ನ ವಲ್ಲವೆ ಅವನಿಗೆ ಪ್ರಕೃತಿಯ ಮೇಲೂ ಜನಸಮಾಜದ ಮೇಲೂ ಅಷ್ಟಿಷ್ಟು ಪ್ರಭುತ್ವ ವನ್ನು ತಂದುಕೊಟ್ಟಿದ್ದು? "ನಿತ್ಯಜೀವನದಲ್ಲಿ ಆಗುತ್ತಿರುವ ದುಂದು ನನ್ನನ್ನು ದಂದು ಗಕ್ಕೀಡುಮಾಡಿದುವು. ಅದರಲ್ಲೂ ಜುಜುಬಿಗಳಿಗೋಸ್ಕರ ಸರಕು ಸಾಮಾನುಗಳ ಪೋಲು – ಉಣಿಸಿನ ಪೋಲು, ಫಲಪ್ರದಗಳಾಗಬಹುದಾದ ಶಕ್ತಿ ಚೈತನ್ಯಗಳ ಪೋಲು, ಪ್ರತಿಭೆಯ ಪೋಲು – ಇವೆಲ್ಲ ನನ್ನನ್ನು ದಿಗ್ಭ್ರಾಂತನನ್ನಾಗಿ ಮಾಡಿ ದುವು. ವಿಸ್ಮಯಕಾರಿಯೂ ಸಂಪತ್ಸಮೃದ್ಧವೂ ಆಗಬಹುದಾದ ಮನುಷ್ಯಜೀವನ ಹೀಗೆ ರಿಕ್ತವೂ ಹೀನವೂ ಸ್ವಾರ್ಥಪರವೂ ವಿಚಾರ ಶೂನ್ಯವೂ ಆಗಿ ಅದನ್ನು ಪ್ರೇತವನ ಜೀವನವನ್ನಾಗಿ, ಗೊಂಡಾರಣ್ಯದ ಪಾಶವ ಜೀವನವನ್ನಾಗಿ ಮಾಡಿದೆಯಲ್ಲಾ!

ಪೌರಜೀವನದಲ್ಲಿ ಪೋಲು ಹೀಗಾದರೆ, ಮನುಷ್ಯನು ರಣರಂಗಕ್ಕಿಳಿದು ಮಾಡು ತ್ತಿರುವ ದುಂದು ಇನ್ನೂ ಹೆಚ್ಚಾಗಿ ಕಣ್ಣು ಕುಕ್ಕುವಂಥಾದ್ದು, ಮತ್ತು ಅಕ್ಷಮ್ಯ ವಾದದ್ದು. ಕ್ಯೂಬಾ, ದಕ್ಷಿಣ ಆಫ್ರಿಕಾ ಮತ್ತು ಫಿಲಿಪೈನ್ಸ್ ದೇಶಗಳಲ್ಲಿ ಸಣ್ಣ ಪ್ರಮಾಣದ ಯುದ್ಧಗಳು ನಡೆದುವು. ಯೂರೋಪು ಏಷ್ಯಾಖಂಡಗಳಲ್ಲಿ ಹಾವಳಿ

ಮಾಡುತ್ತ ಸುಳಿದ ವಿಶ್ವಸಂಗ್ರಾಮಗಳು ನಡೆದ ಅವಧಿಯಲ್ಲೂ ಆದ ದುಂದು ಎಷ್ಟು? ಮನೆಗಳಲ್ಲೂ ದುಂದು ಹೆಚ್ಚುತ್ತಿವೆ; ನೆರೆಹೊರೆಯಲ್ಲೂ ದುಂದುಗಳು ಹೆಚ್ಚುತ್ತಿವೆ. ಈ ದುಂದುಗಳೇನೋ ಬಾಳನ್ನು ಸಾಕಾದಷ್ಟು ಕೆಡಿಸುತ್ತವೆ. ಆದರೆ ಕೊಳುಗುಳ ಗಳಲ್ಲಿ ಆಗುವ ದುಂದೋ ಕ್ರೂರವಾದದ್ದು, ಮನುಷ್ಯನ ಮಟ್ಟವನ್ನು ಇಳಿಸತಕ್ಕದ್ದು. ಅಷ್ಟೇ ಅಲ್ಲ ಲೋಕಕ್ಕೆ ದುರಂತಗಳನ್ನು ಬರಮಾಡತಕ್ಕದ್ದು. ಇಂಥ ವಿಚಾರ ಶೂನ್ಯವೂ ಲಜ್ಜಾಸ್ಪದವೂ ಆದ ಬಂಜೆ ಬಾಳಿನಿಂದ ಮನುಷ್ಯನಿಗೆ ಬಿಡುಗಡೆ ಇಲ್ಲವೆ? ಅವನಲ್ಲಿ ಅನುಕಂಪೆ, ದಯಾರ್ದ್ರತೆ ಮತ್ತು ಉದಾತ್ತಕಲ್ಪನೆ; ಘನವಾದ ಆಶೋತ್ತರ, ಪ್ರತಿಭೆ ಮತ್ತು ಕುಶಾಗ್ರಮತಿ; – ಇವು ಸಂಕಲ್ಪದೃಢತೆಯಿಂದ ಸಂಘಟನೆಗೆ ಒದಗಿ, ಪ್ರತಿಜ್ಞಾರೂಪವನ್ನು ಪಡೆಯದೆ ಹೋದರೆ, ಮನುಷ್ಯನು ಮನುಷ್ಯನ ವಿಷಯದಲ್ಲಿ ನಡಸುತ್ತಿರುವ ಈ ಹೊಲ್ಲನಡೆಯನ್ನೂ, ಘೋರವಾದ ಅಪರಾಧವನ್ನೂ ಅಣಗಿಸುವ ಬಗೆ ಹೇಗೆ? ಈ ಮೌಢ್ಯಗಳನ್ನು, ಈ ವ್ಯಭಿಚಾರಗಳನ್ನು ಈ ಅನ್ಯಾಯಗಳನ್ನು ಕೊನೆ ಗಾಣಿಸಿ, ಮನುಷ್ಯಪ್ರಯತ್ನಕ್ಕೆ ಮೇಲು ಮೇಲಿನ ಮಟ್ಟಗಳನ್ನೂ ಸುವಿಶಾಲ ಸೇವಾ ಕ್ಷೇತ್ರಗಳನ್ನೂ ನಾವು ತೋರಿಸಲಾರೆವೆ?

ಮನುಷ್ಯರಿಗೆ ಶ್ರೇಯಕ್ಕಿಂತ ಕಡಮೆಯಾದದ್ದನ್ನು ನಮ್ಮ ವೈಯಕ್ತಿಕ ಹಾಗು ಸಾಮಾಜಿಕ ಜೀವನಗಳಲ್ಲಿ ನಾವು ಇಷ್ಟದಿಂದ ಮಾಡುತ್ತಿದ್ದೇವೆ. ನನ್ನಲ್ಲಿ ಅನೇಕವರ್ಷಗಳ ಅವಧಿಯಲ್ಲಿ ಸೇರಿರುವ ಅನುಭವರಾಶಿಯ ಆಧಾರದಿಂದ ಸ್ಪಷ್ಟ ವಾಗಿರುವ ಅಭಿಪ್ರಾಯ ಇದು; ಇದು ವಾಸ್ತವಿಕ ಸಂದರ್ಭವೇ ಆದರೆ, ನಮ್ಮ ಸಾಮಾಜಿಕ ಧರ್ಮೇಂದ್ರಿಯವೂ ವೈಯಕ್ತಿಕ ಧರ್ಮೇಂದ್ರಿಯದೊಡನೆ ನಮ್ಮನ್ನು ಚುಚ್ಚುತ್ತಲೇ ಇರಬೇಕು. ನಮ್ಮ ನಮ್ಮ ಭಾವನೆಗಳನ್ನು ನಾವು ಉದಾತ್ತೀಕರಿಸಿ ನಮ್ಮ ನಮ್ಮ ಸಂಕಲ್ಪಗಳನ್ನೂ ಅವಕ್ಕನುಸಾರವಾದ ಕಾರ್ಯಗಳನ್ನೂ ಶೋಧಿಸಿ ಇನ್ನು ಮುಂದಾದರೂ ನಾವು ಸ್ವಾರ್ಥದೂರವೂ ಸ್ಫೂರ್ತಿವಂತವೂ ಉದಾತ್ತ ಚರಿ ತವೂ ಆಗುವಂಥ **ಯಾವುದಾದರೊಂದು** ಪ್ರಯತ್ನದಲ್ಲಿ ತೊಡಗುವವರೆಗೆ ನಾವೆಲ್ಲ ಧರ್ಮೇಂದ್ರಿಯ ಚೋದನೆಗೂ ಭರ್ತ್ಸನೆಗೂ ಗುರಿಯಾಗಬೇಕು.

**ಈ "ಯಾವುದಾದರೊಂದು"** ಪ್ರಯತ್ನ ಎಂದರೆ ಅದಾವದು? ಅದು ಘನವೂ ವಿಶಾಲವೂ ಆಳವೂ ಆಗಿದ್ದು, ನಮ್ಮ ಅಚಲ ನಿಷ್ಠೆಯನ್ನು ಅನಿವಾರ್ಯ ಪಡಿಸಿ ಕೋರತಕ್ಕದ್ದಾಗಬೇಕು. ನಮ್ಮ ವಿವಿಧ ಸಾಮರ್ಥ್ಯಗಳ ವಿನಿಯೋಗಕ್ಕೆ ಅವಕಾಶವಾಗಿ, ನಮ್ಮ ಪ್ರತಿಭೆ ಕಾರ್ಯಮುಖವಾಗಿ ಹರಿದು, ವೈಯಕ್ತಿಕ ಸಾಮಾ ಜಿಕ ಸಮಸ್ಯೆಗಳನ್ನು ತಾಗಿ ತಾಡನ ಮಾಡಿ, ಅವಕ್ಕೆ ಪರಿಹಾರಗಳು ಏನೆಂದು ಕಂಡು ಕೊಳ್ಳುವ ಶುದ್ಧಶ್ರದ್ಧೆಯ ಪ್ರಯತ್ನ ಅದಾಗಬೇಕು. ಒಂದಾನೊಂದು ನಡವಳಿಕೆ ಸಾಧುವಲ್ಲ ಎಂದು ನಮ್ಮ ಗಮನಕ್ಕೆ ಬಂದರೆ, ಆ ಬಗ್ಗೆ ನಮ್ಮ ಪಾತ್ರವೇನೆಂದು

ಯುಕ್ತಾಯುಕ್ತ ವಿವೇಕದಿಂದ ನಿರ್ಧಾರಮಾಡಿ, ಅವಶ್ಯವಾದ ಜೊತೆಜನದ ಪ್ರಯತ್ನದಲ್ಲಿ ನಮ್ಮ ಪಾಲನ್ನು ಸೇರಿಸದೆ ಉಪೇಕ್ಷೆಮಾಡುವುದು ನಮಗೆ ತರವಲ್ಲ. ಒಬ್ಬ ಆಮೂಲಾಗ್ರ ವಿಚಾರಿ – ರ್‍ಯಾಡಿಕಲ್ ಎನ್ನಿಸಿದವನು—ತತ್ತ್ವದೊಡನೆ ಮಾತ್ರ ಕ್ರೀಡಿಸುತ್ತ ಇದ್ದುಬಿಟ್ಟರೆ ಸಾಲದು ; ತನ್ನ ಧರ್ಮೇಂದ್ರಿಯದ ಅಂಕುಶವು ತನ್ನನ್ನು ತಿವಿಯುತ್ತಿರುವುದನ್ನು ಸಂವೇದಿಸಿ ಗ್ರಹಿಸಿ, ಕಾಯಕಕ್ಕೆ ವಿಘ್ನಗಳಾಗಿ ದೇಹಕ್ಕೆ ಅಂಟಿರುವ ವೇಷಭೂಷಣಗಳನ್ನು ತೊರೆದು, ಟೊಂಕಕಟ್ಟಿ ಕರ್ತವ್ಯ ಕರ್ಮಕ್ಕೆ ನಮ್ಮ ಕರಣಗಳನ್ನೆಲ್ಲ ಹೂಡಬೇಕು.

ನಾನು ವಾಸ್ತು ಶಿಲ್ಪಿ (ಇಂಜಿನಿಯರು)ಗಳ ಕುಟುಂಬದಲ್ಲಿ ಬೆಳೆದವನು. "ತಳಪಾಯವನ್ನು ಅಗಲವಾಗಿಯೂ ಆಳವಾಗಿಯೂ ಹಾಕಿಕೊಳ್ಳಿರಿ, ಅದರಮೇಲೆ ಕಟ್ಟುವ ಕಟ್ಟಡವನ್ನು ತೂಗು ಗುಂಡಿನ ನೇರಕ್ಕೆ ಎತ್ತಿರಿ ; ಅಚ್ಚುಕಟ್ಟಾಗಿಯೂ ಪೂರ್ವಯೋಜನೆಯ ಉದ್ದೇಶಕ್ಕೆ ಅನುಸಾರವಾಗಿಯೂ ಕಟ್ಟಡವನ್ನೆಬ್ಬಿಸಿರಿ. ಅದು ಗಟ್ಟಿಯಾಗಿರುತ್ತದೆ". ಹಿರಿಯರು ನಮಗೆ ಕಲಿಸಿದ ಕಸಬಿನ ಗುಟ್ಟು ಇದು. ಈ ಮುಖ್ಯ ವಿವರಗಳಲ್ಲಿ ಯಾವುದಾದರೊಂದರ ಕೊರತೆಗೆ ನಾವು ಆಸ್ಪದ ಕೊಟ್ಟರೂ ಕಟ್ಟಿದ ಕಟ್ಟಡವನ್ನು ಕೆಡವಿ ಮರಳಿ ಕಟ್ಟಲು ಮೊದಲು ಮಾಡುತ್ತಿದ್ದೆವು.

ನಾವು ಎಷ್ಟೇ ಧಾರಾಳವಾಗಿ ಅಲ್ಲಿ ಇಲ್ಲಿ ತೇಪೆ ಕೆಲಸದ ರಿಪೇರಿ ಮಾಡಿದರೂ ಅದು ಪೂರ್ವ ಯೋಜನೆಗೆ ಅನುಸಾರವಾಗಿ ಆದ ಕಟ್ಟಡ ಎನ್ನಿಸುವುದಿಲ್ಲ. ಒಂದು ಕೊಳದಲ್ಲಿ ನೀರು ಇಂಗಿ ಹೋಗುತ್ತಿದ್ದರೆ, ಪರಿಹಾರಕಾರ್ಯವೆಂದು ನಾವು ಏರಿಯ ಇಳಿಜಾರಿನಲ್ಲಿ ಹುಲ್ಲನ್ನು ನಾಟಿ ಬೆಳಸಿದರೆ, ಅಥವಾ ಪೊದೆಯನ್ನು ಬೆಳೆಸಿದರೆ ಪ್ರಯೋಜನವಾಗದು. ನೀರು ಇಂಗಿ ಹೋಗುವ ಬಿಲಗಳನ್ನು ಕಂಡು ಹಿಡಿದು, ಅವನ್ನು ಭದ್ರವಾಗಿ ಮುಚ್ಚಬೇಕು. ಒಂದು ವೇಳೆ ಹರಿದುಹೋಗುವ ನೀರಿಗಡ್ಡವಾಗಿ ಗಟ್ಟಿಗೋಡೆಯನ್ನು ಎಬ್ಬಿಸಬೇಕಾದರೂ ಆ ಅನಿವಾರ್ಯವೆಚ್ಚಕ್ಕೆ ನಾವು ಅಣಿಯಾಗಬೇಕು. ನಮ್ಮ ಕಷ್ಟಗಳ ಬೇರಿಗಿಳಿದು, ಪ್ರತಿಕೂಲಗಳ ಮೂಲವನ್ನು ಮನದಟ್ಟು ಮಾಡಿಕೊಂಡು, ಅದನ್ನು ನಿವಾರಿಸಬೇಕು. ನೀರಿನ ಪೋಲನ್ನು ತಪ್ಪಿಸುವ ಉದ್ದೇಶ ನೆರವೇರುವವರೆಗೆ, ನೀರು ಯಾವುದಕ್ಕೆ ಅವಶ್ಯವೋ ಅದಕ್ಕೆ ಕಾಪಾಡಿ ಪೂರೈಸಿಕೊಳ್ಳಲು ಕಾರ್ಯದಲ್ಲಿ ಮಗ್ನರಾಗಿರಬೇಕು.

ಕಟ್ಟಡಗಳನ್ನು ಕಟ್ಟುವ ಶುದ್ಧಾಂತಃಕರಣವುಳ್ಳ ಸಿವಿಲ್ ಇಂಜಿನಿಯರುಗಳು ತೋರುವ ಪ್ರಜ್ಞೆ ಶ್ರದ್ಧೆಗಳೇ ಸಾಮಾಜಿಕ ವಾಸ್ತು ಶಿಲ್ಪಿಗಳಿಗೂ ಇರಬೇಕು. ಧರ್ಮೇಂದ್ರಿಯ ಜಾಗರೂಕತೆ ಉಭಯ ಸಾಮಾನ್ಯವಾದ ಗುಣ. ಸಮಾಜಶಿಲ್ಪಿಗಳು ತಮ್ಮ ಜೊತೆಯ ಕಾರ್ಯಕರ್ತರ ಹಾಗೂ ಪೌರಜನತೆಯ ಜೀವನ ಕಲ್ಯಾಣ ಸಾಧನೆಯಲ್ಲಿ ತೊಡಗಿರಬೇಕು. ಅವರು ತಮ್ಮ ಕಾರ್ಯದಲ್ಲಿ ಶ್ರೇಷ್ಠಮಿತಿಯ ದಕ್ಷತೆ

ಯನ್ನು ಮುಟ್ಟದಿದ್ದರೆ, ಸಂತತವಾಗಿ ಅವರು ಧರ್ಮೇಂದ್ರಿಯದ ಅಂಕುಶ ಪ್ರಯೋಗಕ್ಕೆ ಗುರಿಯಾಗುತ್ತಲೇ ಇರಬೇಕು. ಅವರು ಕೈಯಲ್ಲಿರಿಸಿಕೊಂಡ, ಕಾರ್ಯಕ್ಕೊದಗುವ, ಸಲಕರಣೆಗಳ ಬಳಕೆಯೂ ತಲೆಯಲ್ಲಿ ಕೂಡಿಟ್ಟುಕೊಂಡ ಪರಿಕರ್ಮತಂತ್ರಜ್ಞಾನ ಪ್ರಯೋಗವೂ ಸಾರ್ಥಕಪಡುವವರೆಗೆ ಅವರಿಗೆ ಅಂತರ್ಯಾಮಿ ಕೊಡುವ ಕಾಟ ತಪ್ಪುವುದಿಲ್ಲ.

ಕಾಮಗಾರಿ ಕೆಲಸದ ಹೊಣೆಯರಿತ ಸಿವಿಲ್ ಇಂಜಿನಿಯರುಗಳಂತೆ, ಸಾಮಾಜಿಕ ವಾಸ್ತುಶಿಲ್ಪಿಗಳಾದ ನಾವೂ ಇತಿಹಾಸವನ್ನು ನೋಡಿ ಪಾಠ ಕಲಿಯಬೇಕು ನಮ್ಮ ಜ್ಞಾನಾನುಭವಗಳನ್ನು ಒಂದು ಕಡೆ ಕೂಡಿ ಹಾಕಿಕೊಳ್ಳಬೇಕು. ದುಡಿಯಲು ಆರಿಸಿಕೊಂಡ ಕ್ಷೇತ್ರವನ್ನು ಸಮೀಕ್ಷಿಸಬೇಕು. ನಕ್ಷೆನಕಾಸೆಗಳನ್ನು ಸರಿಯಾಗಿ ರೇಖಿಸಿಕೊಂಡಿದ್ದೇವೆಯೆ, ಸಂಖ್ಯಾವಿವರಗಳನ್ನು ಸರಿಯಾಗಿ ಗುರುತು ಹಾಕಿಕೊಂಡಿದ್ದೇವೆಯೆ ಎಂದು ಶೋಧಿಸಬೇಕು; ಪುನಃ ಪುನಶ್ಶೋಧಿಸಬೇಕು; ಮತ್ತು ವೈಯಕ್ತಿಕ ಹಾಗೂ ಸಾಮೂಹಿಕ ಶಕ್ತಿಸಾಮರ್ಥ್ಯಗಳನ್ನು ಬಳಸಿಕೊಂಡು, ನಮ್ಮ ಜೊತೆ ಮನುಷ್ಯರಲ್ಲಿ ಆದಷ್ಟು ಸಂಖ್ಯೆಗೆ ಹೆಚ್ಚು ಸಿರಿ, ನೆಮ್ಮದಿ, ಕೂಡಿಬರುವ ಜನ ಜೀವನ ವಿಧಾನವನ್ನು ಕಟ್ಟಬೇಕು. ಯಾವುದಾದರೂ ಮುಖ್ಯ ವಿವರಗಳಲ್ಲಿ ನಾವು ಸೋತೆವಾದರೆ, ಕೆಟ್ಟದ್ದನ್ನು ನೇರ್ಪಡಿಸುವವರೆಗೆ ನಾವು ನಮ್ಮ ಧರ್ಮೇಂದ್ರಿಯದ ಆಕ್ಷೇಪಣೆಗೆ ಈಡಾಗಲು ಒಡಂಬಡಬೇಕು.

ಧರ್ಮೇಂದ್ರಿಯದ ತಿವಿತಕ್ಕೆ ಗುರಿಯಾಗುವವರು ರ್‍ಯಾಡಿಕಲ್ ವಿಚಾರಿಗಳು ಮಾತ್ರವಲ್ಲ. ಕೆಲವರು ಲಿಬರಲ್ (ಉದಾರ) ವಿಚಾರಿಗಳೂ, ಹಾಗೆಯೇ ಕೆಲವರು ಕನ್ಸರ್ವೆಟಿವ್ (ಸಂಪ್ರದಾಯಪಾಲಕ) ವಿಚಾರಿಗಳೂ ಧರ್ಮೇಂದ್ರಿಯ ನಿರ್ಬಂಧಗಳಿಗೆ ಈಡಾಗುತ್ತಾರೆ. "ಲಿಬರಲ್ ವಿಚಾರಿಯ ಧರ್ಮೇಂದ್ರಿಯ" (Conscience of Liberal) ‡ ಎಂಬ ಪುಸ್ತಕವನ್ನು ಬರೆದವರು ಚೆಸ್ಟರ್ ಬೌಲ್ಸ್ ಅವರು. ಇದು ಅವರ ಲೇಖನ ಭಾಷಣಗಳ ಸಂಗ್ರಹ. ಇಂಡಿಯಾ ದೇಶದಲ್ಲಿ ಅಮೆರಿಕದ ರಾಯಭಾರಿಯಾಗಿದ್ದಾಗ ಅವರು ಪತ್ರಿಕೆಗಳಿಗೆ ಬರೆದ ಲೇಖನಗಳೂ ವೇದಿಕೆಗಳಿಂದ ಕೊಟ್ಟ ಭಾಷಣಗಳೂ ಈ ಗ್ರಂಥರೂಪದಲ್ಲಿ ಹೊರಬಿದ್ದಿವೆ. ಸ್ವಭಾವತಃ ಅವರು ನ್ಯಾಯಪರರೂ ದಯಾಪರರೂ ಆಗಿ, ಅಮೆರಿಕದ ಜೀವನವಿಧಾನವನ್ನು ಸಹಾನುಭೂತಿಯಿಂದ ಸಮರ್ಥಿಸುವವರು. ಸಾಮಾಜಿಕ ಸ್ಥಾನಮಾನಗಳಲ್ಲಿ ಸಮತೆ, ಸಾಮಾಜಿಕ ನ್ಯಾಯ ಮತ್ತು ಸ್ವಾತಂತ್ರ್ಯ-ಇವು ಮನುಷ್ಯಪ್ರಯತ್ನಕ್ಕೆ ಸಾಕಾಗುವ ಗುರಿಗಳೆಂದೂ,

‡ ನ್ಯೂಯಾರ್ಕ್ 1948 (ಇತ್ತೀಚಿನ ಮುದ್ರಣ-1982, ಹಾರ್ಪರ್ ಆ್ಯಂಡ್ ರೋ.)

ಅಮೆರಿಕದ ಜೀವನದ ಮಾರ್ಗವು ವಿಶ್ವಜನತೆಯನ್ನು ಉದ್ಧಾರ ಮಾಡುವ ಕೃಪಾಶ್ರಯ ವೆಂದೂ ನಂಬಿರತಕ್ಕವರು.

ಇಂಡಿಯದ ಬ್ಲಿಟ್ಜ (Blitz) ಎಂಬ ಆಂಗ್ಲ ವಾರ ಪತ್ರಿಕೆಗೆ 1952 ರ ಜುಲೈ ತಿಂಗಳಲ್ಲಿ ಕೊಟ್ಟ ಸಂದರ್ಶನದ ಕಾಲದಲ್ಲಿ ಬೌಲ್ಸ್ ಹೀಗೆ ಹೇಳಿದರು. "ಅಸ್ತಿತ್ವ ಯೋಗ್ಯವಾದ ವಸ್ತುಗಳನ್ನು ಕಾಪಾಡಿಕೊಳ್ಳುವ ಉದ್ದೇಶವುಳ್ಳ ನಾವು ಚೇತನ ಮಯವೂ ಉದಾರವೂ ಆದ ಚಳವಳಿಯಲ್ಲಿ ನಂಬಿಕೆಯುಳ್ಳವರು. ಈ ಚಳವಳಿ ಅತ್ಯುಗ್ರ ಪಂಥವನ್ನೂ ಬಹು ಸೌಮ್ಯ ಪಂಥವನ್ನೂ ತೊರೆದು, ಮಧ್ಯಮಾರ್ಗವನ್ನು ಹಿಡಿದು,—ಭೂ ಸುಧಾರಣೆಗಳು, ಕಾರ್ಮಿಕರಿಗೆ ಕನಿಷ್ಠ ಮಿತಿಯ ಭೃತಿ, ಪ್ರಜಾ ಜನಕ್ಕೆ ಮೇಲ್ಮಟ್ಟದ ಜೀವನ ಸೌಕರ್ಯಗಳು, ವಿಶಾಲವಾದ ಸಾಮಾಜಿಕ ಭದ್ರತೆ, ಹೆಚ್ಚು ಸಮರ್ಪಕವಾದ ಸಾರ್ವಜನಿಕ ಆರೋಗ್ಯ, ಮತ್ತು ಕುಲ ಜಾತಿ, ವರ್ಣ ಅಥವಾ ವರ್ಗಗಳ ಭೇದ ಭಾವವಿಲ್ಲದೆ ಸಮಸ್ತಜನರಿಗೂ ಹೆಚ್ಚಿನ ಕಾರ್ಯಾವ ಕಾಶಗಳು—ಇವಕ್ಕೋಸ್ಕರ ಶ್ರದ್ಧೆಯಿಂದ ದುಡಿಯುತ್ತದೆ. ನಾವು ಅಮೆರಿಕೀಯರು ಗಾಢವಾಗಿ ನಂಬಿರುವ ರಾಜಕೀಯ ಚಳವಳಿ ಎಂದರೆ ಇದೇ."

ಅವರ "ಲಿಬರಲ್ ವಿಚಾರಿಯ ಧರ್ಮೇಂದ್ರಿಯ" ದಲ್ಲಿಯ ಇನ್ನೊಂದು ವಾಕ್ಯ ಸಮುದಾಯ ಇದು; ಅವರ ಮೇಲ್ಕಂಡ ಅಭಿಪ್ರಾಯವನ್ನು ಇದು ಇನ್ನಷ್ಟು ವಿಶದ ಪಡಿಸುತ್ತದೆ. 1945 ರಲ್ಲಿ ಸೆನೆಟ್ ಸಭೆಯ ಬ್ಯಾಂಕಿಂಗ್ ಮತ್ತು ಕರೆನ್ಸಿ ಕಮಿಟಿಯ ಮುಂದೆ ಅವರು ಮಾಡಿದ ಭಾಷಣ ಇದು: "ಈ ದೇಶದಲ್ಲಿ ನಿಜವಾದ ಅರ್ಥಿಕ ಸ್ವರಾಜ್ಯ ಇರುತ್ತದೆ ಎಂಬುದು ನಮ್ಮ ತಿಳವಳಿಕೆಗೆ ಬರುವುದು ಹೇಗೆ? ಅಮೆರಿಕದ ಸಂಪ್ರದಾಯ ಪರಂಪರೆಗನುಸಾರವಾಗಿ ವ್ಯಕ್ತಿ ಪ್ರಜೆಯ ಜೀವನ ವಿಕಾಸವಾಗು ತ್ತದೆ; ಮತ್ತು ಪುಷ್ಕಲವಾಗಿ ವಸ್ತೂತ್ಪತ್ತಿಯಾಗುತ್ತದೆ ಎಂದೂ, ಉದ್ಯೋಗಾರ್ಹ ರಾದ ಸಮಸ್ತ ಜನವರ್ಗಕ್ಕೆ ಉದ್ಯೋಗ ಕಲ್ಪನೆಯಾಗುತ್ತದೆ: ಈ ವ್ಯವಸ್ಥೆಯ ವಾಣಿಜ್ಯ ಕ್ಷೇತ್ರಕ್ಕೆ ಒಳ್ಳೆಯ ಲಾಭವಿರುತ್ತದೆ, ಮತ್ತು ಕಾರ್ಖಾನೆಗಳ ಕಾರ್ಯಕರ್ತ ರಿಗೆ ಒಳ್ಳೆಯ ಭೃತಿಯೂ ಕೃಷಿಕರ್ತರಿಗೆ ಒಳ್ಳೆಯ ವರಮಾನವೂ ಇರುತ್ತದೆ—ಎಂದು ಖಚಿತಪಟ್ಟಾಗ, ಇಂಥ ಸನ್ನಿವೇಶದಲ್ಲಿ ಮಾತ್ರ ನಮ್ಮಲ್ಲಿ ಲಕ್ಷಾಂತರ ಪ್ರಜೆಗಳು ತಮ್ಮ ಬದುಕನ್ನು ಕಾಪಾಡುತ್ತ ಬಂದ ಗತಕಾಲದ ನಿರ್ಬಂಧಕವಾದ ಭಯ ಹಾಗೂ ಅಸ್ಥಿರ ಮನೋಭಾವ (ಅನಿಶ್ಚಯತೆ)ಗಳಿಂದ ಬಿಡುಗಡೆ ಪಡೆದಾರು........ಖಾಸಗಿ ವ್ಯಕ್ತಿ ಪ್ರಜೆ ಯಾಗಿ ನನ್ನ ನಂಬಿಕೆ ಇದು : ಅಮೆರಿಕದ ಅಭ್ಯುದಯಕ್ಕಾಗಿ ಇಂಥ ಒಂದು ಯೋಜ ನೆಯನ್ನು ರೂಪಿಸಿಕೊಂಡೇವೆಂದು ನಾನು ಎದೆಯಾರ ಹಾರೈಸುತ್ತೇನೆ. ಈ ಯೋಜ ನೆಯ ಪ್ರಕಾರ ನಮ್ಮ ದೇಶದ ಎಲ್ಲ ಕಾರ್ಯಕರ್ತಸಮುದಾಯಗಳಿಗೂ ಅನ್ವಯ್ಯ ವಾಗುವ ಸಾಮಾಜಿಕ ಸ್ಥಿರತೆ ಖಾತರಿಯಾಗಬೇಕು ; ಸಮರ್ಪಕವೆನ್ನಿಸುವ ಕನಿಷ

ಮಿತಿಯ ಭೃತಿ ಅವರಿಗೆ ಸಂದಾಯವಾಗಬೇಕು. ಹಂಗಾಮಿಯಾಗಿಯೂ ಅನಿವಾರ್ಯವಾಗಿಯೂ ನಿರುದ್ಯೋಗದಲ್ಲಿರುವವರಿಗೆ ನ್ಯಾಯವಾದ ಪರಿಹಾರದ್ರವ್ಯ ಸಂದಾಯವಾಗಬೇಕು. ಸಾಮಾಜಿಕ ಸ್ಥಿರತೆಯ ಅಂಗವಾಗಿ ವ್ಯಾಪಕವಾದ ಜೀವವಿಮಾ ವ್ಯವಸ್ಥೆ ; ಮತ್ತು ರಾಷ್ಟ್ರೀಯ ನೀತಿಯಾಗಿ ಬೇಸಾಯಗಾರರಿಗೆ ಅವರು ಬೆಳೆಯುವ ಫಸಲಿಗೆ ಯೋಗ್ಯವಾದ ದೊಡ್ಡ ಪ್ರಮಾಣದ ವರಮಾನ ; ದೇಶದೊಳಗಣ ಪ್ರಜೆಗೆ ನಿರುಪಾಧಿಕವಾದ ಭುಕ್ತಿಗೂ ಅನ್ಯದೇಶಗಳಿಗೆ ರಫ್ತು ಮಾಡುವುದಕ್ಕೂ ಧಾರಾಳವಾಗಿ ಒದಗುವ ಆಹಾರ ಶೇಖರಣೆ – ಇವು ಅಮೆರಿಕದಲ್ಲಿ ನಾವು ಎದುರು ನೋಡುವ ಆರ್ಥಿಕ ವ್ಯವಸ್ಥೆ ದೊರಕಿಸಬೇಕಾದ ಪ್ರಯೋಜನಗಳು." ಬೌಲ್ಸ್ ಅವರ ಈ ಅಭಿಪ್ರಾಯವನ್ನು ವಿಭಜಿಸಿ ನೋಡಿದಾಗ ನಮಗೆ ಗೊತ್ತಾಗುವುದೇನು ? ಅವರು ಇಂಡಿಯದಲ್ಲಿ ರಾಯಭಾರಿಯಾಗಿ ಅಲ್ಲಿನ ವಿದ್ಯಮಾನಗಳನ್ನು ಕಣ್ಣಾರ ಕಂಡವರು. ಅಲ್ಲಿಯೂ ಬೇರೆ ಬೇರೆ ಮಟ್ಟದ ಆರ್ಥಿಕ ಪ್ರಗತಿಯನ್ನು ಕಂಡ ಜನವರ್ಗಗಳಿರುವುದನ್ನು ಕಾಣಬೇಕಾಗಿದ್ದವರು. ಆದರೆ ಅಧುನಿಕ ಯಂತ್ರೋದ್ಯಮನಿಷ್ಠ, ಅಧಿಕಾರ ಸಂಪನ್ನ ರಾಷ್ಟ್ರಗಳ ಹಾಗೂ ಚಕ್ರಾಧಿಪತ್ಯಗಳ ಜನಜೀವನಸ್ಥಿತಿಗೂ ಈ ರಾಷ್ಟ್ರಗಳ ಶೋಷಣನೀತಿ ದಬ್ಬಾಳಿಕೆಗಳಿಗೆ ಗುರಿಯಾದ ವಸಾಹತು ಪ್ರದೇಶಗಳ ಜನಜೀವನ ಸ್ಥಿತಿಗೂ ಇರುವ ಅಂತರವನ್ನು ವಾಸ್ತವವಾಗಿ ಬೌಲ್ಸ್ ಅವರು ಅರಿತವರಲ್ಲ ಎಂಬುದು ಅವರ ವಿಚಾರ ಸರಣಿಯಿಂದ ಸ್ಪಷ್ಟವಾಗುತ್ತದೆ.

ಅಮೆರಿಕದ ಆರಿಜೋನಾ ಸಂಸ್ಥಾನದ ಮಾಜಿ ಸೆನೆಟ್ ಸಭಾಸದಸ್ಯರು ಬ್ಯಾರಿ ಗೋಲ್ಡ್ ವಾಟರ್, ಅವರೇ ಹೇಳಿಕೊಳ್ಳುವ ಹಾಗೆ ಸಂಪ್ರದಾಯದಲ್ಲಿ ಕಟುನಿಷ್ಠರು (ಕನ್ಸರ್ವೆಟಿವ್). ಆಗಾಗ ಅವರಿಗೂ ಧರ್ಮೇಂದ್ರಿಯದ ಸಂಪರ್ಕವುಂಟು. ಇದನ್ನು ಅವರು ತಮ್ಮ ಜನಪ್ರಿಯವಾದ "ಸಂಪ್ರದಾಯ ನಿಷ್ಠನೊಬ್ಬರ ಧರ್ಮೇಂದ್ರಿಯ" ( Conscience of a Conservative ) ಎಂಬ ಪುಸ್ತಕದಲ್ಲಿ ‡ ಸ್ಪಷ್ಟವಾಗಿ ಪ್ರಕಟ ಮಾಡಿದ್ದಾರೆ. ಮಿ|| ಗೋಲ್ಡ್ ವಾಟರ್ ಅವರು ಗಟ್ಟಿಗುಂಡಿಗೆಯ ಅಮೆರಿಕನ್ ಪ್ರಜೆ. "ಪ್ರಾಚೀನವೂ ಪರೀಕ್ಷಿತವೂ ಆದ ಸತ್ಯಗಳು ನಮ್ಮ ಗಣರಾಜ್ಯಕ್ಕೆ ಅದರ ಆದಿದಿನಗಳಲ್ಲಿ ಮಾರ್ಗದರ್ಶಕಗಳಾಗಿದ್ದವು. ಆ ಸತ್ಯಗಳೇ ಇಂದಿನ ನಮಗೂ ತಕ್ಕ ಮಾರ್ಗದರ್ಶನ ನೀಡಬಲ್ಲವು." ಎಂದು ನಂಬಿರತಕ್ಕವರು. ಸಾಮೂಹಿಕ ಆರ್ಥೋದ್ಯಮದ ಪ್ರಯತ್ನ ತತ್ತ್ವದಲ್ಲಿ ( ಕಲೆಕ್ಟಿವಿಸಂ – Collectivism) ನಂಬಿಕೆಯಿಲ್ಲದೆ ಅವರು ಅದನ್ನು ತೀವ್ರವಾಗಿ ಆಕ್ಷೇಪಿಸುತ್ತಾರೆ; ಮತ್ತು ಸಾಂಪ್ರತಕಾಲದ ಸೋಷಲಿಸ್ಟ್ ಹಾಗೂ ಕಾಮ್ಯುನಿಸ್ಟ್ ಜೀವನ ವಿಧಾನಗಳನ್ನು

---

‡ ನ್ಯೂಯಾರ್ಕ್ ಹಿಲ್ಮನ್ ಬುಕ್ಸ್, 555, ಐದನೆಯ ಅವೆನ್ಯೂ, 1960.

ಮಾರ್ಕ್ಸ್ ಪಂಡಿತನ ತತ್ತ್ವಗಳನ್ನೂ ಖಂಡಿಸುತ್ತಾರೆ. ಬಹುಜನ ಕಲ್ಯಾಣ ತತ್ತ್ವದಲ್ಲೂ (ವೆಲ್ಫೇರಿಸಮ್-Welfarism) ಕೂಡ ಅವರಿಗೆ ನಂಬಿಕೆಯಿಲ್ಲ. ಏಕೆಂದರೆ ಈ ಜನ ಕಲ್ಯಾಣ ತತ್ತ್ವವು "ರಾಷ್ಟ್ರಸ್ವಕರಣದ (ನ್ಯಾಷನಲೈಸೇಷನ್-Nationalization) ಮೂಲಕ ಸಾಮ್ಯ ಅಥವಾ ಸಮತಾವಾದವು ಜನತಾ ಸ್ವಾತಂತ್ರ್ಯಕ್ಕೆ ಒಡ್ಡುವ ಅಪಾಯಕ್ಕಿಂತ ಹೆಚ್ಚಿನ ಅಪಾಯಕರ" ಎಂದು ಬಗೆಯುವವರು ಅವರು. "ಅಮೆರಿಕವು ಮುಖ್ಯವಾಗಿ ಸಂಪ್ರದಾಯನಿಷ್ಠವಾದ ರಾಷ್ಟ್ರ" ಎಂಬುದು ಅವರ ಅಚಲ ವಿಶ್ವಾಸ. ಪ್ರಜೆಗಳು ವರಮಾನವನ್ನು ಯಾವಾಗ ಹೇಗೆ ವೆಚ್ಚಮಾಡಲು ಬಯಸುತ್ತಾರೋ ಆಗ ಹಾಗೆ ವೆಚ್ಚಮಾಡಲು ಜೀವಮಾನದ ಉದ್ದಕ್ಕೂ ಅವರು ಸ್ವತಂತ್ರರು. ಇದು ಅವರ ಹಕ್ಕುಬಾಧ್ಯತೆ" "ಆಯಾ ದಿನ ಮನುಷ್ಯನಿಗೆ ಒದಗುವ ಸವಾಲು ಯಾವುದು ?........ ತನ್ನ ಈ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ವಿಸ್ತರಿಸಿಕೊಳ್ಳುವುದು." "ಕನ್ಸರ್ವೆಟಿವ್ ಪ್ರಜೆಯ ಮೊದಲ ಕಾತರ ಯಾವಾಗಲೂ ಉಚಿತ ಪ್ರತಿಕ್ರಿಯೆಯಾಗಿ ಪ್ರಕಟವಾಗಬೇಕಾದ ಸಂದರ್ಭ ಯಾವುದು? "ನಾವು ಸ್ವಾತಂತ್ರ್ಯವನ್ನು ಕೂಡಿದಮಟ್ಟಿಗೂ ಉತ್ತಮ ದಶೆಗೇರಿಸುತ್ತಿದ್ದೇವೆಯೆ?" ಎಂಬುದು ಆ ಸಂದರ್ಭ.

ಗೋಲ್ಡ್ ವಾಟರ್ ಪ್ರತಿಯೊಂದು ರಾಜಕೀಯ ಸಲಹೆಯನ್ನೂ ಪರೀಕ್ಷಿಸಲು ಒಂದು ಮಾನದಂಡವನ್ನಿರಿಸಿಕೊಂಡಿದ್ದಾರೆ. "ಕಾಮ್ಯುನಿಸ್ಟ್ ತತ್ತ್ವವನ್ನು ಮಟ್ಟಿ ಹಾಕಲು ಈ ಸಲಹೆ ನಮಗೆ ನೆರವಾಗುತ್ತದೆಯೆ"? ಅಮೆರಿಕದ ರಾಜನೀತಿಯ ಮುಖ್ಯಾಶಯವೇನೆಂಬುದನ್ನು ಆತ ಭಾವಿಸುವುದು ಹೀಗೆ: "ಕಾಮ್ಯುನಿಸ್ಟ್ ತತ್ತ್ವಕ್ಕೆ ದೂರವಿದ್ದು ಹೋರಾಡುವುದು ಮಾತ್ರವಲ್ಲ, ಅದನ್ನು ಬಡಿದು ಗೆಲ್ಲುವುದು ನಮ್ಮ ನೀತಿ." ಈ ಗುರಿಯನ್ನು ನಾವು ಮುಟ್ಟಬೇಕಾದರೆ, "ನಾವು ಆ ತತ್ತ್ವದ ಮೇಲೆ ಸದಾ ಸರ್ವಾತ್ಮನಾ ಆಕ್ರಮಣ ಮನೋಭಾವದಿಂದ ಇದ್ದು, ಸಕಲ ಕರಣಗಳನ್ನೂ ಹೂಡಿ ಅದರ ಮೇಲೇರಿ ಬೀಳಬೇಕು." "ನಾವು ಪ್ರಯತ್ನ ಪೂರ್ವಕವಾಗಿ ಸೈನ್ಯಶಕ್ತಿಯನ್ನು ಬೆಳಸಿಕೊಂಡು ಕಾಮ್ಯುನಿಸ್ಟ್ ರಾಷ್ಟ್ರಗಳಿಗಿಂತ ನಾವು ಹೆಚ್ಚು ಪ್ರಬಲರೆನ್ನಿಸಿಕೊಳ್ಳುವಂತೆ ಆಗಲೇಬೇಕು." ನಾವು ಅಮೆರಿಕವನ್ನು ಆರ್ಥಿಕವಾಗಿ ಬಲಶಾಲಿಯಾದ ರಾಷ್ಟ್ರವಾಗಿ ಕಟ್ಟಬೇಕು;" ಮತ್ತು "ಮಹಾರಾಷ್ಟ್ರವೊಂದರ ಹೊಣೆಯರಿತ ಪ್ರಜೆಗಳಂತೆ ನಮ್ಮ ವರ್ತನೆಯಿರಬೇಕು. ನಾವು ವಿದೇಶಗಳಿಗೆ ನೆರವು ಕೊಡುವಾಗ, "ನಮಗೆ ಮಿತ್ರಪಕ್ಷದಲ್ಲಿರುವ ಹಾಗೂ ಕಾಮ್ಯುನಿಸ್ಟ್ ತತ್ತ್ವಕ್ಕೆ ವಿರೋಧಿಗಳಾಗಿ ಸ್ವಾತಂತ್ರ್ಯ ಸಂರಕ್ಷಣೆಗೋಸ್ಕರ ನಮ್ಮೊಡನೆ ಹೋರಾಟದಲ್ಲಿ ಸೇರಿ, ನಮ್ಮ ಪರವಾಗಿಯೇ ಇರುವ ರಾಷ್ಟ್ರಗಳಿಗೆ ಮಾತ್ರ ನಮ್ಮ ನೆರವು ಸಲ್ಲತಕ್ಕದ್ದು." "ಪ್ರಪಂಚದ ಕಾಮ್ಯುನಿಸ್ಟ್ ಚಳವಳಿಯನ್ನು ನಾಗರಿಕ ಜಗದ್ರಾಷ್ಟ್ರಕೂಟದಲ್ಲಿ ಎಣಿಕೆಮಾಡದೆ, ಅದನ್ನು ನ್ಯಾಯಬಾಹಿರವೆಂದು ಘೋಷಿಸಿ ಬಹಿಷ್ಕರಿಸಬೇಕು;" ಮತ್ತು "ಎಲ್ಲ ಕಮ್ಯುನಿಸ್ಟ್ ರಾಷ್ಟ್ರ

ಗಳಿಂದ ನಮ್ಮ ರಾಯಭಾರ ಮನ್ನಣೆಯನ್ನು ಹಿಂತೆಗೆದುಕೊಂಡು, ಆ ರಾಷ್ಟ್ರಗಳಲ್ಲಿ ಬಂದಿಗಳಾಗಿರುವ ಪ್ರಜೆಗಳು ಅಲ್ಲಲ್ಲಿಯ ಪ್ರಭುತ್ವಗಳ ವಿರುದ್ಧ ಬಂಡಾಯವೇಳುವುದಕ್ಕೂ ನಾವು ಪ್ರೋತ್ಸಾಹ ಕೊಡಬೇಕು. ಯಾವಯಾವ ಕಾಮ್ಯುನಿಸ್ಟ್ ದೇಶಗಳಿಂದ ರಾಜಕೀಯವಾದ ಕಾರಣಗಳಿಗೋಸ್ಕರ ದೇಶಭ್ರಷ್ಟರಾಗಿ ಅನ್ಯದೇಶಗಳಲ್ಲಿ ವಲಸೆಗಾರರಾಗಿ ನೆಲಸಿದ್ದಾರೋ ಅವರಿಗೆಲ್ಲ ಬೆಂಬಲಕೊಟ್ಟು, "ಅವರು ಸುಸಂಘಟಿತರಾಗಿ, ತಮ್ಮ ತಮ್ಮ ರಾಷ್ಟ್ರಗಳಿಗೆ ದಂಡೆತ್ತಿಹೋಗಿ ಅವನ್ನು ಆಕ್ರಮಿಸಿ ಸ್ವಾಧೀನಪಡಿಸಿಕೊಳ್ಳಲು ಎಲ್ಲ ನೆರವನ್ನೂ ನೀಡಬೇಕು." ಅಲ್ಲದೆ, ಯಾವಯಾವ ಕಾಮ್ಯುನಿಸ್ಟ್ ರಾಷ್ಟ್ರಗಳು ದುರ್ಬಲಗಳೋ ಅವಕ್ಕೆ ನಾವೇ ಮುತ್ತಿಗೆಹಾಕಿ, ಸೈನಿಕ ಕಾರ್ಯಾಚರಣೆ ನಡಸಿ, ಅವನ್ನು ಅಣಗಿಸಿ ಬಿಡಬೇಕು. ಅನತಿದೂರ ಭವಿಷ್ಯತ್ತಿನಲ್ಲಿ "ಕಾಮ್ಯುನಿಸ್ಟ್ ಪ್ರಭುತ್ವಗಳ ಕೈಗೆ ಆಕ್ರಮಣ ಕಾರ್ಯಾರಂಭದ ಶಕ್ತಿಸ್ವಾತಂತ್ರ್ಯಗಳು ಒದಗಿಕೊಂಡು ಬಿಡುತ್ತವೆ;....ಇಲ್ಲವೆ, ನಾವೇ ನಮ್ಮ ಚಿತ್ತವನ್ನು ಚೋದಿಸಿ, ಆಕ್ರಮಣ ತಂತ್ರ ಸಾಧನಗಳನ್ನು ಚಿಂತಿಸಿ, ಆ ರಾಷ್ಟ್ರಗಳಮೇಲೆ ಬಿದ್ದು ಯುದ್ಧಮಾಡಿ, ಕ್ರಮೇಣ ಅವುಗಳ ವಿನಾಶಕ್ಕೋಸ್ಕರ ಪ್ರತೀಕಾರ ಕಾರ್ಯಾರಂಭ ಮಾಡುತ್ತೇವೆ" "ಸ್ವಾತಂತ್ರ್ಯ ರಕ್ಷಣೆಗೆ ನಾವು ಕೊಡಬೇಕಾದ ಬೆಲೆ ಯುದ್ಧಚಿಕಿತ್ಸೆಯೇ ಆದೀತು."

ಅನೇಕ ಸಂಪ್ರದಾಯ ನಿಷ್ಠರಂತೆ ಹಾಗು ಎಲ್ಲ ಪ್ರತಿಗಾಮಿಗಳಂತೆ ಗೋಲ್ಡ್ ವಾಟರ್ ತನ್ನ ಹೊತ್ತನ್ನು ಕಳೆಯುವುದು—ಅದಾವುದೋ ಪ್ರಾಚೀನ ಸ್ವರ್ಣಯುಗದ ಕಡೆಗೆ ದೃಷ್ಟಿಯಿಟ್ಟು. ಭವಿಷ್ಯತ್ ಪ್ರಗತಿಗೋಸ್ಕರ ನಡೆಯುವ ಎಲ್ಲ ಅಭ್ಯುದಯ ಪ್ರಯತ್ನಗಳನ್ನೂ ಅವರು ಖಂಡಿಸಿ ದೂರುವವರಾಗಿದ್ದಾರೆ. ಅವರ ಮನೋಭಾವ ನಿರಂತರವಾಗಿ ನಿಷೇಧಾತ್ಮಕವಾದದ್ದು. ಆಕ್ರಮಣವೊಂದನ್ನು ಬಿಟ್ಟು, ವ್ಯವಹಾರ ಸಾಧ್ಯವೆನ್ನಿಸುವ ಯಾವ ರಚನಾತ್ಮಕ ಪರಿಹಾರೋಪಾಯವನ್ನೂ ಅವರು ಸೂಚಿಸಲಾರರು.

ಹೀಗೆ, ನಮ್ಮ ಈ ಭೂಗ್ರಹವು ಹಾಯುತ್ತಿರುವ "ಕಷ್ಟಕಾಲದಲ್ಲಿ ಜನದ ಮುಂದೆ ನಿಂತು, ಅವರ ಬೆಂಬಲವನ್ನು ಗಳಿಸಬಯಸುವ ಕನ್ಸರ್ವೆಟಿವ್ ಹಾಗು ಲಿಬರಲ್ ನಾಯಕರು ತಳೆದ ಮನೋಧರ್ಮವೇನೆಂಬುದನ್ನು ತಿಳಿಸಲು, ಅವರವರ ಮಾತಿನ ಒಕ್ಕಣೆಯನ್ನೇ ಕೊಟ್ಟು ವಾಚಕರಿಗೆ ವಿಶದಪಡಿಸಿದ್ದಾಯಿತು. ಈ ಇಬ್ಬರೂ ಅಮೆರಿಕದ ಸಂಪ್ರದಾಯನಿಷ್ಠ – ಪರಂಪರಾಪ್ರಾಪ್ತ–ಜೀವನ ಕ್ರಮವನ್ನು ತಮ್ಮ ನಿಲವಿಗೆ ಹಿನ್ನೆಲೆಯಾಗಿ ಪಡೆದಿದ್ದಾರೆ. ಲಿಬರಲ್ ನಾಯಕನು ಸೌಮ್ಯ, ನ್ಯಾಯಪರ; ಮತ್ತು ಹಳೆಯ ಪದ್ಧತಿಯನ್ನು ಸುಧಾರಿಸಿ ಉತ್ತಮಪಡಿಸಲು ಅನೇಕ ಸಲಹೆಗಳನ್ನು ಕೊಡುತ್ತಾನೆ. ಕನ್ಸರ್ವೆಟಿವ್ ನಾಯಕನಾದರೋ ಉಗ್ರ, ಹಟವಾದಿ; ಮತ್ತು ಹಳೆಯ ಪದ್ಧತಿಯ ಪರವಾಗಿ ನಿಂತು, ಅದನ್ನು ಸಂರಕ್ಷಿಸಿಕೊಳ್ಳಲು ಯುದ್ಧಚಿಕಿತ್ಸೆಯನ್ನು ಪ್ರಯೋಗಮಾಡಲು ಸಿದ್ಧನಾಗಿದ್ದಾನೆ.

ಆದದ್ದರಿಂದ ಲಿಬರಲ್, ಕನ್ಸರ್ವೆಟಿವ್ ಮತ್ತು ರ್‍ಯಾಡಿಕಲ್ ವಿಚಾರಿಗಳು ಅವರವರ ಧರ್ಮೇಂದ್ರಿಯ ಚೋದನೆಗೂ ಭರ್ತ್ಸನೆಗೂ ಸಿಕ್ಕಿ ಕಾರ್ಯ ಮುಖರಾಗು ವವರು. ವ್ಯತ್ಯಾಸವೇನಿದ್ದರೂ ಅವರವರ ಕರ್ತವ್ಯ ಹೊತ್ತ ಉತ್ತರ ವಾದಿತ್ವಗಳಲ್ಲಿ. ಚೆಸ್ಟರ್ ಬೌಲ್ಸ್ ಸಂಥ ಲಿಬರಲ್ಲುಗಳೂ, ಬ್ಯಾರಿ ಗೋಲ್ಡ್ ವಾಟರಿಸಂಥ ಕನ್ಸರ್ವೆ ಟಿವ್‌ಗಳೂ, ತಮ್ಮ ತಮ್ಮ ಕಾರ್ಯ ಕ್ಷೇತ್ರವನ್ನು ಸ್ವದೇಶದಷ್ಟು ಮಾತ್ರಕ್ಕೆ ಪರಿಮಿತ ಪಡಿಸಕೊಳ್ಳತಕ್ಕವರು. ರ್‍ಯಾಡಿಕಲ್ ವಿಚಾರಿಗಳಾದರೋ ಇನ್ನೂ ಆಳವಾಗಿ ಕಾರಣ ಗಳನ್ನು ಶೋಧಿಸಿ ತಿಳಿಯತಕ್ಕವರು. ಜನಜೀವನದ ಕಷ್ಟಪರಿಸ್ಥಿತಿಗಳ ಬಗ್ಗೆ ಹೆಚ್ಚು ಕಾತರ ಪುಳ್ಳವರಾಗಿ, ಜನಜೀವನವನ್ನು ಸಮಗ್ರ ವಿಚಾರಕ್ಕೂ ವ್ಯಾಪಕ ಕಾರ್ಯಕ್ಕೂ ವಸ್ತುವಾಗಿ ಎತ್ತಿಕೊಳ್ಳುವ ಬಗ್ಗೆ ಈ ಮೂರುಬಗೆಯ ಮನೋಧರ್ಮದ ಜನರಲ್ಲಿ ಕಾಣಬರುವ ವ್ಯತ್ಯಾಸ ಇದು. ರ್‍ಯಾಡಿಕಲ್ ಆದ ನಾನು ಲಿಬರಲ್ ಹಾಗು ಕನ್ಸ ರ್ವೆಟೀವ್ ಮನೋಧರ್ಮವುಳ್ಳವರಿಂದ ಭಿನ್ನಾಭಿಪ್ರಾಯವುಳ್ಳವನು. ಅವರ ಊಹೆಗಳನ್ನು ಅವರ ದೃಷ್ಟಿಗಳನ್ನು, ಅವರ ಕಾರ್ಯಕ್ರಮಗಳನ್ನು ಸುತರಾಂ ಒಪ್ಪದೆ ಇರತಕ್ಕವನು. ರ್‍ಯಾಡಿಕಲ್ ಆಗಿ ನಾನು ನನ್ನನ್ನು ಜನ್ಮಕ್ಕೆ ತಂದೆ ಕುಟುಂಬದ ಯೋಗಕ್ಷೇಮದ ಹೊಣೆ ಹೊರುವವನು; ನನ್ನ ವಾಸಕ್ಕೆ ಆಶ್ರಯಕೊಟ್ಟ ನೆರೆಹೊರೆಯ ಯೋಗಕ್ಷೇಮದ ಹೊಣೆಯನ್ನೂ ಹೊರಬೇಕಾದವನು ಎಂದೆಣಿಸುತ್ತೇನೆ. ಒಟ್ಟು ಮನುಷ್ಯ ವರ್ಗದಲ್ಲಿ ಒಬ್ಬನಾಗಿ ನಾನು ಎಲ್ಲ ಮಾನವರ ಕಲ್ಯಾಣ ಸಾಧನೆಯಲ್ಲಿ ನನ ಗಿರುವ ಕರ್ತವ್ಯ ಪಾತ್ರದ ಭಾಗಾಂಶವೇನುಂಟೋ ಅದರಲ್ಲಿ ಕಾತರಪಡುವವನು. ಈ ಭೂಗ್ರಹ ನಿವಾಸಿಯಾಗಿ, ಅದರ ಸಂಪದ್ವಿನಿಯೋಗ ವಿಷಯದಲ್ಲಿ ತವಕವುಳ್ಳವನಾಗಿ, ಮನುಷ್ಯವರ್ಗವಷ್ಟೇ ಅಲ್ಲ ಇಂದಿನ ಹಾಗೆ; ಮುಂದೆ ಹುಟ್ಟುವ ಮನುಷ್ಯೇತರ ಜೀವ ರಾಶಿಗಳಿಗೋಸ್ಕರ ವಿವಿಧ ಪ್ರಕೃತಿ ಸಂಪನ್ಮೂಲಗಳು, ಬಳಕೆಯಾಗಿ ಅಳಿಯದೆ ಉಳಿ ದಿರುವಂತೆ, ಮಿತವ್ಯಯ ನೀತಿಗೊಳಪಟ್ಟು ಬಳಕೆಯಾಗಬೇಕೆಂಬ ದೃಷ್ಟಿಯುಳ್ಳವನು.

ಈ ಯೋಚನೆ ನನ್ನ ಮನಸ್ಸಿನಲ್ಲಿ ಅಗ್ರಭಾಗಕ್ಕೆ ಎದ್ದು ತುಡಿಯುತ್ತಿರು ವುದರಿಂದ, ಜನತೆಗೋಸ್ಕರ ನಾನು ಈ ನನ್ನ ಧ್ಯೇಯವನ್ನು ಪ್ರಕಟಮಾಡಿ, ಮನುಷ್ಯರು ನಾವು ನಮಗೆ ಒದಗಿರುವ ಅವಕಾಶ ಸನ್ನಿವೇಶಗಳ ಪ್ರಯೋಜನವನ್ನು ಹೊಣೆ ಯರಿತು ಪಡೆಯುವ ಪಾತ್ರ ನಮಗೆಲ್ಲ ಉಂಟು ಎಂದು ಸಾರುತ್ತೇನೆ. ಮನುಷ್ಯನಲ್ಲಿ ವಿವಿಧ ಸಾಮರ್ಥ್ಯಗಳುಂಟು; ರಚನಾತ್ಮಕ ಕಾರ್ಯಗಳಲ್ಲಿ ಆ ಸಾಮರ್ಥ್ಯಗಳನ್ನು ಪ್ರಯೋಗಮಾಡಿ, ಮುಂದೆ ಜಗತ್ತನ್ನು ನಿರಂತರ ಕ್ರಿಯಾತ್ಮಕ ಪಥದಲ್ಲೇ ಭಜಿಸ ಬೇಕೆಂಬ ನಂಬಿಕೆಯಿಂದ ಈ ಪ್ರಬಂಧವನ್ನು ಬರೆಯುತ್ತಿದ್ದೇನೆ.

ಈ ಪ್ರಪಂಚವನ್ನು ಕಾಲಕಾಲಕ್ಕೆ ಹೊಂದುವಂತೆ ಕಟ್ಟುವ, ಅಭಿವೃದ್ಧಿಪಡಿ ಸುವ, ಹಾಗೆಯೇ ಸುಂದರ ತರವಾಗಿ ಮಾಡುವ ಹೊಣೆ ಜನ್ಮಕ್ಕೆ ಬಂದು ಬೆಳೆಯ

ತ್ತಿರುವ ಮನುಷ್ಯರೆಲ್ಲರಿಗೂ ಇದೆಯೆಂಬ ಗಾಢಶ್ರದ್ಧೆಯಿಂದ ಈ ಪ್ರಬಂಧವನ್ನು ನಾನು ಬರೆಯುತ್ತಿದ್ದೇನೆ. ನಿತ್ಯ ವಿಸ್ತಾರವಾಗುತ್ತಿರುವ ಈ ವಿಶ್ವ ಪ್ರಪಂಚದಲ್ಲಿ ವಾಸಮಾಡುತ್ತಿರುವ ಅಸಂಖ್ಯಾಕಗಳಾದ ಜೀವರಾಶಿಗಳಲ್ಲಿ ಮನುಷ್ಯ ಪ್ರಾಣಿವಂಶವೆಂಬುದು ಕೇವಲ ಒಂದು ಅಣುರೇಣು ಮಾತ್ರವಿದ್ದು. ಆದದ್ದರಿಂದ ಈ ಭೂಗ್ರಹದಲ್ಲಿ ಜೀವ ಪೋಷಣೆಗೆ ನೆರವಾಗುವ ಕರ್ತವ್ಯಭಾರ ಮನುಷ್ಯರಾನದ ಮ್ಮಲ್ಲಿ ಪ್ರತಿಯೊಬ್ಬನಿಗೂ ಉಂಟು.

ಮನುಷ್ಯನಿಗೂ ಪ್ರಕೃತಿಗೂ, ಹಾಗೆಯೇ ಮನುಷ್ಯನಿಗೂ ಸಮಾಜಕ್ಕೂ ಇರುವ ಸಂಬಂಧವನ್ನು ಕುರಿತ ಪ್ರಶ್ನೆಗಳನ್ನು ಪರಿಶೀಲಿಸುವ ಕಾರ್ಯವು ಸಮರ್ಪಕವಾಗಿ ನಡೆಯಬೇಕಾದರೆ, ಸದ್ಯಃಸ್ಥಿತಿಗಳ ಅಧ್ಯಯನ ಮಾಡುವುದರಿಂದ ಪರಿಶೀಲನೆ ಮೊದಲಾಗಬೇಕು. ಸದ್ಯಃಸ್ಥಿತಿ ಪರಿಶೀಲನೆ ಎಷ್ಟು ಗುರುತರವಾದದ್ದೆಂದರೆ–ನಾವು ಮುಂದೆ ಕೈಗೊಳ್ಳಬೇಕಾದ ಕಾರ್ಯಕ್ರಮಗಳಿಗೂ, ಅವಕ್ಕೆ ಪೂರ್ವಭಾವಿಯಾಗಿ ನಿಷ್ಕರ್ಷಿಸಿಕೊಳ್ಳುವ ಯೋಜನೆ ನಕ್ಷೆ ನಕಾಸೆಗಳಿಗೂ ಆಧಾರವಾಗಿರುವ ಕಾರಣ ಸಂದರ್ಭಗಳೂ ಸ್ಥಿತಿಗತಿಗಳೂ ಉಪೇಕ್ಷಣೀಯಗಳೆನ್ನಿಸದೆ ನಮ್ಮ ಅಧ್ಯಯನಕ್ಕೆ ಅತ್ಯವಶ್ಯ ವಿಷಯಗಳಾಗುತ್ತವೆ. ಇಂಥ ಪರಿಶೀಲನೆಯಲ್ಲಿ ನಾನು ಅರ್ಧಶತಮಾನದಷ್ಟು ಕಾಲಾವಧಿಯನ್ನು ಕಳೆದಿದ್ದೇನೆ. ಈ ಪರಿಶೀಲನೆಯ ಫಲವಾಗಿ ಈಗ ದುರಂತಸೂಚಿಯಾಗಿರುವ ನಮ್ಮ ಜಗದ್ವ್ಯವಸ್ಥೆ ಹೇಗೆ ಮಾರ್ಪಟ್ಟರೆ ಯುಕ್ತವೆಂಬುದನ್ನು ಪ್ರತಿಪಾದಿಸಲು ಹೊರಟ್ಟಿದ್ದೇನೆ. ಈ ಪ್ರತಿಪಾದನ ಕಾರ್ಯಕ್ಕೆ ನನ್ನ ದೃಷ್ಟಿ ಎಷ್ಟು ಮಟ್ಟಿನ ಪಟುತೆ ಪಕ್ವತೆಗಳನ್ನು ಪಡೆದಿದೆಯೆಂಬುದನ್ನು ನನ್ನ ದೀರ್ಘಕಾಲದ ಅನುಭವವನ್ನು ಪರೀಕ್ಷಿಸಿಕೊಂಡು, ನನ್ನ ದೃಷ್ಟಿಯಲ್ಲಿ ನ್ಯೂನತೆಯಷ್ಟಾಗಿ ಇಲ್ಲವೆಂದು ಮನಗಂಡು ವಿಶ್ವಾಸ ಭರಿತನಾಗಿದ್ದೇನೆ. ಮನುಷ್ಯವರ್ಗವನ್ನು ಅಪಾಯಗಳಿಂದ ತಪ್ಪಿಸಿ, ಕಣ್ಣು ತಣಿಯುವಂಥ ಪ್ರಗತಿಮಾರ್ಗದಲ್ಲಿ ನಡಸುವ ವಿಶಾಲಾವಕಾಶವು ಪ್ರತಿಯೊಬ್ಬ ವ್ಯಕ್ತಿ ಮನುಷ್ಯನಿಗೂ ಇರುವುದನ್ನು ಮುಂಗಂಡು ಈ ಪ್ರಬಂಧವನ್ನು ನಾನು ಮಹಾಜನರ ಮುಂದಿಡುತ್ತಿದ್ದೇನೆ.

ಅಧ್ಯಾಯ ಒಂದು

# ನಾವು ಮನುಷ್ಯರು ಧರ್ಮದರ್ಶಿಗಳು

ಪ್ರಕಟವಾದ ಇತಿಹಾಸ ದಾಖಲೆಗಳು ತಿಳಿಸುವಂತೆ, ಭೂಗ್ರಹದ ಮೇಲೆ ಮೂಡಿಬಂದ ಜೀವಭೂತಗಳಲ್ಲೆಲ್ಲ ಮನುಷ್ಯ ಜಾತಿಯೇ "ಆಧುನಿಕ." ಅವನಲ್ಲಿ ಪ್ರಜ್ಞೆ ಎಚ್ಚೆತ್ತಾಗ ಅವನು ಕಂಡ ಪರಿಸರ ಇದು: ನೀರು ನೆಲಗಳ ಹಾಸುಹೊಕ್ಕು, ಬೆಟ್ಟ ಗುಡ್ಡ ಹಾಗೂ ಕಣಿವೆ ತಪ್ಪಲು ಬಯಲ್ನೆಲಗಳ ಹಾಸು ಹೊಕ್ಕು. ವಿಧವಿಧದ ಜೀವ ಭೂತಗಳಿಗೆ ಉಣಿಸು ನೀಡುವ ಹಸಿರು ಹರವುಗಳು ಅವನ ಕಣ್ಣನ್ನು ತುಂಬಿ ಕೊಂಡುವು. ನಂದನವನ ಸದೃಶವಾದ ಈ ಪೃಥಿವೀಗ್ರಹದಲ್ಲಿ ನಾನಾ ರೂಪಗಾತ್ರ ಗಳ ಜೀವಭೂತಗಳು;—ಸೂಕ್ಷ್ಮದರ್ಶಿನಿಗೆ ಮಾತ್ರ ಕಾಣಬರುವಂಥ ಮುನ್ನೀರ ಸಾಮಾನ್ಯ ಬಳ್ಳಿ ಜೊಂಡನ್ನು ಹಿಡಿದು ವಿಶೇಷ ವಿಸ್ಮಯಕರವಾದ ಜೀವ ರೂಪಗಳ ವರೆಗೆ—ಭೂಚರ ಜಲಚರ ಖೇಚರಗಳೊಡನೆ ಮನುಷ್ಯನು ತಾನೂ ಒಬ್ಬ ಸಹಚರ ನಾಗಿರುವುದನ್ನು ತಿಳಿವಳಿಕೆಗೆ ತಂದುಕೊಂಡನು.

ಶರೀರ ರಚನೆಯ ಹಾಗೂ ಕಾಯಕ ಚಟುವಟಿಕೆಗಳ ದೃಷ್ಟಿಯಿಂದ ಮನುಷ್ಯನು ಇತರ ಜಂತುಗಳೊಡನೆ ಸಮಾನವಾದ ಜೀವನವನ್ನು ನಡಸುವವನೇ. ಅವನ ಒಡಲ ಮಾಟವನ್ನು ನೋಡಿದಾಗ, ಅಪಾಯ ಸನ್ನಿಧಿಯಲ್ಲಿ ಆತ್ಮರಕ್ಷಣೆ ಮಾಡಿ ಕೊಳ್ಳಲಾರದವನು ಅವನು ಎನ್ನಿಸುತ್ತದೆ. ಆದರೆ ಕೈಯ ಮಾಟವನ್ನು ನೋಡಿದಾಗ ಅವು ವಸ್ತು ಗ್ರಹಣ ಕ್ಷಮವಾಗಿ, ಕುಶಲ ಕರ್ಮ ಮಾಡಬಲ್ಲವನು ಅವನು ಎನಿಸಿದನು. ಈ ಒಂದು ಶಾರೀರಿಕ ಗುಣಯೋಗ್ಯತೆ, ನೇತ್ರಪಾಟವ, ತರ-ತಮ ವಿಚಾರ ಸಾಮರ್ಥ್ಯ, ಸ್ವಾಭಾವಿಕ ಪ್ರಜ್ಞೆ ಹಾಗು ಅನುಕರಣ ಸಾಮರ್ಥ್ಯ,ತನಗೆ ಅವಶ್ಯವೆನ್ನಿಸಿದ ಜೀವನ ಸೌಕರ್ಯಗಳನ್ನು ಆಗಮಾಡಿಕೊಳ್ಳಲು ಅವನು ಆಲೋಚಿಸಿ, ಚಿತ್ತಾವಧಾನದಿಂದ ವಿವಿಧ ವಸ್ತುಗಳನ್ನು ನಿರ್ಮಾಣ ಮಾಡಿಕೊಳ್ಳುವ ಕುಶಲ ತಂತ್ರೋಪಾಯಜ್ಞತೆ—ಇವೆಲ್ಲವೂ ಪ್ರಯೋಗಕ್ಕೆ ಬಂದು, ಭೂಗ್ರಹಲದಲ್ಲಿಯ ನಾನಾ ವಸ್ತು ಗಳು ಮನುಷ್ಯ ಜೀವಿತೋದ್ದೇಶಕ್ಕೆ ಸಾಧನ ಸಲಕರಣೆಗಳನ್ನೊದಗಿಸಿದುವು.

ಮನುಷ್ಯನು ಸ್ವಭಾವತಃ ಸಹವಾಸಪ್ರಿಯನು. ಸಣ್ಣ ಅಥವಾ ದೊಡ್ಡ ಗುಂಪು ಗಳಲ್ಲಿ ಸದಸ್ಯನಾಗಿ ಬಾಳುತ್ತ ಸಹಕಾರ ಸಹವರ್ತನೆಗಳಲ್ಲಿ ತೊಡಗಿ ಅನ್ಯೋನ್ಯಾಶ್ರಯವೂ ಪರಸ್ಪರಾನುಕೂಲ ಪ್ರದಗಳೂ ಆದ ಕಾಯಕ ವಿನಿಮಯದಲ್ಲೂ ಇಷ್ಟದಿಂದ ಸೇರುವವನು. ನಾಯಕ-ಅನುಯಾಯಿ ವ್ಯವಸ್ಥೆಯನ್ನು ಅನುಸರಿಸುತ್ತ,-ಸಾಮೂಹಿಕವಾಗಿ ಉದ್ದೇಶ ಪೂರ್ಣವಾದ ಚಟುವಟಿಕೆಗಳಲ್ಲಿ ತೊಡಗಿರುವುದರಲ್ಲೂ ಅವನು ತನ್ನ ಬಾಳ ಮುನ್ನಡೆಗೆ ಇರುವ ಮೆಟ್ಟಲುಗಳನ್ನು ಕಂಡುಕೊಂಡನು. ಈ ವೈಯಕ್ತಿಕ ಹಾಗು ಸಾಮಾಜಿಕ ಸಾಮರ್ಥ್ಯಗಳ ಜೊತೆಗೆ ಮನುಷ್ಯಾಂತರಂಗದಲ್ಲಿ ಮನೆ ಮಾಡಿ

ಕೊಂಡಿರುವ ಇತರ ಅಳವುಗಳು ಇವು:—ಸ್ಮರಣಶಕ್ತಿ, ದೂರದೃಷ್ಟಿ, ಅಶೋತ್ತರ ಕಲ್ಪನೆ, ಅಮೂರ್ತ ವಿಚಾರಗಳಿಗೆ ಆಕಾರಕೊಟ್ಟು ಜೊತೆ ಜನಕ್ಕೆ ಸಿವೇದನ ಮಾಡುವ ಶಕ್ತಿ. ಈ ವಿವಿಧ ಸಾಮರ್ಥ್ಯಗಳಿಗೆ ಪೂರಕವಾಗಿ ಅವನಿಗೆ ಸಾಧ್ಯವಾಗಿರುವ ವಚೋವಿಲಾಸ, ನಾಮರೂಪಾದಿ ಪ್ರತೀಕಕಲ್ಪನೆ ಮತ್ತು ಲೇಖನ ಪ್ರತಿಮಾ ನಿರ್ಮಾಣಗಳ ಸಾಮರ್ಥ್ಯವುಂಟು. ಇವನ್ನು ಬಳಸಿಕೊಂಡು ಅವನು ಕ್ರಮ ಕ್ರಮ ವಾಗಿ ಸಂಸ್ಕಾರಪಡೆದನು. ತತ್ಫಲವಾಗಿ, ತಲೆಮೊರೆಯಿಂದ ತಲೆಮೊರೆಗೆ ಅವನು ಬಗೆ ಬಗೆಯ ಸಂಕಲ್ಪಗಳನ್ನೂ ಆಶಯಗಳನ್ನು ಕಟ್ಟಿಕೊಳ್ಳುತ್ತ ಬಂದನು. ಜನಜೀವನ ಶಿಲ್ಪವು ಬಗೆಬಗೆಯ ವ್ಯತ್ಯಾಸಗಳನ್ನು ಸ್ಥಾಪಿಸುತ್ತ ಬಹುಮುಖವಾಗಿ ಅಭಿವೃದ್ಧಿ ಪಡೆಯಿತು. ಸಂಪ್ರದಾಯ ಪದ್ಧತಿ ಪರಂಪರೆಗಳು, ಅಭ್ಯಾಸ ವರ್ತನೆಗಳು ಅಂದಂದಿನ ಬಯಕೆಗಳನ್ನು ಪೂರೈಸುವ ಜೀವನ ವ್ಯಾಪಾರಕ್ಕೆ ಸಮೃದ್ಧಿ ತಂದುವು.

ಹೀಗೆ ಮನುಷ್ಯನು ವಿವಿಧ ಸಾಧನ ಸಲಕರಣೆಗಳನ್ನು ಸಮೆದುಕೊಂಡು, ತನ್ನ ಜೀವಮಾನದ ಅವಧಿಯಲ್ಲಿ ದರ್ಶನೀಯವೂ ಅನುಭವಯೋಗ್ಯವೂ ಆದ ಸಂಸ್ಕೃತಿ ಶಿಲ್ಪವನ್ನು ಕಟ್ಟುತ್ತಾನೆ. ಅವನು ಕಣ್ಮರೆಯಾದ ಬಳಿಕ ಬರುವವನು ಅವನ ಮೇಲ್ಪಂಕ್ತಿಯನ್ನು ಅನುಸರಿಸುತ್ತಾನೆ. ಗತವನ್ನು ಅನುಸರಿಸಿ ವರ್ತಮಾನವು ತನ್ನ ಪಾಲಿನ ಸಿದ್ಧಿಯನ್ನು ಸೇರಿಸುತ್ತದೆ. ಹಿಂದಿನಿಂದ ಬಂದದ್ದರಲ್ಲಿ ಒಲವು; ಅದನ್ನು ಆದನ್ನು ಅನುಸರಿಸುವಲ್ಲಿ ಅನೇಕ ವೇಳೆ ಹಳೆಯದನ್ನೇ ಹಿಡಿದು ಮುಂಬರಿಸದೆ ಹೊಸ ದನ್ನು ಕಟ್ಟೋಣ, ಅಭಿಮಾನ ಪಡೋಣ, ತಿದ್ದುಪಡಿ ಮಾಡೋಣ, ಸುಧಾರಿಸಿ ಮೇಲ್ಪಡಿಸೋಣ, ಮತ್ತು ಕಟ್ಟಿದ್ದನ್ನು ನೂರು ಕಾಲ ಉಳಿಸೋಣ – ಇವು ಪರಂಪರೆ ಯಾಗಿರುವ ಸಾಗಿಬರುವ ಮನುಷ್ಯನ ಕೃತಿಸರಣಿ, ಸುಕೃತ ಸರಣಿ.

ಮನುಷ್ಯನ ಜೀವ ಮಾರ್ಗವು ಅವನವನ ಗುಂಪಿಗೆ ವಿಶೇಷವೆನ್ನಿಸುವ ಸಂಸ್ಕೃತಿ ಲಕ್ಷಣಗಳನ್ನು ಪ್ರತಿಯೊಂದು ತಲೆಮೊರೆಗೂ ದಾನಮಾಡುತ್ತದೆ. ಆದರೆ ತಲೆಮೊರೆ ಯಿಂದ ತಲೆಮೊರೆಗೆ ಸಾಗಿಬರುವ ನಾಗರಿಕತೆ ಹಾಗೂ ಸಂಸ್ಕೃತಿಯು ಪರಂಪರೆಯಲ್ಲಿದ್ದ ಹಾಗೆಯೇ ಇರದೆ ಮಾರ್ಪಾಟು ಪಡೆಯುತ್ತಿರುತ್ತವೆ. ಮಾರ್ಪಾಟನ್ನು ಕಾಣುವ ಸಂಗತಿ ಗಳಿವು: ವಸ್ತುಗಳ ಉತ್ಪಾದನ ಕ್ರಮ, ಭಾಷೆ ಮೊದಲಾದ ಸಾಧನಗಳ ನಿವೇದನ ಕ್ರಮ, ಭೋಜನ ಪದ್ಧತಿ; ವಿಹಾರ ಕ್ರೀಡೆಗಳು, ಆಸ್ತಿ ಪಾಸ್ತಿಗಳ ಕಲ್ಪನೆ, ಮತ ಧರ್ಮದ ಆಚರಣೆಗಳು ಶಸ್ತ್ರಾಯುಧಗಳ ನಿರ್ಮಾಣ—ಇವು ಒಂದೊಂದು ಬಾಬಿ ನಲ್ಲೂ ಯುಗದಿಂದ ಯುಗಕ್ಕೆ, ಶಕೆಯಿಂದ ಶಕೆಗೆ ಸ್ಥಲದಿಂದ ಸ್ಥಲಕ್ಕೆ, ಮಾರ್ಪಾಟು ಹೊಂದುತ್ತಲೇ ಇರುತ್ತವೆ.

ಜೀವನಾನುಭವಗಳ ಹಲವು ಯುಗಮಾನ ಶಕೆಗಳನ್ನು ಹಾದು ಮನುಷ್ಯನು ತನ್ನ ಭೌತಬವಲನ್ನು ಹುಟ್ಟರಿವು ಹೆಬ್ಬಯಕೆ ಹೊಂಗನಸುಗಳ ಅಳವನ್ನು ಬಳಸಿ, ತನ್ನ

ಮತ್ತು ತನ್ನ ಸಮುದಾಯದ ಜನಜೀವನಕ್ಕೆ ನೆಮ್ಮದಿಯನ್ನು ತರುವ ಸಂಸ್ಕೃತಿಗೊಂದು ನಿಷ್ಕರ್ಷೆಯಾದ ರೂಪವನ್ನು ಸಂಸ್ಥಾಪದ್ಧತಿ ಭಾವವನ್ನು ಕೊಟ್ಟು ಪ್ರವಾಹವಾಗಿ ಹರಿಯಿಸಿ. ಮುಂದಿದ ತಲೆಮಾರೆಗಳ ಅವಗಾಹನೆಗೆ ನೆರವಾಗಿದ್ದಾನೆ. ಇದು ಅವನನ್ನು ಭೂಗ್ರಹದ ಇತರ ಜೀವ ಭೂತಗಳಿಂದ ಪ್ರತ್ಯೇಕಗಣನೆಗೆ ಅರ್ಹನನ್ನಾಗಿ ಮಾಡಿ, ಎತ್ತಿತೋರಿಸುತ್ತದೆ. ಮೀನು, ಪಕ್ಷಿ, ಕ್ರಿಮಿಕೀಟಗಳು, ಬಗೆಬಗೆಯ ಪ್ರಾಣಿಸಮೂಹ ಗಳು ಇವೆಲ್ಲ ತಮ್ಮ ತಮ್ಮಲ್ಲಿ ಒಂದು ತೆರದ ನಂಟನ್ನು ಬೆಳಸಿಕೊಂಡಿವೆ. ಅವೂ ಒಂದು ಪರಂಪರೆಯನ್ನು ಹಿಡಿದು ಸಾಗಿ ಬರುತ್ತಿರುವುದು ನಿಜ. ಆದರೆ ಮನುಷ್ಯನೊಬ್ಬನೇ ಸ್ವಜಾತಿಸಂತಾನಕ್ಷಮವೂ, ಜಟಲವೂ ಅನ್ಯೋನ್ಯಾವಲಂಬನ ನಿಷ್ಠವೂ, ನಿತ್ಯವರ್ಧ ನಾಯಮಾನವಾಗಿ ವ್ಯಾಪನಶೀಲವೂ ಆದ ಜೀವನರೂಪಾಧನೆಮಾಡಿರತಕ್ಕವನು. ಈ ಹೆಚ್ಚುಗಾರಿಕೆಯಿಂದ ಅವನು ಇತರ ಜೀವಪ್ರಕಾರಗಳ ಮೇಲೆ ಸ್ವಾಮ್ಯವನ್ನು ಸಂಪಾ ದಿಸಿಕೊಂಡಿದ್ದಾನೆ. ಭೂಗ್ರಹದ ಮೇಲೆ ಮನುಷ್ಯನನ್ನು ತಮಗೆ ಸ್ವಾಮಿಯಾಗಿ ಮಾಡಿಕೊಂಡು, ಮನುಷ್ಯಚಿತ್ತಕ್ಕೆ ತಾವು ಅಧೀನಳಾಗಿ, ಇತರ ಜೀವ ಪ್ರಕಾರಗಳು ಬಾಳಬಹುದು ; ಅವೇನಾದರೂ ಅವಿಧೇಯವಾಗಿ ಪ್ರತಿಭಟನೆ ತೋರಿದುವೋ ಮನು ಷ್ಯನು ಅವುಗಳಮೇಲೆ ದಾಳಿಮಾಡಬಲ್ಲ. ಈ ವಿಶೇಷ ಸಾಮಾರ್ಥ್ಯ ಮನುಷ್ಯನಿಗೆ ಲಭ್ಯವಾಗಿಬಿಟ್ಟದೆ.

## ಮನುಷ್ಯನ ಧರ್ಮದರ್ಶಿತ್ವ

ಹೀಗೆ ಮನುಷ್ಯನು ನಾನಾ ಸಾಮರ್ಥ್ಯಗಳನ್ನು ಪಡೆದು ಹುಟ್ಟಿ ಬಾಳುತ್ತ, ಪ್ರಜ್ಞೆಯನ್ನು ಜಾಗೃತವಾಗಿರಿಸಿಕೊಂಡು, ಆಶಯಗಳನ್ನು ಸಂಕಲ್ಪಿಸುತ್ತ, ಸಂತಾನ ನವನ್ನು ಸಂರಕ್ಷಿಸಿಕೊಂಲು ಸಾಗಿಸುತ್ತ ಇರತಕ್ಕವನು. ಈ ಸಾಮರ್ಥ್ಯಗಳನ್ನು ಬಳಸಿ, ಯೋಜನೆಮಾಡಿ, ಸಂಘಟನೆಮಾಡಿ, ಸ್ವಂತ ಜೀವನದಲ್ಲೂ ತನಗನುಕೂಲವಾಗುವಂತೆ ಸುತ್ತ ಮುತ್ತಣ ನೈಸರ್ಗಿಕ ಹಾಗೂ ಸಾಮಾಜಿಕ ಪರಿಸರಗಳಲ್ಲೂ ಪರಿವರ್ತನೆಗಳನ್ನು ಆಗಮಾಡಿಕೊಳ್ಳಬಲ್ಲವನು. ಇವನಹಾಗೆ ವಿಶೇಷ ವ್ಯಾಪಕ ಸಾಮರ್ಥ್ಯವುಳ್ಳ, ಇವನ ಹಾಗೆ ಕಟ್ಟುವ (ಹಾಗೆಯೇ ಉರುಳಿಸಿ ಮತ್ತೆ ಕಟ್ಟಿಕೊಳ್ಳುವ) ಸೃಷ್ಟಿಲಯ ಸಾಮರ್ಥ್ಯವುಳ್ಳ ಪ್ರಾಣಿ ಇಳೆಯಲ್ಲಿ ಬೇರೊಂದಿಲ್ಲ.

ಇತಿಹಾಸವು ದಾಖಲೆಗಳನ್ನೊದಗಿಸಲು ಮೊದಲಾದಂದಿನಿಂದ ಮನುಷ್ಯವರ್ಗ ಹಳ್ಳಿಗಳನ್ನೂ ಪಟ್ಟಣಗಳನ್ನೂ ರಾಷ್ಟ್ರಸಾಮ್ರಾಜ್ಯಗಳನ್ನೂ ಕಟ್ಟದೆ. ಮನುಷ್ಯನು ತನ್ನ ವಿವಿಧ ಭಾವನೆಗಳನ್ನೂ ಆಚರಣೆಗಳನ್ನೂ ಸಾಮಾಜಿಕ ಶಿಲ್ಪ ಸಂಸ್ಥಾಪದ್ಧತಿ ಗಳನ್ನೂ ಎಡಬಿಡದೆ ಕಟ್ಟಿ ಉರುಳಿಸುತ್ತಿರುವ ಕಥೆ ಈ ದಾಖಲೆಗಳಿಂದ ತಿಳಿಯಬರು ತ್ತದೆ. ಮನುಷ್ಯನ ಕಲ್ಪನೆಗಳು, ವಸ್ತು ಶೋಧನೆಗಳು, ವಸ್ತು ನಿರ್ಮಾಣಗಳು

—ಇವೆಲ್ಲದರ ಫಲಿತಾಂಶವೇನೆಂದರೆ, ಕಳೆದ ಐದು ಸಾವಿರ ವರ್ಷಗಳ ಅವನ ಅಧ್ಯವಸಾಯ ಸಿದ್ಧಿಗಳು ಅವನನ್ನು ನಿತ್ಯೋರ್ಜಿತವಾಗಿ ಬಾಳಬಲ್ಲ ಪ್ರಾಣಿವಿಶೇಷ ಎನ್ನಿಸಿರುವುದು. ನೈಸರ್ಗಿಕ ಪ್ರತಿಕೂಲಗಳನ್ನೂ ಸಾಮಾಜಿಕ ವಿಪತ್ತುಗಳನ್ನೂ ನಿರಪಾಯನಾಗಿ ಹಾದು, ಇತರ ಪ್ರಾಣಿ ಪ್ರಕಾರಗಳೊಡನೆ ಸ್ಪರ್ಧೆಯಲ್ಲಿ ತೊಡಗಿ, ಪ್ರಕೃತಿಯ ಸಂಪತ್ಕರಂಡದಿಂದಲೂ ಚೈತನ್ಯ ಕರಂಡದಿಂದಲೂ ತನ್ನ ಬಾಳಿಗೆ ಬೇಕಾದ ಎಲ್ಲ ಸಂಪತ್ತು ಚೈತನ್ಯಗಳನ್ನು ರೂಢಿಸಿಕೊಂಡು, ಇತರ ಪ್ರಾಣಿವರ್ಗಗಳನ್ನು ಕಾಪಾಡುವ ಅಥವಾ ಕೊಲ್ಲುವ ಅಥವಾ ಅವನ್ನು ಪಳಗಿಸಿಕೊಳ್ಳುವ ಇಲ್ಲವೆ ಅವುಗಳ ವಂಶ ನಿರ್ಮೂಲನ ಮಾಡುವ ಮಹಾ ಸಾಮರ್ಥ್ಯವನ್ನು ಗಳಿಸಿ, ಮನುಷ್ಯನು ಇಳೆಯನ್ನು ತನ್ನ ಏಕೈಕ ಪ್ರಭುತ್ವಕ್ಕೆ ತಕ್ಕ ಭೋಗ ಭೂಮಿಯನ್ನಾಗಿ ಮಾಡಿಕೊಂಡಿದ್ದಾನೆ.

ಈ ವಿಶೇಷಾಧಿಕಾರವನ್ನು ಸಂಪಾದಿಸಿಕೊಂಡು, ಇತರ ಪ್ರಾಣಿವರ್ಗಗಳಮೇಲೆ ತನ್ನ ಪ್ರಾಬಲ್ಯವನ್ನೂ ಸ್ಥಾನ ಬಲದ ಔನ್ನತ್ಯವನ್ನೂ ಸ್ಥಾಪಿಸಿಕೊಂಡು ಮನುಷ್ಯ ವರ್ಗ ಇಂದು ಭೂಗ್ರಹದ ಸದ್ಯದ ಉಳವು ಹಾಗೂ ಅದರ ಮುಂದಿನ ಆಗುಹೋಗುಗಳನ್ನು ಕುರಿತ ಹೊಣೆಯನ್ನು ಹೊತ್ತುಕೊಂಡಿದೆ. ಜಗದಿತಿಹಾಸದಲ್ಲಿ ಹೀಗೆ ಮನುಷ್ಯನ ಔನ್ನತ್ಯವು ಪರಿಣಾಮಕಾರಿಯಾಗಿ ಸ್ಥಾಪಿತವಾದ ಘಳಿಗೆಯಿಂದ ಅವನು ತನ್ನ ಜಗದ್ವ್ಯಾಪಾರಕ್ಕೆ ಉತ್ತರವಾದಿಯಾಗುವ ನೆಲೆಗೆ ಬಂದಿದ್ದಾನೆ. ಇತಃಪರ ಅವನು ಭೂಮಿಯನ್ನೂ ಅದರೊಳಗಣ ವಸ್ತು ಶಕ್ತಿಗಳನ್ನೂ ಬಳಸುತ್ತ, ಭೂಗ್ರಹನಿವಾಸಗಳೆಲ್ಲರ ಯೋಗಕ್ಷೇಮಕ್ಕೋಸ್ಕರ ದೊಡ್ಡ ಹೊಣೆ ಹೊತ್ತವನಾದನು. ಒಂದು ಮಾತಿನಲ್ಲಿ, ಅವನು ಜೊತೆಯ ಜೀವಭೂತಗಳ ಜೀವನ ಮರಣಗಳ ಮೇಲೆ ಅಧಿಕಾರ ಪಡೆದವನಾಗಿ, ಧರ್ಮದರ್ಶಿಯ ದೊಡ್ಡ ಪದವಿಗಡರಿ, ತನ್ನ ರಕ್ಷಣೆಗೆ ನ್ಯಾಸವಾಗಿ ಬಂದ ಎಲ್ಲವನ್ನೂ ವಿವೇಕದಿಂದ ಕಾಪಾಡುವ ಕರ್ತವ್ಯಭಾರವನ್ನು ಹೊರತಕ್ಕವನಾದನು.

ಮನುಷ್ಯನು ತನ್ನ ಸ್ವಂತ ಕಲ್ಯಾಣಕ್ಕೂ ಜೊತೆಯ ಮನುಷ್ಯರ ಹಾಗೂ ತನ್ನನ್ನೇ ಆಶ್ರಯಿಸಿದ ಇತರ ಮನುಷ್ಯೇತರ ಪ್ರಾಣಿವರ್ಗದ ಕಲ್ಯಾಣಕ್ಕೂ ಧರ್ಮದರ್ಶಿಯಾಗಿದ್ದಾನೆ.

ಭೂಗ್ರಹದ ಮೇಲೆ ಇನ್ನು ಮೇಲೆ ಹುಟ್ಟುವ ಮನುಷ್ಯ ವಂಶಗಳಿಗೂ ನ್ಯಾಸ ರಕ್ಷಕನಾಗಿರುವ ಧರ್ಮದರ್ಶಿಯ ಹೊಣೆ ಅವನದು.

ಭೂಗ್ರಹದ ಮೇಲೆ ತಾನು ಸಂಪರ್ಕಕ್ಕೆ ಬರುವ ಇತರ ಸಮಸ್ತ ಜೀವರಾಶಿಗಳ ಯೋಗಕ್ಷೇಮದ ಹೊಣೆಯನ್ನು ಹೊತ್ತ ಧರ್ಮದರ್ಶಿ ಅವನು.

ಭೂಗ್ರಹವು ನೂರಾರು ಸೌರವ್ಯೂಹದ, ಹಾಗೂ ನಿತ್ಯವಿಸ್ತಾರವಾಗುತ್ತನೂರಾರು ಸೌರವ್ಯೂಹಗಳನ್ನೊಳಗೊಂಡುಮನುಷ್ಯಾನುಭವಕ್ಕೆ ಬರುತ್ತಿರುವ ಮಹಾಬ್ರಹ್ಮಾಂಡದ

ಒಂದು ಅವಿಭಾಜ್ಯವಾದ ಅಂಗವಾಗಿರುವುದರಿಂದ, ಈ ವಿಶ್ವಜಗದ್ವ್ಯವಸ್ಥೆಗೆ ತಾನು ಎಂದಿಗೂ ಬಾಧಕನಾಗದಂತೆ ಅದರ ಕ್ಷೇಮಸಾಧನೆಯ ಹೊಣೆಯನ್ನು ಕೂಡ ಹೊತ್ತು ಕೊಂಡವನು ಅವನು.

ಮನುಷ್ಯ ವರ್ಗದ ಒಬ್ಬ ಸದಸ್ಯನಾಗಿ, ನನ್ನ ವಿಶ್ವಪ್ರಜಾಬಾಂಧವರೊಡನೆ ಈ ಮನುಷ್ಯ ಧರ್ಮದರ್ಶಿತ್ವದಲ್ಲಿ ಸಹಕಾರಿಯಾಗಿ ಸೇರತಕ್ಕವನು ನಾನು. ನನ್ನ ಪಾಲಿಗೆ ಬಿದ್ದ ಕರ್ತವ್ಯ ಭಾರವನ್ನು ನಾನು ನಡಸದಿದ್ದರೆ ನನ್ನ ಧರ್ಮೇಂದ್ರಿಯದ ತಿವಿತದಿಂದ ನೋಯಬೇಕಾದವನು ನಾನು. ಧರ್ಮೇಂದ್ರಿಯ ನನ್ನ ಅಂತರಂಗದಲ್ಲಿ ಸುಪ್ರತಿಷ್ಠಿತವಾಗಿರುವುದು ಹೀಗೆ ನನಗೆ ನನ್ನ ಹೊಣೆಯನ್ನು ಜ್ಞಾಪಿಸಿ, ನನ್ನನ್ನು ಕರ್ತವ್ಯಮುಖನಾಗಲು ಎಚ್ಚರಿಸುವುದಕ್ಕೇ. ನಾನು ಕರ್ತವ್ಯ ಪಥದಿಂದ ಜಾರಿ ಹೊಲಬುಗೆಟ್ಟಾಗ ನನ್ನನ್ನು ಚುಚ್ಚಿ, ಮತ್ತೆ ನಾನು ಯಥೋಚಿತ ಮಾರ್ಗಾವಲಂಬಿ ಯಾಗಲು ಚೋದನೆ ಕೊಡುವ ಪಾತ್ರ ಅಂತರ್ಯಾಮಿಯಾದ ಧರ್ಮೇಂದ್ರಿಯಕ್ಕೆ ಉಂಟು.

ನಾನೊಂದು ಮೀನೋ ಕ್ರಿಮಿಯೋ ಕೀಟವೋ ಪಕ್ಷಿಯೋ ಇನ್ನಾವುದಾದರೂ ಒಂದು ದ್ವಿಪದವೋ ಚತುಷ್ಪದವೋ ಆಗಿ ಹುಟ್ಟಿದ್ದರೆ, ನಾನು ಯಾವ ವರ್ಗದ ವನೋ ಆ ವರ್ಗದಒಡಹುಟ್ಟುಗಳ ನೆಮ್ಮದಿಯ ಬಗ್ಗೆ ಕಕರಿಕರೆಯಿಂದ ನಡೆದುಕೊಳ್ಳುವ ವನೆಂದು ನಂಬಿಕೊಂಡಿದ್ದೇನೆ. ನನ್ನ ಜನ್ಮವರ್ಗದ ಸದಸ್ಯ ಸಮುದಾಯದಲ್ಲಿ ಪ್ರತಿ ಯೊಂದು ವ್ಯಕ್ತಿಜೀವನದ ಅದೃಷ್ಟವೂ, ಒಡನಾಡಿಗಳ ಭೂತ ಭವಿಷ್ಯದ್ವರ್ತ ಮಾನಗಳ ಅದೃಷ್ಟದೊಂದಿಗೆ ಅವಿನಾಭಾವದಿಂದ ಹೊಂದಿಕೊಂಡಿರುವಂಥಾದ್ದೆಂದೂ ನಂಬಿಕೊಂಡಿದ್ದೇನೆ. ಮನುಷ್ಯ ಸಮಾಜಕ್ಕೆ ಸೇರಿದವನಾದ ನಾನು ಒಟ್ಟು ಮನುಷ್ಯವರ್ಗದ ಯೋಗಕ್ಷೇಮದ ಹೊಣೆಯನ್ನೂ ಚಿಂತೆಯನ್ನೂ ಕಟ್ಟಿಕೊಳ್ಳಬೇಕು. ಈ ಜನ ವರ್ಗ ಭೂಗ್ರಹದ ಮೇಲೆ ಬಾಳುತ್ತ ಬಂದಿದೆ. ಅದರ ಇತ್ತೀಚಿನ ಚರಿತ್ರೆ ಯಲ್ಲಿ ನನ್ನ ಚರಿತ್ರೆಯನ್ನೂ ಸೇರಿಸುವುದು ನನಗೆ ಕರ್ತವ್ಯ.

ಪ್ರತಿಯೊಬ್ಬ ವ್ಯಕ್ತಿ ಮನುಷ್ಯನಿಗೂ ಇರುವ ಕರ್ತವ್ಯದ ಹಾಗೂ ಉತ್ತರವಾದಿ ತ್ವದ ಪಾತ್ರದಲ್ಲಿ ಅವನು ಲೋಪಮಾಡಿದನಾದರೆ, ಅಥವಾ ಚ್ಯುತಿಗೆ ಅವಕಾಶ ಕೊಟ್ಟ ನಾದರೆ, ಅದನ್ನು ಕಂಡು ನನ್ನ ಧರ್ಮೇಂದ್ರಿಯವು ದುಗುಡ ದುಮ್ಮಾನಗಳಿಗೆ ಸಿಕ್ಕುತ್ತದೆ. ಅವನೂ ನಾನೂ ಕರ್ತವ್ಯ ಪಥದಲ್ಲಿ ಸಹಯೋಗದಲ್ಲಿ ದುಡಿಯಬೇಕಾದವರು. ನಮ್ಮಿ ಬ್ಬರಲ್ಲಿ ಒಬ್ಬನಿಂದ ಆದ ಕರ್ತವ್ಯಚ್ಯುತಿ ಇನ್ನೊಬ್ಬನಿಗೆ ಮೇಲ್ಪಂಕ್ತಿಯಾಗದೆ, ಕರ್ತವ್ಯ ಭಾರವನ್ನು ಹೊರಿಸುವ ವಿಧಾಯಕವಾಗುತ್ತದೆ. ಮುನ್ನಡೆಯ ಬೇಕಾದ ಮನುಷ್ಯ ವ್ಯಕ್ತಿಯೊಬ್ಬನು ಪಾಲುಮಾರಿ ನಿಂತರೆ, ಇಲ್ಲವೆ ಹಿಂದಕ್ಕೆ ಅಡಿಯಿಟ್ಟರೆ

ನಿತ್ಯವಿಸ್ತಾರವಾಗುತ್ತಿರುವ ವಿಶ್ವಜಗತ್ಸೇವೆಯಲ್ಲಿ ಸಲ್ಲಬೇಕಾದ ಪೂರ್ವನಿಶ್ಚಿತ ಪಾತ್ರವು ಪ್ರಯೋಗವಾಗದೆ ಹೋಗಿ, ನನ್ನ ಧರ್ಮೇಂದ್ರಿಯಕ್ಕೆ ಆತಂಕವಾಗುತ್ತದೆ. ಏಕೆಂದರೆ ನನ್ನ ಒಡಹುಟ್ಟುಗಳಲ್ಲಿ ಒಬ್ಬನಿಗೆ ಅಪಜಯವಾದರೂ ಅದು ನನ್ನ ಅಪಜಯವೂ ಆಗಿ ನನ್ನ ಜವಾಬ್ದಾರಿ ಕೆಟ್ಟು, ಒಟ್ಟು ಮನುಷ್ಯವರ್ಗದ ಸಹವರ್ತನೆಗೆ ಪೆಟ್ಟು ಬಿದ್ದಹಾಗಾಗುತ್ತದೆ.

ಈ ಪ್ರಬಂಧವನ್ನು ಓದುವವರ ಪೈಕಿ ಕೆಲವರು ನನ್ನ ಆತಂಕಕ್ಕೆ ಬುಡವೇನು ಎಂದು ಪ್ರಶ್ನಿಸಿಯಾರು. ಅವನವನ ಪಾತ್ರ ಅವನವನದು; ಮಿಕ್ಕವನು ನಿಶ್ಚಿಂತನಾಗಿರಬೇಕಲ್ಲವೆ—ಎಂದು ಇವರು ಭಾವಿಸಿಯಾರು. ಅಂಥವರ ಮನೋಭಾವಕ್ಕೆ ನನ್ನ ಉತ್ತರ ಹೀಗೆ:—ಪ್ರತಿಯೊಬ್ಬ ಮನುಷ್ಯನೂ ಮನುಷ್ಯ ಕುಟುಂಬದ ಸದಸ್ಯ; ಕುಟುಂಬಕ್ಕೆ ಆಗುವ ಹಾನಿ ವೃದ್ಧಿಗಳಲ್ಲಿ ಪ್ರತಿಯೊಬ್ಬನಿಗೂ ಪಾಲುಂಟು, ಹೊಣೆಯುಂಟು. ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂ ನೇಚ್ಛಂತಿ ಮಾನವಾಃ—ಎಂಬ ಆಕ್ಷೇಪಣೆಗೆ ಗುರಿಯಾಗುವವನು ಕುಟುಂಬದಲ್ಲಿ ಸದಸ್ಯನಾಗಿ ತನ್ನ ನಿಯತ ಪಾತ್ರವನ್ನು ಹೊಣೆಯಿಂದ ಹೇಗೆ ನಿರ್ವಾಹ ಮಾಡಿಯಾನು? ಸಿದ್ಧಿಯಲ್ಲಿ ಸ್ವಪಾತ್ರ ನಿರ್ವಾಹವಾಯಿತೆಂದು ಫಲಭೋಗಿಯಾಗುವ ಮನೋವೃತ್ತಿ ಹೇಗೆ ಸಹಜವೋ ಅಪಜಯದಲ್ಲಿ ಕೂಡ, ಕರ್ಮವಿಮುಖತೆಯಕಾಲದಲ್ಲಿ ಕೂಡ, ಸ್ವಪಾತ್ರನಿರ್ವಾಹವಾಗಲಿಲ್ಲವೆಂಬುದೂ ಸಹಜ ವೃತ್ತಿಯಾಗಬೇಕು. ಪ್ರಗತಿಶುಭೋದಯಗಳ ಕಾಲದಲ್ಲಿ ಸಡಗರದಿಂದ ಪಾಲು ಬೇಡುವವನು ಅಪಗತಿ ಅಶುಭಗಳ ಕಾಲದಲ್ಲಿ ಸ್ವಕರ್ತವ್ಯ ಸ್ಮರಣೆಯಿಂದ ತನ್ನ ಪಾತ್ರದಲ್ಲಿ ಶ್ರದ್ಧೆ ಆಸಕ್ತಿಗಳನ್ನು ತೋರುವುದು ಮನುಷ್ಯನಿಗೆ ಸುಲಭವಾಗಬೇಕು. ಹೀಗೆ ಮನುಷ್ಯರು ಪರಸ್ಪರ ಸಹಕಾರ ಸಹವರ್ತನೆಗಳಿಂದ ಪೋಷಿಸಿ ಹರಿಯಿಸಿದ ಸಂಸ್ಕೃತಿಯ ಮಹಾಪ್ರವಾಹ ಸನ್ನಿಧಿಯಲ್ಲಿ ಎಲ್ಲರೂ ವ್ರತ ಬುದ್ಧಿಯಿಂದ ನಡೆದುಕೊಳ್ಳಬೇಕು. ಪ್ರತಿಯೊಂದು ಪ್ರಗತಿ ಘಟ್ಟದಲ್ಲೂ ಮನುಷ್ಯನು ಕೃತಜ್ಞನಾಗಿ, ಸಮಾಧಾನ ಮನಸ್ಸಿನಿಂದ, ಮನುಷ್ಯ ಜನ್ಮಕ್ಕಿರುವ ಭಾಗ್ಯ ಪಂಕ್ತಿಯನ್ನು ನಿತ್ಯ ಸಿದ್ಧಿಯಿಂದ ಬೆಳಗುತ್ತ ಬೆಳಸಿ ತೃಪ್ತನಾಗಬೇಕಾದವನು.

## ಮನುಷ್ಯನು ತನ್ನ ಧರ್ಮದರ್ಶಿತ್ವ ಧ್ಯೇಯಕ್ಕೆ ತಕ್ಕಂತೆ ಬಾಳುತ್ತ ಬಂದನೆ ?

ಇತಿಹಾಸ ಉದಯ ಕಾಲದಿಂದ ಜನ ವರ್ಗದಲ್ಲಿ ಧನಿಕರೂ ಪ್ರಬಲರೂ ಸ್ವಾರ್ಥಹಿತ ದೃಷ್ಟಿಯಿಂದ ಮಹತ್ವಾಕಾಂಕ್ಷೆಗಳನ್ನು ಕಟ್ಟಿಕೊಂಡವರೂ ಆಗಿ, ಕೇವಲ ಸ್ವಲ್ಪ ಸಂಖ್ಯಾಕರಾಗಿದ್ದು, ಬಲತ್ಕಾರಪ್ರಯೋಗದಿಂದ ಬಹುಸಂಖ್ಯಾಕರನ್ನು ಸುಲಿಗೆ ಮಾಡುತ್ತ ಬಂದಿದ್ದಾರೆ. ಸ್ಥಳೀಯವಾಗಿ ಇವರು ಅಪತತ್ತ್ವ ಪ್ರಚಾರ ಮಾಡುತ್ತ

ಜನಮನವನ್ನೊಲಿಸಿಕೊಂಡರು; ಮರುಳು ಮಾತುಗಳನ್ನಾಡಿ ನಂಬಿಸಿದರು; ಅವಶ್ಯವೆನ್ನಿಸಿದಾಗ ಬಲತ್ಕಾರ ಪಡಿಸಿದರು. ಪ್ರಾದೇಶಿಕವಾಗಿಯೂ ಖಂಡೋಪಖಂಡಗಳ ಮಟ್ಟದಲ್ಲೂ ಈ ಶೋಷಣೆ ಬಹುರೂಪಗಳಲ್ಲಿ ನಡೆಯಿತು. ದುರ್ಬಲ ರಾಷ್ಟ್ರಗಳ ಮೇಲೆ ಯುದ್ಧ, ಸೈನ್ಯಾಕ್ರಮಣ; ಆಕ್ರಮಿಸಿಕೊಂಡ ಪ್ರದೇಶಗಳ ಸ್ವಾತಂತ್ರ್ಯವನ್ನು ಅಪಹರಿಸಿ ವಸಾಹತುಕರಣ; ಮತ್ತು ಆಯಾದೇಶಗಳ ಸ್ಥಳೀಯ 'ಬುದ್ಧಿವಂತ' ರನ್ನು ಹಿಡಿದು ಅವರ ಮೂಲಕ ಸ್ವಪ್ರಭಾವ ವಿಸ್ತರಣ; ಹಾಗೆಯೇ ವಸಾಹತು ಜನರನ್ನು ನಿರ್ದಯವಾಗಿ ನಡೆಸಿಕೊಳ್ಳೋಣ – ಇವು ಮನುಷ್ಯನ ಸ್ವಾರ್ಥ ಪ್ರವೃತ್ತಿ ತಳೆಯುವ ವಿವಿಧ ರೂಪಗಳು.

ಧನಿಕರೂ ಪ್ರಬಲರೂ ಮಹತ್ವಾಕಾಂಕ್ಷಿಗಳೂ ಶತಮಾನಗಳ ಕಾಲ ಸ್ವಾರ್ಥ ಹಿತದೃಷ್ಟಿಯಿಂದ ಕೆಲವು ಆಚರಣೆಗಳನ್ನು ರೂಢಿಗೆ ತಂದುಕೊಂಡು, ಪದ್ಧತಿಗಳನ್ನು ಸಂಸ್ಥೆಗಳನ್ನೂ ಕಟ್ಟಿ ಬೇರೂರಿಸಿ, ತಮ್ಮ ಧನಾಧಿಕಾರ ವೃದ್ಧಿಯನ್ನು ಖಾತರಿ ಪಡಿಸಿಕೊಂಡರು. ಹೀಗೆ ಧನಾಧಿಕಾರಗಳುಳ್ಳ ಸ್ವಲ್ಪಸಂಖ್ಯಾಕರಾದ ಆಢ್ಯರು ಅವನ್ನು ರೂಢಿಸಿಕೊಂಡು, ದೊರೆತ ಸೌಕರ್ಯಾನುಕೂಲಗಳನ್ನು ಬಳಸಿ ಆತ್ಮರಕ್ಷಣೆಯಲ್ಲಿ ತೊಡಗಿ, ತಮ್ಮ ಧನಾಧಿಕಾರಗಳನ್ನು ವಿಸ್ತಾರಪಡಿಸಿಕೊಳ್ಳುವ ಮುಖ್ಯ ಚಟುವಟಿಕೆಗಳಲ್ಲಿ ಲೋಭದಿಂದ ಮಗ್ನರಾದರು.

ಸ್ವಾಮಿ–ಭೃತ್ಯ ನ್ಯಾಯನಿಷ್ಠವಾದ ಯೂರೋಪು ಖಂಡವು ರೋಮುಕ ಚಕ್ರಾಧಿಪತ್ಯದ ಅವನತಿಯಾದಮೇಲೆ, ಪಶ್ಚಿಮಾರ್ಧ ಗೋಳದಲ್ಲಿ ಈ ಅನುಭವವನ್ನು ಹಾದು ಹೋಗಬೇಕಾಯಿತು. ಗ್ರಾಮಾಂತರ ಪ್ರದೇಶಗಳಲ್ಲಿ ಜಮೀನ್ದಾರರೂ, ಪಟ್ಟಣ ಪ್ರದೇಶಗಳಲ್ಲಿ ವ್ಯಾಪಾರಿಗಳೂ ಚರ್ಚುಮಠಗಳೊಡನೆ ಸಖ್ಯಬೆಳಸಿ, ತಮ್ಮ ಪ್ರಭಾವವನ್ನು ಹರಡಲು ಸೈನ್ಯ ಶಕ್ತಿಯನ್ನು ಕೂಡ ಬಳಸಿಕೊಂಡರು. ಪಾಮರ ಜನತೆ ಕೂಲಿಕಾರರೋ ಇಲ್ಲವೆ ಗುಲಾಮರೋ ಆಗಿ ಅವರ ಒಡೆಯರ ಅಥವಾ ಸುಲಿಗೆಗಾರರ ಎದುರು ಯಾವ ರಕ್ಷಣೆಯೂ ಇಲ್ಲದೆ ಕೊರಗುತ್ತ ಬಂದರು.

ಹೀಗೆ ಜನತೆಯಲ್ಲಿ ಒಡೆಯ–ಆಳು, ಮಾಲಿಕ–ಕೂಲಿ, ಸಿರಿವಂತ–ಗರೀಬ ಎಂಬ ವರ್ಗಭೇದವನ್ನು ಕಲ್ಪಿಸುವುದು ಹೇಗೆಂಬ ಬಗ್ಗೆ ಯೂರೋಪುಖಂಡವು ಮಹಾನಿದರ್ಶನವನ್ನೊದಗಿಸಿತು. ಲೌಕಿಕ ವೈದಿಕ ಪ್ರಭುಗಳು ಬಲ ಪ್ರಯೋಗದಿಂದಲೋ ಮೋಸದಿಂದಲೋ ಅಧಿಕಾರ ಪಟ್ಟಕ್ಕೆ ಬಂದು, ಸ್ವಲ್ಪಜನದ ಛೋಟಾ ಅರಸೊತ್ತಿಗೆಗಳನ್ನು ಕಟ್ಟಿಕೊಂಡರು. ಅವರ ಒಡಹುಟ್ಟುಗಳೇ ಆದ ಜನಸ್ತೋಮವೋ ಮೂಕಪಶುಗಳಾಗಿ ದೈನ್ಯವನ್ನವಲಂಬಿಸಿದರು. ಇನ್ನು ತಡೆದುಕೊಳ್ಳುವುದಸದಳ ಎನ್ನಿಸಿದಾಗ ಜನತೆ ದಂಗೆಯೆದ್ದರು, ಇಲ್ಲವೆ ಪೇಟೆಯ ಚಟುವಟಿಕೆ ತುಂಬಿರುವ ಪಟ್ಟಣಗಳಿಗೆ ವಲಸೆ ಹೊರಟು ಧಾವಿಸಿದರು. ಅಲ್ಲೂ ಅವರಿಗೆ ನೆಮ್ಮದಿ ಬಾಳಿನ ಭರವಸೆಯಿರಲಿಲ್ಲ. ಬಹು

ಸಂಖ್ಯೆಯ ಈ ಗ್ರಾಮುಷ್ಠರ ಮೇಲೆ ಜಬ್ಬುಮಾಡಿ ಹಿಂಡಲು ಈ ಹೊಸದಾಗಿ ಬಲಿತ ಸ್ವಲ್ಪಸಂಖ್ಯಾಕ ವರ್ತಕ ಜನರು ಆಣಿಯಾಗಿ, ಸಮಯಾನುಕೂಲಕ್ಕೆ ಹೊಂಚಿ ಕಾಯುತ್ತಿದ್ದರು.

ಈ ಶೋಷಕ ಪರಿಸ್ಥಿತಿ ಬಲಿತು ಕಡೆಗೆ ವ್ಯಾಪಾರಿಗಳೂ ಜಮೀನ್ದಾರರೂ ಚರ್ಚಿನ ಪುರೋಹಿತಗಣವೂ ತಮ್ಮತಮ್ಮಲ್ಲಿರುವ ಮತಭೇದಗಳನ್ನು ಮರೆತು, ಒಗ್ಗಟ್ಟಾಗಿ, ಧನಾಧಿಕಾರಗಳನ್ನು ತಮ್ಮತಮ್ಮಲ್ಲಿ ಹಂಚಿಕೊಳ್ಳುವ ಹೊಸ ಅವಕಾಶಗಳನ್ನು ಹುಡುಕಿಕೊಂಡರು. ಅಲ್ಪ ಸಂಖ್ಯಾಕರಾದ ಆಢ್ಯರಲ್ಲಿ ಸಾಹಸಿಗಳು ಮೈಮೋರಿ ಕಡಲುಗಳನ್ನು ದಾಟಿದರು, ಹೊಸ ಹೊಸ ಭೂಪ್ರದೇಶಗಳನ್ನು ಹುಡುಕಿದರು. ದಕ್ಷಿಣೋತ್ತರ ಅಮೆರಿಕಾ ಖಂಡಗಳು, ಏಷ್ಯಾಖಂಡ, ಕಡೆಗೆ ಆಫ್ರಿಕಾ ಖಂಡವೂ ಈ ಅಲ್ಪ ಸಂಖ್ಯಾಕರಿಗೆ ಆಸ್ತಿಯಾಗಿ ಹಂಚಿಕೆಯಾಯಿತು. ಸಾಹಸಿಗಳು ಕಂಡ ಹೊಸ ಪ್ರದೇಶಗಳಲ್ಲಿ ಅಲ್ಲಲ್ಲಿ ವಸಾಹತು ( ಕಾಲೊನಿ ) ಸ್ಥಾಪನೆಗಳೂ ಶೋಷಣ ಪ್ರಯತ್ನಗಳೂ ಮನುಷ್ಯ ಚರಿತ್ರೆಯಲ್ಲಿ ಬಲಿತ ಪ್ರಸಂಗಗಳು. ಶೋಷಣೆಯ ಅವಧಿ ಮೊದಲಾದದ್ದು ಕ್ರಿಸ್ತ ಶಕ ಸುಮಾರು 1450 ರಲ್ಲಿ. ಯೂರೋಪಿನ ಧನಾಧಿಕಾರ ಸಂಪನ್ನರು ತಮ್ಮ ಚಲನವಲನಗಳಿಂದ ವಿಜಯಿಗಳೂ, ದರೋಡೆಕೋರರೂ ವಸಾಹತುಕಾರರೂ, ಗುಲಾಮ ವಿಕ್ರಯಿಗಳೂ, ಸಮಾಜ ಶೋಷಕರೂ ಆಗಿ, ಭೂಮಂಡಲದಷ್ಟು ವಿಸ್ತಾರ ಪ್ರಮಾಣದಲ್ಲಿ ವಿರಾಜಿಸಿದರು.

ದಕ್ಷಿಣೋತ್ತರ ಅಮೆರಿಕಾ ಖಂಡಗಳಲ್ಲೂ , ಏಷ್ಯಾ ಮತ್ತು ಆಫ್ರಿಕಾ ಖಂಡಗಳಲ್ಲೂ ವಿಸ್ತಾರ ಪ್ರದೇಶಗಳು ಕೋಟ್ಯಂತರ ರೆಡ್ ಇಂಡಿಯನ್ ಜನದ, ಪೀತವರ್ಣೀಯರ ಹಾಗು ಕಪ್ಪು ಬಣ್ಣದ ಜನದ ಮೂಲನಿವಾಸಸ್ಥಾನಗಳಾಗಿದ್ದುವು. ಈ ಪ್ರದೇಶಗಳೆಲ್ಲವನ್ನೂ ಅಲ್ಪ ಸಂಖ್ಯೆಯ ಐರೋಪ್ಯ ಶ್ವೇತ ವರ್ಣಿಯರಾದ ಸಾಹಸಿಗಳು ಆಕ್ರಮಣಕಾರರಾಗಿ ಸ್ವಾಧೀನ ಪಡಿಸಿಕೊಂಡರು. ತಂತಮ್ಮ ಐರೋಪ್ಯ ರಾಜಸಮ್ರಾಜರ ಹೆಸರಿನಲ್ಲಿ ಸ್ವಾಧೀನ ಪಡಿಸಿಕೊಂಡರು. ಸ್ಥಳೀಯ ಮೂಲ ನಿವಾಸಿಗಳನ್ನು ಇವರು ಬಲತ್ಕಾರದ ಸೇವೆಗಿರಿಸಿಕೊಂಡರು; ಬೇಟೆಯಾಡಿ ಕದ್ದು ಕಟ್ಟಾಯದ ಊಳಿಗಕ್ಕೆ ಹೂಡಿದರು; ಮಾರಿ ಜೊತೆಗಾರ ಶೋಷಕ–ಸಾಹಸಿಗಳ ಊಳಿಗಕ್ಕೆ ಕಳಿಸಿದರು. ನೆಲ ಸಿರಿಗಳಿಗೆ ಒಡೆಯರಾದಂತೆಯೆ ಇವರು ವಶಪಡಿಸಿಕೊಂಡ ಭೃತ್ಯವರ್ಗವನ್ನೂ ಸೊತ್ತಿನಂತೆ ಎಣಿಸಿ ಕೊಳ್ಳುಟ ಮಾರಾಟಗಳ ಸರಕಾಗಿ ಮಾಡಿಕೊಂಡರು. ಚರಸ್ವತ್ತಾದ ಚಿನ್ನ ಬೆಳ್ಳಿಗಟ್ಟಿಗಳನ್ನೂ, ಒಡವೆಗಳನ್ನೂ ದರೋಡೆ ಮಾಡಿ ಹಡಗುಗಳಲ್ಲಿ ಯೂರೋಪಿಗೆ ಸಾಗಿಸಿದರು.

ವಿಸ್ತಾರವಾದ, ಇನ್ನೂ ಬಳಕೆಗೆ ಬಾರದೆ ಭಾರಿಯಾಗಿದ್ದ ಪ್ರಕೃತಿ ಸಂಪನ್ಮೂಲಗಳು, ಫಲವತ್ತಾದ ಭೂವ್ಯವಸಾಯ ಕ್ಷೇತ್ರಗಳು, ಮತ್ಸ್ಯಾಗಾರದ ಸಮುದ್ರ ತೀರ

ಪ್ರದೇಶಗಳು, ಅರಣ್ಯಸಂಪತ್ತು ಖನಿಜಸಂಪತ್ತು – ಇವನ್ನೆಲ್ಲ ಸ್ವಂತಕ್ಕೆ ರೂಢಿಸಿ ಕೊಳ್ಳಲು ಯೂರೋಪಿನ ಬಿಳಿದೊಗಲಿನ ಸಾಹಸಿಗಳು ಬಣ್ಣದೊಗಲಿನ ವಸಾಹತು ದೇಶೀಯ ಭೃತ್ಯರನ್ನು ಬಳಸಿಕೊಂಡರು, ದುರುಪಯೋಗ ಪಡಿಸಿಕೊಂಡರು. ಪ್ರಕೃತಿ ಸಂಪನ್ಮೂಲಗಳಲ್ಲಿ ಕೈಯಾಡಿ ಬಂದ ಮಹಾಲಾಭಗಳೂ, ಊಳಿಗಿಗಳು ಸಲ್ಲಿಸಿದ ಕಾಯಕವು ರಾಸಿ ರಾಸಿಹಾಕಿದ ಲಾಭಗಳೂ ಯೂರೋಪು ಖಂಡಕ್ಕೆ ಸಾಗಿದುವು. ಇದು ವರೆಗೆ ದರೋಡೆಕೋರರೂ ಕಡಲ್ಗಳ್ಳರೂ ಆಗಿದ್ದ ಸಾಹಸಿಗಳೂ ಕೂಲಿ–ಪಡೆಗಳೂ ಅಧಿಕಾರ ನಿರ್ದೇಶನಮಾಡಿ ಸ್ವಾಧೀನ ಪಡಿಸಿಕೊಂಡ ಚರ–ಸ್ಥಿರಾಸ್ತಿಗಳ ಮೇಲಣ ಒಡೆತನವನ್ನು ಯೂರೋಪಿನ ಆಯಾ ದೇಶದ ರಾಜ–ಪ್ರಭುತ್ವಗಳು ಪಡೆದು ಕೊಬ್ಬಿದರು. ಯೂರೋಪಿನ ವಸಾಹತು ರಾಜ್ಯಗಳು ಖಂಡ ಖಂಡಾಂತರಗಳಲ್ಲಿ ಓತಪ್ರೋತವಾಗಿ ಹೆಣೆದುಕೊಂಡವು. ಮುಂದೆ ಮೂರು ಶತಮಾನಗಳೊಳಗಾಗಿ, ಭೂಗ್ರಹವನ್ನು ಒಡೆದೊಡೆದು ಯೂರೋಪು ತನ್ನ ಸೊತ್ತೆಂದು ಹಂಚಿಕೊಂಡಿತು. ವಸಾಹತು ರಾಜ್ಯಗಳಿಂದ ಐರೋಪ್ಯ ಸಾಮ್ರಾಜ್ಯ ಕೇಂದ್ರಗಳಿಗೆ ಆಹಾರದ ಸರಬರಾಜು, ಯಂತ್ರೋದ್ಯಮ ನಡಸಲು ಕಚ್ಚಾಮಾಲುಗಳ ಸರಬರಾಜು ಆಗಿ, ತಯಾರಾದ ಸರಕುಗಳನ್ನು ಮಾರಿ ನಫೆಪಡೆಯಲು ಈ ವಿವಿಧ ವಸಾಹತು ಪ್ರದೇಶಗಳು ಒಳ್ಳೊಳ್ಳೆಯ ಗಿರಾಕಿಗಳನ್ನೊದಗಿಸುವ ಪೇಟೆ ಮಾರುಕಟ್ಟೆಗಳಾದುವು. ಈ ಎಡೆಬಿಡದ ಸುಲಿಗೆಯಿಂದ ಬಂದ ಲಾಭವು ಯೂರೋಪಿನ ಯಂತ್ರೋದ್ಯಮದ ಬಂಡವಾಳವನ್ನು ಹೆಚ್ಚಿಸುವ ಧನ ಸೌಕರ್ಯವೆನ್ನಿಸಿತು.

1815 ರಲ್ಲಿ ನೆಪೋಲಿಯನ್ನಿನೊಡನೆ ಇಂಗ್ಲೆಂಡಿನ ಯುದ್ಧ ಮುಗಿದ ತರುವಾಯ ಬ್ರಿಟಿಷ್ ಚಕ್ರಾಧಿಪತ್ಯವು ತನ್ನ ಸ್ಥಾನಮಹಿಮೆಯನ್ನು ಭದ್ರಪಡಿಸಿಕೊಂಡು, ಭೂಗ್ರಹದ ನಾಲ್ಕನೆಯ ಒಂದು ಭಾಗದಷ್ಟು ವಿಸ್ತಾರ ಪ್ರದೇಶದಮೇಲೆ ಸ್ವಾಮ್ಯವನ್ನು ಪಡೆದುಕೊಂಡಿತು. ಧನಾಧಿಕಾರಕ್ಕೋಸ್ಕರ ಯೂರೋಪಿನ ರಾಜ್ಯಗಳನಡುವೆ ಆಗಾಗ್ಗೆ ನಡೆಯುತ್ತಲೇ ಇದ್ದ ಜಿದ್ದು ಪೈಪೋಟಿಗಳ ಜೂಜೋಟದಲ್ಲಿ ಬ್ರಿಟನ್ ದ್ವೀಪ ಅಗ್ರಗಾಮಿಯಾಗಿ ಅತ್ಯುಚ್ಚ ಸ್ಥಾನಕ್ಕೆ ಏರಿತು. ಫ್ರಾನ್ಸ್ ತನ್ನ ಚಕ್ರಾಧಿಪತ್ಯದ ಹೆಣಗಾಟದಲ್ಲಿ ಎರಡನೆಯ ಸ್ಥಾನವನ್ನು ಪಡೆಯಿತು. ಯೂರೋಪಿನ ಇತರ ರಾಜ್ಯಗಳ ಚಕ್ರಾಧಿಪತ್ಯಗಳು ವಿಸ್ತಾರದಲ್ಲೂ ಪ್ರಭಾವದಲ್ಲೂ ಇನ್ನೂ ಹಿಂದೆ ಬಿದ್ದು ಕುಕ್ಕುಲೋಟದಲ್ಲಿದ್ದುವು. ವಸಾಹತು ರಾಜ್ಯಗಳಲ್ಲಿಯ ಜನಜೀವನದ ಮಟ್ಟಕ್ಕಿಂತ ಯೂರೋಪಿನ ರಾಜ್ಯಗಳಲ್ಲಿ ಜನದ ಜೀವನದ ಮಟ್ಟ ಮೇಲುಮೇಲಿನದಾಗುತ್ತ ಹೋಯಿತು. ಯಂತ್ರೋತ್ಪಾದನೆಯಲ್ಲಿ ಯೂರೋಪು ಹೆಚ್ಚು ಕಡಮೆ ಏಕಸ್ವಾಮ್ಯದ ಅಧಿಕಾರವನ್ನು ಅನುಭವಿಸಿತು. ಖಂಡಾಂತರ ಸಂಚಾರ ಸಮಾಚಾರ ಸಾಧನಗಳ ಹತೋಟಿಯೆಲ್ಲ ಯೂರೋಪಿನ ಅಧಿಕಾರಕ್ಕೊ ಬಂತು. ದೊಡ್ಡ ದೊಡ್ಡ ಭೂಸೈನ್ಯಗಳನ್ನೂ ಭಾರೀಭಾರೀ ನೌಕಾಪಡೆಗಳನ್ನೂ ಇರಿಸಿಕೊಂಡು, ಅತ್ಯಾಧುನಿಕ

ಶಸ್ತ್ರಾಸ್ತ್ರಗಳ ಉತ್ಪಾದನೆ ಮಾಡಿಕೊಂಡು ಸಜ್ಜಾಗಿ, ಯೂರೋಪು ಜಗದ್ರಾಜ್ಯಗಳ ಸಾಲಿನಲ್ಲಿ ಅಗ್ರೇಸರವಾಯಿತು.

ಧನಾಧಿಕಾರಗಳನ್ನು ವಶಪಡಿಸಿಕೊಂಡಿದ್ದ ಯೂರೋಪಿನ ಶ್ವೇತ ವರ್ಣೀಯರು ಖಾಸಗಿ ಉದ್ಯಮಕ್ಕೋಸ್ಕರ ಎರಡು ಕ್ಷೇತ್ರಗಳನ್ನು ಪಡೆದಿದ್ದರು. ಒಂದು,–ಗೃಹ ಕ್ಷೇತ್ರದ ಸಂಘಟನೆ. ಇದರ ಪರಿಣಾಮವಾಗಿ ಯಂತ್ರೋದ್ಯಮಗಳಿಂದಲೂ ಗಣಿಗಳಿಂದಲೂ ಲಾಭಾಂಶಗಳೆಲ್ಲ ಬ್ಯಾಂಕು (ಧನಕೋಟಿ) ಗಳಮೂಲಕ ಧನಿಕರ ಹಾಗೂ ಪ್ರಭಾವಶಾಲಿಗಳ ಸ್ವಂತ ಖಜಾನೆಗಳಿಗೆ ಹರಿದು ಹೋದುವು. ಎರಡು,–ಪ್ರಪಂಚದಲ್ಲಿ ನೂರಾರುಲಕ್ಷ ಚದರ ಮೈಲಿಗಳಷ್ಟು ವಿಸ್ತಾರವಾದ ಭೂಪ್ರದೇಶಗಳನ್ನು ವಸಾಹತುಗಳ ರೂಪದಲ್ಲಿಯೂ ಅಧೀನ ರಾಜ್ಯಗಳ ರೂಪದಲ್ಲಿಯೂ ಸ್ವಾಧೀನಪಡಿಸಿಕೊಂಡಿದ್ದದ್ದರಿಂದ ಈ ಗೃಹ ಕ್ಷೇತ್ರದ ಶೋಷಣ ನೀತಿಯನ್ನು ದೃಢವಾಗಿ ಮುಂಬರಿಸಲು ಅನುಕೂಲವಾಗಿತ್ತು. ರಾಜಕೀಯವಾಗಿ ಶೋಷಣೆಗೆ ಒಳಗಾದ ಈ ಪ್ರದೇಶಗಳಲ್ಲಿ ಜನಸಂಖ್ಯೆಗಿಂತ ಮೂರರಷ್ಟೋ ನಾಲ್ಕರಷ್ಟೋ ಹೆಚ್ಚಾಗಿದ್ದದ್ದರಿಂದ, ಆರ್ಥಿಕವಾಗಿಯೂ ಆ ಪ್ರದೇಶಗಳು ಶೋಷಣೆಗೆ ಒಳಪಟ್ಟು, ಅದರ ಫಲವಾಗಿ ಗೃಹ ಕ್ಷೇತ್ರದ ದರ್ಪಕ್ಕೆ ಪೋಷಣೆ ದೊರೆಯಿತು.

ಸಾಮ್ರಾಜ್ಯ ಪ್ರಭುತ್ವಗಳ ಈ ರಾಜಕೀಯ ಶೋಷಣೆಯ ಜೊತೆಗೆ ವಸಾಹತುಗಳು ಇನ್ನೊಂದು ಐರೋಪ್ಯತಂಡದ ಶೋಷಣೆಗೆ ತುತ್ತಾಗಿದ್ದುವು. ಬಿಳಿಯ ಯೂರೋಪನ್ನು ಸುಲಿಗೆ ಮಾಡುತ್ತಿದ್ದ ಅಲ್ಲಿಯ ಅಲ್ಪ ಸಂಖ್ಯಾಕ ಶ್ವೇತವರ್ಣೀಯ ಭೂಸ್ವಾಮಿಗಳೂ ಯಂತ್ರಾಗಾರಗಳಿಗೆ ಬಂಡವಾಳವನ್ನೊದಗಿಸುತ್ತಿದ್ದ ಶ್ವೇತವರ್ಣೀಯ ಶ್ರೀಮಂತರೂ ಶ್ವೇತ ವರ್ಣನೀತಿಯ ಪರವಾದ ಇತರ ಶಕ್ತಿ ಕೂಟಗಳೂ ವಸಾಹತು ಪ್ರದೇಶಗಳಿಗೆ ಹೋಗಿ ಅಲ್ಲಿ ಠಾಣ್ಯ ಹಾಕಿದರು—ತಮ್ಮ ಸುಲಿಗೆಗೆ ವಸಾಹತು ಜನರನ್ನು ಗುರಿಮಾಡಲು. ಪ್ರಪಂಚದಲ್ಲಿ "ಸಂಸ್ಕೃತಿ ಪ್ರಸಾರ" ಕೊಡುವ ದೊಡ್ಡದೊಂದು ಕರ್ತವ್ಯಭಾರ ಯೂರೋಪಿನ ಶ್ವೇತ ವರ್ಣೀಯರಿಗೆ ದೈವಾಯತ್ತವಾಗಿ ಬಂದಿದೆಯೆಂದು ನೆವ ಹೇಳುತ್ತ ಈ ಸುಲಿಗೆಯಲ್ಲಿ ನಲಿವು ಕಾಣುತ್ತಿದ್ದರು. ವಸಾಹತು ಜನರು ಹೀಗೆ ದ್ವಿಮುಖವಾಗಿ, ದೂರದಿಂದಲೂ ಹತ್ತಿರದಿಂದಲೂ ಸುಲಿಗೆಗೆ ಸಿಕ್ಕಿಕೊಂಡರು. ವಸಾಹತುಗಳ ಸಂಪನ್ಮೂಲಗಳೂ ಕಾರ್ಮಿಕ ಬಲವೂ ಒಟ್ಟೊಟ್ಟಾಗಿ ಶ್ವೇತವರ್ಣೀಯರ ಪುಷ್ಟಿ ಪ್ರತಿಷ್ಠೆಗಳ ಏರಿಕೆಗೆ ಸಾಧನಗಳಾದುವು.

ಮನುಷ್ಯ ಕೃತಿ ಚರಿತ್ರೆಯನ್ನು ಜನಪದ ಸಾಹಿತ್ಯದಲ್ಲೂ ಲಿಖಿತ ಚರಿತ್ರೆಯಲ್ಲೂ ಸಂರಕ್ಷಿಸಿಕೊಂಡು ಬರಲಾಗಿದೆ. ಲಿಖಿತ ಚರಿತ್ರೆ ಕನಿಷ್ಠಪಕ್ಷ ಆರು ಸಾವಿರ ವರ್ಷಗಳಿಗೆ ಮೇಲ್ಪಟ್ಟ ಅವಧಿಯದು. ಮನುಷ್ಯನಿಗೆ ನಿಯತವಾಗಿರುವ ಧರ್ಮದರ್ಶಿತ್ವ ಕರ್ತವ್ಯವನ್ನು ಆವನು ಹೇಗೆ ನಿರ್ವಾಹ ಮಾಡುತ್ತ ಬಂದಿದ್ದಾನೆ ಎಂಬ ಬಗ್ಗೆ ನಿರ್ಣಯ

ಹೇಳುವುದಕ್ಕೆ ಮೊದಲು ಈ ಆರು ಸಾವಿರ ವರ್ಷಗಳ ಇತಿಹಾಸ ದಾಖಲೆಗಳನ್ನೂ ಜೊತೆಗೆ ಜನಪದ ಸಾಹಿತ್ಯವನ್ನೂ ವ್ಯಾಸಂಗಮಾಡಿ ವಿಷಯ ಸ್ವರೂಪವನ್ನು ಸ್ಪಷ್ಟ ಪಡಿಸಿ ಕೊಳ್ಳಬೇಕು.

ಈ ಅಧ್ಯಯನಕ್ಕೆ ಸಾಧನಗಳು ಇವು: ಆಡುಮಾತು, ಲಿಖಿತ ಭಾಷೆಗೆ ವರ್ಣಮಾಲೆ, ಲೇಖನ ಮುದ್ರಣ ಕಾರ್ಯಗಳಿಗೆ ಪತ್ರ ಶೋಧನೆ ಮತ್ತು ನಿರ್ಮಾಣ, ಮುದ್ರಣ ಕಲೆ, ಫೋಟೋ ತೆಗೆವ ಕಲೆ, ವ್ಯಕ್ತಿ ಸಂದರ್ಭ ಸನ್ನಿವೇಶಗಳನ್ನು ಹಿಡಿದಿರಿಸುವ ಚಿತ್ರ ಕಲೆ ಮತ್ತು ಇಂಥ ಇತರ ಜ್ಞಾನೋಪಾಯ ಸಾಧನಗಳು ಅನುಭವಕ್ಕೆ ಬಂದು ಮನುಷ್ಯ ಕೃತಿ ಚರಿತೆಯನ್ನು ದಾಖಲೆಯಾಗಿಡಲು ನೆರವಾಗಿವೆ. ಪ್ರಾಚೀನ ಕಾಲದ ಇತಿಹಾಸ ಗ್ರಂಥಗಳು ವಿಶೇಷ ಮನ್ನಣೆಗೆ ಪಾತ್ರರಾದ ಸ್ವಲ್ಪ ಜನದ, ಎಂದರೆ ದೊರೆಗಳ ಹಾಗೂ ಸೇನಾಧಿಕಾರಿಗಳ, ಕೃತಿ ವಿವರಗಳನ್ನು ವರ್ಣಿಸುತ್ತ ಜನಜಂಗುಳಿಯನ್ನು ಅಸಡ್ಡೆ ಮಾಡಿದುವು. ಈಚಿನ ಇತಿಹಾಸ ಗ್ರಂಥಗಳಲ್ಲಿ ಈ ಭೇದ ಭಾವನೆಯಿಲ್ಲದೆ, ಒಟ್ಟು ಜನತೆಯ ಆಲೋಚನೆಯೂ ಕೃತಿಯೂ ಇತಿಹಾಸ ಕಥನಕ್ಕೆ ತಕ್ಕ ವಿಷಯ ವೆಂದು ಸ್ವೀಕೃತವಾಗುತ್ತಿವೆ. ಸ್ಥಳೀಯ ಚರಿತ್ರೆ ಪ್ರಾದೇಶಿಕ ಚರಿತ್ರೆಯ ಒಂದು ಭಾಗವಾಗಿ, ಆಮೇಲೆ ಆಯಾ ರಾಷ್ಟ್ರದ ನಾಗರಿಕತೆಯ ಒಂದು ಭಾಗವಾಗಿ ಸೇರಿಹೋ ಗುತ್ತಲಿದೆ. ಈ ಹೊತ್ತು ಒಟ್ಟು ಮನುಷ್ಯವರ್ಗ ಒಂದು ಕುಟುಂಬ ಘಟಕವಾಗಿ ಕಾರ್ಯ ಮಾಡುತ್ತ ಪ್ರಪಂಚ ಚರಿತ್ರೆಯ ದಾಖಲೆಗೆ ತಕ್ಕ ವಿಷಯ ಸಂಪತ್ತನ್ನು ಒದಗಿಸುತ್ತಿದೆ.

ಸಾಮಾಜಿಕ ಚರಿತ್ರೆಯೆಂಬುದು ಜನದೊಟ್ಟಿನ ಗಮನಾರ್ಹವಾದ ಪ್ರಗತಿ ಸಿದ್ಧಿ ಗಳ ದಾಖಲೆ; ಜೊತೆಗೆ ಮನುಷ್ಯನು ಪ್ರಗತಿ ಪಥವನ್ನು ಬಿಟ್ಟು, ಅಡ್ಡದಾರಿ ಹಿಡಿದು ಇಟ್ಟ ಹೆಜ್ಜೆಗಳಿಂದ ವಿಫಲ ಮನೋರಥನಾಗಿ ಸೋತ ಸೋಲುಗಳೂ ದಾಖಲೆಯಾಗಿ ರುತ್ತವೆ. ಪ್ರಗತಿ ಸಿದ್ಧಿಗಳು ಅನೇಕ ಕ್ಷೇತ್ರಗಳಲ್ಲಿ ಆಗಿವೆ: (1) ಪ್ರಕೃತಿ ಸಮೀಕ್ಷಣೆ, ಪಟ್ಟಿಪಟ್ಟಿಯಾಗಿ, ಅನುಭವಕ್ಕೆ ಬಂದ ಸಂಗತಿಗಳ ವಿವರ ನಿರೂಪಣೆ, ಮತ್ತು ಫಲ ಶ್ರುತಿಗಳ ಸಾಮಾನ್ಯ ವಿವರಣೆ; (2) ಪ್ರಕೃತಿಯ ಉಗ್ರಾಣದಲ್ಲಿ ತುಂಬಿರುವ ವಸ್ತು ಗಳ ಶೋಧನೆ ಮತ್ತು ಬಳಕೆ; (3) ಮನುಷ್ಯನ ನಿತ್ಯ ಜೀವನದ ಆವಶ್ಯಕತೆಗಾಗಿ, ಪ್ರಕೃತಿ ವಸ್ತು-ಶಕ್ತಿಗಳ ಸಂಧಾನ, ವಿನಿಯೋಗ; (4) ಗಾಳಿ, ನೀರು, ಬೆಂಕಿ, ವಿದ್ಯುತ್ ಕಿರಣ ವಿಕಿರಣ, ಅಣುಶಕ್ತಿ ಮೊದಲಾದ ವಿವಿಧ ಪ್ರಕೃತಿ ವಸ್ತು-ಶಕ್ತಿಗಳನ್ನು ಮಾರ್ಪ ಡಿಸಿ, ಮನುಷ್ಯ ಜೀವನೋಪಯೋಗಿಗಳನ್ನಾಗಿ ಮಾಡಿ ಕೊಳ್ಳುವುದು; (5) ಪ್ರಕೃ ತಿಯ ಮಡಿಲಲ್ಲಿರುವ ಸರಕನ್ನೆತ್ತಿಕೊಂಡು, ಮನುಷ್ಯೋಪಯೋಗಕ್ಕೆ ಅವಶ್ಯವಾದ ವಸ್ತುಗಳ ರೂಪದಲ್ಲೂ ಸೇವೆಗಳ ರೂಪದಲ್ಲೂ ಪರಿವರ್ತಿಸಿ ಬಳಸುವುದು; (6) ಮನುಷ್ಯ ವರ್ಗದ ವಾಸಕ್ಕೋಸ್ಕರ ವಸತಿ ನಿರ್ಮಾಣ ಹಾಗೂ ಅವರ ಚಟುವಟಿಕೆಗಳಿ

ಗೋಸ್ಕರ ಅವಶ್ಯವಾದ ಬಗೆಬಗೆಯ ಕಟ್ಟಡಗಳ ನಿರ್ಮಾಣ; (7) ಸಂಚಾರ ಮಾರ್ಗ ಗಳನ್ನೂ ವಾರ್ತಾ ಪ್ರಸಾರ ಸಾಧನಗಳನ್ನೂ ವಿಸ್ತರಿಸಿ ಉತ್ತಮಪಡಿಸುವುದು; (8)ರಾಷ್ಟ್ರ ರಾಷ್ಟ್ರಗಳನಡುವೆ ವ್ಯಾಪಾರ ವಾಣಿಜ್ಯ ವಿನಿಮಯ ವ್ಯವಹಾರಗಳಲ್ಲಿ ವೈವಿಧ್ಯ ವನ್ನೂ ಗಾತ್ರವನ್ನೂ ಹೆಚ್ಚಿಸಿಕೊಳ್ಳುವುದು; (9) ಮನುಷ್ಯ ಸಮಾಜದ ಸಂಘಟನೆ, ಸಂಯೋಜನೆ ಮತ್ತು ಸ್ಥಿರತಾ ಸಾಧನೆ; (10) ಮನುಷ್ಯನು ತನ್ನನ್ನೂ ತನ್ನ ಪರಿಸರ ಸ್ವಭಾವವನ್ನೂ ತಿಳಿದು, ಉಭಯಾನುಕೂಲವಾಗುವಂತೆ ಸಂಬಂಧ ಪೋಷಣೆ; (11) ಮನುಷ್ಯ ವರ್ಗವನ್ನು ಶಿಸ್ತಿನಲ್ಲಿ ನಡಸಿ, ಸಂಘಟಿತ ಸಮಾಜದಲ್ಲಿ ಅವರು ತಮ್ಮ ಸ್ಥಾನವನ್ನು ಕಂಡುಕೊಂಡು ಬಾಳುವಂತೆ ತಕ್ಕ ಶಿಕ್ಷಣ ಕೊಡುವುದು; (12)ಮನುಷ್ಯರೆಲ್ಲರನ್ನೂ ಸಾಮಾಜಿಕವಾಗಿ ಸಹಜೀವನಕ್ಕೆ ಅಣಿಯಾಗುವಂತೆ ಹೊಸ ವಿಚಾರಗಳನ್ನು ಆಲೋಚಿಸಿ, ವಿವರಿಸಿ, ಸಾಮಾನ್ಯ ಸೂತ್ರಗಳನ್ನು ಜನತೆಯ ಅಭ್ಯಾಸ ಕ್ಕೋಸ್ಕರ ಕ್ರೋಢೀಕರಿಸುವುದು; (13) ನಾನಾ ಮತ ಧರ್ಮ ಕ್ಷೇತ್ರಗಳಲ್ಲೂ ದರ್ಶನ ಕ್ಷೇತ್ರಗಳಲ್ಲೂ ಅಜ್ಞಾತ ಭಾಗಗಳನ್ನು ಅನ್ವೇಷಿಸಿ ಅನುಭವಕ್ಕೆ ತಂದುಕೊಂಡು ಫಲ ಶ್ರುತಿಗಳನ್ನು ಜನದ ಬೋಧೆಗೋಸ್ಕರ ಬರೆದಿಡುವುದು.

ದೊಡ್ಡ ಪರಿಮಾಣದ ಮನುಷ್ಯನ ಸಿದ್ಧಿಗಳೂ, ಪ್ರಗತಿ ಸಂಪತ್ತುಗಳೂ ಹಾಗೆಯೇ ದೊಡ್ಡ ಪರಿಮಾಣದ ಅಪಗತಿ ಅಪಜಯ ವಿಪತ್ತುಗಳೂ ಪರ್ಯಾಯ ಕ್ರಮದಲ್ಲಿ ನಡೆದಿರುವುದನ್ನು ಕೂಡ ಇತಿಹಾಸವು ದಾಖಲೆಯಿರಿಸಿದೆ. ಈ ಅಪಗತಿ (ಅವನತಿ) ಯ ಚಲನವಲನಗಳನ್ನು ಆಗ ಮಾಡಿಸಿದ್ದು ಪೌರ ಜೀವನ ಕ್ಷೇತ್ರದಲ್ಲೂ ರಣಾಂಗಣದಲ್ಲೂ ನಡೆದ ಘರ್ಷಣೆ ಯುದ್ಧಗಳ ಪರಂಪರೆ. ತತ್ಪರಿಣಾಮವಾಗಿ ಪ್ರಜಾ ಸಂಖ್ಯೆಯಲ್ಲಿ ಕುಸಿತವೂ ನಾಗರಿಕತೆಯ ಕೇಂದ್ರಗಳಿಗೆ ಅಳಿವೂ ಸಂಭವಿಸಿವೆ.

ಸಮುದ್ರದ ಅಲೆಗಳಲ್ಲಿ ಉಬ್ಬರವಿಳಿತಗಳಂತೆ ನಾಗರಿಕತೆಗಳಲ್ಲೂ ಏಳು ಬೀಳು ಗಳು ಆಗುತ್ತಿರುತ್ತವೆ. ಕಳೆದ ಎರಡು ಶತಮಾನಗಳಲ್ಲಿ ನಡೆದ ಶೋಧನೆಗಳೂ ನಿರ್ಮಾಣಗಳೂ ಮನುಷ್ಯ ಸಂಸ್ಕೃತಿಯ ಪ್ರವಾಹವನ್ನು ವಿಶಾಲವೂ ಆಳವೂ ಆಗಿ ಮಾರ್ಪಡಿಸಿ, ಪಾಶ್ಚಾತ್ಯ ನಾಗರಿಕತೆಯಲ್ಲಿ ಪ್ರಗತಿಯ ದೊಡ್ಡ ಅಲೆಯನ್ನೆಬ್ಬಿಸಿವೆ. ಇಪ್ಪತ್ತನೆಯ ಶತಮಾನದ ಆದಿಯಲ್ಲಿ ನಡೆದ ಮಹಾ ಯುದ್ಧಗಳು ಮನುಷ್ಯ ವರ್ಗಕ್ಕೆ ಪೀಡೆಯಾಗಿ ಸಂಭವಿಸಿ, ಇದುವರೆಗೆ ಆಗಿದ್ದ ಅಭ್ಯುದಯ ಸಿದ್ಧಿಯನ್ನು ನಾಶಮಾಡಿ, ಮಾನವತೆಯನ್ನು ಬಡತನ, ಅಜ್ಞಾನ, ಮತ್ತು ನಿರ್ವೀರ್ಯತೆಗಳ ಪ್ರಪಾತಕ್ಕೆಸೆ ಯುವ ಅಪಾಯ ಸೂಚನೆಗಳಾಗಿದ್ದುವು.

ಈ ಮನುಷ್ಯ ಸಿದ್ಧಿಗಳ ಮೊತ್ತವನ್ನು—ತಮೋಯುಗದ ನಷ್ಟಗಳನ್ನು ಕಳೆ ದಾದ ಮೇಲೆ ಉಳಿದುಕೊಂಡ ಶೇಷಾಂಶವೆಂದು ಎಣಿಸಬಹುದು. ಈ ಸಿದ್ಧಿಗಳು ಮನುಷ್ಯ ವರ್ಗಕ್ಕೆಲ್ಲ ಸಾಮಾಜಿಕ ಪರಂಪರಾಗತ ಆಸ್ತಿಯಾಗಿದೆ. ಇವೇ ಮನುಷ್ಯ

ನಾಗರಿಕತೆ ಸಂಸ್ಕೃತಿಗಳ ಪ್ರವಾಹ. ಇದರ ಭವಿಷ್ಯದ್ಗತಿ ಹೇಗೆ? ಇವೊತ್ತು ಸಿಡಿದು ಜಿರಗೂಡುವ ಅಭ್ಯುದಯದ ಸೆಳವೂ ಹಾಗೆಯೆ ಇಡಿಯ ಪಶ್ಚಿಮ ನಾಗರಿಕತೆಯ ವಿನಾಶ ಸೂಚಕವಾದ ಅಪಾಯದ ಸೆಳವೂ ಈಗ ನಾಗರಿಕತೆಯ ಹೊಳೆಯ ತಳದಲ್ಲಿ ಕಾಣಬರುತ್ತಿವೆ.

## ನಮ್ಮ ಜೀವನ ವಿಧಾನವೇ ಉತ್ತಮವೇ ?
## ಹೆರವರಿಗೂ ಅದು ಅನುಸರಣೀಯವೇ ?

ಮನುಷ್ಯಕೃತವಾದ ಯೋಜನೆಗಳ ಚರಿತ್ರೆ ಸೋಲು ಗೆಲವುಗಳ ಚರಿತ್ರೆ. ಯೋಜನ ಕರ್ತನು ಪರಿಸರ ಸಂದರ್ಭಗಳಿಗೂ, ಸಮಾಜದಲ್ಲಿ ಬೇರೂರಿರುವ ಸಂಪ್ರದಾಯ ಪದ್ಧತಿ ಅಭ್ಯಾಸಗಳಿಗೂ, ಸಂಬಂಧಿಸಿದಂತೆ ಪ್ರಯೋಗ ಪರೀಕ್ಷೆಗಳನ್ನು ಕೈಕೊಂಡು, ಯೋಜನೆಯ ಉದ್ದೇಶಾನುಸಾರವಾದ ಕಾರ್ಯಗಳಲ್ಲಿ ತೊಡಗುವ ಸಿಬ್ಬಂದಿಯಲ್ಲಿ ತಕ್ಕಷ್ಟು ಶಕ್ತಿ ಸಾಮರ್ಥ್ಯಗಳುಂಟೇ ಇಲ್ಲವೇ ಎಂಬ ಮುಖ್ಯ ವಿಚಾರಕ್ಕೂ ಗಮನ ಕೊಡುತ್ತಾನೆ. ಇಂಥ ಪ್ರಯೋಗ ಪರೀಕ್ಷೆಗಳು ನಡೆದ ಪ್ರತಿಯೊಂದು ಸಂದರ್ಭದ ತಿಳಿವಳಿಕೆಯನ್ನೂ ನಾನು ವಿವರವಾಗಿ ವಿಭಜಿಸಿ ನೋಡಿದಾಗ ಕಂಡು ಬರುವ ಹಿನ್ನಲೆ ಎಲ್ಲ ಸಂದರ್ಭಗಳಿಗೂ ಸಮಾನವಾಗಿ ಕಂಡು ಬಂದಿತು. ಪದ್ಧತಿಗೆ ವಿಧೇಯವೂ ಅಭ್ಯಾಸೋಪಾಧಿಗೆ ವಶವೂ ಆದ ಜನಸಾಮಾನ್ಯ—ಇಂಥವರಿಂದ ತಾನೆ ಯೋಜನೆಯ ಕಾರ್ಯಕರ್ತರ ತಂಡ ದೊರೆಯುವುದು–ಕಷ್ಟವನ್ನೂ, ಅಪಾಯವನ್ನೂ ಎದುರಿಸಬೇಕಾಗಿ ಬಂದಾಗ, ತಬ್ಬಿಬ್ಬುಬಗೆಯುಳ್ಳದ್ದಾಗಿ, ಏನು ಮಾಡೋಣ. ಎತ್ತ ತಿರುಗೋಣ ಎಂದು ತೋಚದೆ ಪೇಚಿಗೂ ಅನಿಶ್ಚಯಕ್ಕೂ ಸಿಕ್ಕುತ್ತದೆ. ಆಗ ಆ ಜನ ಸಾಮಾನ್ಯರ ನಡುವಣಿಂದಲೇ ಒಬ್ಬ ಪ್ರಭಾವಶಾಲಿಯೂ ಚೈತನ್ಯವಂತನೂ ಆದ ನಾಯಕನು ಸಮಿಚೀನವಾದ ಜೀವನ ತತ್ತ್ವದೊಡನೆಯೂ ಧ್ಯೇಯ ಕಾರ್ಯಕ್ರಮಗಳೊಡನೆಯೂ ಮೈದೋರುತ್ತಾನೆ. ಅವನ ಬೆಸನೆಸಗುವ ಅನುಯಾಯಿಗಳು ಅವನ ಹಿಂದೆ ಟೊಂಕ ಕಟ್ಟಿ ನಿಲ್ಲುತ್ತಾರೆ; ಅವನ ಸಂದೇಶವನ್ನು ಜನತೆಗೆ ಮುಟ್ಟಿಸತಕ್ಕವರು ಇವರು. ಎಂದರೆ ಒಬ್ಬಾನೊಬ್ಬ ಮೊಸೆಸ್ ಮೈದೋರಿ ನಿಲ್ಲುತ್ತಾನೆ; ಜನಗಳನ್ನು ಕಷ್ಟಗಳಿಂದ ಪಾರುಮಾಡುವ ಕೃತಸಂಕಲ್ಪನಾಗಿ ಆತ ಇರುತ್ತಾನೆ. ಕಷ್ಟಗಳೂ ಅಪಾಯಗಳೂ ತುಂಬಿದ ಕಗ್ಗಾಡಿನ ಕತ್ತಲೆಯಿಂದ ಭರವಸೆಯ ಬೆಳಕು ತೋರುವ ನಲ್ನಾಡಿಗೆ ಜನರನ್ನು ಕರೆದೊಯ್ಯುತ್ತಾನೆ.

ಆದರೆ ಏಳಿಗೆಗಾಗಿ ಇಂಥ ಚಳವಳಿಗಳನ್ನು ಪಾಮರ ಜನತೆಯೇ ಸ್ವತಂತ್ರ ವಿವೇಚನೆಯಿಂದ ಆರಂಭ ಮಾಡುವುದಿಲ್ಲ. ಜನತೆಯ ವಿಸ್ತಾರವೂ ಗಾಢವೂ ಆದ ಬೆಂಬಲ ವಿದ್ದ ಹೊರತು ಇಂಥ ಚಳವಳಿಗಳು ಯಶಸ್ವಿಯಾಗವು, ಪ್ರತಿಯೊಂದು ಚಳವಳಿಯೂ ವ್ಯಕ್ತಿನಾಯಕನೊಬ್ಬನ ಪ್ರೇರಣೆಯಿಂದ ಆಗುತ್ತದೆ. ನಾಯಕನ ಸ್ವತಂತ್ರ ವಿವೇಚನೆ

ಹಾಗೂ ಕಾರ್ಯಾರಂಭಶಕ್ತಿ ಜನತೆಗೆ ಮಾರ್ಗದರ್ಶನ ಕೊಟ್ಟು ಅದರಲ್ಲಿ ಹುರುಪು ತುಂಬುತ್ತದೆ. ಅನೇಕ ವೇಳೆ ಜನತೆಯ ಚಿತ್ತದಲ್ಲಿ ಎದ್ದ ಕುದಿ ತಳಮಳಗಳೇ ನಾಯಕನನ್ನು ಎಬ್ಬಿಸಿ ನಿಲ್ಲಿಸಿವೆ. ಇನ್ನು ಕೆಲವು ವೇಳೆ; ಕಲಿತ ಸ್ವಲ್ಪ ಮಂದಿಯ ಸಂಕಲ್ಪವೂ ಆಲೋಚನೆಯೂ ಕಾರ್ಯ ಮಾಡಿದ್ದರ ಫಲವಾಗಿ ನಾಯಕರು ಹುಟ್ಟಿಕೊಂಡಿದ್ದಾರೆ. ಜನತೆ ಸಾಮಾನ್ಯವಾಗಿ ಸದ್ಯಃಸ್ಥಿತಿಗಳನ್ನು ಸಂರಕ್ಷಿಸುವ ಕೋಟೆ ಕೊತ್ತಲಗಳು. ಯಥಾಸ್ಥಿತಿಗಳನ್ನು ಅನುಮೋದಿಸಿ ರಕ್ಷಣೆನೀಡುತ್ತಿರುವ ಜನತೆ, ವ್ಯವಸ್ಥಾಬದ್ಧ ಜೀವನಕ್ರಮದಲ್ಲಿ ಆಗಬೇಕಾದ ಮಾರ್ಪಾಟುಗಳನ್ನು ಯಾರು ಸೂಚಿಸುವರೋ ಅವರನ್ನು ಆಕ್ಷೇಪಿಸಿ, ದಂಡಿಸಿ ನಿರ್ನಾಮ ಮಾಡಿದೆ. ಪರಿಷ್ಕರಣವಾದಿಗಳು ಸೂಚಿಸಿದ ಮಾರ್ಪಾಟುಗಳಿಂದ ಅಭಿವೃದ್ಧಿಸಂಭವವುಂಟೆಂದು ತಿಳಿದಾಗ ಕೂಡ ಜನತೆ ಅವರನ್ನು ಉಪೇಕ್ಷಿಸಿ, ಶತಮಾನಗಳ ಕಾಲ ಕದಲದೆ ಜಡವಾಗಿ, ಮುನ್ನಡೆಯದೆ ಇದ್ದುಕೊಂಡಿರುತ್ತದೆ. ಅಜ್ಞಾನ ಬಡತನ ಹಾಗೂ ರೋಗಗಳಿಂದ ಕುಗ್ಗಿದ ಬಾಳನ್ನು ನಡಸಿಕೊಂಡಿರುತ್ತದೆ.

"ಜನತಾ–ಮನುಷ್ಯ"ನು ಪ್ರಗತಿ ವಿರೋಧೀ ಪಾತ್ರವನ್ನು ಆಯ್ದುಕೊಳ್ಳುವ ಇಲ್ಲವೆ ಜೇಡವೆಂದು ತೊರೆಯುವ ಸ್ವತಂತ್ರವಿವೇಚನೆಯನ್ನು ಇನ್ನೂ ಪಡೆದಿಲ್ಲ. ಅಧಿಕಾರ ಸಂಪನ್ನರ ನಿರ್ಬಂಧಕ್ಕೆ ಸಿಕ್ಕಿಕೊಂಡಿರುತ್ತದೆ ಜನತೆ; ಈ ಅಧಿಕಾರ ಸಂಪನ್ನರು ಪಾಮರ ಜನತೆಯನ್ನು ಹೆದರಿಸಿ, ನೀವು ನಿಮ್ಮ ನಿಷ್ಠೆ ವಿಧೇಯತೆಗಳಿಂದ ಜಾರಿದರೆ,–ಇತ್ತ ಇಳೆಯಲ್ಲಿ ಆಸ್ತಿವಿತ್ತಗಳ ನಷ್ಟಭೀತಿಯನ್ನೂ, ಅತ್ತ ಸ್ವರ್ಗಲೋಕದಿಂದ ಬರುವ ನರಕ ಭೀತಿಯನ್ನೂ, ಅನುಭವಿಸುತ್ತೀರಿ ಎಂದು ಉಗ್ಗಡಿಸುತ್ತ ಅವರನ್ನು ತಮ್ಮ ಪಟ್ಟುಹಿಡಿತದಲ್ಲಿರಿಸಿಕೊಂಡಿರುತ್ತಾರೆ.

ಮಾನವತೆ ತನ್ನ ಜೀವನ ಶಿಲ್ಪಕ್ಕೆ ಸಂಪ್ರದಾಯದ ಪ್ರಭಾವರಣವನ್ನು ಅಳವಡಿಸಿಕೊಂಡಿರುತ್ತದೆ. ಪದ್ಧತಿಯ ದಿಗಂತವನ್ನು ನಿಶ್ಚಯಿಸಿಕೊಂಡಿರುತ್ತದೆ; ಮತ್ತು ಅಭ್ಯಾಸದ ಗಟ್ಟಿದುರ್ಗವನ್ನು ತನ್ನ ಸುತ್ತ ಎತ್ತಿ ನಿಲ್ಲಿಸಿ ಅದರ ಬೆಂಗಾವಲಲ್ಲಿರುತ್ತದೆ. ಈ ದುರ್ಗದಲ್ಲಿ ಜೀವನ ತರುವನ್ನು ಹೇಗೆಂದರೆ ಹಾಗೆ ಬಗ್ಗಿಸಿ ಬೆಳಸುವುದು ಅದಕ್ಕೆ ಸುಲಭವೆನ್ನಿಸುತ್ತದೆ. ಮಾನವತೆಗೆ ವಿಧಾಯಕವಾಗಿರುವ ಮೊದಲ ವಿಧಿವಾಕ್ಯಮಾಲೆ ಇದು: "ಗತಾನುಭವಕ್ಕೆ ಗೌರವ ತೋರಿಸು; ಪ್ರಾಚೀನ ಜೀವನಕ್ರಮವನ್ನು ಸಾಗಿಸಿಕೊಟ್ಟ ಪಿತೃಗಣಕ್ಕೆ ಹೆದರಿ ನಡೆ; ಅಭ್ಯಾಸವಾಗಿ ಬಳಕೆಗೆ ಬಂದ ಸುಪರಿಚಿತ ಮಾರ್ಗದಲ್ಲಿ ನಿನ್ನ ಸಂತಾನವನ್ನು ನಡಸು."

ಪದ್ಧತಿ ನಿಷ್ಠ ಜೀವನ ವಿಧಾನಕ್ಕೆ ವಿಧೇಯತೆ ಸಲ್ಲಿಸುವುದೇ 'ಪುಣ್ಯ'ವೆನ್ನಿಸುತ್ತದೆ; ಅಂಥ ವಿಧಾನಕ್ಕೆ ಅವಿಧೇಯತೆ ತೋರಿಸುವುದೇ 'ಪಾಪ'ವೆನ್ನಿಸುತ್ತದೆ.

ಈ ಬಗೆಯ ಪುಣ್ಯ-ಪಾಪ ವಿವೇಕದ ಶಿಕ್ಷಣ, ಶೀಲಾಪರಾಧ ವಿವೇಕದ ಶಿಕ್ಷಣ ತಾಯ ಮಡಿಲ ಮೇಲಾಡುವ ಮಕ್ಕಳಿಗೂ ಆಗುತ್ತದೆ. ಮಕ್ಕಳು ಬೆಳೆ ಬೆಳೆದಂತೆ ಅವರಿಗೆ ಗತಾದರ್ಶಕ್ಕೆ ಪೂಜೆ ಅನುವರ್ತನೆಗಳನ್ನು ಸಲ್ಲಿಸುವ ಅಭ್ಯಾಸ ಒಳ್ಳೆಯದೆಂದು ಉಪದೇಶವಾಗುತ್ತದೆ—ಉಬ್ಬಿಸಿಯೋ, ಸಿಹಿ-ಲಂಚಕೊಟ್ಟೋ, ದಬ್ಬಿಯೋ ಅನುವರ್ತನೆಯ ದಾರಿಯಲ್ಲಿ ಮಕ್ಕಳನ್ನು ನಡಸಲಾಗುತ್ತದೆ, 13ರಿಂದ 19ರ ವರೆಗಿನ ವಯಸ್ಸಿನ ಬಾಲಕರನ್ನು ಹಿಡಿದು, "ಇದು ನಿಮ್ಮ ಜೀವನಮಾರ್ಗ, ನಿಮ್ಮ ನಡೆಗೆ ತಕ್ಕ ದಾರಿ" ಎಂದು ಬುದ್ಧಿಮಾರ್ಜನ ಮಾಡಿ ಅವರಿಗೆ ತಿಳಿವಳಿಕೆ ಕೊಡಲಾಗುತ್ತದೆ. ಪ್ರತಿಯೊಂದು ತಲೆಮರೆಯೂ ತಾನು ಪೋಷಣೆಕೊಟ್ಟು ಬೆಳಸಿದ ಸಂಸ್ಕೃತಿಯನ್ನು "ಪವಿತ್ರ ನ್ಯಾಸನಿಧಿ"(ಟ್ರಸ್ಟ್)ಎಂದು ಭಾವಿಸಿ, ಭವಿಷ್ಯತ್ಕಾಲದಲ್ಲಿ ಅದರ ರಕ್ಷಣೆ ಹಾಗೂ ಅನುಸರಣೆ ಪ್ರತಿವಾದವಿಲ್ಲದೆ ನಡೆಯತಕ್ಕದ್ದೆಂದು ವಿಧಾಯಕ ಮಾಡುತ್ತದೆ. ಮುಂದಿನ ಪೀಳಿಗೆಗೆ ಅದು ದಾನಾಂಶವಾಗಿ ಲಭ್ಯವಾಗತಕ್ಕದ್ದೆಂದು ಒತ್ತಾಯಿಸಲಾಗುತ್ತದೆ.

ವರ್ತಮಾನದಲ್ಲಿ ರೂಢಿಯಲ್ಲಿರುವ ಯಥಾಸ್ಥಿತಿಯನ್ನು ಕಾಪಾಡುವ ಪ್ರಯತ್ನವನ್ನು ಹೀಗೆ ಅನುನಯೋಪಾಯ, ನಿರ್ಬಂಧ ಬೋಧೆ ಹಾಗೂ ಬಲಾತ್ಕಾರ ಪ್ರಯೋಗಗಳನ್ನು ಬೆರಸಿ ಸಾಧಿಸಲಾಗುತ್ತದೆ. ಬಾಲ್ಯದಲ್ಲಿಯೇ ಈ ನಿರ್ಬಂಧಬೋಧೆ ಪೊದಲಾಗುತ್ತದೆ. ಆತ್ಮರಕ್ಷಣೆ ಮಾಡಿಕೊಳ್ಳಲಾರದ ಮಕ್ಕಳಿಗೆ ಈ ಕಟ್ಟಳೆ—"ನಮ್ಮ ಈ ದಾರಿ "ನಿಮಗೂ" ತಕ್ಕ ದಾರಿ-ಎಂದು. ಈ ನಿರ್ಬಂಧೋಪದೇಶವು ಮನೆಯಲ್ಲಿ ಮೊದಲಾಗಿ, ಆಮೇಲೆ ಮತಧರ್ಮಗುರುಗಳೂ ಸಮಾಜದಲ್ಲಿಯ ವೃದ್ಧರೂ ಅದನ್ನು ಮುಂಬರಿಸುತ್ತಾರೆ. ಇದರಿಂದ ಸಾಮಾನ್ಯರಿಗೆ ಬಿಡುಗಡೆ ಸಾಧ್ಯವಲ್ಲ. ಯಾರ ಶೀಲವು ದೃಢವೋ, ಆತ್ಮಾವಲಂಬನದ ಧೈರ್ಯ ಯಾರಿಗುಂಟೋ ಅವರು ಈ ಸಾಮಾಜಿಕ ಬಲಾತ್ಕಾರವನ್ನು ಪ್ರತಿಭಟಿಸಿ ನಿಂತಾರು. ಸಮಾಜ ಅನುಮೋದನೆ ಕೊಟ್ಟ ಜೀವನ ವಿಧಾನದಲ್ಲಿ ಸಾಗುವ ತರುಣರು ಯಾವ ಕಾರಣಕ್ಕಾದರೂ ಅದನ್ನು ತೊರೆದು, ಪದ್ಧತಿಯಿಂದ ಜಾರಿದರೋ ಅಂಥವರು ಅಧಿಕಾರಕ್ಕೆ ಅವಿಧೇಯತೆ ತೋರಿಸಿದ ಮೊಂಡರೆನಿಸಿ, ಸಮಾಜದಲ್ಲಿ ಅವರಿಗಿದ್ದ ನೆಲೆಯನ್ನು ಕಳೆದುಕೊಳ್ಳುತ್ತಾರೆ. ಅಂಥವರು ಮನೆ ಬಿಟ್ಟು ಹೊರಬಿದ್ದು ಅಪರಿಚಿತರ ಸಹವಾಸದಲ್ಲಿ ಇರಬೇಕಾಗುತ್ತದೆ; ಇಲ್ಲವೆ ಅವರು ನ್ಯಾಯ ದೃಷ್ಟಿಗೆ ಬಾಹಿರರೆನಿಸಿ, ತಿರುಪೆಯೆತ್ತಿಯೋ, ತುಡುಗಿಗೆ ಬಿದ್ದೋ, ಆಕಸ್ಮಿಕವಾದ ಯಾವುದಾದರೊಂದು ಉದ್ಯೋಗವನ್ನು ಪಡೆದೋ ಹೇಗೋ ಬದುಕನ್ನು ಸಾಗಿಸ ಬೇಕಾಗುತ್ತದೆ.

ಬಲಾತ್ಕಾರ ಬಹಳ ಸ್ಪಷ್ಟವಾದ ರೂಪವು ಸೈನಿಕಬಲವನ್ನಾಶ್ರಯಿಸಿ ನಡೆಯುತ್ತದೆ. ಹಾಗೆಯೇ ಮುತ್ತಿಗೆಗಳೂ ದೇಶಾಂತರ ವಲಸೆ ಪಯಣಗಳೂ ಜನಕ್ಕೆ ನಿರ್ಬಂಧಕಾರಕ ಸಂದರ್ಭಗಳು. ಇಡಿಯ ಜನತೆಯೇ ಮುತ್ತಿಗೆಗಾರರನ್ನು ಎದುರಿಸ

ಬೇಕಾಗುತ್ತದೆ. ಎದುರಿಸಿ ಗೆಲ್ಲಬಹುದು, ಇಲ್ಲವೆ ಸೋಲಬಹುದು. ಸೋತರೆ ಪರಾಧೀನತೆ ದಬ್ಬಾಳಿಕೆ ಸುಲಿಗೆಗಳನ್ನು ಅನುಭವಿಸಬೇಕಾಗುತ್ತದೆ. ಸ್ಥಳೀಯವಾಗಿಯೂ ರಾಷ್ಟ್ರೀಯವಾಗಿಯೂ ಬಲಾತ್ಕಾರ ಪ್ರಯೋಗವೆಂಬುದು ಪಶುಬಲ ಪ್ರಕಾಶನ. ಬಲಾತ್ಕಾರ ಪ್ರಯೋಗವು ಪರಾಕಾಷ್ಠದಶೆಯನ್ನು ಮುಟ್ಟಿದಾಗ, ಇಡಿಯ ಜನವರ್ಗ ಗುಲಾಮಗಿರಿಗಿಳಿದಿದೆ, ಮತ್ತು ಅಧಿಕಾರಕ್ಕೆ ಎದುರುಬಿದ್ದು ಅದರ ಕಟ್ಟುಗ್ರವಾದ ಕೋರಿಕೆಗಳನ್ನು ಒಪ್ಪದವರು ಮರಣದಂಡನೆಗೆ ಗುರಿಯಾಗಿದ್ದಾರೆ.

ಈ ದಬ್ಬಾಳಿಕೆ ಘೋರಶಿಕ್ಷೆಗಳನ್ನು ತಪ್ಪಿಸಿಕೊಳ್ಳಲು ಸುಧಾರಕರು ಅನುವರ್ತನೆಯ ದಾರಿ ಹಿಡಿದು, ಇಂಥ ಸಂದರ್ಭಗಳಲ್ಲಿ ವಿವೇಚನಾ ಸ್ವಾತಂತ್ರ್ಯವು ಬುದ್ಧಿಗೇಡಿತನದ ಗುರುತೆಂದು ಭಾವಿಸುವುದುಂಟು. ಆದರೆ ಅವರ ಅಂತರಂಗದಲ್ಲಿ ಧರ್ಮೇಂದ್ರಿಯ ವಾಣಿ ಮೊಳಗಿ ಅವರ ಈ "ಲೋಕಾನುಭವ" ವನ್ನೂ ತಿಳಿವಳಿಕೆಯನ್ನೂ ತಪ್ಪೆಂದು ಉಪೇಕ್ಷಿಸುತ್ತದೆಯಲ್ಲದೆ, ಅವರ ಈ ಅತಿರೇಕದ ಜಾಗರೂಕತೆಯನ್ನು ಧಿಕ್ಕರಿಸುತ್ತದೆ. ಯಾವುದು ಯಥಾರ್ಥವೋ ಅದು ಎಂದೆಂದಿಗೂ ಯಥಾರ್ಥವೇ; ಅದನ್ನು ಮುಚ್ಚಲು ಎಂಥ ದಪ್ಪ ಮುಸುಕನ್ನು ಇಟ್ಟರೂ, ಅದನ್ನು ನಂಬಿ ನಡೆಯುವವರಿಗೆ ಅಥವಾ ಅದನ್ನು ಜ್ಞಾಪಿಸಿ ಎಚ್ಚರ ಹೇಳುವವರಿಗೆ ಎಷ್ಟೋ ಉಗ್ರವಾದ ಶಿಕ್ಷೆ ಆದರೂ ಸತ್ಯ ಎಂದೆಂದಿಗೂ ಸತ್ಯವೇ. ಪ್ರತಿಕ್ರಿಯೆ ಎಷ್ಟೇ ಉಗ್ರವಾದರೂ ಧರ್ಮೇಂದ್ರಿಯ ಚೋದನೆ ನಿಲುಗಡೆಯಿಲ್ಲದೆ ಆಗುತ್ತಿರುತ್ತದೆ. ಅದು ಚಂಚಲ ಮನಸ್ಸನ್ನು ಚುಚ್ಚುತ್ತದೆ, ತಳಮಳಗುಟ್ಟಿಸುತ್ತದೆ. ಸನ್ಮಾರ್ಗವನ್ನು ಹಿಡಿಯೆಂದು ಜೀವನವನ್ನು ನಿರ್ಬಂಧ ಪಡಿಸುತ್ತಲೇ ಇರುತ್ತದೆ. ಆದದ್ದರಿಂದ ಅಮೆರಿಕದಲ್ಲಿ ಹುಟ್ಟಿಬೆಳೆದ ರ್‍ಯಾಡಿಕಲ್ ಪಂಥಿಯಾದ ನಾನು ಇಂಥ ಅಳಿಗುಂಡಿಗೆಯ ಅನುವರ್ತಕರ "ಲೋಕಾನುಭವ"ಕ್ಕೆ ಎದುರುಬಿದ್ದವನು; ನಾನು ಬರೆದದ್ದನ್ನು ಓದುವ ವಾಚಕ ಸಮುದಾಯ ಹೆಚ್ಚಾಗಿಲ್ಲವೆಂದೂ, ಇದ್ದರೂ ಅದನ್ನು ಕಡೆಗಣಿಸುವವರೇ ಹೆಚ್ಚೆಂದೂ, ತಿಳಿದುತಿಳಿದೂ ಅಂತರ್ಯಾಮಿಯಾದ ನನ್ನ ಧರ್ಮೇಂದ್ರಿಯದ ಆದೇಶವನ್ನು ನಡಸಲು ಸಿದ್ಧನಾಗಿ, ನನ್ನ ದೃಷ್ಟಿಯನ್ನು ಲೋಕ ಜನದ ಮುಂದಿಡಲು ಪ್ರತಿಜ್ಞೆ ಮಾಡಿದ್ದೇನೆ.





## ಅಧ್ಯಾಯ ಎರಡು

# ಪರಿವರ್ತನೆಯೇ ಇಂದಿನ ಯುಗಧರ್ಮ

ತೀವ್ರ ಸುಧಾರಣಾವಾದಿಗಳು (ರ್‍ಯಾಡಿಕಲ್ಸ್) ಪರಿವರ್ತನೆಯಲ್ಲಿ ನಂಬಿಕೆಯಿಟ್ಟವರು. ಎಲ್ಲ ನೈಸರ್ಗಿಕ ಹಾಗೂ ಸಾಮಾಜಿಕ ಸಂಬಂಧಗಳ ಮುಖ್ಯ ಭಾಗವು ಪರಿವರ್ತನೆಯೇ ಎಂಬುದನ್ನು ಕಂಡುಕೊಂಡವರು. ಅವರು ಪರಿವರ್ತನೆಯಬಗ್ಗೆ ಎತ್ತುವ ಪ್ರಶ್ನೆಗಳು ಇವು: ಯಾವ ವೇಗದಲ್ಲಿ ಪರಿವರ್ತನೆ ? ಮತ್ತು ಯಾವ ದಿಕ್ಕಿನಲ್ಲಿ ಪರಿವರ್ತನೆ ಸಾಧು?

ಭಾವನೆಗಳು, ಆಚರಣೆಗಳು, ಸಂಸ್ಥೆಗಳು, – ನಿನ್ನೆ ಇದ್ದಂತೆ ಇಂದು ಇರತಕ್ಕವಲ್ಲ. ಕಾಲದಿಂದ ಕಾಲಕ್ಕೆ, ಸ್ಥಲದಿಂದ ಸ್ಥಳಕ್ಕೆ ಅವು ವ್ಯತ್ಯಾಸ ಹೊಂದುತ್ತಿರುತ್ತವೆ. ಮಾರ್ಪಾಟು ಹೊಂದುತ್ತಿರುವುದರ ದಾಖಲೆಯೇ ಸಾಮಾಜಿಕ ಚರಿತ್ರೆ—ಕೆಲವು ವೇಳೆ ಉತ್ತಮಕ್ಕೆ ಪರಿವರ್ತನೆ, ಕೆಲವು ವೇಳೆ ಅಧಮಕ್ಕೆ ಪರಿವರ್ತನೆ.

ಮನುಷ್ಯ ಸಮಾಜದಲ್ಲಿ ಪರಿವರ್ತನೆಯಾಗುವುದು ಯಥಾರ್ಥ ಸತ್ಯವಾದರೂ, ಕಾಲದಿಂದ ಕಾಲಕ್ಕೆ ಪರಿವರ್ತನೆಯ ಗತಿವೇಗವೆಂಬುದು ಸ್ಪಷ್ಟವಾಗಿ ಭಿನ್ನ ಭಿನ್ನವಾಗಿರುತ್ತದೆ. ಕಳೆದ ಒಂದು ಸಾವಿರ ವರ್ಷಗಳ ಪಾಶ್ಚಾತ್ಯ ಮನುಷ್ಯನ ಅನುಭವವನ್ನು ಪರಿಶೀಲಿಸಿದಾಗ ಈ ಪರಿವರ್ತನ ತತ್ತ್ವಕ್ಕೆ ನಿದರ್ಶನಗಳು ಕಂಡುಬರುತ್ತವೆ. ಕ್ರೂಸೇಡ್ (ಧರ್ಮಯುದ್ಧ) ಕಾಲದಲ್ಲಿ ಐರೋಪ್ಯ ಸಮಾಜ ಹೆಚ್ಚು ಕಡಮೆ ನಿಷ್ಕ್ರಿಯವಾಗಿ, ಜಡವಾಗಿತ್ತು. ಆಗ ಸಂಭವಿಸಿದ ಪರಿವರ್ತನೆ ಎಷ್ಟು ನಿಧಾನದ ಗತಿವೇಗವನ್ನು ಅನುಸರಿಸಿತ್ತೆಂದರೆ—ಅನೇಕರು ಪರಿವರ್ತನೆಯಾಗುತ್ತಿರುವುದನ್ನೇ ಅನುಭವ ಮಾಡಲಿಲ್ಲ! ಕ್ರೂಸೇಡುಗಳು (1095–1270) ಪಾಶ್ಚಾತ್ಯ ಯೂರೋಪಿನ ಜನಕ್ಕೆ ನಿಕಟ ಪೂರ್ವಪ್ರದೇಶದ (Near East) ಹೆಚ್ಚು ನಾಗರಿಕ ಸಮಾಜಗಳ ಸಂಪರ್ಕ ಮಾಡಿಸಿದುವು. ಈ ಸಂಪರ್ಕದಿಂದ ಯೂರೋಪಿನ ಜನಕ್ಕೆ ನೂತನ ಭಾವನೆಗಳೂ ಅಭಿಪ್ರಾಯಗಳೂ ಪರಿಚಯಕ್ಕೆ ಬಂದುವು. ಅವರ ಆಲೋಚನೆಗೂ ಆಚಾರಕ್ಕೂ ಹೊಸ ದಿಕ್ಕುಗಳು ತೆರೆದುವು. ಯುದ್ಧವು ಪ್ರವರ್ತನಗೊಳಿಸಿದ ಪರಿವರ್ತನೆಗಳು ವ್ಯಾಪಾರದಿಂದ ಆಗುವ ಪರಿವರ್ತನೆಗಳಿಗೆ ಎಡೆಯನ್ನು ಬಿಟ್ಟುಕೊಟ್ಟುವು. ತತ್ಫಲವಾಗಿ ಸಾಮಾಜಿಕ ಪರಿವರ್ತನೆ ತೀವ್ರಗೊಂಡು, ಸಹಸ್ರ ವರ್ಷಾವಧಿಯ ಕಾಲವನ್ನು ಬರಮಾಡುವ ಆಶೆ ಕೆರಳಿ, ಮನುಷ್ಯ ಪ್ರಯತ್ನವನ್ನು ಆತುರ ಪಡಿಸಿತು. ಈ ಪರಿಸ್ಥಿತಿಯ ಬೆಳವಣಿಗೆಯ ಮೊದಮೊದಲ ಘಟ್ಟಗಳಲ್ಲಿ ಪರಿವರ್ತನೆ ಮಂದಗತಿಯಲ್ಲಿ ನಡೆಯಿತು. ಆಮೇಲೆ ಕ್ಷಿಪ್ರಗತಿಗೆ ಅವಕಾಶವಾಯಿತು. ಕಳೆದ ಮೂರು ನಾಲ್ಕು ತಲೆಮೊರೆಗಳಲ್ಲಿ ಆದ ಪರಿವರ್ತನೆ ಎಷ್ಟು ತೀವ್ರ ಗತಿಯಲ್ಲಿ ನಡೆಯಿತೆಂಬುದು ನೆಲ–ಜಲ–ಆಕಾಶಗಳಲ್ಲಿ ಸಂಚಾರಮಾಡಲು ಮನುಷ್ಯನು ಮಾಡಿಕೊಂಡ ಏರ್ಪಾಟು ಮಾರ್ಪಾಟುಗಳನ್ನು

ಹೋಲಿಸಿ ನೋಡಿದಾಗ ಸ್ಪಷ್ಟಪಡುತ್ತದೆ:—ನೆಲದಮೇಲಣ ಪಯಣಕ್ಕೆ ಎತ್ತಿನಬಂಡಿ, ಚಾವಣಿಯುಳ್ಳ ಪೆಟ್ಟಿಗೆಬಂಡಿ, ಮೋಟಾರು ರೈಲು ಬಂಡಿಗಳು ಸಮುದ್ರಯಾನಕ್ಕೆ ದೋಣಿ ಹಡಗುಗಳು, ಆಕಾಶಯಾನಕ್ಕೆ ಬಗೆಬಗೆಯ ವಿಮಾನಗಳು-ಹೀಗೆ ಪ್ರಯಾಣ ಸೌಕರ್ಯಗಳ ಗತಿವೇಗ ಹೆಚ್ಚುತ್ತ ಬಂದಂತೆ ಮನುಷ್ಯನಿಗೆ ಜೀವನ ಸೌಕರ್ಯ ಪ್ರಾಪ್ತಿಯ ಗತಿವೇಗದಲ್ಲೂ ಪರಿವರ್ತನೆ ಆಯಿತು.

ಯೂರೋಪಿನಲ್ಲಿ ಮಾರ್ಪಾಟಿನ ಅಲೆಯುರುಳು ಮೊದಲು ದಕ್ಷಿಣ ಭಾಗದಲ್ಲೂ, ಆಮೇಲೆ ಬರಬರುತ್ತ ಪಶ್ಚಿಮ ಭಾಗದಲ್ಲೂ ಪ್ರಕಟವಾಯಿತು. ಆಮೇಲಾಮೇಲೆ ಅದು ಅಮೇರಿಕದಲ್ಲಿ ಇನ್ನು ಕೊಂಚಕಾಲಬಿಟ್ಟು ಏಷ್ಯಾದಲ್ಲೂ ಪ್ರಕಟವಾಯಿತು. ಹಾಗೆಯೇ ಕಾಲಕ್ರಮದಲ್ಲಿ ವಾರ್ತಾ ಪ್ರಸಾರ ಮತ್ತು ಪ್ರಯಾಣ ಸೌಕರ್ಯಗಳು ಯೂರೋಪಿನ ಚೈತನ್ಯಮಯ ಯಂತ್ರೋದ್ಯಮ ವಿಧಾನವನ್ನೂ ಸ್ವಾತಂತ್ರ್ಯ ಪ್ರೀತಿಯನ್ನೂ ಆತ್ಮಾವಲಂಬನ ಶ್ರದ್ಧೆಯನ್ನೂ ವಿಶೇಷ ವಿಷಯಜ್ಞತಾ (ತಜ್ಞತಾ) ಸಿದ್ಧಿ ಹಾಗೂ ಸಾಂಸ್ಕೃತಿಕ ವಿಷಯ ವಿನಿಮಯ ಕಾರ್ಯವನ್ನೂ ಪ್ರಪಂಚದ ಮೂಲೆ ಮೂಲೆಗೂ ಹರಡಿತು.

ಪರಿವರ್ತನೆಯ ಹಿಂದೆ ಮನುಷ್ಯನ ಚಿತ್ತಸಂಕಲ್ಪವು ಕಾರ್ಯಮಾಡುತ್ತದೆ. ಮಾರ್ಪಾಟನ್ನು ದಬ್ಬುತ್ತ ಅದರಲ್ಲಿ ಗತಿ ವೇಗವು ಹೆಚ್ಚಲು ಚೋದನೆ ಕೊಡುತ್ತದೆ. ಪ್ರಕೃತಿಯನ್ನು ಅರ್ಥ ಮಾಡಿಕೊಂಡು ಅದನ್ನು ತನಗೆ ಅನುಕೂಲವಾಗಿ ಬಳಸಿಕೊಳ್ಳುತ್ತದೆ. ಮಾನವ ಸಮಾಜದ ಮೇಲ್ಮೆಗೋಸ್ಕರ ಹಂಚಿಕೆ (ಯೋಜನೆ) ಹಾಕಿಕೊಂಡು ಸಂಘಟನೆಯ ಮೂಲಕ ಸಮಾಜ ಜೀವನಕ್ಕೆ ಅವಶ್ಯವಾದ ನಿರ್ದೇಶನವನ್ನು ಕೊಡಲು ಮನುಷ್ಯ ಚಿತ್ತಕ್ಕೆ ಸ್ಫೂರ್ತಿ ಬರುತ್ತದೆ. ಮನುಷ್ಯನಿಗೆ ವಾಡಿಕೆಯಾದ ಚಟುವಟಿಕೆಯ ನಾನಾಕ್ಷೇತ್ರಗಳಲ್ಲಿ ಪರಿವರ್ತನಸಾಧನಗಳ ಪ್ರಯೋಗ ಹೇಗೆಂದರೆ ಯುದ್ಧ, ವ್ಯಾಪಾರ, ವೈಜ್ಞಾನಿಕ ಮನೋವೃತ್ತಿ ಮತ್ತು ವಿಜ್ಞಾನ ತಂತ್ರ ವಿಧಾನದಂತೆ ಭೂ ವ್ಯವಸಾಯಕ್ಕೂ ಯಂತ್ರೋದ್ಯಮಕ್ಕೂ ಪ್ರಯಾಣ ಸಲಕರಣೆಗಳಿಗೂ ಪ್ರಯೋಗ; ಸರಕಾರವನ್ನು ನಡಸುವುದರಲ್ಲಿ ವೈಜ್ಞಾನಿಕ ಮನೋಧರ್ಮ: ಯೋಜನಾಬದ್ಧ ಸಮಾಜಕ್ಕೆ ಸೇವೆಗಳನ್ನೊದಗಿಸುವುದರಲ್ಲೂ ವೈಜ್ಞಾನಿಕ ಮನೋಭಾವ. ಪರಿವರ್ತನೆಯ ಫಲ ಎದ್ದುಕಾಣುವುದು ವಸ್ತು ಶೋಧನೆ (ಡಿಸ್ಕವರಿ) ಮತ್ತು ನಿರ್ಮಾಣ (ಇನ್ವೆನ್ಷನ್) ಪ್ರಯತ್ನಗಳಲ್ಲಿ:-ಪ್ರಕೃತಿಶಕ್ತಿಗಳನ್ನು ಹೊಸ ಹೊಸ ದಾರಿಗಳಲ್ಲಿ ಬಳಸುವುದು, ವಿವಿಧ ವಿಷಯಗಳಲ್ಲಿ ವಿಶೇಷಜ್ಞತಾ ಸಾಧನೆ, ಮನುಷ್ಯ ಸಮಾಜದಲ್ಲಿ ಹೆಚ್ಚು ಹೆಚ್ಚು ಸಮುದಾಯಗಳಿಗೆ ಆಧುನಿಕಯುಗದ ಜೀವನ ಸೌಕರ್ಯಗಳನ್ನು ವ್ಯಾಪಕವಾಗಿ ಒದಗಿಸುವುದು ಇತ್ಯಾದಿ.

ಈ ಪರಿವರ್ತನೆಗಳು ಯೂರೋಪಿನಲ್ಲಿ ಮಧ್ಯಯುಗದ ಅವಧಿಯಲ್ಲಿ ಮೊದಲಾಗಿ ಸಾಧಿಸಿದ್ದೇನೆಂದರೆ:—ಆಳಿಕೆಯಲ್ಲಿದ್ದ ಜಮೀನ್ದಾರ-ಶ್ರೀಮಂತರ ಸ್ವಲ್ಪಜನಾಧಿಪತ್ಯ

ವನ್ನು (ಆಲಿಗಾರ್ಕಿ) ಮೂಲೋತ್ಪಾದನೆ ಮಾಡಿ, ಅದರ ಸ್ಥಾನದಲ್ಲಿ ಹೊಸ ಸಮಾಜವು ಗದ್ದುಗೆಯೇರಿತು. ಈ ನವಸಮಾಜದಲ್ಲಿ ವ್ಯಾಪಾರಿಗಳು, ಕಸಬುದಾರಿ ಆಡಳಿತಗಾರರು, ವಾಸ್ತುಶಿಲ್ಪಶಾಸ್ತ್ರಜ್ಞರು (ಇಂಜನಿಯರುಗಳು,) ತಂತ್ರ ಶಾಸ್ತ್ರಜ್ಞರು–ಇವರೆಲ್ಲ ಸ್ವಲ್ಪಜನಾಧಿಪತ್ಯವು ಗಮನಕೊಡುತ್ತಿದ್ದ ಆಡಳಿತದ ಕರ್ತವ್ಯ ನಿರ್ವಾಹದಲ್ಲಿ ಪಾಲುಗಾರರಾದರು. ಸ್ವಾಮಿ–ಭೃತ್ಯ ಪದ್ಧತಿಯನ್ನು ಹಾಗೂ ಶ್ರೀಮಂತ–ಕಾರ್ಮಿಕ ವರ್ಗಗಳ ನಡುವಣ ಮಧ್ಯಮ ತರಗತಿಯ 'ಬೂರ್ಜ್ವಾ' (Bourgeois) ಸಮಾಜ ಪದ್ಧತಿಯನ್ನೂ ವಾಡಿಕೆಗೆ ತಂದಿದ್ದ ಸ್ವಲ್ಪ ಜನಾಧಿ ಪತ್ಯದಲ್ಲಿ ಸೈನ್ಯಶಕ್ತಿಯು ನಿರ್ಣಾಯಕ ಪಾತ್ರ ವಹಿಸುತ್ತಬಂತು. ಸ್ವಾಮಿಭೃತ್ಯ ಪದ್ಧತಿಯಂತೆ ನಡೆಯುತ್ತಿದ್ದ ಸಮಾಜದಲ್ಲಿ ಚರ್ಚು ಮಠಗಳ ಪ್ರಾಬಲ್ಯವಿತ್ತು. ಬೂರ್ಜ್ವಾ ಸಮಾಜದಲ್ಲಿ ಚರ್ಚುಗಳ ಪ್ರಾಬಲ್ಯ ಕಡಮೆಯಾಗಿ, ಮಿಲಿಟರಿ ಪ್ರಾಬಲ್ಯ ಹೆಚ್ಚಿತು. ಹೀಗಾಗಿ ಉಭಯ ನವ–ಸಮಾಜಗಳಿಗೂ ಮಠದ ಹಾಗೂ ಸೈನ್ಯದ ಬೆಂಬಲ ಅಷ್ಟಿಷ್ಟು ಇದ್ದುದರಿಂದ ಅವೆರಡೂ ಸಾಮಾಜಿಕವಾಗಿ ಮುಖ್ಯಸ್ಥಾನಕ್ಕೆ ಏರಿದುವು. ಮಧ್ಯಮ ತರಗತಿಯ ಜನರು ವ್ಯಾಪಾರಿಗಳೊಡನೆಯೂ, ಸಂಘಟಿತ ಕಾರ್ಮಿಕ ವರ್ಗದೊಡನೆಯೂ ಸಖ್ಯ ಬೆಳಸಿಕೊಂಡಿತು. ಯಂತ್ರೋದ್ಯಮದ ಕಾರ್ಮಿಕ ಸಮುದಾಯದೊಳಗಡೆಯೇ ಕ್ರಾಂತಿ ಪರಿವರ್ತನೆಗಳ ಬೀಜವಿರತಕ್ಕದ್ದು. ಈಚೆಗೆ ಭೂವ್ಯವಸಾಯದಲ್ಲಿ ಸಂಘಟನೆ ಮಾಡಿಕೊಂಡ ಬೇಸಾಯಗಾರ ವರ್ಗದಿಂದಕಾರ್ಮಿಕ ವರ್ಗಕ್ಕೆ ನಿಕಟ ಮೈತ್ರಿ ಸಹಕಾರಗಳು ಲಭ್ಯವಾಯಿತು.

ಜಮೀನ್ದಾರ–ಶ್ರೀಮಂತರ ಪ್ರತಿನಿಧಿಯಾಗಿ ಸ್ವಾಮಿ ಭೃತ್ಯ ತತ್ವದ ಅನುವರ್ತನಶೀಲ ಸ್ವಲ್ಪಜನಾಧಿಪತ್ಯವೂ, ಮಠ ಮಿಲಿಟರಿಗಳ ಸಂಯುಕ್ತಬಲವೂ ಬೂರ್ಜ್ವಾ ಪದ್ಧತಿಯನ್ನು ತೀವ್ರವಾಗಿ ಪ್ರತಿಭಟಿಸಿದ್ದರಿಂದ, ಈ ಒಂದು ಸ್ವಲ್ಪಜನಾಧಿಪತ್ಯ ತನ್ನ ಪದವಿ ಪ್ರಭಾವಗಳನ್ನು ಕಳೆದುಕೊಂಡು ಉರುಳಿಬಿತ್ತು. ವ್ಯಾಪಾರಿಗಳು ಕಸಬುದಾರಿ ರಾಜಕೀಯಸ್ಥರು, ವಿಜ್ಞಾನಿಗಳು, ಇಂಜಿನಿಯರುಗಳು ಮತ್ತು ಪರಿಕರ್ಮತಂತ್ರಜ್ಞರು—ಇವರ ಪ್ರತಿನಿಧಿಯಾಗಿ ಇನ್ನೊಂದು ಸ್ವಲ್ಪಜನಾಧಿಪತ್ಯ ಇಟಲಿ, ಬ್ರಿಟನ್, ಮತ್ತು ಹಾಲೆಂಡ್ ದೇಶಗಳಲ್ಲಿ ಅಸ್ತಿತ್ವಕ್ಕೆ ಬರಲು ಶತಮಾನಗಳು ಉರುಳಬೇಕಾಯಿತು. ಪರ್ಶಿಯಾ, ಆಸ್ಟ್ರಿಯ–ಹಂಗರಿ, ಮತ್ತು ರಷ್ಯಾದೇಶಗಳಲ್ಲಿ ಸ್ವಾಮಿ–ಭೃತ್ಯ ಪದ್ಧತಿಯ ಕೋಟೆಗಳು 1914ರ ಮತ್ತು 1939ರ ಯುದ್ಧಗಳವರೆಗೆ ಭದ್ರವಾಗಿದ್ದವು. ಸ್ಪೈಯ್ನ್ ಮತ್ತು ಪೋರ್ಚುಗಲ್ ದೇಶಗಳಲ್ಲಿ ಭೂ ಸ್ವಾಮಿಗಳು ಸೇನಾಧಿಕಾರಿಗಳು ಮತ್ತು ಮಠಾಧಿಕಾರಿಗಳು ಪರಸ್ಪರ ಸಹಕಾರ ಸಹವರ್ತನೆಗಳಿಂದ ಮಾಡಿಕೊಂಡ ತ್ರಿಮೂರ್ತಿ ದೌಲತ್ತು ಇಂದಿಗೂ ನಡೆದು ಬರುತ್ತಿದೆ. ಆದರೆ ಯಂತ್ರೋದ್ಯಮ, ಸಾರಿಗೆ–ಸುದ್ದಿ ವ್ಯವಸ್ಥೆ ಮತ್ತು ಸಾಮಾಜಿಕ ಸೇವಾವಿಭಾಗಗಳಲ್ಲಿ ಗಮನಾರ್ಹ

ವಾದ ಪ್ರಗತಿಯೇನೋ ಆಗಿದೆ. ಇಂಥ ಮುನ್ನಡೆ ಯೂರೋಪಿನ ಅತ್ಯಂತ ಹಿನ್ನು (ಹಿಂದುಳಿದ) ದೇಶಗಳಲ್ಲೂ ಆಗಿದೆ.

ಮನುಷ್ಯನಿಗೆ ಪ್ರಕೃತಿಯ ಮೇಲೆ ಕ್ರಮೇಣ ಬಂದ ಹೆಚ್ಚುಹೆಚ್ಚು ಪ್ರಭುತ್ವ; ಅವನಿಗೆ ಸಾಧ್ಯವಾದ ಹೆಚ್ಚು ಹೆಚ್ಚು ವಸ್ತೂತ್ಪಾದನ ಸಾಮರ್ಥ್ಯ, ಜ್ಞಾನಶೋಧನೆಯಲ್ಲಿ ಪುನರ್ಜನ್ಮಪ್ರಾಯವಾದ ಅವನ ಸಿದ್ಧಿ, ಪ್ರಯೋಗ ಪರೀಕ್ಷೆಯಲ್ಲಿ ಅಭೂತಪೂರ್ವವಾದ ಚಿತ್ತಾವಧಾನ, ಶಿಕ್ಷಣ ಕ್ಷೇತ್ರದಲ್ಲಿ ಅವನು ತಂದುಕೊಂಡಿರುವ ವ್ಯಾಪಕ ಪ್ರಸಾರ ಸಿದ್ಧಿ, ಮಾರ್ಗ ಸಂಚಾರ ವಾರ್ತಾ ಪ್ರಸಾರಗಳಲ್ಲಿ ಅವನ ವ್ಯಾಪಕ ಪ್ರಗತಿ ಇವೆಲ್ಲ ಸೇರಿ ವಿಜ್ಞಾನ (ಸೈನ್ಸ್) ಮತ್ತು ಪರಿಕರ್ಮತಂತ್ರ (ಟೆಕ್ನಾಲಜಿ)ಗಳನ್ನು ಅವನು ಹೆಚ್ಚು ಹೆಚ್ಚಾಗಿ ಅವಲಂಬಿಸುವುದುಕ್ಕೆ ಸಾಧ್ಯವಾಯಿತು; ಮತ್ತು ಇವೆಲ್ಲ ನವಸ್ವರೂಪದ ಸಮಾಜ ನಿರ್ಮಾಣಕ್ಕೆ ಪೋಷಣೆ ಕೊಟ್ಟುವು. ಯೂರೋಪಿನಲ್ಲಿ ನಿನ್ನೆ ಜನರು ಬಹುತೇಕ ಭೂವ್ಯವಸಾಯದಲ್ಲಿಯೆ ತೊಡಗಿ ಗ್ರಾಮನಿವಾಸಿಗಳಾಗಿದ್ದರು. ಇವೊತ್ತು ಆಧುನಿಕತೆಯ ಸಂಕೇತವೆಂದರೆ—ಜನ ಹಳ್ಳಿಬಾಳನ್ನು ತೊರೆದು ಪಟ್ಟಣಗಳಲ್ಲಿ ನೆಲಸಲು ವಲಸೆ ಹೊರಡುವುದು. ಏಕೆಂದರೆ ನಗರ ಪಟ್ಟಣಗಳಲ್ಲಿ ಯಂತ್ರೋದ್ಯಮ ಮತ್ತು ವಾಣಿಜ್ಯನಿಷ್ಠೆ ಹೆಚ್ಚಿ ಹಳ್ಳಿಗರನ್ನು ಸೆಳೆದು ಪಟ್ಟಣಗಳಲ್ಲಿ ನಿಲ್ಲಿಸುತ್ತಿವೆ. ಹೀಗೆ ಯಂತ್ರೋದ್ಯಮನಿಷ್ಠ ಹಾಗೂ ವಾಣಿಜ್ಯನಿಷ್ಠ ನಗರಗಳೂ ಅವುಗಳ ಸುತ್ತ ಬೆಳೆಯುತ್ತಿರುವ ಉಪನಗರಗಳೂ ಆಧುನಿಕತೆಯನ್ನು ಸಾರುತ್ತಿವೆ. ಸ್ವದೇಶದಲ್ಲಿಯ ಈ ನಗರೋಪನಗರಗಳು ಒಂದರೊಡನೊಂದು ಸಂಪರ್ಕವಿರಿಸಿಕೊಂಡುವು; ಹಾಗೆಯೇ ವಿದೇಶಗಳಲ್ಲಿಯ ಇಂಥ ನಗರೋಪನಗರಗಳೊಂದಿಗೆ ನಿತ್ಯಸಂಪರ್ಕದಲ್ಲಿ ಇರತಕ್ಕವು.

ವೈಜ್ಞಾನಿಕ ಯಂತ್ರತಂತ್ರಪ್ರಯೋಗಪ್ರಧಾನವಾದ ಉದ್ಯಮಗಳೂ ವಾಣಿಜ್ಯವೂ ಪಟ್ಟಣ ನಗರಗಳಲ್ಲಿ ಕೇಂದ್ರೀಕೃತವಾಗಿ ಬೆಳೆದು, ಭಾರೀ ಮೊತ್ತದಲ್ಲೂ ವೈವಿಧ್ಯದಲ್ಲೂ ಸರಕು ಸೇವೆಗಳನ್ನು ಉತ್ಪಾದಿಸಿ ವ್ಯಾಪಕವಾಗಿ ಹರಡಿದುವು. ಬೇರೆ ಬೇರೆ ಕಸಬುಗಳಿಗೆ ಅವಕಾಶಮಾಡಿ ಅವನ್ನು ಬೆಳಸಿ ಹರಡಿದುವು. ವ್ಯಕ್ತಿಶಃ ಜನಕ್ಕೆ ಧನವನ್ನು ಗಳಿಸಿ ಬೆಳಸಿಕೊಟ್ಟುದಲ್ಲದೆ, ಯಂತ್ರೋದ್ಯಮ ವಾಣಿಜ್ಯ ಸಂಸ್ಥೆಗಳಿಗೆ ಹೂಡಬೇಕಾದ ಬಂಡವಾಳವನ್ನೂ ಮೊತ್ತ ಮೊತ್ತವಾಗಿ ಬೆಳಸಿದುವು. ಹೀಗಾಗಿ, ಒಂದೊಂದು ದೇಶದ ಇಡಿಯ ಜನತೆ ಜೀವಿಕೆಯಲ್ಲಿ ದಿನೇ ದಿನೇ ಮೇಲ್ಮಟ್ಟವನ್ನು ಮುಟ್ಟಿ, ನೆಮ್ಮದಿ ಹೆಚ್ಚಿಸಿಕೊಳ್ಳುವ ಅವಕಾಶವನ್ನು ಹೇರಳವಾಗಿ ಕಂಡುಕೊಂಡರು. ಸ್ವಾಮಿ ಭೃತ್ಯ ಸಂಬಂಧದ ಸಮಾಜದಲ್ಲಿ ವಿರಳತೆಯೇ ಸಾಮಾನ್ಯ ನಿಯಮವಾಗಿತ್ತು. ಸಂಪತ್ತನ್ನೂ ಸೌಕರ್ಯವನ್ನೂ ಅನುಭವಿಸಬಲ್ಲವರು ಸ್ವಲ್ಪಮಂದಿ ಅದೃಷ್ಟವಂತರು ಹಾಗೂ ಸಮಾಜ ಸಂದರ್ಭದ ಅನುಕೂಲಗಳನ್ನೂ ಅನುಗ್ರಹಗಳನ್ನೂ

ಪಡೆದು ನೆಮ್ಮದಿಯನ್ನು ಕಂಡ ಸ್ವಲ್ಪ ಮಂದಿ. ಇಂಥವರಿಗೆ ವಿಶ್ರಾಂತಿಕಾಲ ಯಥೇಚ್ಛವಾಗಿತ್ತು. ಆಧುನಿಕ ವಿಜ್ಞಾನ ತಂತ್ರ ಈ ಚಿತ್ರವನ್ನು ಮಾರ್ಪಡಿಸಿಬಿಟ್ಟಿದೆ.

ಈ ಅಭ್ಯುದಯ ಮೂರು ಗಮನಾರ್ಹವಾದ ಫಲಗಳನ್ನು ಕೊಟ್ಟಿತು. **ಮೊದಲನೆಯದು**—ವಿಷಯ ವಿಶೇಷಜ್ಞತೆ (ತಜ್ಜ್ಞತೆ) ಮತ್ತು ಪರಸ್ಪರಾವಲಂಬನ ಇದು ಸ್ಥಳೀಯವಾಗಿ ಮೊದಲಾಗಿ, ಆಮೇಲೆ ವಿಶ್ವವ್ಯಾಪಿಯಾಗುವ ಲಕ್ಷಣವಾಗುತ್ತ ಬಂತು. **ಎರಡನೆಯದು**—ಜನ ಸಂಖ್ಯೆಯಲ್ಲಿ ಏರಿಕೆ. ಇನ್ನು ಸುಮಾರು ಇಪ್ಪತ್ತೈದು ವರ್ಷಗಳಲ್ಲಿ ಮಾನವತೆಯ ಸಂಖ್ಯೆ ದ್ವಿಗುಣವಾಗುವ ನಿರೀಕ್ಷೆಯಿದೆ. **ಮೂರನೆಯದು**—ಆರ್ಥಿಕವಾಗಿ ಪುಷ್ಕಲತೆಯ ಮಟ್ಟವನ್ನು ಮುಟ್ಟಿದ್ದಾದಮೇಲೆ ಕಾರ್ಮಿಕರಿಗೆ ಎಲ್ಲೆಲ್ಲೂ ವಿಶ್ರಾಂತಿಯಲ್ಲಿರಲು ಹೆಚ್ಚು ಹೊತ್ತು ಮಿಗುತ್ತದೆ. ಹೀಗೆ ಜನರು ಸ್ವಾತ್ಮಪ್ರತ್ಯದಿಂದಲೂ ಶ್ರದ್ಧೆಯಿಂದಲೂ ವಿಚಾರಮಾಡಿ, ಸಮಾಜವನ್ನು ಸಂಘಟನೆ ಸಂಯೋಜನೆಗಳ ಪಥದಲ್ಲಿ ಮುನ್ನಡೆಸುವ ಅವಕಾಶ ಪಡೆದುಕೊಂಡಿದ್ದಾರೆ.

ಇದುವರೆಗೆ ಜನಕ್ಕೆ ವಾಡಿಕೆಯಾಗಿದ್ದುದ್ದು ಭೂವ್ಯವಸಾಯದಲ್ಲಿ ಕಾಯಕ. ಈಗ ಗಣಿಗಳಲ್ಲೂ ಕಚೇರಿಗಳಲ್ಲೂ ಯಂತ್ರಾಗಾರಗಳಲ್ಲೂ ರೈಲು ಸಂಸ್ಥೆಗಳಲ್ಲೂ ನೆಲ-ಪಾರಿ ಕಾಮಗಾರಿಗಳಲ್ಲೂ ಅವರ ಕಾಯಕಕ್ಕೆ ಹೆಚ್ಚು ಅವಕಾಶ ದೊರೆತಿರುವುದರಿಂದ, ಈ ಮಾರ್ಪಾಟು ಜನದ ಅಭಿಪ್ರಾಯ ಆಚರಣೆಗಳಲ್ಲೂ ಮಾರ್ಪಾಟನ್ನು ತಂದಿದೆ.ಆದೇ ಹೊತ್ತಿನಲ್ಲಿ ಈ ಪರಿವರ್ತನ ಸರಣಿ ಸಾಮಾಜಿಕ ವಿಚಾರಗಳಲ್ಲಿ ಆಲೋಚನೆ ಮಾಡುವ ಮತ್ತು ಮಾರ್ಗದರ್ಶನ ನೀಡುವ ಹೊಣೆಯನ್ನು ಬೇಸಾಯಗಾರರಿಂದ ತಪ್ಪಿಸಿ ಪೇಟೆಯ ವರ್ತಕವ್ಯಾಪಾರಿ ವರ್ಗ, ಬ್ಯಾಂಕಿನ (ಧನಕೋಠಿ) ವಣಿಜವರ್ಗ, ವಾಸ್ತು ಶಿಲ್ಪಾದಿ ಶಾಸ್ತ್ರಜ್ಞವರ್ಗ ಮತ್ತು ಇತರ ವೃತ್ತಿಬಾಂಧವರ ಹೇಗಲಿಗೇರಿಸಿತು. ವಸ್ತುಗಳ ಉತ್ಪಾದನೆಯ ಕೇಂದ್ರವು ಭೂವ್ಯವಸಾಯ ಕ್ಷೇತ್ರದಿಂದ ಯಂತ್ರಾಗಾರ ವಾಣಿಜ್ಯ ಕ್ಷೇತ್ರಗಳಿಗೆ ವರ್ಗಪಟ್ಟಿತು. ಮನುಷ್ಯ ಸಮಾಜವು ಭಾರೀ ವರ್ತಕ ಮಂಡಲಿಯ ಅಧಿಕಾರಕ್ಕೆ ಒಳಪಟ್ಟಿತು. ಈ ಪರಿವರ್ತನ ಕಾಲದಲ್ಲಿ ಪಟ್ಟಣದ ಶ್ರೀಮಂತ ವರ್ಗಕ್ಕೂ ಗ್ರಾಮದ ಬೇಸಾಯ ವರ್ಗಕ್ಕೂ ನಡುವೆ ಅಧಿಕ ಸಂಖ್ಯಾತ ಮಧ್ಯಮ ತರಗತಿಯೊಂದು ಹುಟ್ಟಿಕೊಂಡಿತ್ತು; ಮತ್ತು ಭಾರೀ ವಾಣಿಜ್ಯ ಮಂಡಲಿಯ ಅಧಿಕಾರ ದುರ್ಗಕ್ಕೆ ಸುಶಿಕ್ಷಿತ ಸ್ವಾತ್ಮಪ್ರತ್ಯಯವುಳ್ಳ ಕಾರ್ಮಿಕ ವರ್ಗವೊಂದು ಸವಾಲಾಗಿ ಅಸ್ತಿತ್ವಕ್ಕೆ ಬಂದಿತು.

ಆರ್ಥಿಕ ವ್ಯವಸ್ಥೆಯಲ್ಲಿ ಆದ ಈ ಪರಿವರ್ತನೆಗಳಿಗೆ ಸಮಾಂತರದಲ್ಲಿ ರಾಜಕೀಯವಾಗಿ ರಾಷ್ಟ್ರಪ್ರಭುತ್ವಗಳೂ ಭಾರೀ ವಾಣಿಜ್ಯೋದ್ಯಮ ಚಕ್ರಾಧಿಪತ್ಯಗಳೂ ಬೆಳೆದುವು, ಜನ ಜೀವನದಲ್ಲಿ ಚಟುವಟಿಕೆಗಳು ಹೆಚ್ಚಿ ಸಾಮಾಜಿಕ ಸೇವೆಗಳು, ರಕ್ಷಣಾ ವ್ಯವಸ್ಥೆ

ಗಳು, ಬಗೆಬಗೆಯ ಕೆರತೆರಿಗೆಗಳ ಹೇರಿಕೆಗಳು-ಮೊದಲಾದ ಕಾರ್ಯಕಲಾಪಗಳು ಹಾಸುಹೊಕ್ಕಾಗಿ ಬೆಳೆದು ಹರಡಿಕೊಂಡುವು. ಇವುಗಳ ಫಲವಾಗಿ ಜನಾಭಿಪ್ರಾಯ ಜನಾಚರಣೆಗಳನ್ನೂ ಜನಸಂಸ್ಥೆಗಳನ್ನೂ ದಿನೇದಿನೇ ಮಾರ್ಪಡಿಸಿ, “ಪಾಶ್ಚಾತ್ಯ ನಾಗರಿಕತೆ” ಎಂಬ ನಾಮಧೇಯ ಪ್ರತಿಷ್ಠೆಯನ್ನು ಗಳಿಸಿದ ನೂತನ ಸಮಾಜವು ರೂಪಗೊಂಡಿತು.

## ಪಾಶ್ಚಾತ್ಯ ನಾಗರಿಕತೆ ವಿಶ್ವವ್ಯಾಪಿಯಾಗಿ ಹರಡುತ್ತಿದೆ

ಯೂರೋಪಿನ ಯಂತ್ರೋದ್ಯಮ ಸಮಾಜ, ನಗರ ಪ್ರದೇಶ ಸಮಾಜ ಸ್ವರಾಷ್ಟ್ರ ಪ್ರೇಮನಿಷ್ಠ ಸಮಾಜ, ವಾಣಿಜ್ಯ ಪ್ರಾಧಾನ್ಯವುಳ್ಳ ಸಮಾಜ-ಹೀಗೆ ಜೀವಿಕಾವಸ್ತುಗಳ ಉತ್ಪಾದನೆ, ಧನೋತ್ಪಾದನೆ, ಪ್ರಜಾ ವಂಶೋತ್ಪಾದನೆಗಳಲ್ಲಿ ಸಮಾಜವು ನಾನಾ ಮುಖವಾಗಿ, ಸ್ತರಸ್ತರವಾಗಿ ಅಭ್ಯುದಯವನ್ನು ಕಂಡು, ಇದುವರೆಗೆ ಭೂಖಂಡ ಖಂಡಾಂತರಗಳಲ್ಲಿ, ರಾಷ್ಟ್ರರಾಷ್ಟ್ರಗಳ ನಡುವೆ, ಇದ್ದ ನಂಟುಗಳನ್ನು ತಲಕೆಳಗು ಮಾಡಿತು. 1492 ರಲ್ಲಿ, —ಕೊಲಂಬಸ್ ದಕ್ಷಿಣೋತ್ತರ ಅಮೆರಿಕಾ ಖಂಡಗಳನ್ನು ತಲಪುವ ಜಲಮಾರ್ಗ-ಶೋಧನೆ ಮಾಡಿದ ಕಾಲದ ವರೆಗೆ,—ಯೂರೇಷಿಯಾ ಆಫ್ರಿಕಾ ಖಂಡಗಳ ಭೂಪ್ರದೇಶಗಳಲ್ಲಿ ಏಷ್ಯಾಖಂಡದ ಜನತೆ ವ್ಯಾಪಾರ ವಲಸೆ ವಿಜಯಗಳಿಗೋಸ್ಕರ ಪ್ರಮುಖಪಾತ್ರ ವಹಿಸಿತು.

ಭೂವ್ಯವಸಾಯ, ವಾಣಿಜ್ಯ ಹಾಗು ಯಂತ್ರೋದ್ಯಮಗಳಲ್ಲಿ ಆದ ಕ್ರಾಂತಿಗಳೂ ಯೂರೋಪಿನ ಸಂಸ್ಕೃತಿ ಪ್ರಸಾರದಲ್ಲಿ ಆದ ಅಭ್ಯುದಯವೂ ಅದರ ಪಕ್ಕದಲ್ಲೇ ಏಷ್ಯಾ, ಆಫ್ರಿಕಾ ಖಂಡಗಳ ಸಂಸ್ಕೃತಿ ಜಡವಾಗಿಯೋ ಕ್ಷೀಣಗತಿ ಸೂಚಿಯಾಗಿಯೋ ಇದ್ದ ಸಂದರ್ಭವೂ ಯೂರೋಪಿನ ಜನದ ಸಾಹಸ ಪ್ರೀತಿಗೆ ಪ್ರೋತ್ಸಾಹ ಕೊಟ್ಟುವು. ಶೋಧನೆಗಳೂ ವ್ಯಾಪಾರ ವಾಣಿಜ್ಯಗಳ ಚಟುವಟಿಕೆಗಳೂ ಸ್ಥಿರ ರೂಪವನ್ನು ತಳೆದುವು. ಅಮೆರಿಕಾ, ಏಷ್ಯಾ ಮತ್ತು ಆಫ್ರಿಕಾ ಖಂಡಗಳಲ್ಲಿ, 1500 ನೆಯ ವರ್ಷಾನಂತರ, ಯೂರೋಪಿನ ದಾಳಿಗೆಲುವುಗಳು, ಕೊಳ್ಳೆಸುಲಿಗೆಗಳು, ಆಕ್ರಮಣ ವಸಾಹತು ಸ್ಥಾಪನೆಗಳು ಸಾಧ್ಯವಾಗಿ, ಐರೋಪ್ಯ ಸಮಾಜಕ್ಕೆ ಪುಷ್ಟಿತರುವ ಲಾಭ ಸಂಪಾದನೆಗೆ ಅವಕಾಶವಾಯಿತು. ಯೂರೋಪು ಏಷ್ಯಾ ಖಂಡಗಳ ನಡುವೆ ಕ್ರೂಸೇಡುಗಳು (ಧರ್ಮಯುದ್ಧಗಳು) ನಡೆದು, ವ್ಯಾಪಾರಾನುಕೂಲಗಳನ್ನು ಆಗಮಾಡಿಸಿದವು. ಇದರಿಂದ ಏಷ್ಯಾ ಖಂಡದ ಗಡಿಯೊಳಕ್ಕೆ ಮೊತ್ತಮೊದಲನೆಯ ಸಾರಿ ಆಧುನಿಕ ಯೂರೋಪು ಖಂಡದ ಪ್ರವೇಶವಾಗುವಂತೆ ಆಯಿತು. ಏಷ್ಯಾದ ದೂರ ಪ್ರದೇಶಗಳಿಗಾದರೋ ಈ ವ್ಯಾಪಾರ ಸಂಪರ್ಕ ತೊಟ್ಟುಹನಿಗಳ ರೂಪದಲ್ಲಿ ಮೊದಲಾಗಿ, ಆಫ್ರಿಕಾ ಖಂಡದ ಸುತ್ತಮುತ್ತ ಸಮುದ್ರ ಮಾರ್ಗಗಳನ್ನು ಕಂಡುಕೊಂಡದ್ದಾದ ಮೇಲೆ ಪ್ರವಾಹ ರೂಪಕ್ಕೇರಿತು.

ಹೀಗೆ, ಯೂರೋಪಿನ ವ್ಯಾಪಾರ ವಾಣಿಜ್ಯಗಳ ಯಾತಾಯಾತದ ಮೊದಲ ಘಟ್ಟ ಮುಗಿದಮೇಲೆ, ಸಮುದ್ರ ತೀರಗಳಲ್ಲಿ ರೇವು ಪಟ್ಟಣಗಳನ್ನು ಅಲ್ಲಲ್ಲಿ ಸ್ಥಾಪಿಸಿ ವ್ಯಾಪಾರ ನಿಲ್ದಾಣಗನಳ್ನು ಕಟ್ಟಿಕೊಳ್ಳಲಾಯಿತು. ಸ್ಥಳೀಯ ಜನರಿಂದ ಐರೋಪ್ಯರ ವ್ಯಾಪಾರಕ್ಕೆ ರಿಯಾಯಿತಿಗಳನ್ನು ಗಿಟ್ಟಿಸಿಕೊಂಡು, ಸ್ಥಳೀಯ ವ್ಯಾಪಾರಿಗಳಿಂದ ಸಹಕಾರವನ್ನು ಗಳಿಸಿ, ಬರುಬರುತ್ತ ಅದೇ ವ್ಯಾಪಾರಿಗಳನ್ನು ಮೂಲೆಗೊತ್ತರಿಸುವುದಾಯಿತು. ಸ್ವಲ್ಪ ಕಾಲಾನಂತರ ವ್ಯಾಪಾರದಲ್ಲಿ ಪೈಪೋಟಿ ಹೆಚ್ಚಿ ತಿಕ್ಕಾಟಗಳಿಗೆ ಅವಕಾಶವಾಯಿತು. ಬಳಿಕ ಏಷ್ಯಾ ದೇಶೀಯರೂ ಯೂರೋಪು ದೇಶೀಯರೂ ರಣರಂಗಕ್ಕಿಳಿದರು. ಈ ಘರ್ಷಣೆಗಳು ರಾಯಭಾರಿಗಳ ಮಧ್ಯಪ್ರವೇಶವನ್ನೂ ಸೇನಾಧಿಕಾರಿಗಳ ಮಧ್ಯಪ್ರವೇಶವನ್ನೂ ಬರಮಾಡಿದುವು. ಈ ಮಧ್ಯಪ್ರವೇಶಗಳು ಶಸ್ತ್ರಾಸ್ತ್ರ ಪ್ರಯೋಗವನ್ನು ಅನಿವಾರ್ಯಮಾಡಿದುವು. ಹೊಡೆದಾಟಗಳೂ ಸಣ್ಣ ಸಣ್ಣ ಯುದ್ಧಗಳೂ ನಡೆಯುತ್ತಿರುವಾಗ, ಆಗ್ಗೆ ಇನ್ನೂ ಚಟುವಟಿಕೆಯಲ್ಲಿದ್ದ ಕಡಲ ದರೋಡೆಗಾರರು ಪ್ರಕ್ಷುಭಿತ ವಾತಾವರಣದಿಂದ ಪ್ರಯೋಜನ ಪಡೆದುಕೊಂಡರು. ಏಷ್ಯದಲ್ಲಿ ಐರೋಪ್ಯ ವ್ಯಾಪಾರಿಗಳು ಸ್ಥಾಪಿಸಿಕೊಂಡ ಪ್ರತಿಯೊಂದು ವ್ಯಾಪಾರ ಕೇಂದ್ರವೂ ಸೈನ್ಯಬಲ ಸ್ಥಾವರಗಳಾಗಿ, ಕ್ರಮೇಣ ಏಷ್ಯದ ನೆಲದಮೇಲೆಲ್ಲ ಯೂರೋಪಿನ ಸೈನ್ಯಶಕ್ತಿಯ ನಡುಗಡ್ಡೆಗಳೂ ಧನಪ್ರಭಾವ ಕೇಂದ್ರಗಳೂ ರಾಜಕೀಯಾಧಿಕಾರ ವಲಯಗಳೂ ಗಾಯದ ಮಚ್ಚೆಗಳಾಗಿ ಗೋಚರಿಸಿದುವು. ಹಿಂದೆ, ಅನೇಕ ಶತಮಾನಗಳ ಅವಧಿಯಲ್ಲಿ, ಏಷ್ಯಾಖಂಡದ ವಲಸೆಗಾರರೂ ಮುತ್ತಿಗೆಗಾರರೂ ಯೂರೋಪಿಗೆ ನುಗ್ಗಿ ಬಂದಿದ್ದರು. ಈಗ ಮುಯ್ಯಿಗೆ ಮುಯ್ಯಿ ತೀರಿಸಲೆಂಬಂತೆ ಐರೋಪ್ಯರು ಏಷ್ಯಾ ಖಂಡಕ್ಕೆ ನುಗ್ಗಿ ಹೋದರು.

ಏಷ್ಯವು ಜನಭರಿತವಾಗಿತ್ತು, ಜನಜೀವನತುಂಬ ವ್ಯವಸ್ಥೆಯಲ್ಲಿ ನಡೆಯುತ್ತಿತ್ತು. ಆದದ್ದರಿಂದ ಯೂರೋಪಿನಿಂದ ಬಂದ ವ್ಯಾಪಾರಿಗಳೂ,–ಮುಂದೆ ನೆಲಸಿ ವಿಜಯಿಗಳಾಗತಕ್ಕವರೂ, – ಹೋದ ಹೋದೆಡೆಗಳಲ್ಲಿ ದೇಶೀಯರನ್ನು ಗುಲಾಮರನ್ನಾಗಿ ಮಾಡಿಕೊಳ್ಳಲಾರದೆ ಹೋದರು; ಇಲ್ಲವೆ ಜನವಿನಾಶ ಕಾರ್ಯವನ್ನು ಮಾಡಲಾರದೆ ಹೋದರು. ಏಷ್ಯಾ ದೇಶೀಯ ಸರಕಾರಗಳನ್ನು ಒಪ್ಪಿಕೊಂಡು, ಅವರೊಡನೆ ಗೌರವೋಚಿತವಾಗಿ ವ್ಯವಹರಿಸಿ ತಮ್ಮ ಕಸಬನ್ನು ನಡಸಿಕೊಳ್ಳಬೇಕಾಗಿತ್ತು. ಆಫ್ರಿಕದಲ್ಲೂ ಆಸ್ಟ್ರೇಲೇಷ್ಯಾದಲ್ಲೂ ದೇಶೀಯರು ವಿಜ್ಞಾನ ತಂತ್ರಜ್ಞಾನಗಳಲ್ಲೂ ಸೈನಿಕ ಶಕ್ತಿಯಲ್ಲೂ ಐರೋಪ್ಯರಿಗಿಂತ ಹಿಂದುಳಿದಿದ್ದದ್ದರಿಂದ ಅವರಿಗೆ ಸಮಸ್ಕಂಧರಾಗಿ ನಿಲ್ಲಲಾರದೆಹೋದರು. ಈ ದೌರ್ಬಲ್ಯವನ್ನು ಕಂಡುಕೊಂಡ ಐರೋಪ್ಯಜನ ತಮ್ಮ 'ಶೋಧನೆ'ಗೆ ಗೋಚರಿಸಿದ ಆ ಹೊಸ ಪ್ರದೇಶಗಳನ್ನು ಕೊಳ್ಳೆಹೊಡೆದರು, ಹಾಳುಗೆಡವಿದರು; ಅಲ್ಲಿಯ ದೇಶೀಯರನ್ನು ತೊತ್ತುಗಳಾಗಿ ಬಳಸಿಕೊಂಡು ಸುಲಿಗೆಗೆ ಗುರಿಮಾಡಿದರು.

ದಕ್ಷಿಣೋತ್ತರ ಅಮೆರಿಕಾ ಖಂಡಗಳ 'ಶೋಧನೆ' ಮತ್ತು ವಿಜಯ ಆಕ್ರಮಣ ಗಳು; ಆ ಪ್ರದೇಶಗಳನ್ನು ಐರೋಪ್ಯ ವಸಾಹತು (ಕಾಲೊನಿ) ಗಳಾಗಿ ಪರಿವರ್ತನೆ; ಆಮೇಲೆ ಕಾಲಕ್ರಮದಲ್ಲಿ ಅಮೆರಿಕಗಳು ಸ್ವತಂತ್ರ ರಾಷ್ಟ್ರಗಳಾಗಿ ಉದಯ—ಇವು ಯೂರೋಪಿನ ಜನಕ್ಕೆ 1914 ರ ಮತ್ತು 1939 ರ ಯುದ್ಧಗಳ ಕಾಲದವರೆಗೂ ವಲಸೆ ಹೋಗಿ ನೆಲಸುವ ಅವಕಾಶವನ್ನು ಉಳಿಸಿಕೊಟ್ಟಿದ್ದವು.

1942ರ ನಂತರ ಐರೋಪ್ಯ ಸಾಹಸಿ ದಕ್ಷಿಣೋತ್ತರ ಅಮೆರಿಕಾಗಳಲ್ಲಿ ಅನುಸರಿ ಸಿದ ಆಕ್ರಮಣ ನೀತಿಯು ಅವರು ಏಷ್ಯದಲ್ಲಿ ಅನುಸರಿಸಿದ ನೀತಿಯಿಂದ ಭಿನ್ನವಾಗಿತ್ತು. ಏಷ್ಯಾ ಖಂಡದ ನಾನಾದೇಶಗಳಲ್ಲಿ ಸ್ವಲ್ಪ ಜನಾಧಿಪತ್ಯಗಳ ನೇತೃತ್ವದಲ್ಲಿ ಸುಪ್ರತಿಷ್ಠಿತ ವಾಗಿದ್ದ ನಾಗರಿಕತೆ ಸಂಸ್ಕೃತಿಗಳ ಪರಿಚಯ ಆಗಂತುಕ ಐರೋಪ್ಯರಿಗೆ ಆಯಿತು. ಆ ಸಂಸ್ಕೃತರ ಮುಂದೆ ಆಗಂತುಕರು ದರ್ಪ ತೋರಿಸದೆ ಸಮಾನ ಸ್ಕಂಧರಂತೆ ನಿಂತು ಅವರೊಡನೆ ನಯದಿಂದ ವ್ಯವಹರಿಸಬೇಕಾಗಿತ್ತು, ಆದರೆ ದಕ್ಷಿಣ ಮತ್ತು ಮಧ್ಯ ಅಮೆರಿಕಗಳ ಸ್ಥಳೀಯ ಪ್ರಜೆಗಳನ್ನು ಐರೋಪ್ಯ ಆಗಂತುಕರು ಮೋಸ, ಲಂಚ ಹಾಗೂ ಸಣ್ಣ ಪ್ರಮಾಣದ ಸೈನ್ಯಬಲ ಪ್ರಯೋಗದಿಂದ ಸೋಲಿಸಿದರು. ಲಕ್ಷಾಂತರ ರೆಡ್ ಇಂಡಿಯನ್ ಜನರನ್ನು ತಮಗೆ ಗುಲಾಮರಾಗಿರುವಂತೆ ಬಲಾತ್ಕರಿಸಿದರು; ಜುಲುಮಿನಿಂದ ಜೀತಮಾಡಿಸಿಕೊಂಡರು; ಮತ್ತು ಸಾರ್ವಜನಿಕ ವಿಚಾರಗಳಲ್ಲಿ ನಿರ್ದೇಶನ ಪಾತ್ರವನ್ನೂ ಹೊಣೆಯನ್ನೂ ದೇಶೀಯರಿಗೆ ತಪ್ಪಿಸಿ, ತಮ್ಮ ಚಿತ್ತಕ್ಕವರನ್ನು ವಿಧೇಯರಾಗಿ ಮಾಡಿಕೊಂಡರು.

ಮೆಕ್ಸಿಕೋ ರಾಜ್ಯದ ಗಡಿಯ ಮೇಲ್ಭಾಗದಲ್ಲಿ ಉತ್ತರ ಅಮೆರಿಕವೂ—ಹೀಗೆಯೇ 350 ವರ್ಷಗಳ ಅವಧಿಯಲ್ಲಿ—ಮುತ್ತಿಗೆಗೆ ಗುರಿಯಾಗಿ ಸೋಲಿಸಲ್ಪಟ್ಟಿತು. ಅಲ್ಲಿಯ ಮೂಲ ನಿವಾಸಿಗಳಾದ ರೆಡ್ ಇಂಡಿಯನ್ ಜನರನ್ನು ಮೋಸಪಡಿಸಿ, ಹೊಲಬುಗೆಡಿಸಿ, ಅವರು ಬೇಟೆಯಾಡುತ್ತಿದ್ದ ಪ್ರದೇಶಗಳಿಂದ ಓಡಿಸಲಾಯಿತು. ಅವರಿಗಿಂತ ಐರೋಪ್ಯ ರಲ್ಲಿ ಹೆಚ್ಚು ಸಂಖ್ಯಾಬಲವೂ ಶಸ್ತ್ರಬಲವೂ ಇದ್ದದ್ದೂ ಹೆಚ್ಚು ಸಂಘಟಿತರಾಗಿದ್ದದ್ದೂ ಆಗಂತುಕ ಐರೋಪ್ಯರ ಪ್ರಭಾವ ವಿಸ್ತರಣಕ್ಕೆ ಸುಲಭವಾಗಿ ಅವಕಾಶ ಕೊಡುವ ಕಾರ ಣವಾಯಿತು. ಆಗಂತುಕರಿಗೆ ಎದುರುಬಿದ್ದ ದೇಶೀಯರು ಕೊಲೆಗೀಡಾದರು. ರೆಡ್ ಇಂಡಿಯನರು ಗುಲಾಮಗಿರಿಯನ್ನು ಜುಲುಮೆಯ ಜೀತವನ್ನೂ ಒಪ್ಪದೆ ತಿರಸ್ಕರಿಸಿದರು. ಅವರು ವಲಸೆ ಬಂದು ನೆಲಸಿದ ಬಿಳಿಯರಿಗಿಂತ ಅಲ್ಪಸಂಖ್ಯಾತರು; ಅನೇಕ ಸ್ವತಂತ್ರ ಬಣಗಳಾಗಿ ಬದುಕು ಸಾಗಿಸುತ್ತಿದ್ದವರು. ಇಂಥವರನ್ನು ಐರೋಪ್ಯ ವಲಸೆಗಾರರು ಫಲ ವತ್ತಾದ ಪ್ರದೇಶಗಳಿಂದ ಬೆಂಗಾಡು ಪ್ರದೇಶಗಳಿಗೆ ಓಡಿಸಿ, "ಐರೋಪ್ಯ ಸಂಸ್ಕೃತಿ ಯನ್ನು ಒಪ್ಪಿಕೊಳ್ಳಿ, ಇಲ್ಲವೆ ನಿಮಗೆ ಗೊತ್ತಾಗಿ ಮೀಸಲಾದ ಸ್ಥಳಗಳಲ್ಲಿ ಅರುಗು ಬಾಳನ್ನು ಬದುಕಿರಿ" ಎಂದು ಆದೇಶ ಹೊರಡಿಸಿ, ಸೈನ್ಯದ ಕಾವಲಲ್ಲಿ ಅವರನ್ನಿರಿಸಿ ಕೊಂಡರು.

ಐರೋಪ್ಯರು ಉತ್ತರ ಅಮೆರಿಕವನ್ನು "ಕಂಡು ಹಿಡಿದಾಗ" ಅಲ್ಲಿ ಪ್ರಾಯಶಃ ಹತ್ತು ಲಕ್ಷ ರೆಡ್ ಇಂಡಿಯನರು ಈಗಣ ಮೆಕ್ಸಿಕೋ ದೇಶದ ಉತ್ತರ ಗಡಿ ಪ್ರದೇಶದಲ್ಲಿ ವಾಸಿಸುತ್ತಿದ್ದರು. ವರ್ಷಗಳು ಉರುಳಿದಂತೆ ವಲಸೆಗಾರರ ಸಂತಾನ ನೈಸರ್ಗಿಕವಾಗಿ ಹೆಚ್ಚಿತು; ದೇಶೀಯರ ಸಂಖ್ಯೆಗಿಂತ ಕ್ರಮೇಣ ಅಧಿಕಾಧಿಕವಾಗಿ ಹೆಚ್ಚಿತು. ವಿಜ್ಞಾನ ತಂತ್ರಜ್ಞಾನಗಳಲ್ಲಿ ಐರೋಪ್ಯರದು ಮೇಲ್ಗೈಯಾಗಿದ್ದದ್ದರಿಂದ, ವಸ್ತೂತ್ಪಾದನೆಯ ಸಾಮರ್ಥ್ಯ ಹಾಗೂ ಸೈನ್ಯದ ಅಧಿಕ ಬಲವೆರಡೂ ಸೇರಿ, ಅಳಿದುಳಿದ ದೇಶೀಯರನ್ನು ಹೀನಸ್ಥಿತಿಗಿಳಿಸಿದುವು.

ಕ್ರಿ. ಶ. 1500 ರಿಂದ 1900 ರ ವರೆಗಿನ ನಾಲ್ಕು ಶತಮಾನಗಳ ಅವಧಿಯಲ್ಲಿ ವ್ಯಾಪಾರ; ವಾಣಿಜ್ಯ, ರಾಜಕೀಯಾಧಿಕಾರ, ಸೈನಿಕಬಲ – ಎಲ್ಲವೂ ಭೂಗ್ರಹ ವ್ಯಾಪಿಯಾಗಿ, ನಡುಪಟ್ಟಿಯಂತೆ ಎಲ್ಲೆಲ್ಲೂ ಬಿಗಿಪಟ್ಟಾಯಿತು. ಕೆಲವು ವಸಾಹತುಗಳಲ್ಲಿ ದಂಗೆಯ ಹಗರಣಗಳು ನಡೆದುವು. ಮೇಲೇರಲು ಪೈಪೋಟಿ ನಡಸಿದ ಸ್ಪ್ಯಾನಿಷ್, ಪೋರ್ತುಗೀಸ್, ಡಚ್, ಫ್ರೆಂಚ್, ಬ್ರಿಟಿಷ್ ಮತ್ತು ಇತರ ಐರೋಪ್ಯ ವಸಾಹತುಗಾರರ ನಡುವೆ ಪರಸ್ಪರ ಅಸೂಯೆಯೂ ಹುರುಡೂ ಹುಟ್ಟಿಕೊಂಡು ಅವರವರಲ್ಲೇ ಕದನಗಳಾದುವು. ಇವರೆಲ್ಲರ ಸಂಕಲ್ಪಗಳೂ ಉದ್ದೇಶಗಳೂ ಭಿನ್ನ ಭಿನ್ನವಾಗಿದ್ದರೂ ಭೂಗ್ರಹವು ಐರೋಪ್ಯ ಪ್ರದೇಶ ಮಾತ್ರವೆಂಬ ಅಭಿಪ್ರಾಯಕ್ಕೆ ಸರ್ವಸಮ್ಮತಿ ಇತ್ತು. ವಸಾಹತು ಜನತೆ ಐರೋಪ್ಯ ಸ್ವಾಮಿಗಳಿಗೆ ಅಧೀನ ಪ್ರಜೆಗಳು, ಭೃತ್ಯರು, ಇಲ್ಲವೆ ಗುಲಾಮರು. ಐರೋಪ್ಯರು ದಾಪುಹೆಜ್ಜೆ ಹಾಕುತ್ತ ಇಳೆಯಲ್ಲೆಲ್ಲ ನಡೆದಾಡಿದರು; ಅವರು ಹೋದೆಡೆಯಲ್ಲೆಲ್ಲ ಮೇಲ್ವಾಯ್ದು, ತಮ್ಮ ಆಳಿಕೆಯನ್ನು ಹೇರಿ, ಅಲ್ಲಲ್ಲಿಯ ಜನ ಸಮುದಾಯಗಳನ್ನು ಅಂಕೆಯಲ್ಲಿರಿಸಿಕೊಂಡರು. ಹೋದ ಹೋದ ಕಡೆಗಳಲ್ಲಿ ತಮ್ಮ ಯಂತ್ರೋದ್ಯಮ ನಿಷ್ಠವೂ ಸಂಕುಚಿತ ರಾಷ್ಟ್ರೀಯತಾವಾದಿಯೂ ಸೈನ್ಯಬಲ ಸಂಪನ್ನವೂ ಆದ ನವೀನ ಜೀವನ ಸಂಸ್ಕೃತಿ ನಾಗರಿಕತೆಗಳ ವಿಧಾನವನ್ನು ಮೂಲ ನಿವಾಸಿಗಳಮೇಲೆ ಒತ್ತಾಯದಿಂದ ಹೇರಿದರು.

ಸ್ಥಳೀಯ ನಿವಾಸಿಗಳು ಯಾವಾಗ ಐರೋಪ್ಯ ಆಗಂತುಕರ ಸಾಮಾಜಿಕ ಜೀವನ ವಿಧಾನಗಳನ್ನು ಇಷ್ಟದಿಂದ ಅನುಸರಿಸಬಲ್ಲವರಾಗಿ, ತಮ್ಮ ಜೀವನದ ಮಟ್ಟವನ್ನು ಐರೋಪ್ಯರ ಸಂಪತ್ತಿಗೂ ವಸ್ತುಗಳ ಉತ್ಪಾದನ ದಕ್ಷತೆಗೂ ಜನ ಸಂಖ್ಯಾ ಸಮಾನತೆಗೂ ಸೈನ್ಯ ಸಮಾನತೆಗೂ ಏರಿಸಬಲ್ಲವರಾದರೋ ಆಗ ಅವರು ಐರೋಪ್ಯ ಜನಕ್ಕೆ ಸಮಾನ ಸ್ಕಂಧರೆನಿಸಿ, ಅಧಿಕಾರ ಲಾಭಗಳಲ್ಲೂ ಕೊಳುಗುಳ ಕೊಳ್ಳಿಗಳಲ್ಲೂ ಪಾಲಿಗೆ ಪಾತ್ರರಾದರು. ಯಾವ ಪ್ರದೇಶಗಳು ಹೀಗೆ ಐರೋಪ್ಯ ಗುಣಾನುಕರಣ ಮಾಡಲಾರದೆಹೋದುವೋ ಅಲ್ಲಿ ಜನ ಆರ್ಥಿಕ ದಾಸ್ಯಕ್ಕೆ ಗುರಿಯಾದರು. ಐರೋಪ್ಯ ಒಡೆಯರ ಬೆಸನನ್ನು ಬಾಗಿನಡಸುವ ಒತ್ತಾಯಕ್ಕೆ ಸಿಕ್ಕಿದರು. ಹೊಂದಿಕೊಂಡು

ಬಾಳದೆ ಎದುರು ಬಿದ್ದವರನ್ನು ಐರೋಪ್ಯಸೈನ್ಯಬಲಪ್ರಯೋಗದ ಬೆದರಿಕೆಯನ್ನಿಟ್ಟು ಮಣಿಯಿಸಲಾಯಿತು.

ಕ್ರಿ.ಶ. 1400 ರ ವರ್ಷದ ಜಗತ್ತಿನ ಮುಖ್ಯಗಮನ ಏಷ್ಯಾಖಂಡದ ಕಡೆ ತಿರುಗಿತ್ತು. ಆಗ್ಗೆ ಆಫ್ರಿಕಾಖಂಡದ ಬಹುಪ್ರದೇಶವೂ ದಕ್ಷಿಣೋತ್ತರ ಅಮೆರಿಕಾಖಂಡಗಳೂ ಇನ್ನೂ ಐರೋಪ್ಯ ಜನದ ಶೋಧನೆಗೆ ಸಿಕ್ಕದೆ ಅಜ್ಞಾತ ಭೂಮಿಗಳಾಗಿದ್ದುವು. ಆದರೆ 1900 ನೆಯ ಸಂವತ್ಸರದ ಪ್ರಪಂಚದ ಮುಖ್ಯ ಗಮನ ಹುರುಡಿಂದ ಯೂರೋಪು ಖಂಡದ ಕಡೆ ತಿರುಗಿತ್ತು. ಆಗ ಅಮೆರಿಕಾ ಸಂಯುಕ್ತ ಸಂಸ್ಥಾನಗಳು ವಸ್ತುಗಳ ಉತ್ಪಾದನದ ಉದ್ಯಮದಲ್ಲಿ ಯೂರೋಪಿನ ರಾಷ್ಟ್ರಗಳೊಡನೆ ತೀವ್ರ ಸ್ಪರ್ಧೆ ನಡಸಲು ಸಜ್ಜಾಗುತ್ತಿದ್ದುವು. ಹಾಗೆಯೇ ಸಂಪತ್ತಿನ ಗಳಿಕೆ ಯಲ್ಲೂ ಜನ ಸಂತಾನದ ಅಭಿವೃದ್ಧಿಯಲ್ಲೂ ಯೂರೋಪು ದೇಶಗಳದೇನು ಹೆಚ್ಚುಗಾರಿಕೆ ಯೆಂದು ಅಮೆರಿಕದ ಜನತೆ ಪ್ರಚಂಡವಾಗಿ ಉದ್ಯಮಿಸಿತು; ಮತ್ತು ಜಪಾನಿನೊಡನೆ ಸಹವರ್ತನೆಯನ್ನು ಸಾಧಿಸಿ ಅಮೆರಿಕವು ತನ್ನ ಉದ್ಯಮ ಶೀಲತೆಯನ್ನು ವಿಶ್ವ ಪ್ರಪಂಚದ ಅಧಿಕಾರ ಪ್ರವಾಹಗಳ ಸುಳಿಯೊಳಕ್ಕೆ ಕಸುವಿನಿಂದ ಇಳಿಸಿತು. ಈ ಚಟುವಟಿಕೆಯ ಪರಿಣಾಮ ಫಲ ವ್ಯಾಪಕವಾಯಿತು; ಇವನ್ನು ಕಂಡ ಜಗತ್ತಿನ ಜನತೆಗೆ ಬೆರಗಾಯಿತು. ಯಂತ್ರೋದ್ಯಮ ಸಂಧಾನವು ಪ್ರಪಂಚದ ಎಲ್ಲ ಪ್ರದೇಶಗಳಲ್ಲೂ ಯಂತ್ರ ವಸ್ತುಗಳ ಉತ್ಪಾದನೆಯನ್ನು ಹೆಚ್ಚಿಸಿದ್ದಲ್ಲದೆ ನವೀನ ವಸ್ತೂತ್ಪಾದಕ ತಂತ್ರದ (ಟೆಕ್ನಾಲಜಿ) ಸಹಕಾರವೂ ಸೇರಿ, ಭೂಗ್ರಹದ ಐಕ್ಯಕ್ಕೆ ದಾರಿಯಾಯಿತು. ಜಗದ್ರಾಜ್ಯಗಳು ಬಹು ಮಟ್ಟಿಗೆ ಪರಸ್ಪರಾವಲಂಬನದ ಮಾರ್ಗಕ್ಕೆ ತಿರುಗಿದ್ದವು. ಆ ಹೊತ್ತಿಗೆ ವಿಶ್ವವ್ಯಾಪಿಯಾಗಿ ಹರಡಿಕೊಂಡಿದ್ದ ಐರೋಪ್ಯ ಸಂಸ್ಕೃತಿಯ ಮೇಲೆ ಅಮೆರಿಕದ ಸಾಹಸವೃತ್ತಿಯ ಲಘುಪಟಲವೊಂದು ಮೆತ್ತಿಕೊಂಡಿತು. ಏತನ್ಮಧ್ಯೆ ಐರೋಪ್ಯಜನದ ವಿವಿಧ ಯಂತ್ರ ವಸ್ತೂತ್ಪನ್ನಗಳು, ಐರೋಪ್ಯರ ಕುಶಲ ಕಲಾವಸ್ತು ನಿರ್ಮಾಣಗಳು, ಐರೋಪ್ಯರ ರಾಜಕೀಯ ಸಾಮಾಜಿಕ ಮತಧಾರ್ಮಿಕ ಭಾವನೆಗಳು ವಸಾಹತುಗಳ ಅಧೀನ ಜನದ ಮೇಲೆ ಆಗಂತುಕ ಸ್ವಾಮಿಗಳಿಂದ ಹೇರಲಾಗಿದ್ದವು. ಇದೆಲ್ಲ ಕ್ರೈಸ್ತಧರ್ಮದ ಹೆಸರಿನಲ್ಲಿ ನಡೆಯಿತು. ಪ್ರಪಂಚದ ಎಲ್ಲ ಒರಟು ಜನರಲ್ಲಿ ನಯವನ್ನು ಹರಡಿ ಮೇಲಕ್ಕೆತ್ತಬಲ್ಲದ್ದು ಏಕೈಕ ತಾರಕ ಕ್ರೈಸ್ತ ಧರ್ಮವೇ ಎಂಬ ಸ್ವಮತೋತ್ಸಾಹದ ಉರುಬಿನಲ್ಲಿ ನಡೆಯಿತು.

ಇತಿಹಾಸವು ಬರಹಕ್ಕೆ ಇಳಿಯಲು ಮೊದಲಾದಂದಿನಿಂದ ಸಾಂಸ್ಕೃತಿಕ ಭಾವನಾಸ್ಫೋಟದ ಅಧಿಕ ವ್ಯಾಪ್ತಿ–ತೀವ್ರತೆಗಳನ್ನು ಚರಿತ್ರೆಯಲ್ಲಿ ದಾಖಲೆಯಾಗಿ ಗುರುತು ಮಾಡಿರುವುದು ಈಗೆ ಸುಮಾರು 500 ವರ್ಷಗಳ ಹಿಂದೆ ನಡೆದ ಜಗತ್ತಿನ ಒಂದು ಭಾಗದ ಜನದ ಚಟುವಟಿಕೆಗಳೇ:—ನೌಕಾಯಾನಗಳೂ ನೂತನ ಭೂಪ್ರದೇಶ ದರ್ಶನ

ಗಳೂ ಐರೋಪ್ಯ ಜನವನ್ನು ಭೂಗ್ರಹದ ಮೂಲೆಮೂಲೆಗೂ ಒಯ್ದವು. ಅವರ ನಡೆ ನೆಲಸಿಕೆಗೆ ಉತ್ತರ–ದಕ್ಷಿಣ ಧ್ರುವಗಳ ಹಿಮಾವೃತ ಪ್ರದೇಶಗಳೂ ದುರ್ಗಮವೆನ್ನಿಸಲಿಲ್ಲ.

ಪ್ರಪಂಚದಲ್ಲೆಲ್ಲ ನಾಗರಿಕತೆಯನ್ನು ಹರಡಲು ಮೂರು ಮುಖ್ಯ ಮಾರ್ಗಗಳನ್ನು ಅನುಸರಿಸಲಾಯಿತು. ಈ ಮೂರರಲ್ಲಿ ಜನ ಸಂಪರ್ಕವೇ ಮುಖ್ಯವೂ ಸಾಕ್ಷಾತ್ತು (ನೇರವೂ) ಆದ ಮಾರ್ಗ. ವರ್ತಕರು, ಮತಪ್ರಚಾರಕರು (ಮಿಷನರಿಗಳು), ವಲಸೆಗಾರರು ಹೊಸದಾಗಿ "ಕಂಡುಕೊಂಡ" ನೆಲಗಳಲ್ಲಿ ನೆಲಸಿದರಲ್ಲದೆ, ಅಲ್ಲೆಲ್ಲ ಐರೋಪ್ಯ ಸಂಸ್ಕೃತಿಯ ಕೇಂದ್ರಗಳನ್ನು ಸ್ಥಾಪಿಸಿದರು. ಸ್ಥಳೀಯಜನ ಈ ಸಂಸ್ಕೃತಿ ಪ್ರಚಾರಕ್ಕೆ ಪ್ರತಿಕ್ರಿಯೆಯಾಗಿ, ನಿದರ್ಶನ ಅನುಷ್ಠಾನ ಸಹಭಾಗಿತೆಗಳೆಂಬೀ ಮೂರು ಉಪಾಯಗಳನ್ನು ಅನುಸರಿಸಿದರಲ್ಲದೆ, ಅನೇಕ ವೇಳೆ ಒತ್ತಾಯದ ಜೀತಕ್ಕೆ ಒಳಪಟ್ಟು ಐರೋಪ್ಯರ ಅಭಿವೃದ್ಧಿಮಾರ್ಗಗಳನ್ನು ಹಿಡಿದರು ; ಯೂರೋಪಿನಿಂದ ಬಂದ ಗ್ರಾಹಕ ವಸ್ತುಗಳಲ್ಲಿ ಆಸಕ್ತಿ ತೋರಿಸಿ ಬಳಸಿದರು. ಐರೋಪ್ಯರ ಮರಮುಟ್ಟುಗಳೂ ಆಯುಧೋಪಕರಣಗಳೂ ಸ್ವದೇಶದಲ್ಲಿ ತಯಾರಾಗಿ ಸಿಕ್ಕುವವಕ್ಕಿಂತ ಗುಣದಲ್ಲಿ ಮೇಲ್ಮಟ್ಟದವಾಗಿದ್ದದ್ದರಿಂದ, ಅವು ವಸಾಹತು ಜನಜೀವನದ ನಾಗರಿಕ ಜೀವನಕ್ಕೆ ಅನಿವಾರ್ಯವಾಗಿ ಉಪಯೋಗಕ್ಕೆ ಬಂದುವು. ಐರೋಪ್ಯರ ಭಾವನೆಗಳೂ ಉಪದೇಶಗಳೂ ಅನುಷ್ಠಾನ ಬಲದಿಂದ ಬೇರೂರಿ, ಸ್ಥಳೀಯರಲ್ಲಿ ಅದುವರೆಗೆ ಅಭ್ಯಾಸದಲ್ಲಿದ್ದ ಸ್ವದೇಶಿಯ ಅಭಿಪ್ರಾಯ ಭಾವನೆಗಳ ಪಟ್ಟನ್ನು ಬಿಡಿಸಿದುವು.

ಹೀಗೆ ಪ್ರಕೃತಿ ಸಹಾಯವನ್ನು ಜನ ಜೀವನಕ್ಕೆ ರೂಢಿಸಿಕೊಳ್ಳುವುದು, ಸಮಾಜವನ್ನು ಸುವ್ಯವಸ್ಥೆಗೆ ತರುದುಕೊಳ್ಳುವುದು, ಜೀವನ ಸಮಸ್ಯೆಗಳನ್ನು ಎದುರಿಸಿ ಅವಕ್ಕೆ ಪರಿಹಾರಗಳನ್ನು ಕಂಡುಕೊಳ್ಳುವುದು. ಇವು ಒಂದೊಂದೂ ಯೂರೋಪಿನಲ್ಲಿ ಹೇಗೆ ಮಾರ್ಪಡುತ್ತ, ಜನವರ್ಗವನ್ನು ಮೇಲು ಮೇಲಕ್ಕೆ ಎತ್ತಿದ್ದುವೋ ಹಾಗೆಯೇ ವಸಾಹತು ಕ್ಷೇತ್ರಗಳಲ್ಲಿಯೂ ಅವುಗಳ ಪ್ರಭಾವ ಹರಡಿತು. ಸ್ಥಳೀಯರಲ್ಲಿ ಕೆಲವರು ನೂತನಭಾವನೆಗಳನ್ನೂ ಆಚರಣೆಗಳನ್ನೂ ಒಪ್ಪಿಕೊಂಡು, ಆಕ್ರಮಣಕಾರರಿಗೆ ಸಹಕಾರ ನೀಡಿ, ಆಯಾ ವಸಹಾತು–ಸಾಮ್ರಾಜ್ಯಗಳಲ್ಲಿ ದ್ವಿತೀಯವರ್ಗದ ರಾಷ್ಟ್ರಕಪ್ರಜೆಗಳಾದರು. ಒಡಂಬಡದವರು ಮಲೆತು ಆಕ್ರಮಣಕಾರರಿಗೆ ಎದರುಬಿದ್ದರು. ಪ್ರತಿಭಟನೆಯಲ್ಲಿ ಪಟ್ಟು ಹೆಚ್ಚಿದ್ದ ಸಂದರ್ಭಗಳಲ್ಲಿ ಆಕ್ರಮಣಕಾರರ ಬಿಗಿಯೂ ಹೆಚ್ಚಿ, ಸ್ಥಳೀಯರು ಕಾಡಿಗೆ ದೂಡಲ್ಪಟ್ಟರು ಇಲ್ಲವೆ ಹೇಳಹೆಸರಿಲ್ಲದಂತೆ ನಾಶಮಾಡಲ್ಪಟ್ಟರು. ಕಾಡುಪಾಲಾದ ಸ್ಥಳೀಯರ ಒಳ್ಳೆಯ ನೆಲವೆಲ್ಲ ಆಕ್ರಮಣಕಾರರ ಪಾಲಾಯಿತು. ಸ್ಥಳೀಯರು ಅನಾಸಕ್ತರಾಗಿದ್ದರಾದರೆ, ಐರೋಪ್ಯ ಸಂಸ್ಕೃತಿ ವಿಧಾನಗಳು ಪ್ರತಿಭಟನೆ ಕಾಣದೆ ನುಗ್ಗಿ ಹರಡುತ್ತ ಬಂದುವು. ವಸಾಹತು ಭೂಮಿಯ ರಾಜವರ್ಗ

ಐರೋಪ್ಯರೊಡನೆ ಅವರ ಕಿರಿಯ ಪಾಲುಗಾರರೆನಿಸಿಕೊಂಡು, ಸ್ವದೇಶದ ಸಂಪನ್ಮೂಲಗಳನ್ನು ಎತ್ತಿ ಬಳಸುವುದರಲ್ಲೂ ಈ ಕಾರ್ಯಕ್ಕೋಸ್ಕರ ಸ್ವದೇಶೀಯ ಜೀತಗಾರರ ಪಡೆಯನ್ನು ಜಮಾಯಿಸಿ ಕೊಡುವುದರಲ್ಲೂ ಐರೋಪ್ಯ ನೂತನಾಧಿಕಾರ ಸ್ಥಾಪನೆ ಸಂವರ್ಧನಗಳಿಗೆ ನೆರವು ಕೊಟ್ಟರು.

ತತ್ತ್ವದಲ್ಲಿ ಯಾವಾಗಲೂ ಒಪ್ಪಿಕೆಯಿದ್ದು ಪ್ರಯೋಗದಲ್ಲಿ ಆಗ-ಈಗ ನಡೆದ ಸಂಗತಿ ಇದು. ಅಮೆರಿಕಾ ಏಷ್ಯಾ ಆಫ್ರಿಕಾಖಂಡಗಳ ಸ್ಥಳೀಯ ಜನರು ಅಲ್ಲಲ್ಲಿಗೆ ಬಂದ ಐರೋಪ್ಯ ಶಿಕ್ಷಕರಿಗೆ ಶಿಷ್ಯರಾಗಿಯೋ ತಮ್ಮಂದಿರಂತಯೋ ಇದ್ದರು. ಇವರ ಸಖ್ಯ ಸಹವರ್ತನೆಗಳ ಉದ್ದೇಶವಾದರೂ ಆಯಾ ವಸಾಹತು ಪ್ರದೇಶಗಳ ಆರ್ಥಿಕ ವ್ಯವಸ್ಥೆಯನ್ನು ಯೂರೋಪಿನ ಮಾದರಿಯಲ್ಲಿ ಮಾರ್ಪಡಿಸುವುದೇ; ಸಂಚಾರ ಮತ್ತು ವಾರ್ತಾ ವಾಹಕ ವ್ಯವಸ್ಥೆಗಳನ್ನು ಅಭಿವೃಧಿ ಪಡಿಸುವುದು; ಸಾಮಾನ್ಯ ವಿದ್ಯಾಭ್ಯಾಸವನ್ನು ಜನರಲ್ಲಿ ಹರಡುವುದು; ಮತ್ತು ಸಾರ್ವಜನಿಕ ಆರೋಗ್ಯಸ್ಥಿತಿಯನ್ನು ಉತ್ತಮಪಡಿಸುವುದು.

ಹೋದೆಡೆಯಲ್ಲೆಲ್ಲ ಕ್ರಾಂತಿಕಾರಕ ಪರಿವರ್ತನೆಗಳನ್ನು ಆಗ ಮಾಡಿಸುವುದೇ ಐರೋಪ್ಯ ಆಕ್ರಮಣಕಾರರ ಉದ್ದೇಶವಾಗಿತ್ತು: ನಿದರ್ಶನಗಳಿವು: ಇಡಿಯ ಭೂಗ್ರಹಕ್ಕೆಲ್ಲ ತಮ್ಮ ನಾಗರಿಕತೆಯನ್ನು ಒತ್ತಾಯದಿಂದ ತುರುಕುವುದು. ಏಕೆಂದರೆ ಪ್ರಪಂಚದ ಐದು ಖಂಡಗಳಪೈಕಿ ಒಂದಾದ ಯೂರೋಪಿನ ಪಟ್ಟಭದ್ರ ಮೇಧಾವಿಗಳು ಕೃಷಿ ಮಾಡಿದ ಸಂಸ್ಕೃತಿಯೇ ಮಿಕ್ಕೆಲ್ಲ ಖಂಡಗಳಿಗೂ ಉಚಿತವೆಂಬ ಸ್ವಸಾಧನೆಯ ಪ್ರೀತ್ಯತಿರೇಕ ಐರೋಪ್ಯರದು. ಮತ್ತು ತಮ್ಮಂತೆಯೇ ಯೂರೋಪಿನಿಂದ ಹೊರಟು ಸಾಮ್ರಾಜ್ಯವನ್ನು ಕಟ್ಟುವುದರಲ್ಲಿ ಪೈಪೋಟಿಗಿಳಿದ ಇತರ ಐರೋಪ್ಯ ರಾಷ್ಟ್ರಗಳಲ್ಲಿ ಪರಸ್ಪರ ಕಾತರ ಚಿಂತೆಗಳನ್ನು ಬಿತ್ತಿ ಬೆಳಸುವುದು; ಆಕ್ರಮಣ, ವಿಜಯ, ಸೈನಿಕವಾಗಿ ನೆಲೆಯೂರಿಕೆ; ಸ್ವಂತಲಾಭಕ್ಕೆ ನೆಲಸಿದ ವಸಾಹತುಗಳಲ್ಲಿಯ ನೈಸರ್ಗಿಕ ಸಂಪನ್ಮೂಲಗಳ ಶೋಧನ ಪರಿಗ್ರಹಗಳು ಮತ್ತು ಸ್ಥಳೀಯ ಮೇಧಾವಿಗಳೊಡನೆ ಸಹವರ್ತನೆಯನ್ನು ಗಿಟ್ಟಿಸಿ, ಸ್ವಸಾಮ್ರಾಜ್ಯ ಪ್ರಭಾವವನ್ನು ವಿಸ್ತರಿಸುವುದು.

## ಭೇದನೀತಿ ವಿರೋಧನೀತಿ ಮತ್ತು ಘರ್ಷಣನೀತಿ

ಕ್ರಿ. ಶ. 1500 ರಿಂದ 1900 ರ ವರೆಗೆ ಇಡಿಯ ಭೂಗ್ರಹವನ್ನು ಒತ್ತಾಯದಿಂದ ಐರೋಪ್ಯಕರಣ ಮಾಡುವ ಚಟುವಟಿಕೆಯ ಫಲವಿದು—ವಿವಿಧ ಪ್ರದೇಶಗಳಲ್ಲಿ ಭೇದವನ್ನು ಬಿತ್ತಿ, ವಿರೋಧವನ್ನು ಬೆಳೆದು, ಘರ್ಷಣೆಗೆ ದಾರಿಮಾಡಿದ್ದು. ತತ್ಕ್ಷಣದ ಫಲ ಇದಾದರೆ, ಈ ಚಟುವಟಿಕೆಯ ದೂರ ಪರಿಣಾಮವೋ ಪಾಶ್ಚಾತ್ಯ ನಾಗರಿಕತೆ ಅದರ ಅಂತಿಮ ಘಟ್ಟದಲ್ಲಿ ಶಿಥಿಲವಾಗುವುದಕ್ಕೆ ಅವಕಾಶವಾದದ್ದೇ.

ಇಲ್ಲಿ ವಿವರಿಸಿರುವ ಘಟನೆಗಳಿಗೆ ಮೂರು ಮುಖಗಳಿವೆ. ಒಂದು, ವಿರೋಧ ಪ್ರಕಾಶನ; ಎರಡನೆಯದು, ಪರಸ್ಪರ ಸಂಧಿಸಿ ಮಾರಾಂತು ನಿಲ್ಲುವುದು; ಮೂರನೆಯದು ಪದೇ ಪದೇ ಘರ್ಷಣೆಗಳು. (1) ರಾಷ್ಟ್ರೀಯ ಪರಮಾಧಿಕಾರದ ಕಟ್ಟುನಿಟ್ಟಾದ ಧೋರಣೆಯನ್ನು ಅವಲಂಬಿಸಿ ಏರುತ್ತ, ಕಡೆಗೆ ಹುರುಡಿನಿಂದ ಎದುರು ಬಿದ್ದ ಪ್ರತಿಕಕ್ಷಿ ಸಾಮ್ರಾಜ್ಯಗಳೊಡನೆ ಸೆಣಸುತ್ತ, ಸ್ವಜೀವ ಸಂರಕ್ಷಣೆಮಾಡಿಕೊಳ್ಳುವುದು 1914 ರ ಮತ್ತು 1939 ರ ಮಹಾಯುದ್ಧಕಾಲಗಳ ವಿವಿಧ ವಿರೋಧಿ ಅಧಿಕಾರಶಾಹಿಗಳಲ್ಲಿ ಪ್ರಕಟವಾಯಿತು. (2) ಆಕ್ರಮಣಕ್ಕೆ ಸಿಕ್ಕಿ, ಶೋಷಣೆಗೆ ಒಳಗಾದ ವಸಾಹತುಗಳ ಸ್ಥಳೀಯ ಹಾಗೂ ಅಧೀನ ಜನರೇ ವಿಶ್ವ ಪ್ರಜಾಸಮುದಾಯದಲ್ಲಿ ಬಹುಸಂಖ್ಯಾಕರು. ಇವರೆಲ್ಲ ಪರಕೀಯ ಪ್ರಭುಗಳ ಒತ್ತಡಗಳನ್ನೆದುರಿಸಿ ಸ್ವತಂತ್ರರಾದರು. (3) ದಂಗೆಯೆದ್ದ ಪ್ರಜಾಗಣದಲ್ಲಿ ಕೆಲವರು ದಬ್ಬಾಳಿಕೆ ಸುಲಿಗೆಗಳಿಗೂ ಪದೇಪದೇ ಬುದ್ಧಿಗೆಟ್ಟ ಯುದ್ಧಗತಿಯ ಪ್ರತಿಕೂಲ ಸಂದರ್ಭಗಳ ಅಧಿಕ ವೆಚ್ಚಗಳಿಗೂ ರೋಸಿ, ಒಂದೇ ಆಳಿನಂತೆ ಒಗ್ಗಟ್ಟಿನಿಂದ ಸಿಡಿದೆದ್ದು ಮೇಲಾದ ಹೊಸ ಬದುಕನ್ನು ಬಾಳಲು ಮುನ್ನಡೆಯ ಹೆಜ್ಜೆಗಳನ್ನಿರಿಸಿದರು.

ಕ್ರಾಂತಿಕಾರಕವಾಗಿ ಮಾರಾಂತು ನಿಂತ ಈ ನಿಲುವನ್ನು ಜ್ಞಾಪಕಕ್ಕೆ ತರುವ ಘಟನೆಗಳು 1917 ರ ಸುತ್ತಮುತ್ತ ನಡೆದುವು. ಪಾಶ್ಚಾತ್ಯನಾಗರಿಕತೆಗೆ ಜೀವಾಳವಾದ ವಿಚಾರತಂತ್ರದ ಮಾರ್ಗ ಇದು: ಧನಾಧಿಕಾರ ಪ್ರತಿಷ್ಠೆಗಳಿಗೋಸ್ಕರ ಪ್ರತಿಯೊಂದು ಹಂತದಲ್ಲೂ—ವ್ಯಕ್ತಿ ಪ್ರಜೆಯಿಂದ ಹಿಡಿದು ಪಟ್ಟಣಗಳವರೆಗೂ, ಕೂಡು ಬಂಡವಾಳದ ( ಕಾರ್ಪೊರೇಷನ್ ) ವಾಣಿಜ್ಯ ಸಂಸ್ಥೆಗಳು ಹಾಗು ನ್ಯಾಸನಿಧಿಯ (ಟ್ರಸ್ಟ್) ಸಂಸ್ಥೆಗಳಿಂದ ಹಿಡಿದು ರಾಜ್ಯ ಸಾಮ್ರಾಜ್ಯಗಳವರೆಗೂ ಹಂತಹಂತವಾಗಿ ಸ್ಪರ್ಧಾತ್ಮಕ ಘರ್ಷಣೆಯೆಬ್ಬಿಸುವ ವಿರೋಧ ಭಾವನೆಗಳ ಬೀಜಬಿತ್ತಿ ಕೃಷಿ ಮಾಡುವುದು. 1450 ರಿಂದ 1960 ರ ವರೆಗಿನ ಐದು ಶತಮಾನಗಳ ಉದ್ದಕ್ಕೂ ಎಷ್ಟೇ ಪ್ರಯತ್ನ ಮಾಡಿದರೂ ಯೂರೋಪುಖಂಡವು ಏಕಘಟಕವಾಗಿ ರೂಪಗೊಳ್ಳದೆ ಒಡೆದೊಡೆದು, ಒಂದಕ್ಕೊನ್ನೊಂದು ಶತ್ರುರಾಜ್ಯವೆನಿಸಿ ಪರಸ್ಪರ ಕದನಗಳಲ್ಲಿ ಹೊತ್ತು ಕಳೆದುವು. ಇತಿಹಾಸಕಾರರು ಯೂರೋಪಿನಲ್ಲಿ ಈ ನಾನೂರು ವರ್ಷಗಳ ಸಂಖ್ಯೆಯನ್ನು ಸುಮಾರು ಮುನ್ನೂರು ಎಂದು ಎಣಿಕೆಮಾಡಿ ಕೊಟ್ಟಿದ್ದಾರೆ. ಈ ಯುದ್ಧಗಳಲ್ಲಿ ಮುಕ್ಕಾಲು ಪಾಲಿನಷ್ಟವು–ಹೆಚ್ಚಾಗಿಯೇ, ಮುಖ್ಯವಾಗಿಯೇ–ಯೂರೋಪುಖಂಡದ ನೆಲದಲ್ಲೇ ಯೂರೋಪಿನ ಬೇರೆಬೇರೆ ರಾಜ್ಯ ಸಾಮ್ರಾಜ್ಯಗಳ ನಡುವೆ ನಡೆಯಿತು. ಹೀಗೆ ನಡೆದಿಲ್ಲವೆಂದು ಅಲ್ಲಗಳೆಯುವ ಪ್ರಯತ್ನ ನಡೆದರೂ ಯೂರೋಪಿನ ನಾಗರಿಕತೆಯ ಪ್ರಧಾನವಾದ ಮುಖ ಎಂದೂ ಭ್ರಾತೃಭಾವ, ಶಾಂತಿ ಆಗಿರಲಿಲ್ಲ; ತದ್ವಿರುದ್ಧವಾಗಿ ಸ್ಪರ್ಧೆ, ಜಿದ್ದು (ಬದ್ಧವೈರ), ಆರ್ಥಿಕ ರಾಜಕೀಯ–ಸೈನಿಕವಾಗಿ ಘರ್ಷಣೆ!

ವ್ಯಕ್ತಿ ಮನುಷ್ಯನ ಮನಸ್ಸಿಂದು ಒಡೆದು ವ್ಯಗ್ರವಾಗಿವೆ. ದಿಕ್ಕು ಪಾಲಾಗಿ ಚೆದರಿದ ಹಾಗು ಪರಸ್ಪರ ವಿರುದ್ಧವಾದ ಆಶೆ ಆಕಾಂಕ್ಷೆಗಳು, ಪ್ರೇರಣೆಗಳು, ಒತ್ತಾಯಗಳು, ನಿರ್ಬಂಧಗಳು ಅವನನ್ನು ಕಿತ್ತು ತಿನ್ನುತ್ತಿವೆ. ವಿಶ್ವಪ್ರಪಂಚದ ಜನವರ್ಗ ಒಂದೊಂದೂ ಹೀಗೆಯೆ ಚರ್ಮಕಾಂತಿ, ಹಾಗು ವರ್ಗಭೇದ ಕಾರಣಗಳಿಂದಲೂ ಇತರ ವೈಯಕ್ತಿಕ ಲಕ್ಷಣಗಳಿಂದಲೂ ಭೂಭಾಗಗಳು ಹರಿದು ಹಂಚಿ ಹೋಗಿವೆ; ಭೇದಭಾವಗಳು ಉಲ್ಬಣಿಸಿ ಉರವಣಿಸುತ್ತಿವೆ. ಬೇರೆ ಬೇರೆ ವಾಯುಗುಣದ ಭೌಗೋಲಿಕ ವಸತಿ, ವೃತ್ತಿಭಿನ್ನತೆ, ವರ್ಗ ಹಾಗು ಜಾತಿಗಳಲ್ಲಿ ಒಡಕು, ಪಟ್ಟಭದ್ರಹಿತಗಳ ಜಬ್ರು, ಸಿರಿವರಮಾನಗಳ ಸೊಕ್ಕು ಏರೇರಿ, ಪದ್ಧತಿ ಸಂಸ್ಥೆ ಸಖ್ಯ ವೈವಿಧ್ಯಗಳಲ್ಲಿ ಮಾತ್ರವಲ್ಲದೆ,-ಎಲ್ಲ ಹಂತಗಳಲ್ಲೂ ಅಲ್ಪ ಸಂಖ್ಯಾಕರು ಅಧಿಕಾರಾರೂಢರಾಗುತ್ತಿದ್ದಾರೆ. ಆಳಬೇಕೆಂಬ ಅಧಿಕಾರ ಲಾಲಸೆ ಕೆರಳಿಸಿದ ಘರ್ಷಣೆಗಳು ಎಲ್ಲೆಲ್ಲೂ ಪ್ರಕಟವಾಗುತ್ತಿವೆ. ತತ್ಫಲವಾಗಿ, ಮಾನವತೆಯಲ್ಲಿ ಇರಬೇಕಾದ ಐಕ್ಯಭಾವ ಹೋಗಿ, ಶೈಥಿಲ್ಯಕ್ಕೆ ಅವಕಾಶವಾಗಿ, ಬಿರುಕು ಹೆಚ್ಚುತ್ತಿದೆ. ಇವಕ್ಕೆ ಕಾರಣ–ಮೊತ್ತ ಮೊದಲನೆಯದಾಗಿ, ವ್ಯಕ್ತಿಮನುಷ್ಯನು ತನ್ನ ಮಿತಿಯಲ್ಲಿ ತಾನು ಬಾಳಿಕೊಂಡಿರದೆ, ತನ್ನ ನೆರೆಹೊರೆಯವರ ಹಕ್ಕು ಬಾಧ್ಯತೆಗಳ ಸೀಮೋಲ್ಲಂಘನ ಮಾಡುತ್ತಿರುವುದು; ಎರಡನೆಯದಾಗಿ, ವ್ಯಕ್ತಿ ಮನುಷ್ಯನು ತನಗೂ ಸಾಮಾಜಿಕ ಸಮುದಾಯಕ್ಕೂ ನಡುವೆ ಹುಟ್ಟಿಕೊಂಡ ಮನಸ್ತಾಪ ವಿರೋಧಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಅಸಮರ್ಥನಾಗಿರುವುದು; ಮತ್ತು ಮೂರನೆಯದಾಗಿ, ಸಾಮಾಜಿಕ ಸಮುದಾಯಗಳು ವ್ಯಕ್ತಿ ಮನುಷ್ಯನಿಗೆ ಕೊಡಬೇಕಾದ ಸಹಕಾರವನ್ನು ಕೊಡುವುದರಲ್ಲಿ ಅಸಮರ್ಥವಾಗಿರುವುದು.

ವ್ಯಕ್ತಿ ಮನುಷ್ಯರೂ ಸಮಾಜ ಸಮುದಾಯಗಳೂ ಪರಸ್ಪರವಾಗಿ ಸಹಕರಿಸಿ ಒಬ್ಬರಿಂದೊಬ್ಬರು ನೆರವು ಪಡೆಯುತ್ತಿರುವುದು ಬರವಣಿಗೆಗೆ ಇಳಿದ ಇತಿಹಾಸದಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ. ಸ್ಪರ್ಧೆ, ವೈರ, ಘರ್ಷಣೆ, ಹೊಡೆದಾಟ, ಮತ್ತು ಮಾರಕ ಸಂಗ್ರಾಮಗಳ ಸುತ್ತ ಮನುಷ್ಯ ಸಂಬಂಧಗಳು ಚಟುವಟಿಕೆಯಲ್ಲಿದ್ದುವೆಂಬುದನ್ನೂ ಅದೇ ಇತಿಹಾಸದ ವಿವಿಧ ಕಾಲಮಾನಗಳು ನಮಗೆ ತಿಳಿಸುತ್ತವೆ. ಮನುಷ್ಯ ಚರಿತ್ರೆಯ ಒಂದೊಂದು ಘಟ್ಟದಲ್ಲೂ ಸಹಕಾರ ಸಂಬಂಧವೂ ಪರ್ಯಾಯ ಕ್ರಮದಲ್ಲಿ ಸ್ಪರ್ಧಾ ಸಂಬಂಧವೂ ಪ್ರಕಟವಾಗಿವೆ. ಯಾವಾಗ ಸಹಕಾರ ಶಕ್ತಿಗಳು ಪ್ರಬಲವಾಗಿದ್ದವೋ ಆಗ ಮನುಷ್ಯ ಸಮಾಜ ತನ್ನ ಪ್ರಮುಖ ಕಾಯಕ ಬಲಗಳನ್ನು ರಚನೆ, ಸಾಧನೆ ಮತ್ತು ಅಭಿವೃದ್ಧಿಗಳಿಗೋಸ್ಕರ ಹೂಡಿತು. ಯಾವಾಗ ಸ್ಪರ್ಧೆ ಘರ್ಷಣೆಗಳ ಶಕ್ತಿಗಳು ಪ್ರಬಲಿಸಿದುವೋ ಆಗ ಮನುಷ್ಯ ಸಮಾಜಗಳು ಶಿಥಿಲವಾಗಿ ಮುರಿದುಬಿದ್ದು ಅಳಿದುಹೋದುವು.

ಕ್ರಿ.ಶ. 1450 ರಿಂದ 1900ರ ವರೆಗಣ ವರ್ಷಗಳು ರಚನೆ, ಸಂಯೋಜನೆ ಮತ್ತು ಉತ್ತರೋತ್ತರಾಭಿವೃದ್ಧಿಯ ಚಟುವಟಿಕೆಯನ್ನು ತೋರಿಸಿವೆ. 1900ನೆಯ ವರ್ಷ ಉರುಳಿದ ಮೇಲಣ ಒಂದಷ್ಟು ವರ್ಷಗಳ ಕಾಲಮಾನವೋ ಐಕ್ಯ ವಿಘಟಕಗಳಾದ ಶೈಥಿಲ್ಯ, ಘರ್ಷಣೆ, ವಿನಾಶಗಳ ಇಳಿಜಾರನ್ನು ಸಮಾಜ ಹಿಡಿಯಿತು. ಹತ್ತೊಂಬತ್ತನೆಯ ಶತಮಾನದ ಕೊನೆಯ ವರೆಗೆ ಭೂಗ್ರಹದ ಮೇಲೆ ಐರೋಪ್ಯ ಸಾಮ್ರಾಜ್ಯ ಸಮಾಜಗಳು ಚಲನವಲನದಲ್ಲಿರುತ್ತ ಈ ಪರಸ್ಪರ ವಿರುದ್ಧ ಚರ್ಯೆಗಳಲ್ಲಿದ್ದದ್ದನ್ನು ಪಂಜು ಬೆಳಕೆತ್ತಿ ತೋರಿಸಿತು.

ಜನ ವರ್ಗದಲ್ಲಿ ವಿರೋಧವೂ ಮುಖಾಮುಖಿಯೂ ಸಮನಿಸಿದಾಗ– ಒಂದು ದೇಶ ಜನ ಇನ್ನೊಂದು ದೇಶವನ್ನು, ಇಲ್ಲವೆ ಇನ್ನೊಂದು ದೇಶದ ಜನವರ್ಗವನ್ನು ಆಕ್ರಮಿಸಿ ಗೆದ್ದುಕೊಂಡಿದೆ; ಗೆದ್ದುಕೊಂಡ ಅನ್ಯ ಪ್ರದೇಶಗಳಲ್ಲಿ ಸೈನ್ಯ ಬಲದಿಂದ ಠಾಣ್ಯ ಹಾಕಿದೆ. ಅಲ್ಲಿಯ ಸಂಪನ್ಮೂಲಗಳನ್ನೂ ಕಾರ್ಮಿಕ ಬಲವನ್ನೂ ಸ್ವಹಿತಕ್ಕಾಗಿ ದುಡಿಸಿಬಳಸಿಕೊಂಡಿದೆ. 1450 ರಿಂದ 1900 ರ ನಡುವಣ ಅವಧಿಯಲ್ಲಿ ಭೂ ಗ್ರಹವನ್ನು ಬೇಗ ಬೇಗ ಐರೋಪ್ಯ ಮತಾಂತರ ಗೊಳಿಸಿ, ಪ್ರಪಂಚ ಜನವರ್ಗದಲ್ಲಿ ಅಲ್ಪ ಸಂಖ್ಯಾಕರಾದ ಬಿಳಿತೊಗಲ ಜನ ಬಹುಸಂಖ್ಯಾಕರಾದ ಕರಿತೊಗಲರ ಮೇಲೆ ದರ್ಪ ನಡಸಿ ಅವರನ್ನು ಸುಲಿಯುವುದಕ್ಕೆ ಅವಕಾಶವಾಯಿತು.

ವಸಾಹತು ಪ್ರದೇಶದ ಸ್ಥಳೀಯ ಹಾಗೂ ಅಧೀನ ಜನ ದಂಗೆಯೆದ್ದದ್ದು ಇತಿಹಾಸದಷ್ಟೇ ಪ್ರಾಚೀನವಾದ ಸಂಗತಿ. ಆಧುನಿಕ ಸ್ವಾತಂತ್ರ್ಯ ಚಳುವಳಿಗಳು ಎರಡು ಶತಮಾನಗಳ ಕಾಲಾವಧಿಯನ್ನು ಹಾದು, 1945ರಲ್ಲಿ ಮಹಾಯುದ್ಧ ಮುಗಿದ ಮೇಲಣ ವರ್ಷಗಳಲ್ಲಿ ಪರಾಕಾಷ್ಠತೆಗಡರಿದುವು. ಏಷ್ಯಾ ಆಫ್ರಿಕಾ ಖಂಡಗಳಲ್ಲಿ ಸಾಮ್ರಾಜ್ಯ ಶೃಂಖಲೆಗಳನ್ನು ಒಡೆದೊದರಿ, ಅಲ್ಲಿಯ ದೇಶಗಳು ಸ್ವತಂತ್ರ ರಾಷ್ಟ್ರಗಳಾದುವು. ಹಾಗೆಯೇ ಲ್ಯಾಟಿನ್ (ದಕ್ಷಿಣ) ಅಮೆರಿಕವೂ ಸ್ವತಂತ್ರ–ಸ್ವಯಮಾಧಿಕಾರ ನಿರ್ಧಾರವುಳ್ಳ ರಾಷ್ಟ್ರಗಳ ಸಾಲಿನಲ್ಲಿ ಮೆರವಣಿಗೆ ಹೊರಡುವ ಬೆದರಿಕೆ ಹಾಕಿತು.

ಏತನ್ಮಧ್ಯೆ ಸಾಂಪ್ರದಾಯಿಕ ಜೀವನ ವಿಧಾನಕ್ಕೆ ಉತ್ತಮ ಪರ್ಯಾಯ ಕ್ರಮದ ಜೀವನ ವ್ಯವಸ್ಥೆಯನ್ನು ತಂದುಕೊಳ್ಳುವ ಪ್ರಯತ್ನವು ಸಂತತವಾಗಿ ನಡೆಯುತ್ತ ಬಂತಾದರೂ, ಇಡಿಯ ಜಗದ್ರಾಷ್ಟ್ರವರ್ಗಗಳು ವಿಜ್ಞಾನ ಪರಿಕರ್ಮ ತಂತ್ರಗಳನ್ನು (ಸೈನ್ಸ್ ಮತ್ತು ಟೆಕ್ನಾಲಜಿ) ಬಳಸಿ, ಸಹಕಾರಾತ್ಮಕವೂ ಸುಸಂಯೋಜಿತವೂ ಆದ ಮನುಷ್ಯ ಸಮಾಜವನ್ನು ಕಟ್ಟಿಕೊಳ್ಳುವ ಈ ಪ್ರಯತ್ನದಲ್ಲಿ ಸ್ಪರ್ಧಾಮೂಲವಾದ ಲಾಭಸಂಪಾದನೆಗಿಂತ ಪರಸ್ಪರ ಸ್ವಯಂಸೇವಾದಾನದ ಆದರ್ಶವನ್ನು ಮೈಗೂಡಿಸಿ

ಕೊಳ್ಳುವ ಚಿತ್ತಬಲವು ಪ್ರಕಟವಾಗಿ, ಪಾಶ್ಚಾತ್ಯ ನಾಗರಿಕತೆಯ ರೂಢಮೂಲ ಸಂಸ್ಥೆಗಳಿಗೂ ಬಿಗಿಯಾದ ಆಚರಣೆಗಳಿಗೂ ದೊಡ್ಡ ಸವಾಲೆನ್ನಿಸಿತು.

"ಶೀತಲ ಸಮರ"ವನ್ನು (Cold war) ಪಶ್ಚಿಮ ರಾಷ್ಟ್ರಗಳು 1945 ರಲ್ಲಿ ಔಪಚಾರಿಕವಾಗಿ, ಅಧಿಕೃತವಾಗಿ, ರೂಢಿಗೆ ತಂದುವು. ಯಶಸ್ವಿಯಾಗಬಹುದಾಗಿದ್ದ ಸಹಕಾರಾತ್ಮಕ ಸುಸಂಯೋಜಿತ ಸಮಾಜ ಘಟಕವೊಂದು ಅಸ್ತಿತ್ವಕ್ಕೆ ಬಂದದ್ದಾದರೆ-ಅದು ಈಗಾಗಲೆ ಶಿಥಿಲವಾಗಿರುವ ಸ್ಪರ್ಧಾತ್ಮಕವೂ, ಗೊತ್ತುಪಾಡಿನಲ್ಲಿ ನಡೆದು ಗುರಿ ಮುಟ್ಟುವ ಬಗ್ಗೆ ಶಂಕೆಯನ್ನು ಮೂಡಿಸಿ ಕೇವಲ ಧನೈಕ ಲಾಭನಿಷ್ಠವೂ ಆದ ಸಾಮ್ರಾಜ್ಯವಾದಕ್ಕೆ ಪ್ರಬಲ ಪ್ರತಿಕಕ್ಷಿಯಾಗುತ್ತದೆ. ಈ ಅಪಾಯವನ್ನು ಗುರುತಿಸಿಯೇ ಸಾಮ್ರಾಜ್ಯವಾದಿಗಳು ಶೀತಲ ಸಮರ ವಾತಾವರಣವನ್ನು ನಿರ್ಮಿಸುವ ತಂತ್ರವನ್ನು ಹೂಡಿದರು. ಈ ಶೀತಲ ಸಮರ-"ತಂಪುತಿಕ್ಕಾಟದ" ದ ಚಟುವಟಿಕೆ-ಇಮ್ಮೊಗವಾದ ಗುರಿಯುಳ್ಳದ್ದು: ಒಂದು ಕಡೆ ಆದು ಸಮತಾವಾದ-ಸಮಾಜವಾದ (ಸೋಷಲಿಸ್ಟ್-ಕಾಮ್ಯುನಿಸ್ಟ್) ತತ್ತ್ವಗಳು ಅವು ಪ್ರಯೋಗದಲ್ಲಿರುವ ಕ್ಷೇತ್ರಗಳಿಂದ ಇತರ ಭೌಗೋಲಿಕ ಪ್ರದೇಶಗಳಿಗೆ ಹರಡದಂತೆ ತಡೆಗಟ್ಟಲು ಹೆಣಗುವುದು; ಇನ್ನೊಂದುಕಡೆ ಮಾಜಿ-ನೆಲಸುನಾಡುಗಳಲ್ಲಿ ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲ ಕೈಬಿಟ್ಟು ಹೋದ ಸಾಮ್ರಾಜ್ಯಾಧಿಕಾರವನ್ನು ಪುನಃಸ್ಥಾಪನೆ ಮಾಡಲು ಹೆಣಗುವುದು.

## ಹಳೆಯ ವ್ಯವಸ್ಥೆ ಶಿಥಿಲಿಸಿ ಬೀಳುತ್ತಿದೆ

ಸಾಮಾಜಿಕ ದೃಷ್ಟಿಕ್ಷೇಪದಲ್ಲಿ ಮಾರ್ಪಾಟು ಕಾಣಬರುತ್ತಿದೆ. ಈ ಮಾರ್ಪಾಟು ವೇಗವಾಗಿ ನಡೆಯುತ್ತಿದೆ, ತೀವ್ರವಾಗಿ ಹಬ್ಬುತ್ತಿದೆ. ಪೂರ್ವಸ್ಥಿತಿಯನ್ನು ಮತ್ತೆ ತಂದುಕೊಳ್ಳಲಾಗದಷ್ಟು ತ್ವರೆಯಿಂದ ಪ್ರಗತಿ ಮುಖವಾಗಿ ಈ ಪರಿವರ್ತನ ಕ್ರಾಂತಿ ಧಾವಿಸುತ್ತಿದೆ.

ಕಳೆದ ಅರ್ಧಶತಮಾನದ ಘಟನೆಗಳು ಒಂದೇ ಒಂದು ವ್ಯಾಖ್ಯಾನಕ್ಕೆ ಅವಕಾಶ ಕೊಡುವಂಥವು. ಉರುಳುತ್ತಿರುವ ಪ್ರತಿಯೊಂದು ದಿನವೂ ವಾರ ತಿಂಗಳು ವರ್ಷಗಳೂ ನಮಗೆ ಹಿಂದೆ ಹೇಳಿದ ಕಥೆಯನ್ನೇ ಹೇಳುತ್ತ, ಪರಿವರ್ತನ ಘಟನೆಯ ನಿಷ್ಠುರ ಪುನರಾವೃತ್ತಿಯ ಚರಿತೆಯನ್ನು ಸಾರುತ್ತವೆ. ಮಾನವ ವರ್ಗ ಮೂಗುದಾರದ ಸೆಳೆದಾಟಕ್ಕೆ ಸಿಕ್ಕಿದೆ; ಈ ಧಾವಂತದಲ್ಲಿ ಒಬ್ಬರನ್ನೊಬ್ಬರು ತಳ್ಳಿಕೊಂಡು ಮುನ್ನುಗ್ಗುತ್ತಿದ್ದಾರೆ-ಶೀಘ್ರ ಪರಿವರ್ತನ ಪಥದಲ್ಲಿರುವ ವಿಶ್ವಪ್ರಪಂಚದಲ್ಲಿ. ಈ ಪರಿವರ್ತನೆಯ ನಿಕಟ ಭೂತಕಾಲವನ್ನು, ಅದರ ನಿಕಟ ಭವಿಷ್ಯತ್ತಿನ ಮಾರ್ಗಸೂಚಕವೆಂದೇನಾದರೂ ನಾವು ಭಾವಿಸಬಹುದಾದರೆ, ಮಾರ್ಪಾಟುಗಳಲ್ಲಿ ಕೊಂಚಕ್ಕಿಂತ ಹೆಚ್ಚಳವನ್ನೇ ನಮ್ಮ ಮನಸ್ಸು ಗ್ರಹಿಸುತ್ತದೆ. ಪರಿವರ್ತನ ಗತಿಗಾತ್ರಗಳೂ ಚಲನವೇಗವೂ ದಿನೇ

ದಿನೇ ವೃದ್ಧಿ ಪರಿಮಾಣದಲ್ಲೇ ಕಾಣಬರುತ್ತದೆ, ಕ್ಷಯ ಪರಿಮಾಣದಲ್ಲಲ್ಲ. ಪ್ರತ್ಯಕ್ಷ ವಾಸ್ತವಿಕ ಸಂಗತಿಗಳು ಸ್ಪಷ್ಟವಾಗಿಯೇ ಗೋಚರಿಸುತ್ತ ಸಾಗುತ್ತಿವೆ. ದಿನಂಪ್ರತಿಯ ಪರಿವರ್ತನಾನುಭವವು ವರ್ತಮಾನ ಯುಗದ ಮನುಷ್ಯನನ್ನು ಈ ಧಾವಂತದ ಜಟಿಲ ತೆಯಲ್ಲೂ ಉರುಬಿನಲ್ಲೂ ಸಿಕ್ಕಿಸಿಕೊಂಡಿದೆ; ಅವನ ಮುಖಕ್ಕೆ ಮುಷ್ಟಿಘಾತ ವಾದಂತಾಗಿ, ಆ ಪೆಟ್ಟಿನಿಂದ ನೆತ್ತರು ಕಾರುವಷ್ಟು ಗಾಯವುರವಣಿಸಿದೆ.

ಸಾಂಪ್ರತ ಜನಜೀವನದ ಯಂತ್ರ ಗತಿ ಚಲನೆಯೆಂಥಾದ್ದೆಂಬುದನ್ನು ಚಿತ್ರಿಸುವುದಕ್ಕೆ ಶಬ್ದಸೌಲಭ್ಯ ಸಾಲದೆ ಹೋಗಿದೆ. ಈ ಯಂತ್ರ ಚಲನೆ ಸಾರ್ವತ್ರಿಕವಾಗಿ ನಡೆಯತಕ್ಕದ್ದು; ಅದರ ಗತಿಯಲ್ಲಿ ಪ್ರಕಟವಾಗುವ ಕೇವಲ ಯಾಂತ್ರಿಕತೆ, ಸ್ಪರ್ಧಾಶೀಲತೆ–ಇವು ದೈವಾಯತ್ತವೋ ಏನೋ ಎಂಬಂತೆ ತೋರುತ್ತದೆ. ಅದು ಚಲನಾವಸರದಲ್ಲಿ ಪಡೆದುಕೊಂಡಿರುವ ವೇಗವು ಮುಂದೆ ಘಟಿಸುವ ನಿಮಿತ್ತಗಳನ್ನು ಸೂಚಿಸುವಂಥಾದ್ದು. ಈ ಇಂದಿನ ನಾಗರಿಕತೆಯ (ಅಥವಾ ಸಂಸ್ಕೃತಿಯ) ಪರಿವರ್ತನ ಗತಿಯನ್ನು ತಡೆದು ನಿಲ್ಲಿಸುವ ಅಥವಾ ದಿಕ್ಕೂ ಬದಲಾಯಿಸುವ ಮನುಷ್ಯ ಪ್ರಯತ್ನಗಳಿಗೆ ಅದು ದಾಟಲಾಗದ ಎಡರುಗಳನ್ನೊಡ್ಡತಕ್ಕದ್ದು. ಹೀಗೆ ಇಂದಿನ ನಾಗರಿಕತೆಯ ಧಾವಂತ ಪ್ರಚಲನೆಗಳು ಬೆಟ್ಟಗಳ ಮೇಲಣ ದೊಡ್ಡ ದೊಡ್ಡ ಹಿಮಗಡ್ಡೆಗಳ ಜಾರು ಚಲನೆಯನ್ನು ಹೋಲುತ್ತವೆ. ನೆಲದ ಮೇಲೆ ಅಡ್ಡ ಸಿಕ್ಕಿದ್ದನ್ನು ಗುಡಿಸಿ ಹಾಕುತ್ತ, ದೀರ್ಘಕಾಲ ಗೋಚರಕ್ಕೆ ಬಾರದಿದ್ದ ಸಮಾಜದ ಬೇರುಗಳನ್ನು ಕೆದಕಿ, ಸೂರ್ಯ ರಶ್ಮಿಯ ಪ್ರಕಾಶಕ್ಕೆ, ತೇಜಸ್ಸಿಗೆ ಒಡ್ಡುವಷ್ಟು ಕಸುವುಳ್ಳವು. ಈ ಸಾಮಾಜಿಕ ಹಿಮ ಘನದ ಚಲನೆ ಮನುಷ್ಯ ಸಮುದಾಯಗಳ ಜೀವನವನ್ನು ಆಮೂಲಾಗ್ರವಾಗಿ ಎತ್ತಿ ತೋರಿಸುವ ಬೇಸಾಯದಲ್ಲಿ ತೊಡಗಿದೆ. ಬಾಳ್‌ಗುಲಾಬಿಯ ಭವಿಷ್ಯದ್ವಿಕಸನದ ಹರಿಕಾರನಾಗಿ.

ಕೆಲವು ಜನ ಈ ಸಂಗತಿಗಳನ್ನು ಶಾಲೆಗಳಲ್ಲೂ ಗ್ರಂಥಾಲಯಗಳಲ್ಲೂ ಅಧ್ಯಯನ ಮಾಡಿ ತಿಳಿದುಕೊಂಡಿದ್ದಾರೆ. ಆದರೆ ಹಲವರು ಆಧುನಿಕ ಸಮಾಜದ ವಿಸ್ತಾರ ನಗರ ಕೇಂದ್ರಗಳಲ್ಲಿ ಅಳಿವಿನಿಂದುಳಿಯಲು ನಡೆಯುತ್ತಿರುವ ರುಬ್ಬುಗೆಯ ಹೋರಾಟದ ಸಾಕ್ಷಾತ್ಪರಿಚಯ ಪಡೆದವರು. ಕೆಲವರಂತೂ ಭಯಚಕಿತರಾಗಿ ಮೊಣಕಾಲೂರಿ ಪ್ರಾರ್ಥಿಸುತ್ತ ಯಾವುದು ಪ್ರಚಲಿತವೋ ಅದಕ್ಕೆ – ರೂಢಮೂಲ ಪದ್ಧತಿಗೆ – ತಮ್ಮ ಊಳಿಗವನ್ನು ಸಲ್ಲಿಸಲು ಸಜ್ಜಾಗುತ್ತಿದ್ದಾರೆ. ಅನೇಕಾನೇಕರಿಗೆ ದಿಗಿಲಾಗಿ ಕಾತರ ಮೂಡಿದೆ. "ಪರಿವರ್ತನೆ" ಇಲ್ಲವೆ "ಕ್ರಾಂತಿ" ಎಂಬ ಶಬ್ದಗಳನ್ನೇ ಕಿವಿ ತಡೆದು ಕೊಳ್ಳಲಾರದೆಂಬಂತೆ ಇವರೆಲ್ಲ ದಿಙ್ಮೂಢರಾಗಿದ್ದಾರೆ. ಅನೇಕರಿಗೆ ರಾವು ಬಡಿದಂತೆ ಇದೆ; ಕಿಂಕರ್ತವ್ಯ ಪರಿಜ್ಞಾನ ಹೊಳೆಯದೆ, ಪರಿವರ್ತನೆಗಳಿಗೆ ಸಂಸಿದ್ಧರಾಗದೆ, ಇವರೆಲ್ಲ ಅವುಗಳ ಮುಂದೆ ಕೃಪಾಯಾಚಕರಂತೆ ನಿಂತುಬಿಟ್ಟಿದ್ದಾರೆ. — ಸುರುಳಿ

ಸುತ್ತಿಕೊಂಡು ಹೆಡೆಯೆತ್ತಿ ಆಂದೋಲಿಸುತ್ತಿರುವ ಸರ್ಪದ ಸಮಕ್ಷದಲ್ಲಿರುವ ಭಯ ಚಕಿತವಾದ ದೀನ ಪಕ್ಷಿಯಂತೆ !

ಆಧುನಿಕ ಮನುಷ್ಯನು ತನ್ನ ಪೂರ್ವಿಕರು ತಂಡ ತಂಡವಾಗಿ ಹಾಕಿದ ತಳಪಾಯದ ಮೇಲೆ ತನ್ನ ಜೀವಿತಸೌಧವನ್ನು ಕಟ್ಟಿ ನಿಲ್ಲಿಸಿಕೊಳ್ಳುತ್ತಿದ್ದಾನೆ. ತನಗೆ ಹೊಂದುವ ಸಾಂಸ್ಕೃತಿಕ ಕ್ರಾಂತಿಯನ್ನು ಪೋಷಿಸಿಕೊಂಡು, ಅದಕ್ಕೆ ಸಾಮಾಜಿಕ ಜೀವಸದ ಉಸಿರು ತುಂಬಿ, ಅದರಲ್ಲೊಂದು ಸಾಮುದಾಯಿಕ ಆತ್ಮಚೈತನ್ಯವನ್ನು ಪ್ರತಿಷ್ಠಾಪಿಸಿ, ಸಂಸ್ಕೃತಿಯನ್ನು ಅಜರಾಮರವಾಗಿ ಮಾಡಿಕೊಳ್ಳುತ್ತಿದ್ದಾನೆ. ಸಾಂಪ್ರತ ಕಾಲದಲ್ಲಿ ರೂಢಿಗೆ ಬಂದಿರುವ ಇಲೆಕ್ಟ್ರಾನಿಕ್ ವಿಧಾನದ ಮೂಲಕ ಗುರುತಿಸಿಕೊಂಡ ದಾರಿಯಲ್ಲಿ ಧಾವಿಸುತ್ತ ಮುಂಬರಿಯುತ್ತಿದ್ದಾನೆ. ಹಾಬ್ಸ್ ವಿಚಾರಿ ಮುಂಗಂಡ ಲಿವೈಥಿಯನ್ ದೈತ್ಯಶಕ್ತಿ ಅಸ್ತಿತ್ವಕ್ಕೆ ಬಂದಿದೆ. ಈಗ ಈ ಪೆಡಂಭೂತ ಹೆಜ್ಜೆ ಹಾಕ ತೊಡಗಿದೆ.

ಮನುಷ್ಯವರ್ಗವು ವಿನಾಶದಿಂದ ಪಾರಾಗಬೇಕಾದರೆ, ನಾವೇ ಕೈಯಾರ ನಿರ್ಮಾಣ ಮಾಡಿಕೊಂಡು ಜೀವದಾನ ಮಾಡಿದ ಯಂತ್ರ ಪೆಡಂಭೂತದ ಪಟ್ಟಿನಿಂದ ಬಿಡುಗಡೆ ಪಡೆಯಬೇಕಾದರೆ, ಕ್ಷಿಪ್ರವಾಗಿ ಜಾಣತನದಿಂದ ನಿರ್ಧಾರಕ ಪ್ರಯತ್ನವನ್ನು ಕೈಕೊಳ್ಳುವುದು ಅತ್ಯವಶ್ಯವಾಗಿದೆ. ದುರ್ಗಮ, ದುಸ್ಸಾಧ್ಯ, ಎಂಬ ಮಾತು ಮಾತ್ರ ಆಧುನಿಕ ಮನುಷ್ಯನು ಎದುರಿಸ ಬಂದ ಪರಿಸ್ಥಿತಿಯನ್ನು ವಿವರಿಸಬಹುದಾದ ಸರ್ವೋತ್ತಮ ಶಬ್ದ. ಸಮಾಜ ಇಂದು ಹಾಯುತ್ತಿರುವ ಅನುಭವ ಅನಿರೀಕ್ಷಿತವಾಗಿದ್ದು, ಅದರ ಪ್ರಚಲನೆಯ ಗತಿವೇಗ ಶೈಲಿಗಳನ್ನು ತಟಾಯಿಸಿ ಉಳಿದುಕೊಳ್ಳುವುದೇ ಮನುಷ್ಯನಿಗೆ ದುಸ್ತರವಾಗಿದೆ.

## ಹೊಸ ಜೀವನ ವಿಧಾನವೊಂದು ಸಾಧ್ಯ

ನನ್ನ ತೀವ್ರವಾದ ಮನೋಭೀಷ್ಟಗಳಿಗೂ – ಮೊದಲ ಬಗೆಯೆಲವುಗಳಿಗೂ –ವ್ಯಾವಹಾರಿಕವಾಗಿ ಸಾಧನೀಯ ಎನ್ನಿಸಿದ ಆದ್ಯತೆಗಳಿಗೂ ಆಧಾರವಾಗಿ ಪ್ರಭಾವ ಬೀರಿದ್ದು ನಾನು ಬೆಳೆದ ನನ್ನ ಕುಟುಂಬ-ಜನ. ಇವರೆಲ್ಲ ಶಿಲ್ಪಿಗಳು (ಸಿವಿಲ್ ಇಂಜನಿಯರುಗಳು) : ವಿಷಯ ತಿಳಿದ ತಂತ್ರಜ್ಞರು (ಟೆಕ್ನಿಷಿಯನ್ಸ್). ದುಸ್ಸಾಧ್ಯವೆನ್ನಿಸಿದ ವಿಘ್ನಗಳನ್ನು ಎದುರಿಸಿ ನಿಭಾಯಿಸುತ್ತ ಗೆಲ್ಲುವುದರಲ್ಲಿ ಬಲ್ಲಿದರು. ಅವರಿಗೆ ಇಷ್ಟವಾಗಿದ್ದ ಜೀವಿತ ಪಲ್ಲವಿ ಇದು: "ನಮ್ಮ ಹೆಗಲಿಗೇರಿದ ಕಷ್ಟಕರವೆನ್ನಿಸಿದ ಕರ್ತವ್ಯಗಳನ್ನು ಕೂಡಲೇ ಸಾಧಿಸುತ್ತೇವೆ. ಅಸಾಧ್ಯವೆನ್ನಿಸುವ ಕರ್ತವ್ಯಗಳನ್ನು ನಿರ್ವಾಹ ಮಾಡಲು ಸ್ವಲ್ಪಕಾಲಾವಕಾಶವನ್ನು ಬಳಸಿಕೊಳ್ಳುತ್ತೇವೆ."

ನನ್ನ ನೆನಪುಗಳಲ್ಲಿ ಬಹಳ ಹಿಂದಣದೆಂದರೆ 1889 ರ ಜೂನ್ ತಿಂಗಳು ನನಗೆ ಕೊಟ್ಟ ಅನುಭವ. ಅಂದು ಉತ್ತರ ಪೆನ್ಸಿಲ್ವೇನಿಯಾ ರಾಜ್ಯದಲ್ಲಿ ನಮ್ಮ ನೆರೆ ಹೊರೆಯಾದ ಟಿಯೋಗಾ ಜಿಲ್ಲೆ ಪ್ರಕೃತಿ ವಿಕೋಪದಿಂದ ತುಂಬ ದೊಡ್ಡ ಪಾಳನ್ನನು ಭವಿಸಿತು. ಅನೇಕ ದಿನಗಳ ಕಾಲ ಸಂತತವಾಗಿ ಮಳೆ ಸುರಿಯಿತು. ಬಳಿಕ ಒಂದಿರುಳು ಪ್ರಲಯೋಪಮವಾಗಿ ನೆರೆಯೇರಿತು. ಮರುದಿನ ಬೆಳಗ್ಗೆ ನಮ್ಮ ಕಣಿವೆಯನ್ನು ನೀರಲ್ಲಿ ತೇಲಿಸಿತು. ಚಂಡಮಾರುತದ ಕೇಂದ್ರ ಸ್ಥಲಾಂತರಗೊಂಡದ್ದರಿಂದ ನೆರೆ ಯಿಳಿಯಲು ಮೊದಲಾಯಿತು. ನಾನು ಈ ಹಾಳ್ನೋಟವನ್ನು ನೋಡಲು ತಾತ ತಂದೆಯರೊಂದಿಗೆ ಕಣಿವೆಯ ಕಡೆ ಹೋದೆನು. ಆ ಪ್ರದೇಶದಲ್ಲಿ ಹರಿಯುವ ಟಿಯೋಗಾ ನದಿಯ ದಂಡೆಯಲ್ಲಿ ಮಾರಿಸ್ ಜಂಕ್‌ಷನ್‌ವರೆಗೆ ಬೆಟ್ಟದ ಪಕ್ಕದಲ್ಲಿ ದಾರಿಗಳನ್ನು ಬಿಡಿಸಿದ್ದ ರೈಲು ಮತ್ತು ರಸ್ತೆ ಸಂಚಾರ ವ್ಯವಸ್ಥೆಗೆ ಅವರು ಜವಾಬು ದಾರರಾಗಿದ್ದರು. ನೆರೆಯೇರಿಕೆಗೆ ಮೊದಲು ಹಳೆದಾರಿಯ ಸೇತುವೆಯೊಂದೂ ಭೂಮಾರ್ಗದಲ್ಲಿ ಕಟ್ಟಿದ್ದ ಸೇತುವೆಯೊಂದೂ ಇದ್ದುವು. ಇವೆರಡನ್ನೂ ನೆರೆನೀರು ಕೊಚ್ಚಿಕೊಂಡು ಹೋಗಿತ್ತು. ಎರಡೂ ರಸ್ತೆಗಳ ತಲಪ್ರದೇಶವೂ ಹೇಳ ಹೆಸರಿಲ್ಲ ವಾಗಿತ್ತು. ಟಿಯೋಗಾನದಿ ತನ್ನ ಪಾತ್ರವನ್ನು ಬದಲಾಯಿಸಿಬಿಟ್ಟಿತ್ತು. ಕಣಿವೆ ಯಲ್ಲಿದ್ದ ಇತರ ಸೇತುವೆಗಳೆಲ್ಲ ಧ್ವಂಸವಾಗಿ ಹೋಗಿದ್ದುವು. ಮನೆ ಮಾರುಗಳೂ ಕೊಚ್ಚಿಕೊಂಡು ಹೋಗಿದ್ದುವು. ಕಣಿವೆಯಲ್ಲಿ ಎತ್ತ ಕಣ್ಣು ಹಾಯಿಸಿದರೂ ಮನುಷ್ಯ ನಿರ್ಮಿತಗಳಾದ ಕಾರ್ಯಗಳೆಲ್ಲ ಮೇಲ್ವಾಯ್ದು ಬಂದ ಪ್ರಕೃತಿ ವಿಕೋಪಕ್ಕೆ ತುತ್ತಾ ಗಿದ್ದುವು. ನಾನು ಶಿಲ್ಪಿಗಳನ್ನು ನೋಡುತ್ತ ನಿಂತೆ. ಅವರು ತಮ್ಮ ಮುಂದೆ ಇರಿಸಿಕೊಂಡ ದುರಸ್ತಿ ಕೆಲಸಗಳೇನೋ ಎಂದು ಬೆರಗಾದದ್ದು ನನಗೆ ಚೆನ್ನಾಗಿ ಜ್ಞಾಪಕವಿದೆ. ಯಾರ ಕಣ್ಣಲ್ಲೂ ಅಶ್ರುಧಾರೆಯಿಲ್ಲ, ಕೈ ಕೈ ಹಿಸುಕಾಟವಿಲ್ಲ. ಆಗಿ ಹೋಗಿದ್ದದ್ದರ ಬಗ್ಗೆ ಮಾತು ಕತೆ ಇಲ್ಲ! ಸ್ವಲ್ಪ ಹೊತ್ತು ಆದದ್ದನ್ನು ನೋಡಿ, ಆಗಬೇಕಾದದ್ದನ್ನು ಯೋಚಿಸುವುದು ಅವರ ಚಿತ್ತಕ್ಕೆ ಸಾಮಾಗ್ರಿಯಾಯಿತು. ನೋಟ ನೋಡಿ; ಬೆಟ್ಟವೇರಿ ಇಳಿದು, ಬಿಡದಿಗೆ ಹಿಂತಿರುಗಿದೆವು.

ಅಂದಿನ ದಿನಗಳಲ್ಲಿ ದೂರವಾಣಿ ( ಟೆಲಿಫೋನ್ ) ಆಗಲಿ, ಆಕಾಶವಾಣಿ (ರೇಡಿಯೋ) ಆಗಲಿ ಇರಲಿಲ್ಲ. ಸುದ್ದಿ ಸಾಗಣೆಯ ಟೆಲಿಗ್ರಾಫ್ ತಂತಿಗಳೆಲ್ಲ ಬಿರು ಗಾಳಿಗೆ ಸಿಕ್ಕಿ ಭಗ್ನವಾಗಿದ್ದುವು. ರೈಲು ರಸ್ತೆಗಳ ಉಪಯೋಗವೂ ತಪ್ಪಿಹೋಗಿತ್ತು. ಆದರೂ ಕೆಲವು ಘಂಟೆಗಳೊಳಗಾಗಿ ಟೆಲಿಗ್ರಾಫ್ ಕಂಬಗಳಮೇಲೆ ಹೊಸತಂತಿಗಳು ಅಳವಟ್ಟುವು. ಎತ್ತುಗಳು ಹೇಸರ ಕತ್ತೆಗಳು ಕುದುರೆಗಳು ನದೀತೀರಕ್ಕೆ ಹೊರೆ ಹೊತ್ತು ಹೊರಟುವು. ಸಾಗುವಾನಿ ಕಾರಖಾನೆಗಳು ಶಿಲ್ಪವಿವರೋದ್ದೇಶಕ್ಕೆ ತಕ್ಕಂತೆ ದಿಮ್ಮಿ ತೊಲೆಗಳನ್ನು ಕೊಯ್ದು ಕೊಟ್ಟವು. ಕಟ್ಟಡದ ಸಿಬ್ಬಂದಿ ಪಾಳು ಬೀಳುಗಳ ನೈಕ್ತಿ ಪ್ರಸ್ತುತ ಕೈಗಿದ್ದ ಕಾಯಕ ಕ್ಷೇತ್ರವನ್ನು ಬಿಡಿಸಿಕೊಂಡರು. ಕೆಲವೇ ದಿನ

ಗಳಲ್ಲಿ ಟೆಲಿಗ್ರಾಫ್ ತಂತಿಗಳು ಸುದ್ದಿಗಳನ್ನು ಸಾಗಿಸಿ ತರಲಾಂಭಿಸಿದುವು. ರೈಲು ರಸ್ತೆಗಳೂ ಭೂಮಾರ್ಗಗಳೂ ಸಂಚಾರಕ್ಕೆ ಒದಗಿದುವು. ಕಣಿವೆಯಲ್ಲಿ ಜನಜೀವನ ಸಜ್ಜಾಗಿ ಮಾಮೂಲಿಗೆ ಹಿಂತಿರುಗುವ ಲಕ್ಷಣಗಳು ತೋರಿಕೊಂಡುವು.

ಇಡಿಯ ಜನವರ್ಗ ಸಂಪೂರ್ಣವಾಗಿ ಹೋಯಿತೆಂಬಷ್ಟರ ಮಹಾ ವಿನಾಶವನ್ನು ಎದುರಿಸಿತು. ಇಂಥ ವಿಪತ್ತು ಹಿಂದೆಂದೂ ಸಂಭವಿಸಿರಲಿಲ್ಲ. ನೆರೆಯಿಂದ ಇಷ್ಟು ಹಾಳು ಬೀಳಾದದ್ದು ಆ ಪ್ರದೇಶದ ವೃದ್ಧರ ನೆನಪಿನಲ್ಲಿ ಸುಳಿಯಲಿಲ್ಲ. ಆದರೆ ಈ ದುರಂತ ದಲ್ಲಿ ಸತ್ತವರ ಸಂಖ್ಯೆ ಸ್ವಲ್ಪವೇ. ಜನಸಮುದಾಯ ಗಳಿಸಿಕೊಂಡಿದ್ದ ಕಾರ್ಯ ನೈಪುಣ್ಯಗಳಾಗಲಿ, ವ್ಯವಸ್ಥೆಯಾಗಲಿ, ಶಿಸ್ತಾಗಲಿ, ಸ್ಥೈರ್ಯವಾಗಲಿ, ಪಟ್ಟು ಹಿಡಿ ತದ ಮನೋಭಾವವಾಗಲಿ ಅಂತರಂಗದಲ್ಲಿ ಇಂಗದೆ ಅನಾಮತ್ತಾಗಿತ್ತು. ಪ್ರಳಯ ವಾದ ಮಾರನೆಯ ದಿನ, ಇರುಳು ಕವಿಯುವುದರೊಳಗಾಗಿ ಪುನಃ ಕಾರ್ಯ ರಚನೆಗೆ ಜನಮನಸ್ಸು ಸಂಕಲ್ಪಿಸಿಬಿಟ್ಟಿತು!

ಟಿಯೋಗಾ ಕಣಿವೆಯಲ್ಲಿ ನಡೆದ ಈ ಸ್ಥಳೀಯ ಪ್ರಳಯ ಕಥೆ ಎಪ್ಪತ್ತು ವರ್ಷ ಗಳಷ್ಟು ಹಿಂದಣದು. ಅಲ್ಲಿಂದೀಚೆಗೆ ಅನೇಕ ಜನಸಮುದಾಯಗಳು ಬಿರುಗಾಳಿ, ನೆರೆ ಮತ್ತು ಭೂಕಂಪಗಳಿಂದಲೂ ಅಗ್ನಿಪಾತದಿಂದಲೂ ಆಗಾಗ ವಿಪತ್ತಿಗೀಡಾ ದದ್ದುಂಟು. ಆದರೆ ಟಿಯೋಗಾ ಕಣಿವೆಯ ಜನದ ಈ ಮಹಾಕಷ್ಟಾನುಭವ ಪ್ರಕೃತಿ ವಿಧಾಯಕವೆನ್ನಿಸಿ ಪೂರ್ವೋದ್ದೇಶದಿಂದ ಕೂಡಿದ್ದೆಂಬಂತೆ ನಡೆದು ಹೋಯಿತು. ಸಮಾಜದ ಏಳಿಗೆಗೋಸ್ಕರ ಜನರು ಜೊತೆಗಾರರೊಡನೆ ಮಾಡಿಕೊಂಡ ವ್ಯವಸ್ಥೆಯೆಲ್ಲ ಧ್ವಂಸವಾಯಿತೆಂದು ದುಃಖಪಟ್ಟರು. ವಿಷಮಸಂದರ್ಭ ಪರಂಪರೆಯಲ್ಲಿ,–ನಷ್ಟಕ್ಕೆ ಕಾರಣ ಯಾವುದಾದರೂ ಆಗಲಿ, ಅದರ ಕಥೆ ಒಂದೇ ತೆರ. ಕಷ್ಟಕಾಲದ ಅನುಭವ, ಕೌಶಲ, ತಂತ್ರ ಪ್ರಾವೀಣ್ಯ, ಪರಸ್ಪರ ಸಹಾಯ ವೃತ್ತಿ, ಸಂಯೋಜಕ ಚಿತ್ತ–ಇವೆಲ್ಲ ನಿತ್ಯಜಾಗೃತವಾಗಿದ್ದು, ಕ್ಷಿಪ್ರವಾಗಿ ಸಾಧನ ಸಾಮಗ್ರಿಯನ್ನು ಶೇಖರಿಸಿ, ಸೌಕರ್ಯ ಗಳನ್ನು ಬಳಸಿ, ನೂತನ ಸೃಷ್ಟಿಯನ್ನಾಗಮಾಡಿಸಿಕೊಂಡರು.

ನಿಯತಿಯ ಸಮಕ್ಷದಲ್ಲಿ, ವಿಷಮ ಸಂದರ್ಭವೆಸೆಯುವ ಸವಾಲು ಧಿಕ್ಕಾರಗಳೆ ದುರು, ಕರ್ತವ್ಯ ನಿರ್ವಾಹದ ಅವಕಾಶ ಸನ್ನಿಧಿಯಲ್ಲಿ, ಮನುಷ್ಯನಿಗೆ ಸಾಧ್ಯವಾಗುವ ಸಿದ್ಧಿವಿಸ್ಮಯಕ್ಕೂ ಬೆರಗಿಗೂ ಶಿಲ್ಪ ರಚನೆಗೆ ಸಂಬಂಧಪಟ್ಟ ಎರಡು ಸರಳ ಸೂತ್ರ ಗಳ ಅನುಷ್ಠಾನವೇ ಕಾರಣವೆನ್ನಬಹುದು: (1) ಸಾಧನ ಸಾಮಗ್ರಿ ಸೌಕರ್ಯಗಳ ಹಾಗೂ ಜನಬಲದ ಒದವಿರುವಾಗ ನಮ್ಮಿಂದ ಆಗುವ ಅತ್ಯುತ್ತಮ ಕಾರ್ಯ ಪ್ರಯತ್ನವಾವುದು? (2) ಕಾರ್ಯ ನಡಸುತ್ತ ನಡಸುತ್ತ ಯಾವ ಯಾವ ಮಟ್ಟದ ಅಭಿವೃದ್ಧಿಗಳನ್ನೂ ಮೇಲ್ಪಾಡುಗಳನ್ನೂ ನಾವು ಸಾಧಿಸಿಯೇವು?

## ಹಳೆಯದನ್ನು ತೊರೆದು ಹೊಸದಕ್ಕೆ ತಿರುಗುವುದು

ಮನುಷ್ಯನ ಇನ್ನೂ ಆಕಾರತಳೆಯದ ಭವಿಷ್ಯತ್ತನ್ನು ಕಾರ್ಯಮುಖವಾಗಿ ರೂಪಗೊಳಿಸುವ ಅವಕಾಶ ಮೂರು ಚೇತೋಹಾರಿಯಾದ ಅನುಭವಗಳನ್ನು ಹಾಯುವ ತಲೆಮೊರೆಗೆ ಲಭಿಸುತ್ತದೆ. ಪ್ರಕೃತಿಯ ಉಗ್ರಾಣದಲ್ಲಿ ನಮ್ಮ ಬಳಕೆಗೋಸ್ಕರ ಅಣಿಯಾಗಿರುವ ಸಂಪನ್ಮೂಲಗಳನ್ನೂ, ಮನುಷ್ಯ ಪ್ರಯತ್ನದಿಂದ ಅಣಿ ಮಾಡಿಕೊಳ್ಳಲಾಗುವ ಸಾಧನ ಸೌಕರ್ಯಗಳನ್ನೂ, ವಿಸ್ತಾರವಾಗಿಯೂ ಸಮಗ್ರವಾಗಿಯೂ ಬಳಸುವುದೇ ಮೊದಲನೆಯ ಮತ್ತು ಮನುಷ್ಯನು ಪಡುವ ಅನುಭವಗಳಲ್ಲೆಲ್ಲ ಅತ್ಯಂತ ಮುಖ್ಯವಾದ ಅನುಭವ. ಇತ್ತೀಚಿನ ಕಾಲದವರೆಗೆ ಈ ಸಂಪನ್ಮೂಲಗಳನ್ನಾಗಲಿ ಇತರ ಸಾಧನ ಸೌಕರ್ಯಗಳನ್ನಾಗಲಿ ಅಲ್ಪಭಾಗದಷ್ಟು ಮಾತ್ರ ಬಳಸಿಕೊಂಡಿದ್ದಾನೆ, ಇಲ್ಲವೆ ಅವುಗಳಲ್ಲಿ ಬಹುಭಾಗವನ್ನು ಬಳಸುವ ಗೋಜಿಗೇ ಹೋಗಿಲ್ಲ. ವಾಸ್ತವಿಕ ಸಂಗತಿಯೇನೆಂದರೆ, ಈ ಶತಮಾನದ ಮೊದಮೊದಲ ವರ್ಷಗಳವರೆಗೆ, ಮನುಷ್ಯವರ್ಗದಲ್ಲಿ ಬಹುಸಂಖ್ಯಾಕರು ಗ್ರಾಮಗಳಲ್ಲಿ ವಾಸಮಾಡುತ್ತ, ಅವರೆಲ್ಲ ತಮ್ಮ ಜೀವಿಕೆಗೋಸುಗ ಅಲ್ಲಲ್ಲಿ ಒದಗಿದಷ್ಟು ಭೂವ್ಯವಸಾಯದ ಕ್ಷೇತ್ರಗಳನ್ನು ಅವಲಂಬಿಸಿಕೊಂಡಿದ್ದರು. ಅವರ ಬೇಸಾಯದ ಬಗೆ ಪರಂಪರೆಯಾಗಿ ಸಾಗಿ ಬಂದ ತೆರದ್ದು; ವಿಜ್ಞಾನ ಯುಗಕ್ಕೆ ಹಿಂದಣದು. ಯಂತ್ರೋದ್ಯಮ ಯುಗಕ್ಕೆ ಮುಂಚಿನದು. ಅನೂಚಾನವಾಗಿ ಸಾಗಿ ಬಂದ ಸಾಮಾನ್ಯ ವ್ಯವಸಾಯ ತಂತ್ರದಲ್ಲೂ ಆಚರಣೆಗಳಲ್ಲೂ ರೈತಜನ ನಂಬಿಕೆಯಿಟ್ಟು, ಅವು ಕೊಡುವಷ್ಟು ಪ್ರಯೋಜನದಲ್ಲಿ ತೃಪ್ತರಾಗಿ, ಬುದ್ಧಿವಿಚಾರಕ್ಕೆ ಅವಕಾಶಕೊಟ್ಟು ಬದಲಾವಣೆಯ ಆವಶ್ಯಕತೆಯನ್ನು ಕಂಡುಕೊಳ್ಳದೆ, ಮೂಗೊಪ್ಪಿಗೆಯಿಂದ ಪದ್ಧತಿಯನ್ನು ನಡೆಸುತ್ತಹೋದರು. ಬಹುಜನವರ್ಗದ ಮುಖ್ಯವೃತ್ತಿ ಭೂವ್ಯವಸಾಯವೇ ಆಗಿತ್ತು; ಮತ್ತು ಬೇಸಾಯವು ಬಹುಮಟ್ಟಿಗೆ ಕಾರ್ಮಿಕ ಬಲವನ್ನೇ ಆಶ್ರಯಿಸಿಕೊಂಡಿತ್ತು. ಜೊತೆಗೆ ಪಳಗಿಸಿದ ಪ್ರಾಣಿಗಳೂ, ಕೈಯಲ್ಲಿ ಮಾಡಿಕೊಂಡ ನೇಗಿಲು ಮೊದಲಾದ ಉಪಕರಣಗಳೂ ಕೊಡುವ ನೆರವೆಷ್ಟೋ ಅಷ್ಟೇ.

ಯಾಂತ್ರಿಕ ಶಕ್ತಿಯ ಬಳಕೆಯಿಲ್ಲದೆ, ಮಹಾ ಕಾರ್ಯಕ್ಷಮಗಳಾದ ತಂತ್ರೋಪಕರಣಗಳ ಬಳಕೆಯಿಲ್ಲದೆ, ಉತ್ಪಾದಿಸಬೇಕಾದ ಆಹಾರ ವಸ್ತುಗಳ ವಿವರ ಸಂಶೋಧನೆಯಲ್ಲಿ ತೊಡಗದೆ, ಸಸ್ಯ ವಿಜ್ಞಾನ, ರಸಾಯನ ವಿಜ್ಞಾನ, ಎಲೆಕ್ಟ್ರಾನಿಕ್ಸ್ (ವಿದ್ಯುತ್ಸಾಧನೋಪಕರಣಗಳು), ಪ್ಲಾಸ್ಟಿಕ್ಸ್, ಶೀತಕ ಯಂತ್ರಗಳು (ರೆಫ್ರಿಜರೇಷನ್) ಹಾಗೂ ಬೇಸಾಯಕ್ಕೆ ಸಂಬಂಧಿಸಿದ ಜ್ಞಾನ ಕ್ಷೇತ್ರಗಳಲ್ಲಿ ಸಾಧ್ಯವಾದ ಇತರ ಸಮಾಂತರಾನುಭವಗಳ ಪರಿಚಯವನ್ನು ಪಡೆಯದೆ, ಪರಂಪರೆಯಷ್ಟು ಮಾತ್ರದ ತೃಪ್ತಿಯಿಂದಲೇ, ಮುಂಬರಿದಿದ್ದರೆ–ಮನುಷ್ಯವರ್ಗ ಇನ್ನೂ ಉಪವಾಸದ

ಅಂಚಿನಲ್ಲೇ ಹೊತ್ತುಕಳೆಯುತ್ತ, ಕಾಲ ಕಾಲಕ್ಕೆ ಸಾಂಕ್ರಾಮಿಕ ಜಾಡ್ಯಗಳ ಪೀಡೆಯನ್ನು ಅನುಭವಿಸಿಕೊಂಡಿರಬೇಕಾಗುತ್ತಿತ್ತು.

ಭೂವ್ಯವಸಾಯವನ್ನು ಆಧುನಿಕವಾಗಿ ಮಾಡಿಕೊಂಡಮೇಲೆ ತಾನೆ ಮನುಷ್ಯನು ಯಂತ್ರೋದ್ಯಮವನ್ನು ಆಧುನಿಕಮಾಡಿಕೊಂಡನು. ಪಶ್ಚಿಮ ದೇಶಗಳು ಆಧುನಿಕವಾದ ಮೇಲೆ ಪೂರ್ವ ದಕ್ಷಿಣ ದೇಶಗಳು ಆಧುನಿಕವಾದುವು. ಈಗಣ ತಲೆಮಾರಿನವರು ಮಾತ್ರ, ಎಂದರೆ 1945 ರ ಯುದ್ಧಾನಂತರ ಜೀವನ ವ್ಯಾಪಾರಕ್ಕೆ ಬಂದವರು ಮಾತ್ರ, ಸ್ವಾತಂತ್ರ್ಯವುಳ್ಳ ದೇಶಗಳಲ್ಲೂ, ಇನ್ನೂ ಪರಾಧೀನತೆಯಲ್ಲಿರುವ ಮಧ್ಯ ಹಾಗೂ ದಕ್ಷಿಣ ಅಮೆರಿಕಾದೇಶಗಳಲ್ಲೂ ಅಲ್ಲಲ್ಲಿಯ ಮನೆವಾರ್ತೆಗಳನ್ನು ಆಧುನಿಕವಾಗಿ ಮಾಡಿಕೊಳ್ಳತೊಡಗಿದರು. ಈ ಪ್ರಯತ್ನಗಳ ಫಲವೆಂದರೆ,–ಜನಸಂಚಾರ ಸೌಕರ್ಯದಲ್ಲೂ, ವಸ್ತುಸಂಚಾರ ಸೌಕರ್ಯದಲ್ಲೂ ಮತ್ತು ವಿವಿಧ ವಸ್ತುಗಳ ಉತ್ಪಾದಕ ಕ್ಷೇತ್ರಗಳಲ್ಲೂ ಅಷ್ಟಿಷ್ಟು ಯಶಸ್ಸು ಲಭ್ಯವಾದದ್ದು. ಆದರೆ ಸಾಮಾಜಿಕ ಸೇವಾಸೌಕರ್ಯಗಳಲ್ಲೂ ಆಡಳಿತಕ್ಕೆ ಬೇಕಾದ ಸೌಕರ್ಯೋಪಕರಣಗಳಲ್ಲೂ ಇನ್ನೂ ಅಷ್ಟು ಯಶಸ್ಸು ದೊರಕಿಲ್ಲ. ಭೂವ್ಯವಸಾಯದಲ್ಲಂತೂ ಇಂದಿನವರೆಗೆ ಅವರು ಕಂಡಿರುವ ಪ್ರಗತಿ ಬಹುಸ್ವಲ್ಪವೇ.

ಎರಡನೆಯ ಅವಕಾಶ: ಇಂದಿನ ತಲೆಮಾರಿನ ಮನುಷ್ಯಾನುಭವ ತಾನು ಎದುರಿಸಬೇಕಾದ ಸಮಸ್ಯೆಯ ಪರಿಹಾರ ಕಾಲದಲ್ಲಿ ಕಂಡುಕೊಂಡ ಸತ್ಯಇದು. "ನೂತನ ಕಲ್ಪನಾಶಕ್ತಿ" (Inventiveness) ಎಂಬುದು ವಂಶ ಪಾರಂಪರ್ಯವಾಗಿ ಸಾಗಿಬಂದ ಪ್ರತಿಭೆಯಲ್ಲ; ಆದದ್ದರಿಂದ ಈ ಶಕ್ತಿ ಅಂಥ ಪ್ರತಿಭಾಶಾಲಿ ಗಳಾಗಿ ಹುಟ್ಟಿದ ಸ್ವಲ್ಪ ಜನದಲ್ಲಿ ಮಾತ್ರ ಆಶ್ರಯ ಪಡೆದಿರುತ್ತದೆ ಎಂಬ ಕುರುಡೆಣಿಕೆಯು ಸಲ್ಲ. ಆದರೆ ಸರ್ವತ್ರ ಮನುಷ್ಯಾಂತರಂಗದಲ್ಲಿ ವಿಸ್ತಾರವಾಗಿ ನೆಲಸಿರುವ ಶಕ್ತಿವಿಶೇಷ ಅದು ಎಂಬುದೇ ಇಂದಿನ ತಲೆಮಾರಿನ ಜನದ ಗೋಚರಕ್ಕೆ ಬಂದ ಸತ್ಯಾಂಶ. ಮನುಷ್ಯನಲ್ಲಿ ಕುತೂಹಲವನ್ನು ಕೆರಳಿಸುವ ಪರಿಸರವನ್ನು ಕಲ್ಪಿಸಿದ್ದೇ ಆದರೆ, ಅವನಲ್ಲಿ ಸಹಜವಾಗಿರುವ ಪ್ರತಿಭೆ ಹಾಗೂ ಉಪಾಯ ಕೌಶಲ ವೃತ್ತಿಗಳಿಗೆ ಪ್ರೋತ್ಸಾಹ ಕೊಟ್ಟದ್ದೇ ಆದರೆ, ಈಗ ಇರುವುದಕ್ಕಿಂತ ಮೇಲಾದದ್ದನ್ನು ಕಂಡುಕೊಂಡೇನು ಎಂಬ ಸಹಜ ಮನಃಪ್ರೇರಣೆ ಅವನಲ್ಲಿ ಕಾರ್ಯ ಮಾಡುವುದಕ್ಕೆ ಅವಕಾಶ ಕೊಟ್ಟದ್ದೇ ಆದರೆ,–ಸರಾಸರಿ ಎನ್ನಿಸುವ ಸಾಮಾನ್ಯ ಬೇಟೆಗಾರ, ಬೇಸಾಯಗಾರ, ಯಂತ್ರಗಾರ, ಅಥವಾ ಕಚೇರಿಯಲ್ಲಿಯ ಕೆಲಸಗಾರನುಒಬ್ಬೊಬ್ಬನೂ ತಾನು ಸಿಕ್ಕಿಕೊಂಡ ನಿರ್ಣಾಯಕ ಸಂದರ್ಭದಲ್ಲಿ ಪ್ರತ್ಯುತ್ಪನ್ನಮತಿಯಾಗಿ, ನೂತನಾವಿಷ್ಕಾರಗಳನ್ನು ಸಂತತವಾಗಿ ಮಾಡಿಕೊಂಡೇ ಹೋಗುತ್ತಾನೆ. ಯಂತ್ರೋದ್ಯಮಕರಣ ಹಾಗೂ "ಆಧುನಿಕೀಕರಣ"ಗಳು ಕಾಲಗರ್ಭದಿಂದ ಒಡಮೂಡಿದ ತರುಣದಲ್ಲಿ ಈ ಶೋಧನೋಪಾಯಶೀಲತೆ

ಜನದಲ್ಲಿ ಎಲ್ಲೆಲ್ಲೂ ನೆಲಸಿರುವುದು ಬೆಳಕಿಗೆ ಬಂದಿದೆ. ಸಮತಾವಾದಿ ದೇಶಗಳ ಇದುವರೆಗಿನ ಅಭಿವೃದ್ಧಿ ಸಾಧನೆಯ ಲಕ್ಷಣ ಇದೇ. ಈ ಒಂದು ಕಾರ್ಯ ಸೂತ್ರಕ್ಕೆ ಸೇರಬೇಕಾದ ಗುಣಗಳು ಇವು: ವೈಜ್ಞಾನಿಕ (ಸೈಂಟಿಫಿಕ್), ತಾಂತ್ರಿಕ (ಟೆಕ್ನಿಕಲ್) ಅಥವಾ ಯಾಂತ್ರಿಕ (ಮೆಕಾನಿಕಲ್) ವೃತ್ತಿ ಶಿಕ್ಷಣ; ಜೊತೆಗೆ ನಮ್ಮಂತೆಯೇ ಜಾಣರಾದ ಜೊತೆ ಮನುಷ್ಯರ ಬುದ್ಧಿಗೆ ಈಡಾಗಿ ನಮ್ಮ ಬುದ್ಧಿಯನ್ನು ಜೋಡಿಸುವುದು; ಮತ್ತು ಆಧುನಿಕ ಜಗತ್ತು ನಮಗೊಂದು ಪರಾಮರ್ಶೆ ಹೇಳುತ್ತದೆ– "ನೀವು ಒಂದು ಅಣುವನ್ನು ಒಡೆಯಬೇಕಾದರೆ, ಇಲ್ಲವೆ ಮಲೇರಿಯಾ ಬೇನೆಯಿಂದ ಬಿಡುಗಡೆ ಪಡೆಯಬೇಕಾದರೆ, ಇಲ್ಲವೆ ಯಾವುದಾದರೊಂದು ಆಶೋತ್ತರವನ್ನು ಕೈಗೂಡಿಸಿಕೊಳ್ಳಬೇಕಾದರೆ, ನೀವು ಸ್ವಪ್ರಯತ್ನದಲ್ಲಿ ತೊಡಗಿರಿ. ಪ್ರೌಢ ಪ್ರಯೋಗ ಶಾಲೆಯಲ್ಲೋ ಬಡ ಕಾರ್ಮಿಕನ ಮೇಲಟ್ಟದಲ್ಲೋ ಇರಬಹುದಾದ ಬುದ್ಧಿವಂತರೆನ್ನಿಸಿದ ಹೆರವರನ್ನೇ ನಂಬಿಕೊಂಡು ಬೆಲೆಯುಳ್ಳ ಹೊತ್ತನ್ನು ಕಳೆಯಬೇಡಿರಿ. ಅವರ ಪ್ರತಿಭೆ ತಾನಾಗಿಹೊಳೆದು ಹೊರಪಟ್ಟು ನಿಮಗೆ ಪ್ರಯೋಜನ ಕೊಡಲಿ ಎಂದು ಸುಮ್ಮನೆ ಕಾದಿರಬೇಡಿರಿ.

ಮೂರನೆಯ,—ನಮ್ಮ ಚಿತ್ತವನ್ನು ಕದಲಿಸುವ ಬಹುಮುಖ್ಯ,—ಅನುಭವ ಇದು: ವೈಜ್ಞಾನಿಕ ಹಾಗೂ ತಾಂತ್ರಿಕ ಸಮಾಚಾರ ವಿವರಗಳ (1) ಶೀಘ್ರಪ್ರಚಾರ, (2) ಸಂತತವಾಗಿ ಸಮಾಚಾರ ಸಂಗ್ರಹ, ಮತ್ತು (3) ವಿತರಣೆ. ಜೀವಿಕೆಗೋಸ್ಕರ ಒತ್ತಾಯದಿಂದ ದುಡಿಯಬೇಕಾದ ಲಕ್ಷಾಂತರ ಜನರನ್ನು ಆ ಕಾಯಕದಿಂದ ಬಿಡಿಸಿ, ಅದಕ್ಕಿಂತ ಹೆಚ್ಚು ಉಪಯುಕ್ತವಾದ ಕಾಯಕವನ್ನು ಅವರಿಗೆ ತೋರಿಸುವುದಕ್ಕೂ ಈ ಸಂದರ್ಭದಲ್ಲಿ ನಾವು ಗಮನ ಕೊಡಬೇಕು. ಅತ್ಯಂತ ಪ್ರಗತಿಪರವಾದ ದೇಶಗಳಲ್ಲಿ ಮಾತ್ರ ಇಡಿಯ ಜನತೆಗೆ ಹನ್ನೆರಡು ವರ್ಷಗಳ ಬಲಾತ್ಕಾರದ ಧರ್ಮಾರ್ಥ ವಿದ್ಯಾ ಪ್ರಸಾರದ ಏರ್ಪಾಟಿರುತ್ತದೆ. ಶಿಕ್ಷಣ ಸೌಕರ್ಯಗಳು ಸಾಲದೆ ಹೋಗಿ, ಇಂದಿಗೂ ಜನಕ್ಕೆ ಅವಶ್ಯವಾದಷ್ಟು ಪರಿಮಾಣದಲ್ಲಿ ವೈಜ್ಞಾನಿಕ ಶಿಕ್ಷಣವೂ ತಾಂತ್ರಿಕ ಶಿಕ್ಷಣವೂ ದೊರೆಯುತ್ತಿಲ್ಲ. ಮಿತವಾದ ಕಾಯಕದ ದಿನಗಳು, ಅತಿದೀರ್ಘವಲ್ಲದ ಕಾಯಕದವಾರಗಳು,ಮತ್ತು ಸಂಬಳ ಸಹಿತವಾದ ವಿಸ್ತೃತ ವಿಶ್ರಾಂತಿಯ ಅವಧಿಗಳು ಇವು. ಆಧುನಿಕೀಕರಣದಿಂದ ದೊರೆತ ಫಲಗಳು. ಇನ್ನೂ ಅಭಿವೃದ್ಧಿಗೆ ಬಾರದೆ ಇರುವ ದೇಶಗಳು ಈ ಲಾಭಗಳಿಗೋಸ್ಕರ ಕಾದುಕೊಂಡಿವೆ.

ಆಧುನಿಕೀಕರಣದೊಡನೆ ವಿಶೇಷ ವಿಷಯಜ್ಞತೆ ಎಂದರೆ ಬಳಕೆಗೆ ಬಂದಿರುವ "ತಜ್ಞತೆ" ಯನ್ನು ಅನುಗೂಡಿಬರುವ ಗುಣ. ಮನುಷ್ಯವರ್ಗದಲ್ಲಿ ಬಹುಸಂಖ್ಯಾಕರು ಇನ್ನೂ ಈ ವಿಶೇಷ ವಿಷಯಜ್ಞತೆಯಿಂದ ದೂರವಾಗಿ, ಅವರೆಲ್ಲ ಬಹುಮಟ್ಟಿಗೆ ಸ್ವಲ್ಪ ವಿಷಯಜ್ಞರಾಗಿ, ಭೂವ್ಯವಸಾಯದಲ್ಲೋ ಬೆಸ್ತಕಸಬಿನಲ್ಲೋ ಕಾಡುಕುರುಬ,ವೃತ್ತಿಯಲ್ಲೋ ಇದ್ದುಕೊಂಡಿದ್ದಾರೆ.

ವಿಶೇಷ ವಿಷಯಜ್ಞತೆಯ ನಾನಾಮುಖಗಳಲ್ಲಿ ಒಂದು—ಸಂಶೋಧನ (Research) ಮುಖ. ಪ್ರಗತಿಪರ ದೇಶಗಳಲ್ಲಿ ಸಾವಿರಾರುಮಂದಿ ತಜ್ಞರನ್ನು ಉತ್ಪಾದಕ ಸಂಸ್ಥೆಗಳ ಸಾಮಾನ್ಯ ಕಾಯಕದಿಂದ ಬಿಡಿಸಿ, ವೃತ್ತಿ-ಸಮಸ್ಯೆಗಳಿಗೆ, —ಅದರಲ್ಲೂ ಭೌತ ವಿಜ್ಞಾನ ಸಮಸ್ಯೆಗಳಿಗೆ,—ತತ್ತ್ವ ಮುಖದಿಂದಲೂ ಪ್ರಯೋಗ ಮುಖವಾಗಿಯೂ ಪರಿಹಾರ ಕಾರ್ಯವನ್ನು ಕಂಡುಹಿಡಿಯುವ ಸಂಶೋಧನ ಮಾತ್ರದ ಕಾರ್ಯದಲ್ಲಿ ನಿಲ್ಲಿಸಿರುವುದು ಈಗಣ ತಲೆಮಾರಿನ ಜನವೇ.

ಮನುಷ್ಯನು ಕೈಕೊಂಡ ಸಂಶೋಧನೆಯ ಫಲವಾಗಿ ಬಾಬುವಾರಾದ ವಿಷಯ ಸಂಪತ್ತು ಹೆಚ್ಚು ಹೆಚ್ಚು ಪರಿಮಾಣದಲ್ಲಿ ಲಭ್ಯವಾಗಿ, ಅದು ಗ್ರಂಥ ಭಂಡಾರಗಳಲ್ಲಿ ಕೋಶಸ್ಥವಾಗಿವೆ; ವಿದ್ಯಾರ್ಥಿಗಳಿಗೂ ವೃತ್ತಿ ನಿರತರಾದ ಮಹಾಜನರಿಗೂ ಈ ಜ್ಞಾನ ವಿವರಗಳು ಸುಲಭವಾಗಿ ಸಿಕ್ಕುತ್ತವೆ. ವಿದ್ಯಾ ಸಂಸ್ಥೆಗಳ ಮೂಲಕವೂ ಪತ್ರಿಕೆ ಮೊದ ಲಾದ ಸಮಾಚಾರ ಸಂಸ್ಥೆಗಳ ಮೂಲಕವೂ ಈ ಸಂಶೋಧಿತ ಜ್ಞಾನಸಮಾಚಾರಗಳು ಪ್ರಸಾರಗೊಳ್ಳುತ್ತಿವೆ. ಮುಂದೆ ಈ ಪ್ರಸಾರಕಾರ್ಯ ಇನ್ನೂ ವ್ಯಾಪಕವಾಗಿ ನಡೆಯಬೇಕಾಗಿದೆ.

ಬೇರೆಬೇರೆ ಕ್ಷೇತ್ರಗಳಲ್ಲೂ ವಿವಿಧ ಸ್ತರಗಳಲ್ಲೂ ವೈಜ್ಞಾನಿಕ ಹಾಗೂ ತಾಂತ್ರಿಕ ಶಿಕ್ಷಣ ಪ್ರಸಾರವಾಗುತ್ತಿದೆ. ಪ್ರಾಥಮಿಕ ಶಾಲೆಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ-ಮುಂದೆ ಅವರು ಪ್ರೌಢ ವ್ಯಾಸಂಗಮಾಡಲು ಯಾವ ವಿಷಯಗಳನ್ನು ಆಯ್ದುಕೊಳ್ಳ ಬಹುದೋ ಅದರ ತಿಳಿವಳಿಕೆಯನ್ನು ಸ್ಥೂಲವಾಗಿಯಾದರೂ ಕೊಡಲಾಗುತ್ತಿದೆ. ಸಾಮಾನ್ಯ ವಿದ್ಯಾಭ್ಯಾಸ ಮುಗಿದ ಮೇಲೆ ಅವರು ವಿಶೇಷ ಪರಿಶ್ರಮ ಮಾಡಲು ವಿವಿಧ ಜ್ಞಾನ ಕ್ಷೇತ್ರಗಳಲ್ಲಿ ಒಂದನ್ನು ಆಯ್ದುಕೊಳ್ಳಬಲ್ಲವರಾಗುತ್ತಿದ್ದಾರೆ. ತರಬೇತಿ ತರಗತಿಗಳು, ತಾಂತ್ರಿಕ ವಿದ್ಯಾಶಾಲೆಗಳು, ತಾಂತ್ರಿಕ ಪೌಢಶಾಲೆಗಳು, ಸಂಶೋಧನ ಮಂದಿರಗಳು ಮತ್ತು ವಿಶ್ವವಿದ್ಯಾನಿಲಯಗಳು ಈಚೀಚೆಗೆ ಲಕ್ಷಾಂತರ ವಿಶೇಷ ವಿಷಯಜ್ಞರನ್ನು ತಯಾರು ಮಾಡಿ ಸಮಾಜಕ್ಕೆ ಒಪ್ಪಿಸುತ್ತಿವೆ. ಇದರ ಫಲ ದೊಡ್ಡ ಅರ್ಹತೆಯುಳ್ಳ ವಿಶೇಷ ವಿಷಯಜ್ಞರದೊಂದು ತಲೆಮೊರೆಯೇ ಅರಳುವಿಕೆ. ಈ ತಲೆಮೊರೆಯ ಜನರಿಗೆ ಶಾಸ್ತ್ರ ಜ್ಞಾನದ ತತ್ತ್ವಮುಖದ ಹಿನ್ನೆಲೆಯೂ ಕಾರ್ಯ ಪ್ರಯೋಗದ ಸಾಕ್ಷಾದನುಭವವೂ ಇದ್ದು, ಅವರೆಲ್ಲ ಸಮಾಜಕ್ಕೆ ತುಂಬ ಉಪಕಾರಿ ಗಳಾಗತಕ್ಕವರು.

ಆದದ್ದರಿಂದ ಈಗಣ ತಲೆಮೊರೆಯವರು ಮಾನವನ ಇತಿಹಾಸದಲ್ಲೇ ಮೊತ್ತ ಮೊದಲಿಗೆ, ವೈಜ್ಞಾನಿಕ ಹಾಗೂ ತಾಂತ್ರಿಕ ವಿದ್ಯಾವಂತ ಜನದ ಒಂದು ಘನವಾದ ನಿಧಿಯನ್ನು ಪಡೆದಿದ್ದಾರೆ; ಇವರು ವಿಶಿಷ್ಟ ಕ್ಷೇತ್ರಗಳಲ್ಲಿ ಕಾರ್ಯ ಮಾಡಬಲ್ಲ ದಕ್ಷರು;

ಮತ್ತು ಮುಂದಿನ ತಲೆಮಾರಿನ ಹೆಚ್ಚು ಹೆಚ್ಚು ಜನಕ್ಕೆ ತಮ್ಮ ತಜ್ಞತೆಯನ್ನು ಬೋಧಿಸಿ, ವಿಷಯಜ್ಞರ ಸಂತತವಾದ ಪ್ರಯೋಜನ ಸಮಾಜಕ್ಕೆ ಒದಗುತ್ತಿರುವಂತೆ ಮಾಡಬಲ್ಲವರು. ಸಾರ್ವಜನಿಕರು ಕೊಡುವ ಸಾಕಾದಷ್ಟು ಪ್ರೋತ್ಸಾಹ ಸಹಕಾರ ಗಳಿಂದ ಈ ವಿಷಯಜ್ಞರ ಪಡೆ,–ಹುದುಗು ಇಲ್ಲವೆ ಕಿಣ್ವದಂತೆ,–ವ್ಯಾಪಕ ಪ್ರಭಾವ ವನ್ನು ಬೀರುತ್ತ, ಮಾನವತೆಯನ್ನು ಕೇವಲ ಸಂಪ್ರದಾಯ ಪದ್ಧತಿಗಳ ಅವಲಂಬನ ದಿಂದ ಬಿಡಿಸಿ, ಅದಕ್ಕೆ ವಿಚಾರ ಪರವೂ ಪ್ರಯೋಗ ಪರೀಕ್ಷಾ ಪಟುವೂ ಆದ ಬುದ್ಧಿ ಪ್ರಚೋದನೆಯನ್ನು ಕೊಟ್ಟು, ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ಕಾಣುವ ಧೀರ ಪ್ರಯತ್ನಕ್ಕೆ ಬೇಕಾಗುವ ಎಲ್ಲ ನೆರವನ್ನೂ ಕೊಡಬಲ್ಲ ಪಡೆ ಇದು.

ಮನುಷ್ಯನಿಗೆ ಇಂದು ಭೂಗ್ರಹದ ಮೇಲೆ ಒಡೆತನ ಬಂದಿರುವುದು ಅವನ ಗತ ಕಾಲದ ಸಿದ್ಧಿಗಳಿಂದ; ಮತ್ತು ಅವನು ಪ್ರಕೃತಿ ವಸ್ತುಗಳನ್ನೂ ಶಕ್ತಿಗಳನ್ನೂ ಜೀವ ನೋದ್ದೇಶಗಳಿಗೆ ಬಳಸಿಕೊಳ್ಳುತ್ತಿರುವುದರಿಂದ. ಕಾರ್ಯಕ್ಕೆ ತಕ್ಕ ಪೂರ್ವಯೋಜನೆ, ಸಂಘಟನೆ, ರಚನೆಗಳಲ್ಲಿ ಬಲ್ಲಿದನಾಗಿ, ಸಾಮಾಜಿಕ ಶಿಲ್ಪವನ್ನು ನಿಯಮನ ಕ್ರಮದಲ್ಲಿ ಕಟ್ಟುತ್ತ, ಈ ಕಾಯಕಕ್ಕೋಸ್ಕರ ಆತ್ಮಸಂಯಮದಲ್ಲಿದ್ದುಕೊಂಡು, ತನ್ನ ಸಂಕಲ್ಪಸಿದ್ಧಿಗಾಗಿ ತನ್ನ ಸಕಲ ಸಾಮರ್ಥ್ಯಗಳನ್ನೂ ವಿನಿಯೋಗಮಾಡಬಲ್ಲವ ನಾಗಿದ್ದಾನೆ. ಪ್ರಕೃತಿಯನ್ನು ಹೀಗೆ ಬಳಸಿ ರೂಢಿಸಿಕೊಳ್ಳುವ ಸಾಮರ್ಥ್ಯ ಮನುಷ್ಯ ನಿಗಿರುವುದರಿಂದಲೇ, ಸಮಾಜವನ್ನವನು ತಕ್ಕಂತೆ ಸಂಘಟಿಸಬಲ್ಲವನಾಗಿರುವುದ ರಿಂದಲೇ ತನ್ನ ಸ್ವಂತ ಚೈತನ್ಯವನ್ನೂ ಸಂಕಲ್ಪವನ್ನೂ ಚಟುವಟಿಕೆಗಳನ್ನೂ ಒಂದು ಗೊತ್ತಾದ ಗುರಿಯಕಡೆಗೆ ನಡಸಬಲ್ಲವನಾಗಿರುವುದರಿಂದಲೇ ಅವನಿಗೆ ಸಾಂಪ್ರತ ಕಾಲೀನ ಪ್ರತಿಷ್ಠೆ ಬಂದಿರುತ್ತದೆ.

ಪ್ರಗತಿ ಪಥದಲ್ಲಿರುವ ಮನುಷ್ಯನು ಗತಕಾಲವನ್ನು ಉಪೇಕ್ಷಿಸುವಂತಿಲ್ಲ. ಭವಿಷ್ಯತ್ತಿನಂತೆ ಭೂತಕಾಲವೂ ಅವನಿಗೆ ಮುಖ್ಯ. ಏಕೆಂದರೆ, ಗತವು ಮನುಷ್ಯನ ಹಿಂದಣ ಸೋಲುಗೆಲುವುಗಳನ್ನು ದಾಖಲೆಯಾಗಿರಿಸಿರುತ್ತದೆ. ಈ ದಾಖಲೆ ಅವನು ಎದುರಿಸುವ ಅಂದಂದಿನ ಸಮಸ್ಯೆಗಳಿಗೆ ಹುಡುಕುವ ಪರಿಹಾರಕ್ಕೆ ನೆರವಾಗುತ್ತದೆ. ಯಾವುದೇ ವಿಜ್ಞಾನದ ಅಥವಾ ಯಾವುದೇ ಕಲೆಯ ಇತಿಹಾಸದ ಅಧ್ಯಯನದಿಂದ ನಮಗೆ ಪ್ರಯೋಜನವುಂಟು. ವಿಜ್ಞಾನಿಗಳೂ ಕಲಾವಿದರೂ ವಾಸ್ತುಶಿಲ್ಪಿಗಳೂ ಆಡಳಿತಗಾರರೂ ತಮ್ಮ ಕಾಯಕದ ವೇಳೆ ಪ್ರತಿಕೂಲಗಳನ್ನು ತೊರೆದು, ಅನುಕೂಲ ಗಳನ್ನು ಹಿಡಿದು, ದೈನಂದಿನ ಸಮಸ್ಯೆಗಳಿಗೆ ಪರಿಹಾರವನ್ನು ಕಂಡು, ಭವಿಷ್ಯತ್ತಿಗೆ ಅವರೆಲ್ಲರೂ ಸಮೀಚೀನವಾದ ಯೋಜನೆಗಳನ್ನು ರಚಿಸಿಕೊಳ್ಳಲು ಬುದ್ಧಿಗೊಂದು ಗೊತ್ತಾದ ನಿರ್ದೇಶನವನ್ನು ಸೂಚಿಸಿ ನೆರವು ಕೊಡುತ್ತದೆ ಗತೇತಿಹಾಸದ ಪಾಠ.

ಆದದ್ದರಿಂದ ಮನುಷ್ಯಜೀವನದಲ್ಲಿ ಪರಿವರ್ತನೆಗೆ ತಕ್ಕ ಪಾತ್ರವುಂಟು. ಈ ಪಾತ್ರ ನಿರ್ವಹಣದಿಂದ ವರ್ತಮಾನದ ಸಮಾಜದ ಒಪ್ಪಿಗೆಗೋಸ್ಕರ ಒಂದು ಸತ್ವಸ್ಸಿದ್ಧವಾದ ನಿರ್ಣಯ ಹೊರಡುತ್ತದೆ. ಬಾಳ್ನಡಿಗೆ ಯಂತ್ರತಂತ್ರಗಳ ಸಹಾಯವನ್ನಳವಡಿಸಿಕೊಂಡು, ಭುಕ್ತಿಗಾಗಿ ನಿರ್ಬಂಧದ ವೃಥಾಯಾಸಕರವಾದ ಕಾಯಕಬಲದ ವ್ಯರ್ಥವ್ಯಯವನ್ನು ತೊರೆದು, ತಂತ್ರಜ್ಞಾನ ಶಿಕ್ಷಣಪಡೆದು, ನಾನಾ ಜೀವಿಕಾವೃತ್ತಿಗಳನ್ನು ಅತಿಶಯ ಪ್ರಯೋಜನಕರವಾಗುವಂತೆ ನಡಸುವ ಅವಕಾಶ ಮನುಷ್ಯನಿಗೆ ಉಂಟು ; ಮತ್ತು ಅವನು ಜೀವಿಕಾನಿರ್ವಾಹಕ್ಕಾಗಿ ಕರ್ತವ್ಯ ಪರಿಜ್ಞಾನವುಳ್ಳ ಕಾರ್ಯಕರ್ತರ ಸಮರ್ಥವಾದ ಪಡೆಯೊಂದನ್ನು ಸಮಾಜಕ್ಕೆ ಒಪ್ಪಿಸುವ ಸಾಧ್ಯತೆಯುಂಟು. ಪ್ರಕೃತಿಯ ಮೇಲೆ ಹಿಂದೆ ಎಂದೂ ಇರದ ನಿಯಮನ ಸಾಮರ್ಥ್ಯವನ್ನು ಈ ಬಗೆಯ ನೂತನ ಶಿಕ್ಷಣ ಮನುಷ್ಯನಿಗೆ ಕೊಡುತ್ತದೆ. ಮನುಷ್ಯ ಸಮಾಜವನ್ನು ವ್ಯಾಪಕವಾಗಿ ಅಂಕುಸವಿಟ್ಟು ಶಿಸ್ತಿನಿಂದ ನಡಸಬಹುದಾದ ಅವಕಾಶವೂ ಅವನಿಗೆ ಹೆಚ್ಚುತ್ತದೆ. ಸಾಮಾನ್ಯವಾಗಿ ಮನುಷ್ಯನ ದಕ್ಷತೆಗೆ ಇರುವ ಗೊತ್ತಾದ ಮಿತಿಯಲ್ಲಿ ಸುಶಿಕ್ಷಿತವೂ ಅನುಭವಸಂಪನ್ನವೂ ಆದ ಕಾರ್ಯಕರ್ತರ ಶ್ರೇಣಿ ಕೂಡಿದಮಟ್ಟಿಗೆ ನೇಮ ನೆಮ್ಮದಿಗಳಿಂದ ಭವಿಷ್ಯತ್ತನ್ನು ತುಂಬಿಕೊಳ್ಳಬಹುದು.



## ಅಧ್ಯಾಯ ಮೂರು

# ಶುಭಜೀವನಕ್ಕಿರುವ ಸಪ್ತಮಾರ್ಗ ಕಂಟಕಗಳು

ಮಾನವತೆ ಸಾಗಬೇಕಾದ ಪಥವು ಕಷ್ಟಗಳಿಂದ ಕೂಡಿರುತ್ತದೆ. ಈ ಕಷ್ಟಗಳಲ್ಲಿ ಕೆಲವು ಗೌಣ—ಅಮುಖ್ಯ ಎಂದು ತೋರುತ್ತದೆ. ಇನ್ನು ಕೆಲವು ಬಹು ವಿಷಮವಾಗಿದ್ದು, ಮನುಷ್ಯನಿಗೆ ಅವನ ಬಾಳ್ನಡೆಯಲ್ಲಿ ನಿರ್ಣಾಯ ಪರೀಕ್ಷೆಯನ್ನೊಡ್ಡುತ್ತವೆ; ಮತ್ತು ಭೂಮಿಯ ಮೇಲೆ ಮಾನವತೆಯ ಉಳಿವಿಗೇ ಸಂಚಕಾರತರಬಲ್ಲಷ್ಟು ಉಗ್ರ ಸನ್ನಿವೇಶದಲ್ಲಿ ಮನುಷ್ಯನನ್ನಿರಿಸಿ ಕಿರಿಕಿರಿ ಕೊಡುತ್ತದೆ. ಈ ಕಷ್ಟಗಳ ಗಾತ್ರವೂ, ಪಟ್ಟುಹಿಡಿದು ಮನುಷ್ಯನನ್ನು ಬೆಂಬಿಡದೆ ಅಂಟಿಕೊಳ್ಳುವ ಕಷ್ಟಗಳ ಸಹವಾಸ ಸಾಂತತ್ಯವೂ ತೀವ್ರಸುಧಾರಣಾವಾದಿಯ (ರ್‍ಯಾಡಿಕಲ್ ಪಂಥಿಯ) ಧರ್ಮೇಂದ್ರಿಯಕ್ಕೆ ಪೆಟ್ಟುಕೊಡತಕ್ಕ ಸಂದರ್ಭ. ಜನಜೀವನಕ್ಕೆ ಅಪಾಯ ತರುವ ಈ ಕಷ್ಟಗಳಿಗೆ ಅವನು ತತ್ಕ್ಷಣದ ಗಮನವನ್ನು ಕೊಡಬೇಕಾಗುತ್ತದೆ. ಅವುಗಳ ವಿರುದ್ಧವಾಗಿ ಅವನು ತೀವ್ರವೂ ನಿರ್ಧಾರಕವೂ ಆದ ಪ್ರಬಲ ಪ್ರತಿಕ್ರಿಯೆಗೋಸ್ಕರ ಮಿತ್ರ ಬಲವನ್ನು ಸಂಘಟಿಸಿಕೊಂಡು ಅವನ್ನು ತಾಗಬೇಕು.

ಹಿಂದಿನ ಪುಟಗಳಲ್ಲಿಯ ಚರ್ಚೆ ಈ ಮೂರು ಧ್ಯೇಯಸೂತ್ರಗಳನ್ನು ನಮಗೆ ಸ್ಪಷ್ಟಪಡಿಸಿರಬೇಕು:—

(1) ಸಮಸ್ತ ಮನುಷ್ಯ ಜೀವಿಗಳಿಗೂ ವಿಸ್ತಾರವಾದ ಜೀವನಾವಕಾಶಗಳನ್ನು ಒದಗಿಸಿ, ಆದಷ್ಟು ಹೆಚ್ಚು ಸಾಧ್ಯವಾದ ನೆಮ್ಮದಿಯನ್ನು ಅವರು ಪಡೆಯಲು ನೆರವಾಗುವುದು ಮಾನವಕುಲದ ಹೊಣೆಯರಿತ ಸದಸ್ಯರಿಗಿರುವ ಕರ್ತವ್ಯ.

(2) ಲಿಖಿತ ಇತಿಹಾಸದ ಉದ್ದಕ್ಕೂ, ಹಾಗೆಯೇ ವರ್ತಮಾನದ ತಲೆಮಾರಿನಲ್ಲೂ ನಾವು ಮನುಷ್ಯರು ಈ ಒಂದು ಮಹಾಧ್ಯೇಯದಿಂದ ಕೆಳಕ್ಕೆ ಜಾರಿಬಿದ್ದವರು; ಆದದ್ದರಿಂದ ಮನುಷ್ಯ ಪ್ರಗತಿಗೂ ಅಭಿವೃದ್ಧಿಗೂ ನಮ್ಮಿಂದ ಆಗ ಬಹುದಾಗಿದ್ದ ಮೇಲ್ಮಟ್ಟದ ಕಾಯಕದ ಕಾಣಿಕೆ ಸಲ್ಲದೆ ಹೋಗಿದೆ. ನಮ್ಮ ಕೊಟ್ಟ ಕಾಣಿಕೆ ಸಮಾಜಕ್ಕೆ ಸಾಕಾಗದೆ ಹೋಗಿದೆ.

(3) ಆದದ್ದರಿಂದ ತೀವ್ರ ಸುಧಾರಣೆಯಲ್ಲಿ ಅತ್ಯಾಸಕ್ತರಾದ ನಾವು (ರ್‍ಯಾಡಿಕಲ್ಸ್) ಮತ್ತೆ ಮಿತ್ರಬಲವನ್ನು ಕಟ್ಟಿ ನಮ್ಮ ಜೀವನವನ್ನು ಪುನರ್ದೀಕ್ಷಾ ಸಂಪನ್ನವಾಗಿ ಮಾಡಿಕೊಂಡು, ನಮ್ಮ ಜೀವಿತಕ್ಕೊಂದು ಪರಮಾದರ್ಶವನ್ನು ಅಳವಡಿಸಿಕೊಳ್ಳಬೇಕು. ಸಮಾಜದಲ್ಲಿ ಅತ್ಯಧಿಕ ಸಂಖ್ಯೆಯ ಜನಕ್ಕೆ ಉದ್ಯಮಾವಕಾಶವನ್ನು ಕಲ್ಪಿಸಿ, ಜೀವಿತಕ್ಕೆ ಶ್ರೇಷ್ಠತಮ ಸಿದ್ಧಿಯೆಂಬುದು ಸಾಧ್ಯ ಎಂಬ ಅರಿವನ್ನು ನಮ್ಮ ಇರವಿನ ಎಲ್ಲ ಹೊತ್ತೂ ಏಕಚಿಂತೆಯಾಗಿ ಇರಿಸಿಕೊಳ್ಳಬೇಕು. ಇದೇ ನಮಗೆ ಪರಮಾದರ್ಶ.

ಪೂರ್ವಕಾಲದಲ್ಲಿ ಮನುಷ್ಯರಿಗೆ ಸವಾಲಾಗಿ (ಚಾಲೆಂಜ್) ಇದ್ದದ್ದು ಇದೇ ಜೀವನ ಸಂದರ್ಭ. ವರ್ತಮಾನ ಕಾಲದಲ್ಲೂ ಅವರಿಗೆ ಎದುರುಬಿದ್ದಿರುವುದು ಇದೇ ಸವಾಲು. ಭವಿಷ್ಯತ್ಕಾಲದಲ್ಲೂ ಅವರು ಈ ಸವಾಲನ್ನು ತಪ್ಪಿಸಿಕೊಳ್ಳಲಾರರು. ಪ್ರತಿಯೊಬ್ಬ ತೀವ್ರ ಸುಧಾರಣಾ ವಾದಿಯ ಜೀವನವನ್ನು ಪ್ರಚೋದಿಸುವ ಚಾಲಕಶಕ್ತಿ ಇದು: ಅವನೂ ಅವನ ಜೊತೆಯ ಮನುಷ್ಯರೂ ತಮಗೆ ಸಾಧ್ಯವಾದಷ್ಟು ಬುದ್ಧಿ ಸಾಮರ್ಥ್ಯವನ್ನು ಬಳಸಿ, ತಮ್ಮ ಅದೃಷ್ಟವನ್ನು ದೃಷ್ಟವಾಗಿ ಪೂರೈಸಿಕೊಳ್ಳಬೇಕು. ಈ ಒಂದು ಮಹೋನ್ನತ ಧ್ಯೇಯಕ್ಕೆ ಸ್ವಲ್ಪ ದೂರವಾದರೂ ನಾವು ವೈಯಕ್ತಿಕವಾಗಿಯೋ ಸಾಮಾಜಿಕವಾಗಿಯೋ ಸರಿದು, ನಮ್ಮ ಸಿದ್ಧಿಯನ್ನು ಪರ್ಯಾಪ್ತ (ಸಾಕಾಗದೆ ಹೋದದ್ದು) ಎನ್ನಿಸಿದರೆ, ಆಗ ಪ್ರತಿಯೊಬ್ಬ ಆಮೂಲಾಗ್ರ ಸುಧಾರಕನ (ರ್‍ಯಾಡಿಕಲ್) ಧರ್ಮೇಂದ್ರಿಯವೂ ಪೆಟ್ಟುಪಡೆದು ನೋಯುತ್ತದೆ.

ಇದುವರೆಗಿನ ಮನುಷ್ಯ ಸಿದ್ಧಿಯ ಪರ್ಯಾಪ್ತತೆಯ ಬಗ್ಗೆ ಅತೃಪ್ತಿಯಿಂದಲೂ ನಿರಾಶೆಯಿಂದಲೂ ನಾವು ತೀವ್ರ ಸುಧಾರಕರು ನಮ್ಮನ್ನು ಪರೀಕ್ಷೆಗೆ ಒಡ್ಡುವ ಪ್ರಶ್ನೆಗಳನ್ನು ನಮಗೆ ನಾವೇ ಹಾಕಿಕೊಂಡು ಉತ್ತರ ಹೇಳಬೇಕು. ಮೊದಲನೆಯದಾಗಿ, ಹಿಂದೆ ನಾವು ಯಾವಾಗ, ಏಕೆ ಮತ್ತು ಎಲ್ಲಿ ಸೋತೆವು? ಎರಡನೆಯದಾಗಿ, ನಮ್ಮ ಸಿದ್ಧಿಯ ಮಟ್ಟ ಏರಬೇಕಾದರೆ, ನಾವು ತತ್ಕ್ಷಣದಲ್ಲೂ ದೂರ ಭವಿಷ್ಯತ್ತಿನಲ್ಲೂ ಎದುರಿಸ ಬೇಕಾದ ಜೀವನ ಸ್ಥಿತಿ ಸಂದರ್ಭಗಳಾವುವು ?

ಮಾನವ ಜೀವಿತದಲ್ಲಿ ಈ ವಿಷಮ ಸಂದರ್ಭ ಮೊತ್ತಮೊದಲಿಗೆ ಪ್ರಕಟವಾದದ್ದಲ್ಲ. ಮನುಷ್ಯನು ಮೃಗಾವಸ್ಥೆಯನ್ನು ಮೀರಿ, ಪ್ರಗತಿಗಾಮಿಯಾಗಿ ಸಾಗಿ, ಮುಂದಕ್ಕೂ ಮೇಲಕ್ಕೂ ನಡೆದು ಹಾರುವ ಅವಕಾಶಗಳನ್ನು ಹಿಂದೆಯೂ ಕಂಡವನೇ. ಅವನು ತನ್ನ ನಡೆಯಲ್ಲಿ ಅಡಿಗಡಿಗೆ,—ತನ್ನ ವೈಯಕ್ತಿಕ ವಿಕಾಸಕ್ಕೂ ಒಟ್ಟು ಮಾನವತೆಯ ವಿಕಾಸಕ್ಕೂ ಸಾಧಕವೋ ಬಾಧಕವೋ ಆಗಿ,—ದೂರ ಪರಿಣಾಮ ಮಾಡಬಲ್ಲ ಆಯ್ಕೆಗಳನ್ನು ಮಾಡಬೇಕಾದ ಇಕ್ಕಟ್ಟಿಗೆ ಸಿಕ್ಕಿದವನೇ. ಲಿಖಿತ ಇತಿಹಾಸವೋ ಆಯಾ ಕಾಲಕ್ಕೆ ಸಂಬಂಧಿಸಿದ ವೈಯಕ್ತಿಕ ಸಂದರ್ಭ ಚರಿತೆಗಳನ್ನು ವರದಿ ಮಾಡುತ್ತಲೇ ಬಂದಿದೆ. ದೂರದರ್ಶಿಗಳೂ ಸಂತಪ್ರವಾದಿಗಳೂ ಭವಿಷತ್ ಸಾಧ್ಯತೆ ಮತ್ತು ವಿದ್ಯಮಾನ ವಾಸ್ತವಿಕತೆಗಳ ನಡುವೆ ಇರುವ ನ್ಯೂನತೆಗಳನ್ನೂ ಅಸಂಬದ್ಧತೆಗಳನ್ನೂ ಎತ್ತಿ ತೋರಿಸಿ, ''ವಿದ್ಯಮಾನ ಸ್ಥಿತಿಗೆ ಬೆನ್ನು ತಿರುಗಿಸಿರಿ; ನಿಮ್ಮ ಯಾವತ್ತೂ ಶಕ್ತಿಯನ್ನು ಹೂಡಿ ಸಾಧ್ಯತೆಯ ಹಾಗೂ ಆದರ್ಶದ ಕಡೆಗೆ ಧಾವಿಸಿರಿ'' ''ಎಂದು ಹುರಿದುಂಬಿಸುತ್ತ ಶ್ರೋತೃಗಳಿಗೆ ಕರೆಕೊಡುತ್ತ ಬಂದಿದ್ದಾರೆ.

ಅನೇಕ ಸಂದರ್ಭಗಳಲ್ಲಿ, ವಿವಿಧ ಸನ್ನಿವೇಶಗಳಲ್ಲಿ ವ್ಯಕ್ತಿ ಮನುಷ್ಯರೂ ಸಮುದಾಯಗಳೂ ಅಂಥ ಅವಕಾಶಗಳ ಪ್ರಯೋಜನವನ್ನು ಪಡೆದಿರುವುದು ನಿಜ.

ಇದರ ಫಲಿತಾಂಶಗಳು ಮನುಷ್ಯ ಸಿದ್ಧಿಯನ್ನು ಸಾರುತ್ತ ಸಾಮಾಜಿಕ ಚರಿತ್ರೆಯ ಹೊಳೆಯನ್ನು ಉಬ್ಬಿಸಿವೆ. ಆಹಾರ ಪೂರೈಕೆ, ವಸತಿ ನಿರ್ಮಾಣ, ಬಿಸಿಲಿನ ಬಳಕೆ, ಬೇಸಾಯದ ಮಣ್ಣಿನ ಬಳಕೆ, ಒದಗಿಬರುತ್ತಿರುವ ಜಲಸಮೃದ್ಧಿಯ ಸಾರ್ಥಕ ಉಪಯೋಗ, ಸರಕು ಸಾಗಣೆ ಹಾಗೂ ಸುದ್ದಿ ಸಾಗಣೆಯ ಸಾಧನಗಳ ಹೆಚ್ಚಳಿಕೆ, ವಿಜ್ಞಾನದಲ್ಲೂ ತಂತ್ರದಲ್ಲೂ ಮುನ್ನಡೆದು, ಅವಶ್ಯಜೀವನವಸ್ತು ನಿರ್ಮಾಣದಲ್ಲೂ, ಕುಶಲ ಕಲೆಗಳಲ್ಲೂ, ಸಾಹಿತ್ಯ ನಾಟಕ ಸಂಗೀತಗಳಲ್ಲೂ ಸಾಧಿಸಿದ ಸಿದ್ಧಿಯೂ ದರ್ಶನ ಶಾಸ್ತ್ರಗಳಲ್ಲಿ ಸಾಧಿಸಿದ ಸಿದ್ಧಿಯೂ ಮನುಷ್ಯಸಮಾಜಶಾಸ್ತ್ರಕ್ಕೆ ಕಳೆಕೊಟ್ಟಿದೆ. ಗ್ರೀಸಿನಲ್ಲಿ ಮಾತ್ರವಲ್ಲ, ಐಗುಪ್ತದೇಶದಲ್ಲೂ ಗಂಗ ಯಾಗ್ಸ್‌ಟ್ಸಿ ಕಣಿವೆಗಳಲ್ಲೂ ಮನುಷ್ಯಸಂಸ್ಕೃತಿ ಉನ್ನತ ಸ್ತರವನ್ನು ಮುಟ್ಟಿದ್ದುಂಟು. ಪ್ರತಿಯೊಂದು ಭೂಖಂಡ ದಲ್ಲೂ ಈ ಮನುಷ್ಯಸಂಸ್ಕೃತಿ ಪ್ರಗತಿಪಥದಲ್ಲಿ ಸಾಗಿದ ದಾಖಲೆಗಳೆಲ್ಲ ಇದ್ದು, ಇವೆಲ್ಲ ನಮ್ಮನ್ನು ಕರ್ತವ್ಯೋನ್ಮುಖವಾಗುವಂತೆ ಪ್ರೇರೇಪಿಸುತ್ತಿವೆ.

ಈ ಸಿದ್ಧಿಗಳ ಬೇರೆಬೇರೆ ಕಾಲಮಾನಗಳು ಆಗಿಂದಾಗ್ಗೆ ತೋರಿಕೊಂಡವು ; ಘಟನೆಗಳಿಗೆ ಸಂಬಂಧಿಸಿದಂತೆ ಈ ಸಿದ್ಧಿ ಪ್ರಯೋಜನದಅವಧಿಗಳೂ ಅಲ್ಪಕಾಲಿಕಗಳಾಗಿದ್ದುವು. ಜಡತೆ, ನಿಷ್ಕ್ರಿಯತೆ, ವಿನಾಶ ಸ್ಮೃತಿಗಳ ಅವಧಿಗಳ ನಡುವೆ ಆಗೊಮ್ಮೆ ಈಗೊಮ್ಮೆ ತೋರಿಕೊಂಡವು ಈ ಸಿದ್ಧಿಯ ಕಾಲಗಳು. ಈ ಕೊರತೆಗೆ ಕಾರಣವೇನು ? ಮನುಷ್ಯವರ್ಗ ಅಯಾ ಸಿದ್ಧಿ ಸನ್ನಿವೇಶಗಳಿಗೆ ತಕ್ಕಂತೆ ನಡೆದುಕೊಳ್ಳದೆ, ಅವನ್ನು ಜೀವನೋಪಯೋಗಿಗಳನ್ನಾಗಿ ಮಾಡಿಕೊಳ್ಳದೆ ಹೋಗಿ ಮನುಷ್ಯ ಪ್ರಾಣಿಗಳೇಕೆ ತಬ್ಬಿಬ್ಬಾದರು, ಸೋತರು ? ಸಂಘಟಿತವಾದ ಧನಭೂಯಿಷ್ಠ ವಸ್ತೂತ್ಪಾದಕ ಕೇಂದ್ರಗಳೂ ಪಾಂಡಿತ್ಯ ಕಲೆಗಳೂ ಏಕೆ ವಿನಾಶಕ್ಕೆ ತುತ್ತಾಗಿ, ಕಡೆಗೆ ನಾಗರಿಕತೆಯ ಕೇಂದ್ರಗಳು ಒಂದಾಗುತ್ತಲೊಂದರಂತೆ ಶಿಥಿಲವಾಗಿ ಆದೇಕೆ ತೊಡೆದುಹಾಕಲ್ಪಟ್ಟುವು ?

ಇವೇನೂ ವಿಷಯಬೋಧೆಯನ್ನು ಮನಸ್ಸಿನಲ್ಲಿರಿಸಿಕೊಳ್ಳದೆ, ಕೇವಲ ಭಾವೋತ್ತೇಜನೋದ್ದೇಶವುಳ್ಳ ಆಲಂಕಾರಿಕ ಪ್ರಶ್ನೆಗಳಲ್ಲ. ಮಾನವನ ಅಸ್ತಿತ್ವ ಸಂಬಂಧವಾಗಿ ಸ್ಥಿರತೆ, ಸುರಕ್ಷಿತತೆ, ಭರವಸೆಗಳನ್ನು ಹುಡುಕಿಕೊಳ್ಳುವುದು ನಮ್ಮ ಉದ್ದೇಶ. ಆದದ್ದರಿಂದ ಈ ಪ್ರಶ್ನೆಗಳು ನಮ್ಮ ಅನ್ವೇಷಕ ಚಿತ್ತದ ಅಂತರಾಳವನ್ನು ಮುಟ್ಟಿ ಕೆದಕತಕ್ಕವು. ಗತಕಾಲದ ಅನುಭವವೇನೆಂಬುದನ್ನು ಲಿಖಿತ ಇತಿಹಾಸ ನಮಗೆ ತಿಳಿಯ ಹೇಳುತ್ತದೆ. ಕಳೆದ ಐದು ಶತಮಾನಗಳ ಪಾಶ್ಚಾತ್ಯ ದೇಶಗಳ ಚರಿತ್ರೆ ನಮ್ಮ ಆಚರಣೆಗೋಸ್ಕರ ವಾಗ್ದಾನಗಳನ್ನೂ ಎಚರಿಕೆಗಳನ್ನೂ ತುಂಬಿಕೊಂಡಿದೆ.

ಹೊಣೆಯರಿತ ವಾಸ್ತುಶಿಲ್ಪಿಗಳ (ಇಂಜಿನಿಯರುಗಳ) ತಂಡವೊಂದು "ಎಂಪೈರ್ ಸ್ಟೇಟ್ ಸೌಧ"ವನ್ನೋ, ಹೂವರ್ ಅಣೆಕಟ್ಟನ್ನೋ ಇಲ್ಲವೆ ಇಂಥ ಯಾವುದಾದ

ರೊಂದು ಭಾರಿ ಕಟ್ಟಡವನ್ನೋ ಪರೀಕ್ಷಣ ಪರಿಶೀಲನಗೊಳಪಡಿಸಿ ನೋಡಿ, ಕಟ್ಟಡದಲ್ಲಿ ತೋರಿಕೊಂಡಿದ್ದ ಮುರುಕು ಬಿರುಕುಗಳನ್ನು ಗಮನಿಸಿ, ಅದು ಕುಸಿದು ಬೀಳುವ ಸ್ಥಿತಿಯಲ್ಲಿದೆಯೆಂದು ಮೊದಲವರದಿಯನ್ನೇನಾದರೂ ಕೊಟ್ಟರೆ ತಜ್ಞರ ಮತ್ತೊಂದು ತಂಡವು ಹೊರಟು, ಕಟ್ಟಡ ಕುಸಿಯಲು ಕಾರಣಗಳೇನು, ಅದನ್ನು ಉಳಿಸಿಕೊಳ್ಳುವ ಸಾಧ್ಯತೆಯುಂಟೆ ಎಂದು ಮುಂತಾಗಿ ವಿವರವಾಗಿ ಪುನಃಪರಿಶೀಲನೆ ನಡಸಿ ಅಪಾಯ ಪರಿಹಾರೋಪಾಯ ಸಾಧ್ಯತೆಯನ್ನು ಸೂಚಿಸುತ್ತದೆ.

ವಾಸ್ತುಶಿಲ್ಪಿಗಳು ಹೀಗೆ ವೈಜ್ಞಾನಿಕ ಮನೋವೃತ್ತಿಯಿಂದ ಜಾಗರೂಕರೂ ಪ್ರತ್ಯುತ್ಪನ್ನಮತಿಗಳೂ ಆಗಿ, ಅಪಾಯ ಸೂಚನೆ ತೋರಿದೊಡನೆ ದಕ್ಷತೆಯಿಂದ ಕಾರ್ಯಮಾಡಲು ಸಮರ್ಥರಾಗಿರುವಾಗ, ಸಮಾಜಶಿಲ್ಪ ವಿಜ್ಞಾನಿಗಳು ಅವರಿಗಿಂತ ಹಿಂದೆ ಬಿದ್ದಿದ್ದಾರೆ ಎನ್ನೋಣವೇ ? ವಿಭಜನೆ, ಸಂಯೋಜನೆ, ಕ್ರಮವಾದ ಕಾರ್ಯನಿರ್ಧಾರಣೆ–ಇವು ವಾಸ್ತುವಿಜ್ಞಾನಿಗಳಂತೆಯೇ ಸಮಾಜವಿಜ್ಞಾನಿಗಳೂ ಅನುಸರಿಸಬೇಕಾದ ಕಾರ್ಯತಂತ್ರ. ಅಪಾಯಸಂಭವವನ್ನು ಸೂಚಿಸುವ ಜಗದ್ವಿದ್ಯಮಾನದಲ್ಲಿ ಸಮಾಜವಿಜ್ಞಾನಿಗಳಿಗಿರುವ ಪಾತ್ರವೇನು ?

ನನ್ನ ಪರಿಶೀಲನೆಗೆ ವ್ಯಕ್ತಪಟ್ಟಿರುವಂತೆ ಮನುಷ್ಯಪ್ರಗತಿಗೆ ಏಳು ಮಾರ್ಗಕಂಟಕಗಳು ಅವನ ಇದುವರೆಗಿನ ವಿಫಲತೆಗೆ ಕಾರಣವಾಗಿವೆ. ತನ್ನ ಮುಂದಿರುವ ಸಾಂಪ್ರತಾವಕಾಶಗಳು ಒದಗಿಸುವ ಅನುಕೂಲಗಳನ್ನು ಅವನು ಲಾಭಕರವಾಗುವಂತೆ ಬಳಸಿಕೊಳ್ಳಲಾರದೆ ಹೋಗಿದ್ದಾನೆ. ಆದದ್ದರಿಂದ ಅವನು ತನ್ನ ದಾರಿಯ ಗುರಿಯಲ್ಲಿರುವ,—ಭರವಸೆಯಾಗಿ ತಾನು ಕಂಡುಕೊಂಡ,—ನೆಮ್ಮದಿಯ ಬೀಡಿನಿಂದ ಇನ್ನೂ ದೂರವಾಗಿಯೇ ಇದ್ದಾನೆ. ಆ ಏಳು ದಾರಿಯೆಡರುಗಳು ಯಾವುವೆಂದರೆ:– I. (1) ಅಜ್ಞಾನ, (2) ಅನವೇಕ್ಷಣ (ಉಪೇಕ್ಷೆ), ಮತ್ತು (3) ಆಲಸ್ಯ (ಅಕರ್ಮಕರಣ); II. ಲೋಭ, III. ಮಾನಸಿಕವಾಗಿಯೂ ಶಾರೀರಕವಾಗಿಯೂ ಸತ್ತ್ವವನ್ನು ಹೀರುವ ಆರು ಕಿಲುಬುಗಳು; IV. ಸಂಪನ್ಮೂಲಗಳನ್ನೂ ಕಾಲಶಕ್ತಿಗಳನ್ನೂ ಭಕ್ಷಿಸುವ ಆರು ಮಾನವ ಕ್ಷುಧೆಗಳು; V. ಘರ್ಷಣ ಪ್ರವೃತ್ತಿ ಮತ್ತು ಹಿಂಸಾಪ್ರವೃತ್ತಿ; VI. ಪ್ರತಿ–ಕ್ರಾಂತಿಕರಣ; VII. ಅಂತರರಾಷ್ಟ್ರೀಯ ಸಾಮ್ರಾಜ್ಯನಿಷ್ಠವಾದ ಸಂಚು. ಈ ಏಳು ವಿಘ್ನಗಳು ಮನುಷ್ಯಸ್ವಭಾವದಲ್ಲೂ ಮನುಷ್ಯಜೀವನದಲ್ಲೂ ನಿರಂತರವಾಗಿ ಪ್ರಕಟವಾಗುವ ದೋಷಗಳು, – ಉದ್ದೇಶಹಂತಕವೂ ಕಾರ್ಯಹಂತಕವೂ ಆದ ದೋಷಗಳು. ಸಾಮಾಜಿಕ ಸಂಸ್ಥೆಗಳ ಅಂತರಂಶಗಳಾಗುವಂತೆ ಮನುಷ್ಯನು ಈ ದೋಷಗಳನ್ನು ತನ್ನೊಡಲಲ್ಲಿ ಆಳವಡಿಸಿ ಪಾಲಿಸಿಕೊಂಡು ಬಂದಿದ್ದಾನೆ. ಆದದ್ದರಿಂದ ಮನುಷ್ಯ ಜೀವನದಲ್ಲಿ ಅವು ನಿರ್ಣಾಯಕವಾದ ಮಹಾಪಾತ್ರ ವಹಿಸುತ್ತ ಬಂದು, ವರ್ತಮಾನ ಸಮಾಜದ ಉನ್ನತಿಗೆ ಅವಶ್ಯವಾದ, ವಿವೇಕಯುಕ್ತವಾದ ಸಂಘಟನೆ

ಯನ್ನೂ, ದಕ್ಷವೆನ್ನಿಸುವ ಕಾರ್ಯಸಂಧಾನವನ್ನೂ ತಪ್ಪಿಸುತ್ತ ಊರ್ಜಿತವಾಗಿದ್ದು ಕೊಂಡಿವೆ. ಈ ಏಳು ದೋಷಗಳನ್ನು ನಾವು ಅವುಗಳ ಉತ್ಪತ್ತಿಕ್ರಮದಲ್ಲಾಗಲಿ, ಅವುಗಳ ಮುಖ್ಯತೆಯ ದೃಷ್ಟಿಯಿಂದಾಗಲಿ ಇಲ್ಲಿ ಉಲ್ಲೇಖಿಸಿಲ್ಲ. ಮನುಷ್ಯನು ತನ್ನ ಕೈಯೊಳಗಣ ಐದು ಬೆರಳುಗಳಲ್ಲಿ ಯಾವ ಒಂದಕ್ಕೆ ಹೆಚ್ಚಿನ ಬೆಲೆಯನ್ನೂ ಮುಖ್ಯ ಪ್ರಾಶಸ್ತ್ಯವನ್ನೂ ಕೊಡದೆ, ಕಾರ್ಯೋದ್ದೇಶಕ್ಕೆ ಅವನ್ನೆಲ್ಲ ಯಾವುದೋ ಒಂದು ಅನಿರ್ದಿಷ್ಟ ಕ್ರಮದಲ್ಲಿ ಬಳಸುವಂತೆ, ಈ ದೋಷಗಳ ಆನುಪೂರ್ವಿಯನ್ನಾಗಲಿ ಮುಖ್ಯತೆಯ ಪ್ರಸ್ತಾವವನ್ನಾಗಲಿ ಗೊತ್ತಾಗಿ ಹೇಳಬರುವಂತಿಲ್ಲ. ಈ ಎಲ್ಲ ದೋಷಗಳೂ ಬಿಡಿಯಾಗಿಯೊ ಕಲೆತೋ ಮನುಷ್ಯನ ಮುನ್ನಡೆಗೆ ಎಡರನ್ನೊಡ್ಡುತ್ತವೆ; ಅವನ ದೂರ ವಿಶಾಲದೃಷ್ಟಿಗೆ ಮಂಜು ಕವಿಯಿಸುತ್ತವೆ; ಮತ್ತು ಜೀವನಕ್ಕಿರುವ ಸಿದ್ಧಿ ಸಾಧ್ಯತೆಯ ವಿಷಯದಲ್ಲಿ ಸಮ್ಯಕ್ಕಾಗಿರಬೇಕಾದ ಅವನ ಜ್ಞಾನಕ್ಕೆ ಮಂಕು ಬಡಿಯುತ್ತವೆ. ಆದದ್ದರಿಂದ ಈ ದೋಷಗಳನ್ನೆಲ್ಲ ಮುಖಾಮುಖಿಯಾಗಿ ಎದುರಿಸಿ ತಾಗಿ, ಅವನ್ನು ತೀವ್ರ ಪರೀಕ್ಷೆಗೆ ಈಡುಮಾಡಿ, ಪರಿಣಾಮಕಾರಿಯಾದ ಚಿಕಿತ್ಸೆಗೆ ಒಳಪಡಿಸಬೇಕು.

## ಅಜ್ಞಾನ, ಅನವೇಕ್ಷಣ ಮತ್ತು ಆಕರ್ಮಕರಣ

ಮನುಷ್ಯ ಪ್ರಗತಿಗೂ ಸಮಾಜೋನ್ನತಿಗೂ ಇರುವ ವಿಘ್ನಗಳಲ್ಲೆಲ್ಲ ಅತ್ಯಂತ ಸಾರ್ವತ್ರಿಕವಾದದ್ದು-ಪ್ರಾಯಿಕವಾಗಿ ಜನರಲ್ಲನೇಕರು, ಜಗದ್ವ್ಯಾಪಾರ ಕಾಲದಲ್ಲಿ ತಮ್ಮ ಪಾತ್ರವನ್ನು ಸರಿಯಗಿ ಅರ್ಥಮಾಡಿಕೊಂಡು ನಿರ್ವಾಹಮಾಡದೆ, ವಿಫಲ ಮನೋರಥರಾಗುತ್ತಿರುವುದೇ. ಯುಕ್ತಾಯುಕ್ತ ವಿವೇಕದಿಂದ, ತ್ರಾಣ ತುಂಬಿ ಕೊಂಡು, ತಮ್ಮ ಜೀವನವನ್ನೂ ಅವರು ಘಟಕವಾಗಿ ಸೇರಿರುವ ಸಮಾಜ ಜೀವನ ವನ್ನೂ ತತ್ತ್ವತಃ ತಿಳಿದು, ಮನಸ್ಸಿಟ್ಟು ಕಾರ್ಯಸಂಧಾನ ಮಾಡದೆ ಸೋತಿದ್ದಾರೆ. ಈ ಸೋಲಿಗೆ ಕಾರಣವಿನ್ನೇನಿರಬಹುದು? ನಮಗೆ ತೋರುವ ಕಾರಣ ಮನುಷ್ಯನು ಇಂಬು ಕೊಟ್ಟ ಅಜ್ಞಾನ. (ಸಾಮಾನ್ಯ ತಿಳಿವಳಿಕೆಯಾಗಲಿ,ತಿಳಿದುಕೊಳ್ಳಬೇಕೆಂಬ ಸಾಮಾನ್ಯ ಕುತೂಹಲವಾಗಲಿ ಇಲ್ಲವೆಂಬುದು ಅಲ್ಲ). ಇನ್ನೊಂದು ಕಾರಣ ಅನವೇಕ್ಷಣ— ಎಂದರೆ ತಿಳಿದುಕೊಳ್ಳಬೇಕಾದ ವಿಷಯದಲ್ಲಿ ಉಪೇಕ್ಷೆಯ ಭಾವ; ಅಸೌಕರ್ಯಗಳನ್ನು ಗಮನಕ್ಕೆ ತಂದುಕೊಂಡು, ಕ್ಷಿಪ್ರಕಾರ್ಯಶೀಲತೆಯಿಂದ ಸೌಕರ್ಯ ಸಂಪಾದನೆ ಮಾಡಿಕೊಳ್ಳದಿರುವ ಆಲಸ್ಯದ, ಚಟುವಟಿಕೆಯಿಲ್ಲದ, ಅಸಡ್ಡೆಯ ಮನೋಭಾವ; ಮತ್ತು ಮೂರನೆಯ ಕಾರಣ ಅಕರ್ಮಕರಣ—ಎಂದರೆ ಕ್ರಿಯಾಶೀಲತೆಯ ಅಭಾವ. (ಸಂಪ್ರದಾಯಾನುಸರಣೆಯಿಂದ, ಪರಂಪರಾಗತ ಪದ್ಧತಿಯ ಅವಲಂಬನೆಯಿಂದ, ತುಳಿದ ದಾರಿಯಲ್ಲೇ ನಡೆಯುತ್ತ; ಗುರಿ ಮುಟ್ಟಿಸಬಲ್ಲ ಹೊಸದಾರಿಯನ್ನು ಕಂಡು ಕೊಳ್ಳುವ ಚುರುಕು ಬಗೆಯಿಲ್ಲದಿರುವುದು).

ಅಜ್ಞಾನ, ಅನಪೇಕ್ಷಣ ಮತ್ತು ಅಕರ್ಮಕರಣಗಳು ವ್ಯಕ್ತಿ ಮನುಷ್ಯನ ದರ್ಶನ ದೋಷದಿಂದ ಪೈಗೂಡಿ ಬಿಡಾರ ಮಾಡುತ್ತವೆ. ಹಾಗೆಯೇ ಅವನು ತಿಳಿವಳಿಕೆಯ ಜೊತೆಗೆ ಪರಿಣಾಮಕಾರಿಯಾದ ಕ್ರಿಯಾಶೀಲತೆಯನ್ನು ಬೆರೆಯಿಸದಿರುವುದರಿಂದ ಈ ದೋಷದ ಉರುಬು ಹೆಚ್ಚುತ್ತದೆ. ಈ ಅಜ್ಞಾನಾದಿ ವಿಘ್ನಗಳು ಮೂರೂ ಜೊತೆ ಜೊತೆಯಾಗಿ ಸಹಕರಿಸುತ್ತ ಮನುಷ್ಯಪಥದಲ್ಲಿ ಅವನಿಗೆ ಪ್ರತಿಕೂಲವಾಗಿ ಕಾರ್ಯಮಾಡುತ್ತವೆ. ಮನುಷ್ಯರ ಆಲೋಚನೆಗಳಿಗೂ ಕಾರ್ಯಗಳಿಗೂ ತಡೆಯೊಡ್ಡುತ್ತವೆ. ಏಕೆಂದರೆ ಹೊಳೆಯಲ್ಲಿ ಬಿದ್ದವನಿಗೆ ಹರಿವಿನೊಡನೆ ತೇಲಿಕೊಂಡು ಹೋಗುವುದು ಸುಲಭವೇ ಹೊರತು, ಹೊಳೆಯಿಂದ ಪಾರಾಗುವುದಾಗಲಿ, ಹರಿವಿನೆದುರು ಈಜುವುದಾಗಲಿ ಸುಲಭವಲ್ಲ. ಈ ದೋಷಗಳ ಪ್ರಭಾವವನ್ನು ಮನುಷ್ಯಕುಲದ ಎಲ್ಲ ವ್ಯಕ್ತಿ ಜನರೂ ಅನುಭವಿಸುತ್ತಲೇ ಬಂದಿದ್ದಾರೆ. ಅನೇಕರ ವೈಯಕ್ತಿಕ ಜೀವನದಲ್ಲಿ, — ಅವರ ಆಯುಷ್ಯದಲ್ಲಿ ಸರ್ವಕಾಲವೂ ಅವರ ಆಲೋಚನೆಯನ್ನೂ ಕಾರ್ಯಕರಣವನ್ನೂ ತಾವೇ ನಿರ್ಧರಿಸಿ ಮನುಷ್ಯನ ವಿವೇಚನೆಯನ್ನು ಉಡುಗಿಸತಕ್ಕವು ಈ ದೋಷಗಳು.

ಅಜ್ಞಾನ, ಅನಪೇಕ್ಷಣ ಮತ್ತು ಅಕರ್ಮಕರಣಗಳು ಬಹುಸಂಖ್ಯಾಕ ಮನುಷ್ಯರ ಜೀವನವನ್ನು ಪಟ್ಟುಹಿಡಿತದಲ್ಲಿರಿಸಿಕೊಳ್ಳುವುದಕ್ಕೆ ಕಾರಣ ಮನುಷ್ಯ ಸ್ವಭಾವದಲ್ಲಿರುವ ಕೊರತೆಯಲ್ಲ; ಆದರೆ ಉದ್ದೇಶಪೂರ್ವಕವಾಗಿ, ನಿರ್ಣಾಯಕ ಪ್ರಯತ್ನವನ್ನು ಹೂಡಿ,–ಆಡಳಿತ ಪೀಠದಲ್ಲಿರುವ ಅಲ್ಪಸಂಖ್ಯಾಕರು ತಮ್ಮ ಅಧಿಕಾರವನ್ನು ಶಾಶ್ವತಪಡಿಸಿಕೊಳ್ಳಲು ತಳೆಯುವ ಹಟದ ಮನೋಭಾವ ಇದಕ್ಕೆ ಕಾರಣ. ಇತ್ತೀಚಿನ ವರ್ಷಗಳವರೆಗೆ ಭೂಸ್ವಾಮಿಗಳು, ಮಠಾಧಿಕಾರಿಗಳು ಮತ್ತು ಸೇನಾಧಿಕಾರಿಗಳು ತಮ್ಮ ಆಳಿಕೆಯಲ್ಲಿ ದರ್ಪಹೆಚ್ಚಿಸಿ, ವಿಧೇಯರೂ ಮೆತ್ತಗರೂ ಆದ ಅಧೀನ ಪ್ರಜಾಗಣದಿಂದ ತಮ್ಮ ಆಜ್ಞಾರಾಧನೆಯನ್ನು ನಿರೀಕ್ಷಿಸಿ ಅವರಿಂದ ದುಡಿಸಿಕೊಳ್ಳುತ್ತಿದ್ದ ಸನ್ನಿವೇಶವಿತ್ತು. ಈ ವಿನಮ್ರ "ಬಹುಸಂಖ್ಯಾಕರು" ಮೈಮುರಿಯ ದುಡಿಯಬೇಕು, ತೆರಿಗೆ ತೆರಬೇಕು, ಮಠದ ವೆಚ್ಚಕ್ಕೆ ದ್ರವ್ಯದಾನ ಮಾಡಬೇಕು; ಮತ್ತು ಅವಶ್ಯವಾದಾಗ ಅವರು ತಮ್ಮ ಜೀವಿಕಾರಂಗವನ್ನು ತೊರೆದು, ಈ ಒಡೆಯರು ಹೂಡುವ ಕಾಳಗಗಳಲ್ಲಿ ಭಟರಾಗಿ ಸೇರಿ ಕಾದಾಡಬೇಕು — ಎಂದು ನಿರ್ಬಂಧಪಡಿಸಲಾಗುತ್ತಿತ್ತು.

ಉದ್ಯಮ ಕ್ರಾಂತಿ (ಇಂಡಸ್ಟ್ರಿಯಲ್ ರೆವೊಲ್ಯೂಷನ್) ಉದ್ಭವಿಸಿದಾಗ ಅದು ತನ್ನೊಡನೆ ಮನುಷ್ಯಜೀವಿತಕ್ಕೆ ಕೆಲವು ನಿರ್ಬಂಧಕವಾದ ಅಪೇಕ್ಷೆಗಳನ್ನು ತಂದಿತು. ರಚನೆ, ಸೇವೆ ಹಾಗೂ ಅಭಿವೃದ್ಧಿ ಸಾಧನೆಗೂ ನೂತನ ಕರ್ಮಾಗಾರಗಳ ಯಂತ್ರ ಸಂಧಾನಕ್ಕೂ, ನಿತ್ಯವೂ ಜಟಿಲವಾಗುತ್ತಿದ್ದ ಸಮಾಜಯಂತ್ರನಿರ್ವಾಹಕ್ಕೂ ಹಳೆಯ

ನಿರುಪಯುಕ್ತ ತಂತ್ರಗಳನ್ನು ತೊರೆದು ನವೀನ ವೈಜ್ಞಾನಿಕ ರೀತಿಯ ತಾಂತ್ರಿಕ ಕೌಶಲಗಳನ್ನು ಅಪೇಕ್ಷಿಸಿತು. ಕಾರ್ಯ ಸಂಬಂಧವಾದ ನಕ್ಷೆಗಳನ್ನೂ ತಪಸೀಲು ಪಟ್ಟಿಗಳನ್ನೂ ಬರೆದ ವರದಿಗಳನ್ನೂ ಓದಿ ತಿಳಿದು, ಒಂದು ಗೊತ್ತುಪಾಡಿನಲ್ಲಿ ಕಾಯಕ ಮಾಡಬಲ್ಲ ಬುದ್ಧಿವಂತ ಸಿಬ್ಬಂದಿಗೆ ಉದ್ಯಮ ಕ್ರಾಂತ್ಯುತ್ತರ ಕಾಲದಲ್ಲಿ ತೀರ ಅನಿವಾರ್ಯ ಕರ್ತವ್ಯವು ವಿಧಾಯಕವಾಯಿತು. ಹೊಸ ಅಗತ್ಯಗಳಿಗೆ ಸಾಕಾಗುವಂಥ ಹೊಸ ವಿದ್ಯಾಭ್ಯಾಸ ಪದ್ಧತಿಯ ಅನಿವಾರ್ಯತೆಯನ್ನೂ ಅದು ಮುಂದೆ ಒಡ್ಡಬಹು ದಾದ ಅಪಾಯ ಸಂಭವವನ್ನೂ ಕ್ರಾಂತ್ಯುತ್ತರ ಸಂದರ್ಭಗಳು ಸೂಚಿಸಿದುವು. ಒಮ್ಮೆ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಅಧ್ಯಯನಕ್ಕೂ ವಿಚಾರಾಭ್ಯಾಸಕ್ಕೂ ತರಪೇತಿ ಪಡೆದ ರೆಂದರೆ, ಅವರೆಲ್ಲ ಒಡೆಯರ ಹಿತರಕ್ಷಣೆ ಮಾಡುತ್ತ ತೃಪ್ತಿ ಪಡುವುದಕ್ಕೆ ಮಾತ್ರ ಹೊಸ ವಿದ್ಯೆಯನ್ನು ಕಲಿಯುತ್ತಾರೆಯೆ? ಒಮ್ಮೆ ಅವರು ನವೀನ ಶಿಕ್ಷಣಪಡೆದರೆ ಸಾಕು, ಸ್ವಂತದ ಪ್ರಯೋಜನವನ್ನೂ, ತಾವು ಘಟಕಗಳಾಗಿ ಸೇರಿ ಆಗಿರುವ ಸಾಮಾಜಿಕ ಸಮುದಾಯದ ಹಿತವನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಇರುತ್ತಾರೆಯೆ? ಈ ಸಾಧ್ಯತೆ ಗಳು ಒಡೆಯರನ್ನು ತೀವ್ರಾಲೋಚನೆಗೀಡುಮಾಡಿತು. ಅವರು ಅಪಾಯ ನಿವಾರಣೆ ಗೋಸ್ಕರ ಕಾರ್ಮಿಕರಿಗೆ ಅನ್ನ, ಮದ್ಯ, ಮತ್ತು ಇತರ ಜೀವಿಕಾ ಸೌಕರ್ಯಗಳನ್ನು ಒದಗಿಸುತ್ತ ಬಂದರು–ಮೊದಲಿಗಿಂತ ಸ್ವಲ್ಪ ಹೆಚ್ಚಾಗಿ. ಈ ಒದವು ಪ್ರಲೋಭನ ಜಾಲವಾಗಿ ಪರಿಣಮಿಸಿ, ಯಂತ್ರೋದ್ಯಮ ಕ್ಷೇತ್ರದ ಕಾರ್ಮಿಕರ ಬದುಕಿನಲ್ಲಿ ನಿರ್ಣಾಯಕ ಪಾತ್ರ ವಹಿಸಿತು; ಮತ್ತು ಕಾರ್ಮಿಕ ವರ್ಗವೂ ಹಾಗೆಯೇ ನಿತ್ಯ ಬೆಳೆಯುತ್ತಿದ್ದ ಮಧ್ಯಮ ತರಗತಿಯ ಜನವೂ ಈ ಹೊಸ ಸನ್ನಿವೇಶದಲ್ಲಿ ಆರ್ಥಿಕ ವ್ಯವಸ್ಥೆಯ ಒಡೆಯರ ಹಿತರಕ್ಷಣೆಯ ಕರ್ತವ್ಯವನ್ನು ಹೊರಬೇಕಾಯಿತಲ್ಲದೆ, ಸಾರ್ವಜನಿಕ ನೀತಿನಿರ್ಣಯಕರ್ತರ ಹಿತವನ್ನೂ ರಕ್ಷಿಸಿ ಅವರ ಆಜ್ಞಾರಾಧಕರಾಗ ಬೇಕಾಯಿತು.

ಈ ಹೊತ್ತು ಪಾಲಕ ವರ್ಗದ ಚಟುವಟಿಕೆ ಹೊಸ ಹೊಸ ರೂಪಗಳನ್ನು ತಳೆ ಯುತ್ತಿದೆ. ಜಾಹಿರಾತುಗಳು; ಪುಸಲಾಯಿಕೆಗಳು; ಸ್ವಾನುಕೂಲ ಸಾಧಕ ತತ್ವಗಳ ಜೋಡಣೆಗೆ ಅವಕಾಶವಾಗುವಂತೆ ಜನದ ಬುದ್ಧಿಮಾರ್ಜನೆ ಮಾಡಿ, ತಮ್ಮ ದೃಷ್ಟಿಗನು ಸಾರವಾದ ಹೊಸ ಭಾವನೆಗಳನ್ನು ಒತ್ತಾಯದಿಂದ, ಅವರ ತಲೆಗೆ ತುಂಬಿ ಅವರನ್ನು ತಮಗೆ ವಿಧೇಯರನ್ನಾಗಿ ಮಾಡಿಕೊಳ್ಳುವುದು, ಅಥವಾ ವಿಶೇಷ ಪ್ರಯತ್ನದಿಂದ ನವೀನ ಮಾರ್ಗಗಳಲ್ಲಿ ಸ್ವವಿಚಾರ ಪ್ರಸಾರ ಪ್ರಕ್ರಿಯೆಗಳಲ್ಲಿ ತೊಡಗುವುದು. ಈ ವಿವಿಧ ತಂತ್ರೋಪಾಯಗಳೆಲ್ಲವನ್ನೂ "ಪ್ರೊಮೋಷನ್''—ಎಂಬ ಒಂದೇ ಒಂದು ಮಾತು ಒಳಗೊಳ್ಳುತ್ತದೆ. ಮನೋವೃತ್ತಿಯನ್ನು ಪ್ರಗತಿ ಪಥದಲ್ಲಿ ಪ್ರವರ್ತನಗೊಳಿಸು ವುದು ಈ ಮಾತಿನ ಅಂತರ್ಭಾವ. ಅಥವಾ ದೇಶಭಾಷೆಗಳಲ್ಲಿ ಈ ಚಟುವಟಿಕೆಯನ್ನು ವೃತ್ತಿತತ್ವ ''ವಿಕ್ರಯ'' ಎಂದು ಬಣ್ಣಿಸಬಹುದು. ವೃತ್ತಿ ಪ್ರವರ್ತನೆಗೆ ವ್ಯಾಪಾರ

ಧರ್ಮ ಅಂಟಿಕೊಳ್ಳುತ್ತದೆ. "ಸೆಲ್ಲಿಂಗ್"—ಅಭಿಪ್ರಾಯಗಳ ಮಾರಾಟ, ಕೊಳ್ಳಾಟ. ಮನುಷ್ಯರು ಅನ್ಯಾಭಿಪ್ರಾಯಗಳಿಗಾಗಿ ತಮ್ಮನ್ನು ತಾವು "ಮಾರಿಕೊಳ್ಳುತ್ತಾರೆ." ಉದ್ಯಮಗಳಿಂದ ಭಾವನೆಗಳ ವಿಕ್ರಯ; ಉತ್ಪನ್ನಗಳಿಂದ ಸೇವೆಗಳ ವಿಕ್ರಯ; ನಂಬಿಕೆ ನೀತಿಗಳ ವಿಕ್ರಯ ಕೂಡ ಜೊತೆ ಜೊತೆಯಲ್ಲೇ ಆಗುತ್ತಿರುತ್ತದೆ. ಕಸಬುಗಳಲ್ಲಿ ಇಂಥ ಪ್ರವರ್ತನೆ ಸ್ವತಸ್ಸಿದ್ಧವಾದ ಸಂಗತಿ. ಈಗ ಅದು ರಾಜಕೀಯಕ್ಷೇತ್ರದಲ್ಲೂ ವ್ಯಾಪಕವಾಗಿ ಹರಡಿಕೊಂಡಿದೆ; ಮತಧರ್ಮಕ್ಷೇತ್ರದಲ್ಲೂ, ಶಿಕ್ಷಣ ರಂಗದಲ್ಲೂ, ದೇಶಾಭಿಮಾನದ ಮತ್ತು ಸಮಾಜಸೇವಾಸಂಸ್ಥೆಗಳ ವಿವಿಧ ರಂಗಗಳಲ್ಲೂ, ನಾಣ್ಯದಂತೆ ಚಲಾವಣೆಯಲ್ಲಿರುವುದು "ಸೆಲ್ಲಿಂಗ್"-- ವಿಕ್ರಯ (ಜೀವಗುಣಗಳ ಮಾರಾಟ).

ಹೊಸ ಸಂಚಾರ ಸಾಧನಗಳೂ, ಈಚೆಗೆ ಅಭಿವೃದ್ಧಿಪಡಿಸಿದ ನೂತನ ಸಮಾಚಾರ ಸಾಧನಗಳೂ ಈ ತತ್ತ್ವವಿಕ್ರಯದ ಚಟುವಟಿಕೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿವೆ. ರಾಷ್ಟ್ರೀಯ ನಿಷ್ಠೆಗಳು, ಹಮ್ಮು, ಆಶೋತ್ತರಗಳು ಪ್ರವಾಹವಾಗಿ ಹರಿಯುತ್ತ, ನೆರೆಯೇರಿ ಈ ಚಟುವಟಿಕೆಯ ದಿಕ್ಕಿಗೇ ಹರಿಯುತ್ತಿವೆ. ಪುಸಲಾಯಿಕೆ ಒತ್ತಾಯಗಳೆಂಬ ನೂತನ ತಂತ್ರಗಳನ್ನು ಪ್ರಯೋಗಿಸುವ ಮಾಲಿಕರು ತಮ್ಮ ಊಳಿಗದಲ್ಲಿರುತ್ತ ತಮ್ಮ ಹಿತವನ್ನು ಕಾಯುತ್ತಿರುವ ಕಾರ್ಮಿಕರಮೇಲೆ, ದಿನಕ್ಕೆ ಇಪ್ಪತ್ನಾಲ್ಕು ಘಂಟೆಯೂ ಉಸ್ತುವಾರಿ ನಡಸುತ್ತಾರೆ. ಮಾಲಿಕರ ವಿರುದ್ಧ ಕೈ ಬಾಯಿ ಮಾಡುವ ಆಕ್ಷೇಪಕರನ್ನೂ ಶತ್ರುಗಳನ್ನೂ—ಅವರು ಸ್ವದೇಶದವರಾಗಲಿ, ಅನ್ಯದೇಶದವರಾಗಲಿ — ಈ ವಿಕ್ರಯತಂತ್ರಪ್ರಯೋಗದಿಂದ ಮಾಲಿಕರು ಅವರನ್ನೆಲ್ಲ ದಮನಮಾಡಿಬಿಡಬಲ್ಲರು.

ಆಧುನಿಕ ಸಮಾಜವು ಪ್ರಬುದ್ಧವಾಗಿರುವುದಕ್ಕೆ (enlightned) ಬದಲಾಗಿ ಪದ್ಧತಿ ನಿಯಮಗಳಿಗೆ ಆಧೀನವಾಗಿದೆ (conditioned). ಎಲ್ಲ ವ್ಯಾಪಾರಕ್ಕೂ ಒದಗುವ ಪೆಚ್ಚ ಸಾರ್ವಜನಿಕ ಜೊಕ್ಕಸದಿಂದ; ಮತ್ತು ಪ್ರಭುತ್ವದ ನಿಯಂತ್ರಣ ಶಾಸನಗಳಿಗೆ ಅನುಸಾರವಾಗಿ. ಈ ನಡವಳಿಕೆಯನ್ನು "ಶೈಕ್ಷಣಿಕ" ಚಟುವಟಿಕೆ ಎಂದು ಕರೆಯಲಾಗುತ್ತದೆ. ಆಧುನಿಕ ವಿದ್ಯಾಭ್ಯಾಸವ್ಯವಸ್ಥೆ ತಾಂತ್ರಿಕ ಜ್ಞಾನದಾನ ಮಾಡುವುದರ ಜೊತೆಗೆ ಆ ಜ್ಞಾನಸಂಪಾದನೆಗೆ ಪ್ರೋತ್ಸಾಹಕವಾಗಿಯೂ ಇದೆ, ನಿಜ: ನಿಸ್ಸಂದೇಹವಾಗಿ. ಆದರೆ "ಸ್ವತಂತ್ರಪಂಚ" ಎನ್ನಿಸಿಕೊಂಡ ಕ್ಷೇತ್ರದಲ್ಲಿ ರೂಢಿಯಲ್ಲಿರುವ ವಿದ್ಯಾದಾನದ ಯಂತ್ರವನ್ನು ಪ್ರವೇಶಮಾಡಿದ ರಾಷ್ಟ್ರಕಪ್ರಜೆ, ಯಂತ್ರ ಪ್ರಭಾವನ್ನು ಮೈಗೂಡಿಸಿಕೊಂಡು ಹೊರಬೀಳುವುದು ಅಜ್ಞನಾಗಿ, ಸಂವೇದನಾ ಶೂನ್ಯನಾಗಿ; ಅಷ್ಟೇ ಅಲ್ಲ; ಯೋಜನೆಯನ್ನು ಕಟ್ಟಿಕೊಂಡು, ಸೌಕರ್ಯ ಸಾಧನಗಳನ್ನು ಚಿಂತಿಸಿ, ಕಾರ್ಯಗತಿಯನ್ನು ಸಂಘಟಿಸಿ, ತಾನಿದ್ದುಕೊಂಡು ಬಾಳುತ್ತಿರುವ ಪರಿಸರವನ್ನು ನಿಭಾಯಿಸುವ ತಿಳಿವಳಿಕೆಯಿಲ್ಲದವನಾಗಿ ವಿದ್ಯಾಶಾಲೆಗಳಿಂದ ರಾಷ್ಟ್ರಕನು

ಹೊರಬೀಳುತ್ತಾನೆ. ಈ ಒಂದು ನಿಯಂತ್ರಕ ಸಂದರ್ಭಕ್ಕೆ ಸಿಕ್ಕಿ, ಪರಿವರ್ತನೆ ಎಂಬೊಡನೆ ಅದು ಸಮಾಜವಾದವನ್ನೆಲ್ಲಿ (ಕಾಮ್ಯುನಿಸ್ಟ್) ಬರಮಾಡಿಬಿಡುತ್ತದೆಯೋ ಎಂದು ಭಯದಿಂದ ತಲ್ಲಣಿಸುವ ವಿದ್ಯಾವಂತ ಜನ "ತಯಾರಾಗಿ" ವಿದ್ಯಾಶಾಲೆಗಳಿಂದ ಹೊರಬೀಳುತ್ತಾರೆ. ಸೃಷ್ಟಿಯಲ್ಲೆಲ್ಲ ಅತ್ಯುತ್ತಮವಾದ ನಮ್ಮ ವಿಶ್ವ ಪ್ರಪಂಚದಲ್ಲಿ "ಒಳ್ಳೆಯದು" ಎಂದರೆ ರಾಷ್ಟ್ರಕಪ್ರಜೆ ಪ್ರಭುತ್ವನಿಯಂತ್ರಣಕ್ಕೆ ವಿಧೇಯವಾಗಿರಬೇಕು; ಶೋಷಣಕಾರರು ನೇಮಿಸಿದ ಸಾಮಾಜಿಕ ಜೀವನ ವಿಧಾನಕ್ಕೆ —ನಮೂನೆಗೆ—ಒಡಂಬಟ್ಟು ನಡೆಯಬೇಕು--ಎಂಬೀ ನಂಬಿಕೆಯಲ್ಲಿ ಬುದ್ಧಿಜಾಡ್ಯವನ್ನು ಪಡೆದವರು ಈ ವಿದ್ಯಾವಂತರು. ಹೀಗೆ ತಮ್ಮನ್ನು ಬಲಿಯಾಗಿ ಒಪ್ಪಿಸಿಕೊಂಡ ವಿದ್ಯಾವಂತರನ್ನು ಅಜ್ಞಾನಿಗಳಾಗಿ, ಅನವೇಕ್ಷಕರಾಗಿ, ಅಕರ್ಮನಿರತರಾಗಿರುವಂತೆ ಮಾಡುವುದೇ ಶೋಷಕರು ತೊಟ್ಟ ವ್ರತ.

## ಧನಾಧಿಕಾರ ಪ್ರತಿಷ್ಠೆಗಳ ಲೋಭ

ವೆಬ್ಸ್ಟರ್ ನಿಘಂಟುಕಾರ ಲೋಭವನ್ನು ಕುರಿತು ಕೊಟ್ಟಿರುವ ಲಕ್ಷಣ ವಿವರಣೆ ಇದು; "ಒಬ್ಬಾನೊಬ್ಬನು ತನಗೆ ಅವಶ್ಯವಾಗಿರುವುದಕ್ಕಿಂತ ಅಥವಾ ಇಷ್ಟವಾಗಿರುವುದಕ್ಕಿಂತ ಅತಿಶಯವೆನ್ನಿಸುವಷ್ಟು ಪರಿಮಾಣದಲ್ಲಿ ಯಾವುದನ್ನಾದರೂ ತೃಪ್ತಿಪಡದೆ ಕೋರಿದರೆ ಅದು ಲೋಭವೆನ್ನಿಸಿಕೊಳ್ಳುತ್ತದೆ." ಈ ವಿವರಣೆಯನ್ನು ಹೀಗೆ ತಿದ್ದೋಣವೆಂದು ನನಗನ್ನಿಸುತ್ತದೆ. "ಸರಕನ್ನಾಗಲಿ ಸೇವೆಯನ್ನಾಗಲಿ ಅನುಭವವನ್ನಾಗಲಿ ತಾನು ನ್ಯಾಯತಃ ಸಂಪಾದಿಸಿಕೊಂಡಷ್ಟರಲ್ಲಿ ಒಬ್ಬನು ತೃಪ್ತಿಪಡದೆ ಇನ್ನೂ ಹೆಚ್ಚಿನ ಪರಿಮಾಣದಲ್ಲಿ ಕೋರುತ್ತ ಚಡಪಡಿಸುವುದು ಲೋಭ." ಗ್ರೀಕರ ಜೀವನ ಸೂತ್ರ "ಯಾವುದೂ ಹೆಚ್ಚಾಗಿ ಬೇಡ" ಈ ಸೂತ್ರವನ್ನು ಉಲ್ಲಂಘಿಸತಕ್ಕದ್ದು ಲೋಭ.

ಲೋಭ ಈ ಐದು ಮುಖಗಳನ್ನು ತೋರಿಸಬಲ್ಲದು;- (1)ಸರಕು ಸೇವೆಗಳನ್ನು ಪಡೆದು ಭದ್ರಪಡಿಸಿಕೊಳ್ಳುವುದು;(2)ತನ್ನ ಕಡೆಗೇ ಹೆರವರ ಗಮನವನ್ನು ಸೆಳೆಯುವುದು; (3)ಮಾನ, ಪ್ರತಿಷ್ಠೆ,ಪದವಿಗಳನ್ನು ಗಳಿಸುವುದು;(4)ಸ್ವಾತ್ಮ ರಕ್ಷಣೆಗೋಸ್ಕರ ಕೋಟೆ ಕಟ್ಟಿಕೊಳ್ಳುವುದು; ಮತ್ತು (5) ಅಧಿಕಾರವನ್ನು ತನ್ನ ಕೈಗೆ ಸೆಳೆದುಕೊಂಡು, ಅದನ್ನು ನಿತ್ಯೋರ್ಜಿತವಾಗಿರುವಂತೆ ಕಾಪಾಡಿಕೊಳ್ಳುವುದು.

ಸರಕು ಸೇವೆಗಳ ಸಂಬಂಧವಾಗಿ ಲೋಭವೆಂಬುದು ಮನಃಕೃಪಣತೆಯ ಪರಾಕಾಷ್ಠದಶೆಯನ್ನು ಪ್ರಕಾಶಪಡಿಸುತ್ತದೆ. ಸುಮ್ಮನೆ ಗಳಿಕೆಗಾಗಿ ಗಳಿಸುವುದು ಜಿಪುಣನ ಲಕ್ಷಣ. ತೀರ ನಿರ್ಬಂಧವಿದ್ದ ಹೊರತು, ಅವನು ಗಳಿಸಿದ್ದರಲ್ಲಿ, ಮುಚ್ಚಿಟ್ಟುಕೊಂಡದ್ದರಲ್ಲಿ ಎಳ್ಳಷ್ಟನ್ನೂ ಹೆರವರಿಗೆ ಬಿಟ್ಟುಕೊಡಲಾರ. ಅಭಾವದ ತಳಪಾಯ

ವನ್ನು ನೆಮ್ಮಿ ರೂಪಗೊಂಡ ಸಮಾಜದಲ್ಲಿ ಲೋಭದ ಮಟ್ಟಕ್ಕೆ ಏರಬಲ್ಲವನು ಕೇವಲ ಪ್ರತಿಭಾಶಾಲಿಯಾಗಿದ್ದರೆ ಮಾತ್ರ ಸಾಧ್ಯ. ವಸ್ತು ಪುಷ್ಕಲತೆಯಿಂದಲೂ ಸರಕು ಸೇವಗಳ ವಿವಿಧತೆಯಿಂದಲೂ ಆಢ್ಯವಾದ ಆಧುನಿಕ ಸಂಪದ್ಭರಿತ ಸಮಾಜದಲ್ಲಾದರೋ, ಕಸದತೊಟ್ಟಿಗಳಲ್ಲಿ ಹಳೆಯಚಿಂದಿಬಟ್ಟೆಗಳನ್ನು ಆರಿಸಿಕೊಳ್ಳುವವನೂ ಕೂಡ, ಅವನು ಬಳಸುವುದಕ್ಕಿಂತ ಹೆಚ್ಚಾಗಿ ಗಳಿಸಬಲ್ಲನು. ತಿರುಪೆಗಾರರು ಸತ್ತು, ದೊಡ್ಡ ದೊಡ್ಡ ಮೊತ್ತದ ಸೊತ್ತನ್ನೂ ಭಾರಿ ಹಣದ ಲೆಕ್ಕವಿರಿಸಿ ಬ್ಯಾಂಕು ಠೇವಣಿಗಳನ್ನೂ ಬಿಟ್ಟು ಹೋದ ಕತೆಗಳು ಪತ್ರಿಕೆಗಳಲ್ಲಿ ಅಡಿಗಡಿಗೆ ಪ್ರಕಟವಾಗುತ್ತಲೆ ಇರುತ್ತವೆ.

ಪೆರವರ ನೋಟವನ್ನು ತನ್ನ ಕಡೆಗೆ ತಿರುಗಿಸಿ ಕೊಳ್ಳುವುದು ಲೋಭದ ಎರಡನೆಯ ಮುಖ. ಅದು ಚಿಕ್ಕಂದಿನಲ್ಲೇ ಹೊರಪಟ್ಟು ಬರುಬರುತ್ತ ದೊಡ್ಡವರಲ್ಲಿ ಅಹಂಕಾರೋನ್ಮಾದವಾಗಿ ಬಲಿಯುತ್ತದೆ. ಯಾವ ಸಮಾಜಕ್ಕೆ ವಿತ್ತವಿಪುಲತೆಯನ್ನು ಸಾಧ್ಯಮಾಡಿಕೊಳ್ಳುವ ಸಾಮರ್ಥ್ಯವುಂಟೋ ಅಲ್ಲಿ ಒಬ್ಬನ ತನ್ನ ಬದುಕಿನಲ್ಲಿ ಕೀರ್ತಿ ಸಂಪಾದನೆ ಮಾಡಿದ್ದಾನೆ ಎಂಬುದಕ್ಕೆ—ಅವನು ಗಳಿಸಿದ ಸೊತ್ತುಗಳ ಗಾತ್ರವೂ ವೈವಿಧ್ಯವೂ ಎಷ್ಟೆಂಬುದೇ ಪ್ರಮಾಣ. ಇಂಥ ಸಮಾಜದಲ್ಲಿ ಅಹಂಕಾರೋನ್ಮಾದ ಪ್ರಕಾಶನಕ್ಕೆ ವಿಶೇಷವಾದ ಅವಕಾಶವಿರುತ್ತದೆ.

ಯಂತ್ರೋದ್ಯಮ ಅಭಿವೃದ್ಧಿಯನ್ನು ಕಂಡ ಸಮಾಜದಲ್ಲಿ ಸರಾಸರಿಯಾಗಿ ಪ್ರತಿಯೊಂದು ಮನೆಯಲ್ಲೂ ಸೌಂದರ್ಯಾಭಿರುಚಿಗೆ ಹೊಂದದೆ ಇರತಕ್ಕದ್ದೂ, ಮುಂದೆ ಎಂದಿಗೂ ನಿತ್ಯೋಪಯೋಗಕ್ಕೆ ಒದಗದೆ ಇರತಕ್ಕದ್ದೂ ಆದ ಸರಕುಗಳನ್ನು ಅಲ್ಲಲ್ಲಿ ಓರಣವಾಗಿ ಅಡಕಿಯೋ, ಯದ್ವಾತದ್ವಾ ಪೇರಿಸಿಯೋ ಇರುವುದನ್ನು ನೋಡಬಹುದು. ಬಗೆಬಗೆಯ ಬಟ್ಟೆಬರೆ, ಅಪರೂಪದ ಗಾಜು ಪಿಂಗಾಣಿ ಪಾತ್ರೆಗಳು, ಯಂತ್ರ ಸಲಕರಣೆಗಳು, ಬೇರೆ ಬೇರೆ ಮಟ್ಟದ ಪಾತ್ರೆಗಳು, ಇನ್ನೊಂದಕ್ಕೆ ಜೋಡಿಸಿ ಬಳಸಬಹುದಾದ ಯಂತ್ರದ ಬಿಡಿಭಾಗಗಳು – ಆ ಮನೆಯ ಉಗ್ರಾಣವನ್ನು ತುಂಬುತ್ತವೆ. ಈ ಒಂದು ಮಿತಿಮೀರಿದ ಭೋಗವಸ್ತ್ವತಿರೇಕಸ್ಥಿತಿಯಿದ್ದರೂ ಗೃಹಸ್ಥನು ಎಡೆಬಿಡದೆ ವಸ್ತುಗಳನ್ನು ಕೊಳ್ಳುತ್ತಲೇ ಇರುತ್ತಾನೆ — ಅವಕಾಶ ಸಿಕ್ಕಿದ ಹಾಗೆಲ್ಲ ಲೋಭದಿಂದ ಆಗುವ ವೆಚ್ಚಕ್ಕೆ ಅಳುಕದೆ.

ಲೋಭಕ್ಕೆ ಇರುವ ಮುಕ್ತದ್ವಾರ ಲಾಭದ ದುರಾಶೆ; ಮತ್ತು ಕೀರ್ತಿ ಪ್ರತಿಷ್ಠೆ ಪದವಿ ಮಾನಗಳಿಗೆ ಮೋಹದಿಂದ ಅಂಟಿಕೊಳ್ಳುವ ಬಯಕೆ. ಯಾರಿಗೆ ತಾವು ಪೆರವರಿಗಿಂತ ಮೊದಲು ಮುನ್ನಡೆದು ಸಮಾಜ ಶಿಲ್ಪದ ಶಿಖರಾಗ್ರಕ್ಕೇರಬೇಕೆಂಬ ಆಕೋತ್ತರವಿರುತ್ತದೆಯೋ ಅವರಿಗೆ ಸ್ಥಾನ ಮೋಹವೂ ಅದನ್ನಡರಿದ ಮೇಲೆ ಸ್ಥಾನ ಸಂರಕ್ಷಣೆಯ ಕಾತರವೂ ಮನಸ್ಸನ್ನು ಕಾಡಿ ಚಡಪಡಿಸುವಂತೆ ಮಾಡುವ ನಿತ್ಯ ಚಿಂತೆಯಾಗಿರುತ್ತದೆ.

ಲೋಭವು ಅಧಿಕಾರದ ದಿಕ್ಕಿನಲ್ಲಿ ಪ್ರವರ್ತಿಸಿದಾಗ ಅದನ್ನು "ಮಹಾಕಾಂಕ್ಷೆ" —ಘನವಾದ ಆಶೆ, ಹೆಬ್ಬಯಕೆ—ಎಂದು ಸಾಮಾನ್ಯವಾಗಿ ಕರೆಯುತ್ತಾರೆ. ಅಧಿಕಾರವೆಂದರೆ ಹೆರವರನ್ನು ಪಕ್ಕಕ್ಕೆ ತಳ್ಳಿ ತಾನು ಮುನ್ನಡೆಯುವುದು; ಮತ್ತು ಹೆರವರನ್ನು ತನ್ನ ಅಧಿಕಾರಕಾಂಕ್ಷೆಗೆ,-ಸ್ವಹಿತಕ್ಕೆ,-ದುಡಿಸಿಕೊಳ್ಳುವುದು; ಹಾಗೆಯೇ ಹೆರವರನ್ನು ಶಾಶ್ವತವಾಗಿ ಅಧೀನ ಸ್ಥಿತಿಯಲ್ಲಿ, ಸಾಧ್ಯವಾದರೆ, ಗುಲಾಮಗಿರಿಯಲ್ಲಿ ಇರಿಸುವುದು. ಅಧಿಕಾರಸ್ಥನು ತನ್ನ ಅಧಿಕಾರಕಾಂಕ್ಷೆಯ ಪ್ರೇರಣೆಯನ್ನು ತೃಪ್ತಿಪಡಿಸಲು ಹೊರಟು, ತನ್ನ ಜೊತೆಯ ಮನುಷ್ಯರನೇಕರನ್ನು ತನ್ನ ಆಜ್ಞಾಪರಿಪಾಲರನ್ನಾಗಿ ಮಾಡಿಕೊಳ್ಳುತ್ತಾನೆ. ಖಾಸಗೀ ಉದ್ಯಮಶೀಲತೆಯಲ್ಲಿ ಬೆಳೆದ ಸಮಾಜದಲ್ಲಿ ಅಧಿಕಾರದಾಹವುಳ್ಳವರು ಲಾಭಸಂಪಾದನೆ ಮಾಡಿ, ಆರ್ಥಿಕ ರಾಜಕೀಯ ಸಾಮಾಜಿಕ ಸ್ಥಾನ ಪದವಿಗಳನ್ನು ಸ್ವಾಧೀನಪಡಿಸಿಕೊಂಡು ಹೀಗೆ ಉಗ್ಗಡಿಸ ಬಲ್ಲವರಾಗಿರುತ್ತಾರೆ. "ನೀನು ದುಡಿ; ನಿನ್ನ ದುಡಿಮೆ ತರುವ ಫಲವನ್ನು ನಾನು ಭುಜಿಸುತ್ತೇನೆ."

ಅಧಿಕಾರ ಲೋಭವನ್ನು ನಾವು ಕುಟುಂಬಗಳಲ್ಲೂ, ಶಾಲೆಯ ಆಟದ ಬಯಲಲ್ಲೂ, ಆರ್ಥಿಕ ಕ್ಷೇತ್ರದಲ್ಲೂ,-ಅದರಲ್ಲೂ ಗಮನಾರ್ಹವಾಗಿ ರಾಜಕೀಯ ಕ್ಷೇತ್ರದಲ್ಲೂ, ಸಾಮಾನ್ಯವಾಗಿ ಮನುಷ್ಯ ಮನುಷ್ಯ ಸಂಬಂಧಗಳಲ್ಲೂ ನೋಡಬಹುದು. ಅದು ಪ್ರಕಟವಾಗತಕ್ಕದ್ದು ಎಲ್ಲ ಮಟ್ಟಗಳಲ್ಲಿ—ಸ್ಥಳೀಯವಾಗಿ, ಪ್ರಾದೇಶಿಕವಾಗಿ, ಮತ್ತು ರಾಷ್ಟ್ರೀಯವಾಗಿ.

ಸೊತ್ತುಗಳಿಕೆಯೇ ಬದುಕಿನ ಜೀವಾಳ ಎಂದು ಬಗೆಯುವ ಸಮಾಜದಲ್ಲಿ ಮನುಷ್ಯನನ್ನು ಮುನ್ನಡಸುವ ಚಾಲಕ ಶಕ್ತಿಗಳಲ್ಲೆಲ್ಲ ಲೋಭವು ಬಹು ಮುಖ್ಯವಾದ ಪ್ರವೃತ್ತಿ. ಚುರುಕಾದ ಜಾಣನೂ, ಪರಹೃದಯಮರ್ಮಭೇದಿಯೂ ನೀತಿ ನಿಷ್ಠೆಯಿಲ್ಲದ ಭ್ರಷ್ಟನೂ ತನ್ನ ಪ್ರತಿಭಾ ಸಂಪತ್ತನ್ನು ಜೀವನದ ಒಳ್ಳೆಯ ವಸ್ತುಗಳ ಪೈಕಿ ತನಗೆ ನ್ಯಾಯವಾಗಿ ಸಲ್ಲತಕ್ಕದ್ದಕ್ಕಿಂತ ಹೆಚ್ಚಿನದನ್ನು ಸ್ವಾಧೀನಪಡಿಸಿಕೊಳ್ಳುತ್ತಾನೆ. ಈ ಒಂದು ನ್ಯಾಯಬಾಹಿರವಾದ ವಸ್ತುಪರಿಗ್ರಹ ಪ್ರವೃತ್ತಿಯಿಂದ ಲೋಭಿಗಳು ತಮ್ಮ ಜೊತೆಯ ಮನುಷ್ಯರಿಂದ ಬೇರೆ ಪಂಗಡವಾಗಿ ನಿಂತು, ಸಮಾಜದಲ್ಲಿ ವರ್ಗವಿಭಾಗಕ್ಕೂ ಜಾತಿ ವರ್ಣವಿಭಾಗಗಳಿಗೂ, ಅವಕಾಶ ಹೆಚ್ಚುವ ವ್ಯವಸ್ಥೆಗೆ ತಳಪಾಯ ಹಾಕುತ್ತಾರೆ.

ಲೋಭವು ಪ್ರಮುಖವಾಗಿ ಸಮಾಜ ವಿರೋಧಿಯಾದ ಶಕ್ತಿ. ಸೊತ್ತು ಮುಖ್ಯವೆಂದು ಪರಿಗಣಿಸುವ ಸಮಾಜದಲ್ಲಿ ಅದರ ಪ್ರಕಾಶನಕ್ಕೆ ಅವಕಾಶ ಹೆಚ್ಚು. ಆದರೆ ಲೋಭವೃತ್ತಿ ಜನವರ್ಗದ ಗಮನವನ್ನು ಸೆಳೆದು, ಶಕ್ತಿಯ ಅಪವ್ಯಯಕ್ಕೆ

ದಾರಿಮಾಡಿ, ಜನಸಮಸ್ತದ ಮುನ್ನಡೆಗಿಂತ ಹೆಚ್ಚಾಗಿ ಒಬ್ಬನ ಆಡಂಬರ ವಿಡಂಬನೆ ಗಳಿಗೋಸ್ಕರ ದುರವಕಾಶವನ್ನೊದಗಿಸುತ್ತದೆ.

## ಸತ್ತ್ವಹೀರುವ ಆರು ಬಗೆಯ ತುಕ್ಕುಗಳು

ಮನುಷ್ಯನ ಒಳಬಲವನ್ನು ಕುಗ್ಗಿಸುವ ಆರು ಕಿಲುಬುಗಳು ಶರೀರಾಂತರದಲ್ಲಿ ಕಾರ್ಯ ಮಾಡುವ್ಪದರಿಂದ ಅನೇಕರು ರಚನಾತ್ಮಕವೂ ನಿರ್ಮಾಣಕ್ಷಮವೂ ಆದ ಕರ್ತವ್ಯಗಳಲ್ಲಿ ತೊಡಗಲಾರರು. (1) ನ್ಯೂನಪೋಷಣೆ ಕೊಡುವ ಆಹಾರ ಸೇವನೆ, (2) ದೈಹಿಕವಾಗಿ, ಮಾನಸಿಕವಾಗಿ, ಭಾವೋತ್ಕಟತೆಯ ರೂಪವಾಗಿ ಅನಾರೋಗ್ಯ, (3) ಚಿಂತೆ, (4) ಕ್ರೋಧ, (5) ಭಯ ಮತ್ತು (6) ದ್ವೇಷ. ಈ ಆರರಲ್ಲಿ ಒಂದೊಂದೂ – ಹೆಚ್ಚಾಗಿಯೋ ಕಡಮೆಯಾಗಿಯೋ ಜೀವನದ ಸಂಗಾತಿಯಾಗಿದ್ದು ಕೊಂಡು ಪ್ರತಿಯೊಬ್ಬ ಮನುಷ್ಯನನ್ನೂ ಕಾಡುತ್ತದೆ

ಮನುಷ್ಯನಿಗೆ ತ್ರಾಣ ದಾನ ಮಾಡತಕ್ಕದ್ದು ಅವನು ಸೇವಿಸುವ ಆಹಾರ. ಮನುಷ್ಯ ದೇಹವೆಂಬುದು ಪರಸ್ಪರಾವಲಂಬಿಗಳಾದ ವಿವಿಧ ವ್ಯಷ್ಟಿ–(ಬಿಡಿ)–ಅವಯವ ಗಳಿಂದ ಕೂಡಿ, ಒಂದು ವ್ಯವಸ್ಥೆಯಲ್ಲಿ ನಡೆಯುವ ಸಮಷ್ಟಿ –(ಒಟ್ಟು)– ರಚನೆ. ಕಾರ್ಯ ಸಂಧಾನಕೋಸ್ಕರ ಬಿಡಿಭಾಗಗಳನ್ನು ಪಡೆದಿರುವ ಯಂತ್ರದೊಟ್ಟನಂತೆ ನಮ್ಮ ದೇಹದೊಟ್ಟೂ ಪುಷ್ಟಿಕರವಾದ ಆಹಾರಸೇವನೆಯಿಂದ ಮಾತ್ರ ಅದರ ಬೇರೆಬೇರೆ ಅವಯವಗಳಿಗೆ ಪುಷ್ಟಿಕೊಟ್ಟು ವ್ಯಾಪಾರದಲ್ಲಿರಬಲ್ಲುದು. ಪ್ರಾಯಶಃ ಐದರಲ್ಲಿ ಮೂರುಭಾಗದಷ್ಟು ಸಾಕಾಗುವಷ್ಟು ಪುಷ್ಟಿಕೊಡದ ಆಹಾರ ಸೇವನೆಯಿಂದ ಹೇಗೋ ಬದುಕಿಕೊಂಡಿರಲು ಪ್ರಯತ್ನಿಸುತ್ತದೆ. ಮಿಕ್ಕ ಐದರಲ್ಲೆರಡರಷ್ಟು ಜನರೋ ಪುಷ್ಟಿಯೆಳ್ಳಷ್ಟನ್ನೂ ಕೊಡದ ಹಳಸಿದ ಉಣಿಸನ್ನೋ ಕೃತಕ ಸಂಸ್ಕರಣ ವಿಧಾನದಿಂದ ಕಾಪಾಡಿರಿಸಿದ ಉಣಿಸನ್ನೋ ಬೇರೆ ಬಗೆಯ ನಿಸ್ಸಾರವಾದ ಆಹಾರವನ್ನೋ ತಿನ್ನುತ್ತ ಕಾಲಯಾಪನೆ ಮಾಡುತ್ತಿದ್ದಾರೆ. ಜನಕ್ಕೆ ವಾಡಿಕೆಯಾದ ಭೋಜನ ವಿವರಗಳನ್ನು ಹೋಲಿಸಿ ನೋಡಿದಾಗ ಗೊತ್ತಾಗುವ ಸಂಗತಿ ಇದು. ಜನವರ್ಗದಲ್ಲಿ ಸ್ವಲ್ಪ ಮಂದಿಗೆ ಮಾತ್ರ ಸರಿಯೂ ಪುಷ್ಟಿಪ್ರದವೂ ಆದ ಆಹಾರ ಸಂಯೋಜನೆಯ ಗುಟ್ಟು ತಿಳಿದಿರು ತ್ತದೆ. ಬಹುಜನ ಸೇವಿಸುತ್ತಿರುವ ಆಹಾರವು ಬಗೆಬಗೆಯ ದೋಷಗಳಿಂದ ಕೂಡಿರು ತ್ತದೆ. ಜಲಮಾಲಿನ್ಯ, ಧಾನ್ಯರಕ್ಷಣೆಗಾಗಿ ಬಳಸುವ ರಾಸಾಯನಿಕ ದ್ರವಭಸ್ಮಗಳ ಸಂಪರ್ಕದೋಷ ಇತ್ಯಾದಿ ಕಾರಣಗಳಿಂದ ಶರೀರ ಸ್ವಾಸ್ಥ್ಯಕ್ಕೆ ಒಗ್ಗದ ಉಣಿಸೇ ಅನೇಕ ರಿಗೆ ದೊರೆಯುತ್ತಿದೆ.

ಪುಷ್ಟಿಕೊಡದ ಆಹಾರ ಸೇವನೆಯ ದುಷ್ಫಲಗಳನ್ನಿಲ್ಲಿ ಪ್ರಸ್ತಾಪಿಸಬಹುದು. ಇಂಥ ಉಣಿಸನ್ನುಂಡು, ತ್ರಾಣವುಡುಗಿಸಿಕೊಂಡು, ಕುಂಟುಬಲದಿಂದ ಮನುಷ್ಯನು

ಕಾಯಕ ಮಾಡಬೇಕಾಗುತ್ತದೆ. ದೀರ್ಘಕಾಲದ ನಿತ್ರಾಣದಿಂದ ಶರೀರದ ಸ್ನಾಯುಗಳೂ ಅಂಗಾಂಗಗಳೂ ಕ್ರಮೇಣ ದಕ್ಷತೆಯನ್ನು ಕಳೆದುಕೊಳ್ಳುತ್ತವೆ; ಮತ್ತು ದೇಹದಲ್ಲಿರುವ ಸಹಜಶಕ್ತಿಯ ಕ್ಷೀಣಗತಿಗೆ ಇದೇ ಮುಖ್ಯಕಾರಣ. ಶಾರೀರಕ ವಾಗಿ ಮಾತ್ರವಲ್ಲ, ಮಾನಸಿಕವಾಗಿಯೂ ಭಾವಮುಖವಾಗಿಯೂ ದೌರ್ಬಲ್ಯ ಗಳಿಗಿರುವ ಪ್ರಧಾನ ಕಾರಣಗಳಲ್ಲಿ ಪುಷ್ಟಿರಹಿತವಾದ ಆಹಾರ ಸೇವನೆಯು ಪಾತ್ರವೇ ಗಣನಾರ್ಹವಾದದ್ದು. ನ್ಯೂನ ಪುಷ್ಟಿಯ ಆಹಾರ ಸೇವನೆಗೂ ಮನುಷ್ಯ ದೇಹದ ಅವಯವ ಸಮಷ್ಟಿಯ ಕಾರ್ಯಕ್ಷಮವಲ್ಲದ ಆಲಸ್ಯಕ್ಕೂ ಕೊರತೆಗೂ ಪ್ರತ್ಯಕ್ಷ ಸಂಬಂಧವುಂಟು.

ಮನುಷ್ಯನ ಅನಾರೋಗ್ಯ ಸ್ಥಿತಿಗೆ ಇತರ ಕಾರಣಗಳೂ ಇರಬಹುದು. ಜನ್ಮ ಕಾಲೀನ (ಜಾಯಮಾನದ) ಪ್ರಭಾವಗಳು, ಆಕಸ್ಮಿಕವಾಗಿ ನಡೆಯುವ ಘಟನೆಗಳು (ಅಪಘಾತ ಅವಘಡಗಳು); ಪುಷ್ಟಿಯಿಲ್ಲದ್ದರಿಂದ ಶರೀರದೊಟ್ಟೀ ಸವೆಸವೆದು ಉಡಗಿ ಹೋಗಬಹುದು. ಪುಷ್ಟಿಕೊಡುವ ಆಹಾರ ಸೇವನೆಯಿಂದ ಶರೀರಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬರುತ್ತಿದ್ದರೂ ಸಾಂಕ್ರಾಮಿಕ ರೋಗಗಳ ಸಂಪರ್ಕದಿಂದಲೂ ಜನಾರೋಗ್ಯಕ್ಕೆ ವ್ಯಾಪಕವಾಗಿ ಅಪಾಯ ಬರಬಹುದು. ಎಲ್ಲಿ ಈ ಕಾರಣಗಳು ತೀವ್ರದಶೆಯಲ್ಲಿರುತ್ತವೆಯೋ ಅಲ್ಲಿ ಅಕಾಲಿಕ ಮರಣ ಪ್ರಾಪ್ತಿ ಖಂಡಿತ. ಇಲ್ಲದಿದ್ದರೆ ರೋಗಕಾರಣಗಳೇ ದೇಹತ್ರಾಣವನ್ನು ಹೀರಿ, ಮನುಷ್ಯ ಪ್ರಾಣಿಯನ್ನು ಎಳೆದಾಡಿ ಪಾಡುಪಡಿಸುತ್ತ ಸಂತತಬಾಧೆಯಲ್ಲಿರಿಸಿ, ಅವನು ಗಾಲಿ ಕುರ್ಚಿಯನ್ನೋ, ಹಾಸಿಗೆ ಯನ್ನೋ ಆಶ್ರಯಿಸಿ ಕೊಂಡಿದ್ದು ಆಯುಃಸ್ಸನ್ನು ಮುಗಿಸಬೇಕಾಗುತ್ತದೆ.

ಚಿಂತೆಯನ್ನು ಅಳೆದು ತೋರಿಸುವ ಮಾಪಕಯಂತ್ರವಿಲ್ಲ. ದೀರ್ಘಕಾಲದ ಚಿಂತೆಯಲ್ಲಿರುವವರು ಚಿಂತೆಯ ಸ್ವಭಾವವನ್ನರಿತೋ, ಅರಿಯದೆಯೋ ಚಿಕಿತ್ಸೆಯನ್ನು ಕೈಕೊಳ್ಳುವ ವ್ಯರ್ಥ ಪ್ರಯತ್ನವನ್ನುಮಾಡುತ್ತಾರೆ. ಚಿಕಿತ್ಸಾಕಾಲದಲ್ಲೂ ಚಿಕಿತ್ಸಾ ನಂತರವೂ ಅಡಿಗಡಿಗೆ ಚಿಂತಾಕುಲರಾಗುತ್ತಲೇ ಇರುತ್ತಾರೆ. ಜೀವಿತವೊಡ್ಡುವ ಒತ್ತಡ ಸೆಳೆದಾಟಗಳಿಗೆ ಸಿಕ್ಕಿ ಅನೇಕರು ಎಷ್ಟೇ ದೃಢಪ್ರಯತ್ನ ಮಾಡಿದರೂ ಚಿಂತಾಧೀನರಾಗುತ್ತಾರೆ. ಚಿಂತೆಗೇ ಮನಸ್ಸು ಕೊಟ್ಟು, ವಾಸ್ತವವಾಗಿ,–ಸಾಕ್ಷಾತ್ತಾಗಿ,–ಇಲ್ಲದ ಸನ್ನಿವೇಶಗಳನ್ನು ತಾವಾಗಿ ಕಲ್ಪಿಸಿಕೊಂಡು, ದೇಹದಲ್ಲಿ ಇರುವ ಅಷ್ಟಿಷ್ಟು ತ್ರಾಣವನ್ನೂ ವೃಥಾ ವೆಚ್ಚಮಾಡಿಕೊಳ್ಳುತ್ತಾರೆ.

ಕೋಪ, ಭಯ, ದ್ವೇಷ–ಇವು ಮನುಷ್ಯನ ನಿತ್ಯ ಜೀವನದಲ್ಲಿ ಸಾರ್ವತ್ರಿಕವಾಗಿ ಒಡನಾಡಿಗಳಂತೆ ನೆಲಸಿರತಕ್ಕ ಚಿತ್ತದೋಷಗಳು. ಇವೆಲ್ಲ ತ್ರಾಣ ಭಕ್ಷಣಮಾಡು ತ್ತವೆ; ಉಡುಗಿದವನನ್ನು ಇನ್ನಷ್ಟು ಉಡುಗಿಸಿ ರಚನಾತ್ಮಕವೂ ಕ್ರಿಯಾತ್ಮಕವೂ ಆದ ಪ್ರಯತ್ನಗಳಿಂದ ಅವನ ಮನಸ್ಸನ್ನು ಹಿಮ್ಮೆಟ್ಟಿಸುತ್ತವೆ.

ಮನುಷ್ಯ ಬಲವನ್ನು ತುಕ್ಕಿನಂತೆ ಹಿಡಿದು ಕುಗ್ಗಿಸುವ ಕಾರಣಗಳನ್ನು ಒಬ್ಬನು ಮರಕ್ಕೋ ಗೋಡೆಗೋ ಚಲನೆಯಲ್ಲಿರುವ ವಾಹನಕ್ಕೋ ಡಿಕ್ಕಿ ಹೊಡೆಯುವುದನ್ನು ತಪ್ಪಿಸಿಕೊಳ್ಳಲು ಆತಂಕಿಸುವಂತೆಯೇ–ಆತಂಕದಿಂದ ನೋಡಿ, ದೂರವಾಡಬೇಕು. ಈ ಸಂದರ್ಭಗಳಲ್ಲಿ ಮನುಷ್ಯನ ಆರೋಗ್ಯವನ್ನೂ ನೆಮ್ಮದಿಯನ್ನೂ ಕಳೆಯುತ್ತವೆ. ಕ್ರಮವರಿತು ನಡೆಯುವ, ಆರೋಗ ದೃಢಕಾಯನಾದ, ವ್ಯಕ್ತಿ ಮನುಷ್ಯನು ಜೀವಿತ ಕಾಲದ ಈ ಅಸಂದರ್ಭಗಳನ್ನು ವಿಶೇಷ ಪ್ರಯತ್ನದಿಂದ ಸಹಜವಾಗಿ ದೂರಮಾಡು ತ್ತಾನೆ. ಆದರೆ ಜನ ಜಂಗುಳಿಯಲ್ಲಿ ಸಾಂದ್ರವಾದ ದಾರಿದ್ರ್ಯ, ದಟ್ಟವಾದ ರೋಂಕು ರೋಗ, ಮತ್ತು ವ್ಯಾಪಕವಾದ ನಿರುದ್ಯೋಗ–ಈ ಸಮಸ್ಯೆಗಳನ್ನು ವ್ಯಕ್ತಿ ಮನುಷ್ಯರು ಏಕಾಕಿಗಳಾಗಿ ಪ್ರಯತ್ನಿಸಿ ಪರಿಹರಿಸಲಾರರು. ಈ ಸಮಸ್ಯೆಗಳಲ್ಲಿ ಸಮಾಜಮೊಟ್ಟಿನ ಬಾಳಿಕೆಯಲ್ಲಿ ಹೊಂದಿಕೆ ತಪ್ಪಿದ ಅವ್ಯವಸ್ಥೆಗಳು. ಆದದ್ದರಿಂದ ಸಮಾಜ ಮೊಟ್ಟಿನ ಯೋಜನೆ ಮತ್ತು ಸಂಘಟಿತ ಕಾರ್ಯಕ್ರಮಗಳಿಂದ ಮಾತ್ರ ಈ ಸಮಸ್ಯೆಗಳು ಪರಿ ಹಾರವನ್ನು ಕಂಡಾವು. ಹೀಗೆ ವ್ಯಾಪಕವಾದ ಯೋಜನೆ ಕಾರ್ಯಕ್ರಮಗಳಿಂದ ಮಾತ್ರ ಸಾಮಾಜಿಕ ಅವ್ಯವಸ್ಥೆಗೆ ತುತ್ತಾದ ಜನತೆಗೆ ಉದ್ಧಾರದ ದಾರಿಯನ್ನು ತೋರಿಸಲಾದೀತು. ಮೂಲ ಕಾರಣಗಳನ್ನು ಶೋಧಿಸಿ ಕಳೆಯುವುದರಿಂದ ಮಾತ್ರ ಸಮಾಜದ ಎಲ್ಲ ಹಂತ ಗಳಲ್ಲೂ ಜನಕ್ಕೆ ನೆಮ್ಮದಿಯನ್ನೂಡಲಾದೀತು.

## ಸಂಪನ್ಮೂಲಗಳನ್ನೂ ಕಾಲವನ್ನೂ ದೇಹಬಲವನ್ನೂ ಪೋಲು ಮಾಡುವ ಆರು ಹಸಿವುಗಳು

ಮನುಷ್ಯನ ಸತ್ತ್ವವನ್ನು ಒಳಗಣಿಂದ ಉಡುಗಿಸುವ ತುಕ್ಕಿನಂಥ ಆರು ನಾಶಕಗಳ ಪಕ್ಕದಲ್ಲೇ ಇರುತ್ತ, ಅವನನ್ನು ಕುಗ್ಗಿಸಿ ನಿರ್ವೀರ್ಯನನ್ನಾಗಿ ಮಾಡುವ ಆರು ಹಸಿವುಗಳನ್ನೂ ಮನುಷ್ಯನು ನಿರ್ವಾಹಮಾಡಬೇಕು. ಈ ಹಸಿವುಗಳನ್ನು ತಣಿ ಸುವ ಗೋಜಿಗೆ ಸಿಕ್ಕಿದವನು, ಅನ್ಯತ್ರ ವಿನಿಯೋಗ ಮಾಡುವುದರಿಂದ ತನಗೆ ಲಾಭತ ರುವ ಸಂಪನ್ಮೂಲಗಳನ್ನು ಪೋಲು ಮಾಡಿಕೊಳ್ಳುತ್ತಾನೆ; ವ್ಯರ್ಥವಾಗಿ ಕಾಲಹರಣಕ್ಕೆ ಅವಕಾಶ ಮಾಡಿಕೊಳ್ಳುತ್ತಾನೆ; ಮತ್ತು ದೇಹತ್ರಾಣವನ್ನೂ ಅನಾವಶ್ಯಕವಾಗಿ ವೆಚ್ಚಮಾಡಿ ಕಳೆದುಕೊಳ್ಳುತ್ತಾನೆ.

ತಮ್ಮನ್ನು ತಾವು ಕಾಪಾಡಿಕೊಳ್ಳುವುದು ಈ ಹಸಿವುಗಳ ಗುರಿ. ಅನ್ನ ಪಾನಗಳು, ಇಂದ್ರಿಯ ತೃಪ್ತಿ; ತನ್ನದೆಂಬುದಾವುದನ್ನೂ ಹೆರವರಿಗೆ ನೀಡದೆ ತನಗೇ ಒಂದಷ್ಟನ್ನು ಅವರಿಂದ ಬಯಸುವುದು—ಇವೆಲ್ಲ ಅಧಿಕಾರದ ದಾರಿ. ಕಡೆಗೆ ಈ ಹಸಿ ವಿಂಗಲು ನಿದ್ರಾಜನಕ ಮಾತ್ರೆಗಳ ಸೇವನೆ. ಈ ಆರು ಹಸಿವುಗಳೂ ಸೋಪಾನವೇರಿ ಉನ್ನತಪದವಿಯನ್ನು ಪಡೆಯಲು ವ್ಯಕ್ತಿ ಮನುಷ್ಯನಲ್ಲಾಗಲಿ ಸಮಾಜಮೊಟ್ಟಿನಲ್ಲಾ,

ಗಲಿ ಚಟುವಟಿಕೆಯಲ್ಲಿರುವುದು ಅನಿವಾರ್ಯವೆಂದು ಈ ಕ್ಷುಧೆಗಳು ಆತ್ಮ ಸಮರ್ಥನೆ ಮಾಡಿಕೊಳ್ಳುತ್ತವೆ. ಇವುಗಳಲ್ಲಿ ಒಂದಕ್ಕೋ ಎಲ್ಲಕ್ಕೋ ಆಸರೆಕೊಟ್ಟು, ಅತಿ ಭೋಗಕ್ಕೆ ಆಸ್ಪದಕೊಡುವವನು ತರಗೆಲೆಯಂತೆ ಬಾಡುತ್ತಾನೆ; ಜೀವಿತಧ್ಯೇಯಗಳ ಬಗ್ಗೆ ನಿರಾಶನಾಗುತ್ತಾನೆ; ತನ್ನಲ್ಲಿ ಸಹಜವಾಗಿರುವ ಕ್ರಿಯಾಶಕ್ತಿಯನ್ನುಡಗಿಸಿ ಕೊಳ್ಳುತ್ತಾನೆ. ಮನುಷ್ಯನ ಜೀವಿತಕ್ಕಿರುವ ಕ್ರಿಯಾಸಿದ್ಧಿಯಿಂದ ವಂಚಿತನಾಗು ತ್ತಾನೆ. ಈ ಆರು ಹಸಿವುಗಳೂ ತಮ್ಮ ಕಡೆಗೆ ಮನುಷ್ಯನ ಗಮನವನ್ನೂ ಕಾಲಬಲ ಗಳನ್ನೂ ತಗಾದೆ ಮಾಡಿ ಕೋರುತ್ತವೆ, ಸೆಳೆದುಕೊಳ್ಳುತ್ತವೆ; ಅವುಗಳ ಕೋರಿಕೆಗೆ ಒಲಿದು, ಅದನ್ನು ನೆರವೇರಿಸಲು ಅಣಿಯಾದ ಮನುಷ್ಯನು ಶಿಸ್ತುಗೇಡಿಯಾಗಿ, ಅವಕ್ಕೆ ತೊತ್ತಾಗಿ ನಡೆದುಕೊಳ್ಳುತ್ತಾನೆ. ಕ್ಷುಧೆಗೆ ವಿಧೇಯತೆ ಸಲ್ಲಿಸುವವನು ಕ್ರಿಯಾ ಸ್ವಾತಂತ್ರ್ಯವನ್ನು ಕಳೆದುಕೊಂಡು, ಅದರ ಅಂಕೆ ಆಳಿಕೆಗಳಿಗೆ ಪಕ್ಕಾಗುತ್ತಾನೆ.

ಆಹಾರ, ಪಾನ, ಗಾಳಿ, ಬಿಸಿಲು ಮತ್ತು ಸ್ತ್ರೀಪುರುಷ ಸಂಬಂಧ – ಇವೆಲ್ಲ ಮಾನವ ಜೀವನದ ಸಂತತ ಪ್ರವಾಹಕ್ಕೆ ಅವಶ್ಯವಾದ ಪೂರ್ವಾಪೇಕ್ಷಿತ, ಪೂರ್ವ ನಿಯೋಜಿತ ಸಾಮಗ್ರಿಗಳು. ಇವು ಇಲ್ಲದೆ, ನಮ್ಮ ತಿಳಿವಳಿಕೆಗೆ ಬಂದಿರುವಂಥಾ ಬೇರೆ ತೆರದ ಬಾಳ್ಕೆ ಇಲ್ಲ. ವ್ಯಕ್ತಿ ಮನುಷ್ಯನನ್ನೂ ಮನುಷ್ಯ ಕುಲವನ್ನೂ ಸಂರಕ್ಷಿ ಸುವ ಮುಖ್ಯಘಟಕಾಂಶಗಳು ಇವು; ವ್ಯಕ್ತಿಮನುಷ್ಯನಲ್ಲೂ ಸಮುದಾಯಗಳಲ್ಲೂ ಹುರುಪು ತುಂಬಿ ಅವರನ್ನು ಮುನ್ನಡಸುವ ಚಾಲಕ ಶಕ್ತಿಗಳಲ್ಲಿ ಇವೂ ಸೇರಿಕೊಂಡಿವೆ. ಪ್ರಾಣಿ ಪಕ್ಷಿ ಕೀಟಗಳೊಂದಿಗೆ ಮನುಷ್ಯನು ಈ ಹಸಿವುಗಳನ್ನು ಪಾಲ್ಗೊಂಡಿದ್ದಾನೆ. ಭೂಮಂಡಲದ ಪ್ರಾಣಿಗಳಿಗೆಲ್ಲ ಸಾಮಾನ್ಯ ಲಕ್ಷಣವಾಗಿರತಕ್ಕವು ಈ ಹಸಿವುಗಳು.

ಹಿಂದಿನ ಅಧ್ಯಾಯವೊಂದರಲ್ಲಿ ನಾನು ಅಧಿಕಾರ ಲೋಭವನ್ನು ಎತ್ತಿಕೊಂಡು ಟೀಕಿಸಿದ್ದೇನೆ. ಎಲ್ಲಿ ಜನವೊಟ್ಟು ಸೇರಿ ದಟ್ಟವಾಗಿರುತ್ತದೆಯೋ ಅಲ್ಲಿ ಅಧಿಕಾರ ಕ್ಷುಧೆ ಸುಲಭವಾಗಿ ಪ್ರಚೋದಿತವಾಗುತ್ತದೆ. ಕ್ಷುತ್ತನ್ನು ಕೆಣಕುವ ಪ್ರೇರಣೆ ವ್ಯಕ್ತಿ ಮನುಷ್ಯನ ಒಳಗಡೆಯೇ ಅವನ ಅಸ್ತಿತ್ವದೊಡನೆ ಆನುಷಂಗಿಕವಾಗಿ ಮೂಡಿ ನೆಲಸಿರುತ್ತವೆ. ಶೃಂಗಾರ ಜೀವನಕ್ಕೆ ಕನಿಷ್ಠಪಕ್ಷ ಒಬ್ಬರಾದರೂ ಪಾಲ್ಗೊಳ್ಳಲು ಇರಬೇಕು. ಅಧಿಕಾರದ ಹಸಿವಾದರೋ ಜನಸಾಂದ್ರತೆಯನ್ನೇ ಅಪೇಕ್ಷಿಸುತ್ತದೆ. ಕುಟುಂಬದಿಂದ ಹಿಡಿದು ದೊಡ್ಡ ದೊಡ್ಡ ಜಟಿಲ ಸಾಮಾಜಿಕ ಸಮುದಾಯಗಳವರೆಗೆ ಕ್ಷುಧಾವ್ಯಾಪನೆಯಿರುತ್ತದೆ.

ದ್ಯೂತವೆಂಬುದು ಏನನ್ನೂ ಕೊಡದೆ ಎಷ್ಟನ್ನಾದರೂ ಬಾಚಿಕೊಳ್ಳುವ ಹಸಿವು. ಸಂಘಜೀವನದಿಂದ ಮೂಡಿ ಕೆರಳುವ ಹಸಿವು. ಹಾಗೆಯೇ ಮೈನೋವನ್ನಿಳಿಸಿ ಕೊಳ್ಳಲು, ಪುಷ್ಟಿ ಕೊಡದ ಆಹಾರ ಸೇವನೆಯ ದುಷ್ಪರಿಣಾಮಗಳನ್ನು ಪರಿಹಾರೋ ಪಾಯರೂಪದಲ್ಲಿ ಸಹ್ಯವನ್ನಾಗಿ ಮಾಡಿಕೊಳ್ಳಲು, – ಬೇಸರವನ್ನೋ ಆಯಾಸ

ವನ್ನೋ ಭಾವನಾತ್ಮಕ ನಿರಾಶೆಗಳನ್ನೋ ನಿವಾರಿಸಿಕೊಂಡು ಅವಕ್ಕೆ ಪ್ರತಿಯಾಗಿ ಪರ್ಯಾಯ ರೂಪದ ಸುಖನಿದ್ರಾನುಭವವನ್ನು ತಂದುಕೊಳ್ಳಲು, ಮದ್ಯ ಮಾದಕ ದ್ರವ್ಯಗಳ ಚಟವೂ ಸೇರಿ ಮನುಷ್ಯನನ್ನು ಇನ್ನಷ್ಟು ಕುಗ್ಗಿಸುತ್ತದೆ.

ಯುಗಯುಗಾಂತರಗಳಿಂದ, ನೀತಿ ನಿಷ್ಠೆಯಿಲ್ಲದ ಶೋಷಕ ವರ್ಗವು ಮಾನವ ಸಹಜವಾದ ಕ್ಷುಧೆಗಳನ್ನು ಸಾಧನಗಳನ್ನಾಗಿ ಮಾಡಿಕೊಂಡು, ಸುಲಭವಾಗಿ ಧನ ಸಂಪಾದನೆಯಾಗುವ ಕಸಬನ್ನು ನಡಸುತ್ತ ಬಂದಿವೆ. ಸಮಾಜವು ಅಭಾವದ ಮಟ್ಟದಿಂದ ಪುಷ್ಕಲತೆಯ ಮಟ್ಟಕ್ಕೆ ಏರುತ್ತ ಬಂದಹಾಗೆ, ಮನೆಮಾರುಗಳನ್ನು ದೋಚುವ ಕುಟಿಲ ಚೋರರೂ, ಗಿರಾಕಿಗಳನ್ನು ದೋಚುವ ವರ್ತಕರೂ ಕುತಂತ್ರಗಳನ್ನು ಅವಲಂಬಿಸಿ ಮಾನವ ಕ್ಷುಧೆಗಳನ್ನು ಕೆರಳಿಸಿಕೊಂಡು ಬಂದಿದ್ದಾರೆ. ವಿವಿಧ ಪ್ರಚಾರ ಸಾಧನಗಳನ್ನು ಬಳಸಿ, ಬಹುಧನ ವ್ಯಯಕ್ಕೆ ಅಣಿಯಾಗಿ, ಹಣದ ಹಸಿವನ್ನು ತಣಿಸಿಕೊಳ್ಳುವ ವಿದ್ಯೆಯನ್ನು ಕಲಿತು ಸಿರಿವಂತರಾಗುತ್ತಿದ್ದಾರೆ.

ಹಸಿವುಗಳನ್ನು ತಣಿಸುವ ಪ್ರೇರಣೆಗೆ ಸಿಕ್ಕಿ ಮನುಷ್ಯ ಪ್ರಾಣಿಗಳು ತಮ್ಮ ಯೋಗಕ್ಷೇಮವನ್ನೂ ಚೈತನ್ಯಬಲಗಳನ್ನೂ ಅತಿಶಯವಾಗಿ ಪೋಲುಮಾಡುತ್ತಾರೆ. ಮಿತಿಮೀರಿದ ಭೋಗಜೀವನವೂ, ಅದರಲ್ಲೂ ನಿದ್ರಾಜನಕ ಮಾದಕ ಘುಟಿಕೆ ದ್ರವಗಳಲ್ಲಿ ಹೆಚ್ಚು ರುಚಿಯೂ ಮನುಷ್ಯ ಪ್ರಾಣಿಗಳನ್ನು ಕ್ರಿಯಾತ್ಮಕವಾದ ಹಾಗೂ ಸಮಾಜೋಪಕಾರಕವಾದ ಪ್ರಯತ್ನಗಳಿಂದ ಹಿಮ್ಮೆಟ್ಟಿಸಿ, ಅವರು ಮನುಷ್ಯೇತರಗಳಾದ ಪ್ರಾಣಿಗಳಿಗೆ ಹೊಂದುವ ಹಸಿವುಗಳಿಗೆ ಬಲಿಯಾಗುವಂತೆ ಮಾಡುತ್ತವೆ. ಮಾನವನು ತನ್ನ ಅಸ್ತಿತ್ವವನ್ನು ವಿಶಾಲವೂ ಘನವೂ ಆಗಿ ಮಾಡಿಕೊಳ್ಳಬೇಕು. ಅದಕ್ಕೆ ಅನುಕೂಲವಾಗುವ ಪರಿಣಾಮಕಾರಿಯಾದ ಪಾತ್ರವನ್ನು ವಹಿಸಲಾರದಂತೆ ಮಾಡಿ ಅವನ ನಡೆಗೆ ಎಡರೊಡ್ಡತಕ್ಕದ್ದು ಈ ಹಸಿವು. ಹೀಗೆ ಮನುಷ್ಯನಿಗೆ ಅಡ್ಡಬಂದು ಅವನ ಅಭ್ಯುದಯಕ್ಕಿರುವ ಅವಕಾಶವನ್ನು ಈ ಹಸಿವು ನಿರಾಕರಿಸುತ್ತದೆ.

## ಆಕ್ರಮಣಶೀಲತೆ ಮತ್ತು ಹಿಂಸಾತತ್ತ್ವದಲ್ಲಿ ರುಚಿ

ಜಟಿಲವೂ ಅನ್ಯೋನ್ಯಾಧೀನವೂ ಆದ ಸಮಾಜದಲ್ಲಿ ಜೀವಿಕೆಗಾಗಿ ನಡೆಯುವ ಸ್ಪರ್ಧೆಯ ಜೊತೆಗೆ,–ಸ್ವಮತ ಪ್ರಕಾಶನ, ಸನ್ಮಾನ ಮತ್ತು ಉನ್ನತ ಸ್ಥಾನಮಾನಗಳಿಗೋಸ್ಕರ ಮಾಡುವ ಸ್ಪರ್ಧೆಯೂ ಸೇರಿ, ಈ ಪೈಪೋಟಿಗಳ ಫಲವಾಗಿ ಅಳಿಯದೆ ಉಳಿದುಕೊಳ್ಳಲು ಹೋರಾಟ ನಡಸುವ ಆವಶ್ಯಕತೆ ಮನುಷ್ಯನಿಗೆ ಪ್ರಾಪ್ತವಾಗುತ್ತದೆ. ಆಗ ಮನುಷ್ಯನ ಜಗಳಗಂಟಿತನವೂ. ಕೆಚ್ಚೂ, ನಿರ್ಣಾಯಕ ಚಿತ್ತವೂ, ಜಗ್ಗದ ಪಟ್ಟು ಬಗೆಯೂ ತೀವ್ರಪರೀಕ್ಷೆಗೆ ಒಳಪಡುತ್ತವೆ. ಇಂಥ ಹುರುಡು ಬಲಹೀನರನ್ನು ಜಲ್ಲಡಿಗೆ ಹಾಕಿ, ಸೋಸಿ ಎಸೆಯುತ್ತದೆ; ಬಲಿಷ್ಠರನ್ನು ವರ್ಗಜಾತಿಗಳಾಗಿ ವಿಂಗಡಿಸಿ,

ತಾರತಮ್ಯದ ಎಣಿಕೆಯಿಂದ ಅವರನ್ನು ಬಲಶಾಲಿಗಳು, ಮರ್ಮಭೇದಿಗಳು, ಮತ್ತು ನೇತಾರರೆಂಬ ವರ್ಗಗಳಲ್ಲಿ ಎತ್ತಿ ನಿಲ್ಲಿಸುತ್ತದೆ.

ಬದುಕಿರಲು ಹೋರಾಟವೆಂಬುದು ಸ್ಥಳೀಯವಾಗಿ ಕುಟುಂಬದಲ್ಲಿಯೂ ನೆರೆ ಹೊರೆಯಲ್ಲಿಯೂ ನಡೆಯುತ್ತದೆ. ಪ್ರಾದೇಶಿಕವಾಗಿಯೂ ರಾಷ್ಟ್ರೀಯವಾಗಿಯೂ ಈ ಹೋರಾಟ ಹಬ್ಬುತ್ತವೆ. ಉಳಿವಿಗಾಗಿ ಹೋರಾಟ – ಹೆಣಗಾಟಗಳು ಜೀವನಗತಿ ಯಲ್ಲಿ ಕೇಂದ್ರಾಧಾರವೂ ಶಂಕುಪ್ರಾಯವೂ ಆದ ಸಂಗತಿ. ಅದರ ಅತ್ಯಂತ ವಿಸ್ತೃತ ರೂಪವೇ ಯುದ್ಧ. ಯುದ್ಧಕ್ರಿಯೆಗಳು ಹಿಂಸಾವೃತ್ತಿಯ ಪ್ರಬಲ ಚಾರಿತ್ರಕ್ಕೆ ಕೊಡುವ ಪೂರ್ವಾಭ್ಯಾಸಗಳೇ.

ಯುದ್ಧವೆಂಬುದು ಮನುಷ್ಯನು ಮಾಡಿಕೊಂಡ ಹಿಂಸೆಯ ಏರ್ಪಾಟು. ಇದರಲ್ಲಿ ಒಂದು ಪಕ್ಷವು ಆಕ್ರಮಣದಲ್ಲಿ ತೊಡಗಿ ಪ್ರತಿಪಕ್ಷವನ್ನು ತನ್ನ ಚಿತ್ತಕ್ಕೆ ವಿಧೇಯ ವಾಗೆಂದು ನಿರ್ಬಂಧಪಡಿಸುತ್ತದೆ. ಅಲ್ಲದೆ ಬಾಗಿ ಸಗ್ಗದ ಪ್ರತಿಪಕ್ಷವನ್ನು ಮೇಲ್ಮಟ್ಟದ ಹಿಂಸಾ ಪ್ರಯೋಗದಿಂದ ನಿರ್ಮೂಲಮಾಡಲು ಕೂಡ ಹೆಣಗುತ್ತದೆ. ಈ ಹಿಂಸಾ ಕ್ರಿಯೆ ಒಬ್ಬ ವ್ಯಕ್ತಿ ಮನುಷ್ಯನ ಮೇಲೆ ಸಾಗಬಹುದು; ಇಲ್ಲವೆ ಸಹಚರರೇ ಆದ ಸಮುದಾಯಗಳ ಮೇಲೆ ಸಾಗಬಹುದು; ಇಲ್ಲವೆ ವಿರೋಧಿಗಳ ವಿತ್ತವನ್ನು ಸ್ವಾಧೀನ ಪಡಿಸಿಕೊಳ್ಳಲು ಬಳಕೆಯಾಗಬಹುದು.

ಹಿಂಸೆಯನ್ನು ಪರಿಣಾಮಕಾರಿಯಾಗಿ ಪ್ರಯೋಗಿಸುವುದಕ್ಕೆ ತಕ್ಕ ಶಿಕ್ಷಣ ಪಡೆ ಯುವುದು "ಯುದ್ಧಸಿದ್ಧತೆ" ಎನ್ನಿಸುತ್ತದೆ. ಆದದ್ದರಿಂದ ಹಿಂಸೆಯನ್ನು ಒಂದು ಕಲೆ ಎಂಬಂತೆ ಕಲಿಸಲಾಗುತ್ತದೆ. ಹಿಂಸಾತತ್ತ್ವವನ್ನು ಹೀಗೆ ಪ್ರಯೋಗ ಮುಖವಾಗಿ ಬೆಳಸಿ, ಅದಕ್ಕೊಂದು ಘನತೆಯನ್ನೂ ಭವ್ಯತೆ ದಿವ್ಯತೆಗಳನ್ನೂ ತಂದುಕೊಳ್ಳುವ ಪ್ರಯತ್ನ ಸಂತತವಾಗಿ ನಡೆಯುತ್ತದೆ. ಸೈನಿಕ ಸಿದ್ಧತೆಗೆ ಈ ಮಹಾಪ್ರಯತ್ನ ಬಹು ಮುಖ್ಯವೆನ್ನಿಸಿ, ಪಾಶ್ಚಾತ್ಯ ನಾಗರಿಕತೆಯಲ್ಲಿ ಅದರ ಕಾರ್ಯಗತಿಗೆ ಪ್ರಧಾನ ಪಾತ್ರ ವನ್ನು ಕೊಟ್ಟುಕೊಂಡು ಬರಲಾಗಿದೆ.

ಆಕ್ರಮಣಶೀಲತೆಗೆ ಹಿಂಸೆಯ ನಂಟನ್ನು ಬಿಗಿಯುವುದರಿಂದಲೂ ಹಿಂಸಾ ತತ್ತ್ವಕ್ಕೆ ನೆರವಾಗುವಂತೆ ಅಣ್ವಸ್ತ್ರ ಪ್ರಯೋಗದ ತಂತ್ರಜ್ಞಾನವನ್ನು ಹೂಡುವುದ ರಿಂದಲೂ ಮನುಷ್ಯನು ಯುದ್ಧಾಚರಣೆಯಲ್ಲಿ ಒಂದು ಅಂತಿಮ ನಿರ್ಧಾರದ ಘಟ್ಟಕ್ಕೆ ಬರಲು ಅವಕಾಶವಾಗಿದೆ. ಘರ್ಷಕರ ನಡುವೆಯೇನಾದರೂ ಸಮರ ಘಟಿಸಿ ಈಗಾಗಲೇ ಭಾರೀದಾಸ್ತಾನಿನಲ್ಲಿರುವ ಅಣ್ವಸ್ತ್ರಗಳು ರಂಗಪ್ರಯೋಗಕ್ಕೆ ಬಂದುವೆಂದರೆ, ಅವು ಮನುಷ್ಯನ ಇದುವರೆಗಿನ ಸಂಸ್ಕೃತಿ ನಾಗರಿಕತೆಗಳ ಸಿದ್ಧಿಯನ್ನು ಇಡಿಯಾಗಿ ಧ್ವಂಸ

ಮಾಡಿಬಿಡಬಹುದಲ್ಲದೆ, ಮನುಷ್ಯ ಕುಲವನ್ನೇ ನಾಶಮಾಡಿ, ಇನ್ನು ಮುಂದೆ ಭೂ ಗ್ರಹದಲ್ಲಿ ಮಾನವನ ಇರವಿಗೆ ಮುಗಿವನ್ನು ತಂದುಬಿಡಬಹುದು.

ಮನುಷ್ಯ ಪ್ರಗತಿಗೆ ವಿಘ್ನವಾಗಿರುವ ಮಾರ್ಗಕಂಟಕಗಳ ಸಮೂಹದಲ್ಲಿ ಅಣ್ವಸ್ತ್ರ ಸಮರವೇ ಅಪಾಯತಮವೆಂದು ಸ್ವತಃ ಹೇಳುತ್ತಿರುವುದಲ್ಲದೆ, ಮುಂದೆ ಅದು ದುರಂತಶಕ್ತಿಯಾಗಿ ಬೆಳೆದು ಪ್ರಳಯ ಹೇತುವಾಗಬಹುದು. ಹೀಗೆ ಮನುಷ್ಯ ಕುಲವಿನಾಶದ ಭವಿಷ್ಯವನ್ನು ಕುರಿತು ನಿರ್ಧಾರಕವಾದ, ಅಮೋಘವಾದ, ಚಿಕಿತ್ಸೆ ಯನ್ನು ಕೋರಿ, ದುರಂತ ಸಂಭವದ ಸಂದೇಶವನ್ನು ಅತ್ಯುಚ್ಚ ಸ್ವರಭಾರದಿಂದ ಸಾರ ಬೇಕಾದ ವಿಷಮ ಸಂದರ್ಭ ಇದು.

ಸಾಮಾಜಿಕ ಪ್ರಜ್ಞೆ ಕಲ್ಯಾಣಗಳ ಮೇಲ್ಮಟ್ಟದ ಕಡೆಗೆ ಮನುಷ್ಯನ ಮುನ್ನಡೆ ಸಾಗಲು ಎಡರಾಗಿರುವ ಮಾರ್ಗಕಂಟಕಗಳನ್ನು ಕುರಿತ ಈ ಚರ್ಚೆಯ ಪ್ರಾರಂಭದಲ್ಲಿ ನಾನು–ಅಜ್ಞಾನ, ಲೋಭ ಮತ್ತು ತ್ರಾಣ ವಿನಾಶಕ ಪ್ರವೃತ್ತಿ ಹಾಗೂ ಆಚರಣೆ ಇವನ್ನೆಲ್ಲ ಪಟ್ಟಿಮಾಡಿ ಕೊಟ್ಟಿದ್ದೇನೆ. ಸಮಾಜದಲ್ಲಿ ಬಹು ಸಂಖ್ಯಾಕ ಜನ ಹಿಂದುಳಿ ದಿರುವ ಪ್ರಶ್ನೆಯ ಮೇಲೆ ನಡೆಯುವ ದಾಳಿಯ ಬಲವನ್ನಡುಗಿಸುವ ಸ್ವಾರ್ಥಿಗಳ ಪ್ರಯತ್ನವನ್ನೂ, ಮನುಷ್ಯ ಪ್ರತಿಭೆಯ ವಿಕಾಸಕ್ಕೆ ಪ್ರಕೃತಿ ಸಂಪತ್ತನ್ನು ಪೂರಾ ಬಳಸಿಕೊಳ್ಳಬೇಕಾದದ್ದರ ಆವಶ್ಯಕತೆಯನ್ನೂ, ವಿಜ್ಞಾನ ಯಂತ್ರ ತಂತ್ರ ಜ್ಞಾನ ಮತ್ತು ಸಮಾಜ ಯಂತ್ರ ತಂತ್ರ ಜ್ಞಾನಗಳನ್ನು ಸಾಧನವಾಗಿ ಬಳಸಿಕೊಂಡು ಪ್ರಗತಿ ಗಿರುವ ಅವಕಾಶ ದ್ವಾರಗಳನ್ನು ಪೂರ್ತಿಯಾಗಿ ತೆರೆದು ಮನುಷ್ಯವರ್ಗ ಮುಂದು ಮುಂದಕ್ಕೆ ಸಾಗಬೇಕಾದದ್ದರ ಆವಶ್ಯಕತೆಯನ್ನೂ ಸಲಹೆ ಮಾಡಿದ್ದೇನೆ. ಅಜ್ಞಾನ ದಾರಿದ್ರ್ಯ ನಿರುದ್ಯೋಗ ಪೋಲು ವೆಚ್ಚಗಳು ಯುದ್ಧ ಮತ್ತು ಇತರ ವ್ಯರ್ಥವ್ಯಯಗಳು ವಿಘ್ನರೂಪದಲ್ಲಿ ಮನುಷ್ಯನ ಮುನ್ನಡೆಗೆ ಅಡ್ಡಿಯಾಗಿರುವುದರಿಂದ ಅವನ್ನೆಲ್ಲ ದಾಟ ಬೇಕು. ಹೀಗೆ ಮಾಡಿದರೆ ಮಾತ್ರ ಮನುಷ್ಯನಿಗೆ ಜ್ಞಾನೋದಯ ವಾಗಿ, ಅವನು ಪ್ರಕೃತಿ ಸಂಪನ್ಮೂಲ ಗಳನ್ನೂ ವೈಜ್ಞಾನಿಕ ತಂತ್ರ ಜ್ಞಾನಬಲವನ್ನೂ ಸ್ವಹಿತ ಸಾಧನೆ ಗೋಸ್ಕರ ವಿವೇಕದಿಂದ ಬಳಸಿಕೊಳ್ಳಬಲ್ಲವನಾಗುತ್ತಾನೆ. ಮುನ್ನಡೆಗೆ ಅವಕಾಶ ಗಳನ್ನು ಹೆಚ್ಚಿಸಿಕೊಂಡು, ಜ್ಞಾನ ಪರಿಧಿಯನ್ನು ವಿಸ್ತರಿಸಿಕೊಳ್ಳುತ್ತ, ಮನುಷ್ಯ ಸಂಸ್ಕೃತಿ ವಾಹಿನಿಯನ್ನು ವಿಶಾಲವಾಗಿಯೂ ಅಗಾಧವಾಗಿಯೂ ಮಾಡಿ, ಊರ್ಜಿ ತಾವಸ್ಥೆಯಲ್ಲಿ ಅದು ಸದಾ ಹರಿಯುತ್ತಿರುವುದಕ್ಕೆ ಆಸ್ಪದ ಮಾಡಿಕೊಳ್ಳುತ್ತಾನೆ.

ಪಾಶ್ಚಾತ್ಯ ನಾಗರಿಕತೆಯ ಉಪಯುಕ್ತತೆ ಮುಗಿದು ಹೋದ ಲಕ್ಷಣಗಳನ್ನು ಇನ್ನೂ ಸಂರಕ್ಷಿಸಿಕೊಂಡು ಬಾಳಿಸಲು, ಬುದ್ಧಿ ಜಾಗರೂಕತೆಯಿಂದ ಕಾರ್ಯ ಮಾಡುತ್ತಿರುವ ಇತರ ಮಾರ್ಗಕಂಟಕಗಳೂ ಉಂಟು. ಅವನ್ನೀಗ ಚರ್ಚಿಸ

ಬಹುದು. ಈ ಎಡರುಗಳು ಮನುಷ್ಯನ ಮುನ್ನಡೆಯನ್ನು ಮಿತಿಗೊಳಪಡಿಸಿ ನಿಯಮನ ಮಾಡತಕ್ಕವಾಗಿವೆ. ಸಾಮಾಜಿಕ ಯಂತ್ರವು ಅಷ್ಟಿಷ್ಟು ಪರಿಮಾಣದಲ್ಲಿ ಕಾರ್ಯ ಮಾಡುವುದಕ್ಕೆ ಅವಶ್ಯವಾದ ಗೌಣ (ಮುಖ್ಯವಲ್ಲದ) ಸುಧಾರಣೆಗಳನ್ನು ಮಾತ್ರ ಕೈಕೊಂಡು, ವಿಶ್ವಮಾನವ ಸಮಾಜದ ಪುರೋಭಿವೃದ್ಧಿಗೋಸ್ಕರ ನಡೆಯುವ ಜಗದ್ವಿಶಾಲವಾದ ಚಳವಳಿಗಳನ್ನು ನಿರ್ವೀರ್ಯಗಳನ್ನಾಗಿ ಮಾಡತಕ್ಕವು ಈ ಎಡರುಗಳು. ಸಿರಿಗೂ ಬಡತನಕ್ಕೂ ನಡುವೆ ಒಂದು ಸಮತೂಕವನ್ನು ತಂದುಕೊಳ್ಳುವ ಉಪಾಯವನ್ನು ಅವು ಪ್ರಯೋಗಮಾಡುತ್ತವೆ. ಮಾಲಕರಿಗೂ ಒಡೆಯರಿಗೂ ಸಿರಿ; ಜಗತ್ಕಾರ್ಯದಲ್ಲಿ ಬಹುಪಾಲಿನ ಹೊಣೆ ಹೊತ್ತು ದುಡಿಯುವವರಿಗೆ ಬಡತನ. ಇದು ಯಥಾಸ್ಥಿತಿ ಸಂರಕ್ಷಕರು ನಡಸುತ್ತಿರುವ ಸಮತೂಕದ ಸಾಮಾಜಿಕ ನ್ಯಾಯ. ಪೂರ್ವಯೋಜನೆಗೆ ಬದ್ಧವಾದ ವಸನ ಶಿಲ್ಪಿ ಚಿಪ್ಪಿಗನ ಜಾಣ್ಮನ್ನನುಸರಿಸುವ ಈ ಎಡರುಗಳನ್ನು ನಾನು ಸಾಮಾಜಿಕ ಪ್ರಗತಿಗೋಸ್ಕರ ನಡೆಯುತ್ತಿರುವ ಸತ್ಕ್ರಾಂತಿಗೆ ವಿರುದ್ಧವಾಗಿ ಕೈಕೊಳ್ಳಲಾದ ಪ್ರತಿಕ್ರಾಂತಿ (Counter-Revolution) ಸನ್ನಾಹವೆಂದು ಕರೆಯುತ್ತೇನೆ. ಏಕೆಂದರೆ ಈ ಎಡರುಗಳು ಕಳೆದ ಅರ್ಧಶತಮಾನದಿಂದ ನಡೆಯುತ್ತಿರುವ ವಿಶ್ವವಿಶಾಲವಾದ ಕ್ರಾಂತಿ ಎತ್ತಿದ ಪ್ರಶ್ನೆಗಳಿಗೆ ಸೊತ್ತಿನ ಪರವಾಗಿ, ಸ್ವಲ್ಪಸಂಖ್ಯಾಕರಿಗೆ ಒದಗಿದ ವಿಶೇಷ ಸೌಕರ್ಯ ಸುಯೋಗಗಳ ಪರವಾಗಿ, ಯಥಾಸ್ಥಿತಿ ಸಂರಕ್ಷಣೆಯ ಪರವಾಗಿ, ಕೊಡುವ ಉತ್ತರಗಳು ಏನೆಂಬುದನ್ನು ಇಲ್ಲಿ ಪ್ರಸ್ತಾವಿಸಬೇಕು.

ಈ ಪ್ರತಿಕ್ರಾಂತಿಯನ್ನು ಅಕಸ್ಮಾತ್ ಘಟನೆಯೆಂದು ಹೇಳುವ ಹಾಗಿಲ್ಲ. ಇದರಲ್ಲಿ ಅನಿಶ್ಚಯತೆಯೇನೂ ಇಲ್ಲ. ಅದಕ್ಕೆ ಸಂಪ್ರದಾಯನಿಷ್ಠೆಯೂ ಇಲ್ಲ. ಅದು ಗೊತ್ತಾದ ಯೋಜನೆಯಂತೆ ಅಣಿಯಾದದ್ದು, ಸುಸಂಘಟಿತವಾದದ್ದು; ಧನಬಲದ ಆಸರೆಯುಳ್ಳದ್ದು; ಶಸ್ತ್ರಬಲದ ಸಜ್ಜೂ ಅದಕ್ಕುಂಟು. ಬಹು ದೊಡ್ಡ ವರ್ತಕರ ಶ್ರೇಣಿಯೂ ಅತ್ಯಂತ ಪ್ರಬಲ ವಾಣಿಜ್ಯಸಂಸ್ಥೆಗಳೂ "ಸ್ವತಂತ್ರ ಪ್ರಪಂಚ"ದ ಅತ್ಯಂತ ಪ್ರಬಲ ಪ್ರಭುತ್ವಗಳೂ ನಾಯಕತ್ವವಹಿಸಿ ನಡಸುತ್ತಿರುವ ಪಡೆಗಳ ಚಟುವಟಿಕೆ ಈ ಪ್ರತಿಕ್ರಾಂತಿ. ಕ್ರಿ. ಶ. 1917 ನೆಯ ವರ್ಷವುರುಳಿದ ಮೇಲೆ ಅನೇಕ ವರ್ಷಗಳ ಕಾಲ ದೊಡ್ಡ ವಾಣಿಜ್ಯ-ಸೈನಿಕ ಪ್ರಭಾವ ಪ್ರಾತಿನಿಧ್ಯವುಳ್ಳ ಸ್ವಲ್ಪಜನಾಧಿಪತ್ಯಗಳು ಪಾಶ್ಚಾತ್ಯ ಸಾಮ್ರಾಜ್ಯಗಳನ್ನು ಅಂಕೆಯಿಟ್ಟು ನಡಸುತ್ತಿದ್ದುವು. ಇವು ರಷ್ಯಾಕ್ರಾಂತಿಯನ್ನೂ, ಅದರಿಂದ ಸ್ಫೂರ್ತಿಪಡೆದು, ಅದನ್ನೇ ಕೇಂದ್ರಾಧಾರವಾಗಿ ಮಾಡಿಕೊಂಡು ಚೀಣಾ ಕ್ಯೂಬಾ ಫಿಲಿಪ್ಪೈನ್ ತುರ್ಕಿ ಮತ್ತು ಇತರ ದೇಶಗಳಲ್ಲಿ ನಡೆದ ಕ್ರಾಂತಿಗಳನ್ನೂ ಪರ್ಯಾಲೋಚನೆಗೆ ಎತ್ತಿಕೊಂಡುವು. ಈ ವಿವಿಧ ಕ್ರಾಂತಿಗಳ ಬಗ್ಗೆ ಈ ಸ್ವಲ್ಪ ಜನಾಧಿಪತ್ಯಗಳು ಕೊಡುವ ಪ್ರತಿಕ್ರಿಯಾ ರೂಪದ ವರ್ಣನೆ ಇದು: "ಶಾಶ್ವತ

ವಾಗಿರುವುದರ ಬದಲು ತಾತ್ಕಾಲಿಕವಾಗಿ ಉಕ್ಕಿದ ಜನೋತ್ಸಾಹ!" ಆದರೆ ಈ ವಿವಿಧ ದೇಶೀಯ ಕ್ರಾಂತಿಗಳು ಭೂಗ್ರಹದಲ್ಲೆಲ್ಲ ಬೇರೆ ಬೇರೆ ಮಟ್ಟಗಳಲ್ಲಿ,–ಹುಲ್ಲುಗಾಡಿಗೆ ಬೆಸಿಗೆಯಲ್ಲಿ ಬಿದ್ದ ಬೆಂಕಿಯಂತೆ ಹರಡಿಕೊಂಡದ್ದನ್ನು ನೋಡಿ, ಈ ಸ್ವಲ್ಪಜನಾಧಿಪತ್ಯಗಳು ಎಚ್ಚೆತ್ತು, ಈ ಕ್ರಾಂತಿ ಚರಿತೆಗಳಿಗೆ ಗಂಭೀರವಾದ ಗಮನವನ್ನು ಕೊಟ್ಟು, ಅವಕ್ಕೆ ವಿರುದ್ಧವಾಗಿ ಪ್ರತಿಕ್ರಾಂತಿಯ ಪ್ರಬಲ ಕಾರ್ಯಾಚರಣೆಗಳನ್ನು ಸಂಯೋಜಿಸಿ ಸಂಘಟಿಸಿದುವು.

ಈ ಪ್ರತೀಕಾರವೇನೋ ಸಫಲವಾಯಿತೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಏಕೆಂದರೆ ಯಥಾಸ್ಥಿತಿಯನ್ನು ಸಂರಕ್ಷಿಸಿ ಊರ್ಜಿತಾವಸ್ಥೆಯಲ್ಲಿ ಇರಿಸುವುದು ಅದರಿಂದ ಸಾಧ್ಯವಾಯಿತು. ಎಲ್ಲೆಲ್ಲಿ ಕ್ರಾಂತಿ ಯಶಸ್ಸನ್ನು ಗಳಿಸಿತೋ, ಇಲ್ಲವೆ ಯಶಸ್ವಿಯಾಗಿ ಬಿಡುವ "ಅಪಾಯ" ವನ್ನು ಸೂಚಿಸಿತೋ ಅಲ್ಲೆಲ್ಲ ಈ ಪ್ರತಿಕ್ರಾಂತಿಯತ್ನವು ಪ್ರತಿಕ್ರಿಯೆಯನ್ನು ಪ್ರಚೋದಿಸಿ, ಪ್ರತೀಕಾರದ ಬಿರುಸನ್ನು ಏರಿಸಿತು.

ಮೆಕ್ಸಿಕೊ, ರಷ್ಯಾ, ಮಧ್ಯಯೂರೋಪಿನ ರಾಷ್ಟ್ರಗಳು ಯೂರೋಪ್ ಏಷ್ಯಾ ಖಂಡಗಳ ನಡುವಣ ನಿಕಟ ಪ್ರಾಚ್ಯ ಮಧ್ಯ ಪ್ರಾಚ್ಯದೇಶಗಳು( Near and Middle East), ಆಗ್ನೇಯ ಏಷ್ಯಾ, ಲ್ಯಾಟಿನ್ (ದಕ್ಷಿಣ) ಅಮೆರಿಕಾಖಂಡ, ಆಫ್ರಿಕಾಖಂಡಗಳಲ್ಲಿ ನಡೆದ ಈ ಎಲ್ಲ ಕ್ರಾಂತಿಕಾರಕ ಚಳವಳಿಗಳ ವಿರುದ್ಧವೂ ಕ್ರಾಂತಿಕಾರಕ ಪ್ರಭುತ್ವಗಳ ವಿರುದ್ಧವೂ ಪ್ರತಿ ಕ್ರಾಂತಿಯದಳಗಳು ಪ್ರತೀಕಾರನಡಸಿದವು. ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಂತೂ ಈ ಪ್ರತಿಕ್ರಾಂತಿಗೆ ಪೂರ್ಣಯಶಸ್ಸು ಲಭ್ಯವಾಗಿ, ಅಲ್ಲಿಯ ಸಮಾಜ ವ್ಯವಸ್ಥೆಯಲ್ಲಿ ತೀವ್ರ ಸುಧಾರಣೆಗಳನ್ನು ಬಯಸುತ್ತಿದ್ದ ವಾಮಪಂಥವು (Left) ಮುಂದೆ ಎಂದಿಗೂ ಪರಿಣಾಮಕಾರಿ ರಾಜಕೀಯ ಶಕ್ತಿಯಾಗಿ ತಲೆಯೆತ್ತದಂತೆ ಅದನ್ನು ನಿರ್ನಾಮ ಮಾಡಲಾಯಿತು.

ಈ ಪ್ರತಿಕ್ರಾಂತಿಯ ಹಿಂದೆ ಪಾಶ್ಚಾತ್ಯ ನಾಗರಿಕತೆಯ ಪ್ರತಿಷ್ಠೆಯೂ ಧನ ರಾಜಕೀಯಾಧಿಕಾರಗಳೂ ಕಾರ್ಯಮಾಡಿದುವು. ರಷ್ಯಾ ದೇಶದಲ್ಲಿ ಕ್ರಾಂತಿಯಾದ ಕೂಡಲೆ ಅಲ್ಲಿಯ ಬೋಲ್ಷೆವಿಕ್ ತಂಡವನ್ನು ಉರುಳಿಸಲು, ಮತ್ತು ಜರ್ಮನಿ ಹಾಗು ಮಧ್ಯಯೂರೋಪಿನ ದೇಶಗಳಲ್ಲಿ ಸಮಾಂತರದಲ್ಲಿ ತಲೆಯೆತ್ತಿದ ಕ್ರಾಂತಿಗಳನ್ನು ಸದೆಬಡಿಯಲು ಪ್ರತಿಕ್ರಾಂತಿ ಸಜ್ಜಾಯಿತು. ಇಟಲಿಯಲ್ಲಿ ಫ್ಯಾಸಿಸ್ಮ್ ರೂಪದ, ಜರ್ಮನಿಯಲ್ಲಿ ನಾಜಿಸ್ಮ್ ರೂಪದ ಪ್ರತಿಕ್ರಾಂತಿಯಿಂದ ತಲೆಮೆಟ್ಟಿಸಿಕೊಂಡ ಕ್ರಾಂತಿಗಳು ಮತ್ತೆ ತಲೆಯೆತ್ತಿದುವು. ಆಮೇಲೆ 1945 ರಲ್ಲಿ ಮಹಾ ಯುದ್ಧ ಮುಗಿದ ಬಳಿಕ,

ಭೂಗ್ರಹ ವ್ಯಾಪಿಯಾಗಿ ಕ್ರಾಂತಿ ಹರಡಲು ಮೊದಲಾದಾಗ, ಪ್ರತಿಕ್ರಾಂತಿಯು ಶೀತಲ ಸಮರ (Cold War) ರೂಪವನ್ನು ತಳೆಯಿತು. ಈ ಕಿರುಕುಳದ ಕಾಳಿಗವನ್ನು ಹೂಡಿದವು 19 ನೆಯ ಶತಮಾನದ ಸಾಮ್ರಾಜ್ಯಾವಶೇಷಗಳು. ಈ ಶೀತಲ ಸಮರದ ಪ್ರಕೋಪಕ್ಕೆ ಈಡಾದವು ಸಿಂಡಿಕಲಿಸ್ಮ್ (ಕಾರ್ಖಾನೆಗಳಲ್ಲಿ ಕಾರ್ಮಿಕ ಸಂಘಗಳಿಗೆ ಯಾಜಮಾನ್ಯ ಇರಬೇಕೆಂಬ ತತ್ತ್ವ), ಸೋಷಲಿಸ್ಮ್ (ಸಮತಾವಾದ) ಮತ್ತು ಕಾಮ್ಯುನಿಸ್ಮ್ (ಸಮಾಜವಾದ) ಗಳು. ಆಮೇಲೆ, ಆಹೊತ್ತಿಗಾಗಲೆ ಮನುಷ್ಯ ಜೀವಿತಕ್ಕಿರುವ ಭಾಗ್ಯ ಪರಿಣಾಮವೆಂದೂ ಮಹಾಧ್ಯೇಯವೆಂದೂ ಪ್ರಚಲಿತವಾಗಿದ್ದ ಖಾಸಗಿ ಸ್ವತಂತ್ರೋದ್ಯಮದ ತತ್ತ್ವಾನುಷ್ಠಾನಗಳ ಬಗೆಗೂ ಸಾಮ್ರಾಜ್ಯ ತತ್ತ್ವ ಪೋಷಣೆಯ ಬಗೆಗೂ ವಿರೋಧವನ್ನು ವ್ಯಕ್ತಪಡಿಸಿದ ಇತರ ತೀವ್ರ ಪಂಥಗಳ ಮೇಲೆ ಈ ಶೀತಲ ಸಮರವನ್ನು ಪ್ರಯೋಗಿಸಲಾಯಿತು. ಅಮೆರಿಕಾ ಸಂಯುಕ್ತ ಸಂಸ್ಥಾನಗಳ ವಾಣಿಜ್ಯ-ಮಿಲಿಟರಿ-ಕೂಟದ ಆಕ್ರಮಣಶೀಲ ನಾಯಕತ್ವದಲ್ಲಿ 1945 ನೆಯ ವರ್ಷಾನಂತರ ಶೀತಲ ಸಮರವು ಪಾಶ್ಚಾತ್ಯ ರಂಗದ ಕೇಂದ್ರ ಸ್ಥಾನದಲ್ಲಿ ಪ್ರಭಾವ ಬಲ ಪಡೆದು ನೆಲಸಿತು. ಈ ದುರ್ಗದಿಂದ ಶೀತಲ ಸಮರಯಂತ್ರದ ಹೂಟಗಳು ಸೋವಿಯಟ್ ರಷ್ಯಾ, ಪ್ರಜಾರಾಜ್ಯತಂತ್ರದ ಚೀಣಾ, ಕೊರಿಯಾ, ವಿಯತ್ನಾಮ್, ಇರಾನ್, ಕಾಂಗೋ, ಕ್ಯೂಬಾ, ಬೊಲಿವಿಯಾ, ಬ್ರೆಜಿಲ್ ದೇಶಗಳಲ್ಲಿಯ ಪ್ರಜಾಸಮಷ್ಟಿ ಸ್ವಾಮ್ಯವಾದಿಗಳಾದ "ಶತ್ರು" ಗಳಮೇಲೂ, ಯಾವಯಾವ ದೇಶದ ಜನತೆ ಖಾಸಗಿ ಉದ್ಯಮದ ಲಾಭಕೋರರ ಮೇಲೆ ಬಂಡೇಳುವಧೈರ್ಯ ಮಾಡಿತೋ ಅಲ್ಲೆಲ್ಲ ಆಯಾ ದೇಶ ಜನಪದಗಳಮೇಲೂ ದಾಳಿಮಾಡಿ ಪ್ರತಿಕ್ರಾಂತಿಯ ಕಾರ್ಯಾಚರಣೆಗಳಲ್ಲಿ ತೊಡಗಿದುವು.

## ಪ್ರತಿಕ್ರಾಂತಿಯ ಷಣ್ಮುಖಗಳು

ಪ್ರತಿಕ್ರಾಂತಿ ಆರು ಮುಖಗಳಿಂದ ಕಾರ್ಯ ಮಾಡುತ್ತವೆ:— (1) ಸರ್ಕಸ್ (ವಿನೋದ) ಮುಖ; (2) ಬಗೆಬಗೆಯ ಅನುಕೂಲತೆ ಸೌಕರ್ಯಗಳ ದಾನದ ಮೂಲಕ ಜನ ವಿಧೇಯತೆಯನ್ನು ರೂಢಿಸಿಕೊಳ್ಳುವ ಪ್ರಲೋಭನ ಮುಖ; (3) ಅಲ್ಪ-ಕ್ಷುದ್ರ-ಸುಧಾರಣೆಗಳನ್ನು ಕೈಕೊಂಡು ಅಶಾಂತರಾದ ಜನಕ್ಕೆ ತೃಪ್ತಿ ಕೊಡ ಬಯಸುವ ಸೌಮ್ಯ ಮುಖ; (4) ಭ್ರಷ್ಟಾಚಾರ ನೀತಿವಿಲಯನಗಳ ಹೇಯ ಮುಖ; (5) ಸರ್ವತ್ರ ಬೇಹುಗಾರಿಕೆಯ ನಿತ್ಯ ಜಾಗರೂಕ ಮುಖ; ಮತ್ತು (6) ಹಿಂಸೆ ಹಾಗೂ ಭಯೋತ್ಪಾದನೆಯ ದೈತ್ಯಮುಖ.

(1) ಪ್ರತಿಕ್ರಾಂತಿಯ ವಿನೋದ ಮುಖದ ಉದ್ದೇಶ-ಮಾನವತೆಯ ನಿತ್ಯ ಚಿಂತೆಯಾಗಿರತಕ್ಕ ಮುಖ್ಯ ಸಮಸ್ಯೆಗಳಲ್ಲಿ ಕೆಲವುಗಳ ಬಗೆಗಾದರೂ ಜನಗಮನ

ವನ್ನು ತಪ್ಪಿಸಿ, ಅವರನ್ನು ವಿನೋದಪಡಿಸಿ ನಲಿವೂಡುವುದು. ಹೀಗೆ ಜನಜಂಗುಳಿಯ ಮಟ್ಟದಲ್ಲಿ ಪಟ್ಟಭದ್ರಹಿತಗಳಿಂದ ನಿರ್ಬಂಧ ಪ್ರಯೋಗವಾಗುವುದನ್ನು ಬಹು ಹಳೆಯ ಕಥೆಯನ್ನಬೇಕು. ಇಂದಿನ ಪಶ್ಚಿಮ ಜಗತ್ತು ಈ ಸರ್ಕಸ್ ಪ್ರಯೋಗವನ್ನು ಕ್ಯಾಮರಾ (ಚಿತ್ರಗ್ರಾಹಕ), ಮುದ್ರಣಾಲಯ, ಚಲನಚ್ಚಿತ್ರ (ಫಿಲ್ಮ್), ರೇಡಿಯೋ (ಆಕಾಶವಾಣಿ), ಟೆಲಿವಿಷನ್ (ದೂರದರ್ಶಕ) ಮತ್ತು ಆಧುನಿಕ ವಿಜ್ಞಾನ ತಂತ್ರ ಜ್ಞಾನ-ಸಾಮಾನ್ಯವಾಗಿ, ಧಾರಾಳವಾಗಿ, ಒದಗಿಸುವ ಇತರ ಜನ ಸಂಪರ್ಕಸಾಧನ ಗಳನ್ನು-ಬಳಸುತ್ತ ಹಳೆಯ ಕತೆಯನ್ನೇ ಪುನರ್ನವೀಕರಿಸುತ್ತಲಿದೆ, ಪುನರಾವರ್ತನೆ ಮಾಡುತ್ತಲಿವೆ. ನೂತನ ಶೋಧನೆಗಳೂ ನಿರ್ಮಾಣಗಳೂ ಆಗುತ್ತಿರುವ ಕಾರಣದಿಂದ, ಅಧಿಕಾರದಲ್ಲಿರುವವರು ದೂರದಲ್ಲಿದ್ದುಕೊಂಡೇ ಜನರನ್ನು ಅವರವರ ಮನೆಗಳಲ್ಲೋ, ಕಾರ್ಯಾಗಾರಗಳಲ್ಲೋ, ಶಾಲೆಗಳಲ್ಲೋ, ಸಾರ್ವಜನಿಕ ವಿನೋದ ಕೂಟಗಳಲ್ಲೋ, ಕಡೆಗೆ ಬೀದಿಚೌಕಗಳಲ್ಲೋ ದಿನಕ್ಕೆ ಇಪ್ಪತ್ತನಾಲ್ಕು ಘಂಟೆಗಳಕಾಲವೂ ಸಮೀಪಿಸಿ ಸಂಪರ್ಕದಲ್ಲಿರಿಸಿಕೊಳ್ಳಬಹುದು. ಈ ಸಾಧನಗಳನ್ನು ಬಳಸಿ ಜನಕ್ಕೆ ಅಧಿಕಾರಗಳು ಕೊಡುವ ಶ್ರವಣಸುಖವೇನು? ಪುಸಲಾಯಿಕೆಯ ಮಾತುಗಳು, ಗುಲ್ಲುಸುದ್ದಿಗಳ ಪ್ರಸಾರ, ಭೀಭತ್ಸ ರಸ ಪ್ರಕಾಶಕ ಕಥೆಗಳ ಕಥನ; ನಿರ್ಬಂಧದಿಂದ ಕಿವಿಗೆ ತುರುಕುವ ವಾರ್ತೆಗಳು, ಎಚ್ಚರಿಕೆಗಳು, ಬುದ್ಧಿವಾದ ವಾಗ್ದಂಡಗಳು, ಬೆದರಿಕೆಗಳು. ಈಗ ಪಶ್ಚಿಮದಲ್ಲಿ ಎಲ್ಲ ಸಂಪರ್ಕ ಸಾಧನಗಳೂ ಆರ್ಥಿಕ ವ್ಯವಸ್ಥೆಯ ಪ್ರಭುಗಳಾದ ಸ್ವಲ್ಪ ಜನಾಧಿಪತ್ಯದ ಸ್ವಾಧೀನದಲ್ಲಿರುವುದರಿಂದ, ರಾಜಕೀಯ ಯಂತ್ರಕ್ಕೂ ಅವರೇ ಒಡೆ ಯರಾಗಿರುವುದರಿಂದ, ಸಾಮಾಜಿಕ ಸೇವೆಗಳ ಆಡಳಿತವೂ ಅವರ ಕೈಯಲ್ಲೇ ಇರುವು ದರಿಂದ, ಅವರು ಜನರಿಗೆ ಅರೆ - ದಿಟಗಳನ್ನೂ ಸಟೆಗಳನ್ನೂ ಸ್ವೀಕಾರಯೋಗ್ಯಗಳೆಂದು ಕೊಡಬಹುದಾಗಿದೆ. ಇಲ್ಲವೆ, ಜನರನ್ನು ಸದ್ದು ಮಾಡದಂತೆ ಇರಿಸಿ, ವಿದ್ಯಮಾನಗಳ ಬಗ್ಗೆ ಅಜ್ಞಾನದಲ್ಲಿರುವಂತೆ ಮಾಡಬಹುದಾಗಿದೆ. ಅದೇ ಕಾಲದಲ್ಲೇ ಅದೇ ಸಂಪರ್ಕ ಸಾಧನ ದ್ವಾರಾ ಜನಕ್ಕೆ, "ಇಳೆಯಲ್ಲಿಲ್ಲ ನೀವೇ ತುಂಬ ತಿಳಿವಳಿಕೆಯುಳ್ಳವರು" ಎಂದು ಉಬ್ಬಿಸಿ ಅಡಿಗಡಿಗೆ ಸ್ತೋತ್ರ ಮಾಡುವುದೂ ಆಗುತ್ತದೆ.

(2) ಪ್ರತಿಕ್ರಾಂತಿಯ ಏರ್ಪಾಟಿನಂತೆ ಸೌಕರ್ಯ ಅನುಕೂಲತೆಗಳ ಕಲ್ಪನೆ ಮಾಡಿ ಜನದ ವಿಧೇಯತೆಯನ್ನು ಸಂಪಾದಿಸುವ ಉದ್ದೇಶದಿಂದ ಜನತಾ ಬಜಾರು ಗಳಿಗೆ ಕಣ್ಸೆಳೆಯುವ, ಬೆರಗೂಡುವ, ಮನಸ್ಸನ್ನು ಸೆರೆ ಹಿಡಿಯುವ ಸರಕುಗಳನ್ನೂ ಸೇವೆಗಳನ್ನೂ ಧಾರಾಳವಾಗಿ ಸರಬರಾಜು ಮಾಡಿ, ಜನ ಜಂಗುಳಿಯನ್ನು ಕೊಂಡು ಕೊಳ್ಳುವುದೂ ಸಾಧ್ಯವಾಗಿದೆ.

ಪ್ರತಿಕ್ರಾಂತಿಕಾರರ ವಶದಲ್ಲಿ ಉತ್ಪಾದನೆಯ ಯಂತ್ರವಿರುತ್ತದೆ. ಈ ಸಾಧನ ವನ್ನು ಬಳಸಿ, ಪ್ರಕೃತಿ ಸಂಪನ್ಮೂಲಗಳನ್ನೂ ಮಾನವ ಶಕ್ತಿಯನ್ನೂ ಅಹಾರೋತ್ಪಾ

ದನೆಯಾಗಿಯೂ, ಜೀವನೋಪಯೋಗಿಗಳಾದ ಇತರ ಯಂತ್ರ ಪರಿಕರಗಳಾಗಿಯೂ ಪರಿವರ್ತಿಸಲಾಗುತ್ತಿದೆ. ಈ ವಸ್ತುಗಳೂ ಸೇವೆಗಳೂ ಜನತಾಬಜಾರುಗಳಿಗೆ ಜಲಪಾತ ಗಳಂತೆ ಸರಬರಾಜಾಗುತ್ತಿವೆ. ಈ ಮಹೋತ್ಪಾದನೆಯನ್ನು ಸರಿಗಟ್ಟುವಂತೆ ಉತ್ಪಾದ ನೆಯ ಕಾರ್ಯಾಗಾರಗಳಲ್ಲಿ ಕೆಲಸ ಮಾಡುವ ಸಿಬ್ಬಂದಿಗೆ ಸಂಬಳ ಭತ್ಯಗಳು ಪಾವತಿ ಯಾಗುತ್ತಿವೆ. ಈ ಸಂಪಾದನೆಯಿಂದ ಅವರು ರಾಷ್ಟ್ರೀಯ ಉತ್ಪನ್ನದಲ್ಲಿ(National Product) ಮೂರನೆಯ ಎರಡು ಭಾಗವನ್ನು ಹಿಂದಕ್ಕೆ ಖರೀದಿ ಮಾಡಬಲ್ಲ ಖದೀಮರಾಗಿರುತ್ತಾರೆ.

ನ್ಯಾಸನಿಧಿ ಸಂಸ್ಥೆಗಳು (ಟ್ರಸ್ಟುಗಳು), ಸರಕುಬೆಲೆಗಳನ್ನಿಳಿಸದೆ ಯಥಾಸ್ಥಿತಿ ಯಲ್ಲಿರಿಸುವ ಒಪ್ಪಂದ ಮಾಡಿಕೊಂಡ "ಕಾರ್ಟೆಲ್" ಮತ್ತು ಇತರ ಆರ್ಥಿಕ ವ್ಯವಸ್ಥಾಕೂಟಗಳು ಸಾಂದ್ರೀಕರಿಸಿದ್ದರಿಂದ, ಅನೇಕ ವೈಯಕ್ತಿಕ ಸ್ವತಂತ್ರ ಉದ್ಯಮಿ ಗಳ ಹಾಗೂ ವೃತ್ತಿನಿರತರ ಸಂಖ್ಯೆಯನ್ನು ಕಡಮೆಮಾಡಿರುವುದಲ್ಲದೆ, ಅದೇ ಕಾಲಕ್ಕೆ ಗೌರವ ಭೃತಿ ಸಂಪಾದಕ ಸಿಬ್ಬಂದಿಯನ್ನೂ ಮಾಸಾಶನ ಪಡೆವ ಸಿಬ್ಬಂದಿಯನ್ನೂ ಹೆಚ್ಚಿಸಿ, ಜನತಾಬಜಾರುಗಳಲ್ಲಿ ಸರಕುಗಳನ್ನು ಕೊಳ್ಳಬಹುದಾದ ಆಢ್ಯಗಿರಾಕಿಗಳ (ಗ್ರಾಹಕರ) ಸಂಖ್ಯೆಯನ್ನು ಹೆಚ್ಚಿಸಲಾಗಿದೆ. ಹೆಚ್ಚು ವರಮಾನವುಳ್ಳವರು ಮಾತ್ರ ಇಂಥ ಭಾರೀ ಮಾರುಕಟ್ಟೆಯಲ್ಲಿ ಪದಾರ್ಥಗಳನ್ನು ಕೊಳ್ಳಬಲ್ಲರಷ್ಟೆ? ಹೆರವರ ಒಡೆತನ ದಲ್ಲಿರುವ ಉದ್ಯೋಗಿಗಳ ವಶಕ್ಕೆ ಪುಷ್ಕಲತೆಯ ಬೀಗದ ಕೈ ಹೋಯಿತು. ಪದವಿ ಪ್ರತಿಷ್ಠೆಗಳ ಮೇಲೇರಿಕೆಗೆ ಆರ್ಥಿಕ ಆಧಾರ ಅಳವಟ್ಟಿತು.

ವಾಣಿಜ್ಯ-ಸೈನಿಕ-ರಾಜಕೀಯ ಪ್ರಭಾವಾಧಿಕಾರವುಳ್ಳ ಸ್ವಲ್ಪಜನಾಧಿಪತ್ಯದ ಒಡೆತನಕ್ಕೆ ಉದ್ಯೋಗಗಳು ಬಂದದ್ದರಿಂದ, ಯಂತ್ರೋದ್ಯಮ ನಿಷ್ಠ ಸಮುದಾಯ ಗಳ ಜೀವನದ ಪ್ರತಿಯೊಂದು ಮುಖವನ್ನೂ ನಿಯಮದಲ್ಲಿ ನಡಸುವುದು ಸಾಧ್ಯ ವಾಯಿತು. ಹೀಗೆ ಸ್ವಲ್ಪಜನಾಧಿಪತ್ಯವು ಅನುಗ್ರಹ ಮಾಡಿದರೆ ಮಾತ್ರ ಜೀವನ ಸೌಕರ್ಯ, ಅನುಕೂಲತೆ, ಸ್ಥಾನ ಮಾನ ಮತ್ತು ಪಕ್ಷಪಾತ ಪೂರ್ವಕವಾದ ಮೆಚ್ಚಿಕೆ.

ಉದ್ಯೋಗಸ್ಥರೂ ಅವರ ಕುಟುಂಬಗಳೂ ಜನತಾ ಬಜಾರುಗಳಲ್ಲಿ ರಾಶಿ ರಾಶಿ ಯಾಗಿ ಶೇಖರವಾದ ಸರಕು ಸೇವೆಗಳ ಪ್ರಯೋಜನವನ್ನು ಬಯಸುವರೇನು? ಅವರಿಗೆ ಸಂಯೋಜಿತಾಹಾರದಲ್ಲಿ (Processed) ರುಚಿಯೇನು? ಸ್ವಂತ ಮೋಟರುಗಳನ್ನು ನಡಸುವ ಭೋಗದಲ್ಲಿ ಅವರಿಗೆ ಪ್ರೀತಿಯೇನು? ಅವರವರ ವೃತ್ತಿಗಳಲ್ಲಿ ಅವರು ಮೇಲಕ್ಕೇರಬೇಕೇನು? ಉದ್ಯೋಗಸ್ಥನೊಬ್ಬನು ಪಡೆಯುವ ಸಂಬಳದ ಚೆಕ್ಕೇ ಅವ ನಿಗೆ ಜನತಾ ಬಜಾರುಗಳೊಳಕ್ಕೆ ಹೋಗಲು ಅನುಕೂಲ ಮಾಡುವ ಪ್ರವೇಶ ಪತ್ರ ವಾಗುತ್ತದೆ. ಇಷ್ಟು ಸರಳವಾದ ಸಾರ್ವತ್ರಿಕ ವಿಶ್ವಾಸಾರ್ಹತೆಯ ಪತ್ರ ಯಾರಿಗೆ

ಬೇಕಾಗುವುದಿಲ್ಲ? ಸ್ವಲ್ಪಜನಾಧಿಪತ್ಯಕ್ಕೆ ಸಮ್ಮತವಾದ ಜೀವನ ವಿಧಾನವನ್ನು ಅನುಸರಿಸುವವರಿಗೆ, ವಿಧೇಯತೆ ಸಲ್ಲಿಸುವವರಿಗೆ ಸಾಲದ ಸೌಕರ್ಯವು ದಕ್ಕುತ್ತವೆ. ಸ್ವಲ್ಪಜನಾಧಿಪತ್ಯ ಒಪ್ಪಿಕೊಂಡವರಿಗೆಲ್ಲ ನೆಮ್ಮದಿಯ ಬಾಳು. ಪ್ರಭುತ್ವಕ್ಕೆ ವಿಧೇಯವಾಗಿದ್ದು ನಿಷ್ಠೆಯಿಂದಿರುವ ಪ್ರತಿಜ್ಞಾಸ್ವೀಕಾರ ಮಾಡಿದರೆ ಸಾಕು, ಉದ್ಯೋಗ ಲಾಭ. ಸ್ವಲ್ಪಜನಾಧಿಪತ್ಯಕ್ಕೆ ಯಾರು ವಿರೋಧಿಗಳೋ ಅವರಿಗೆ ನಿರುದ್ಯೋಗ. ಇಂಥವರು ದ್ವಿತೀಯ ವರ್ಗದ ಆರ್ಥಿಕಸ್ಥಾನದಲ್ಲಿ ಕೊಳೆಯಬೇಕು. ಏಕೆಂದರೆ ಇವರೆಲ್ಲ ವ್ಯವಸ್ಥೆಯನ್ನು ಮುರಿದು ಪುಂಡೇಳಬಹುದಾದದ್ದರಿಂದ ಉದ್ಯೋಗಕ್ಕೆ ಅನರ್ಹರು; ಇವರೆಲ್ಲ ಯಂತ್ರ ಭೇದಕರು; ವ್ಯವಸ್ಥೆಗೆ ಹೊಂದಿಕೊಳ್ಳಲಾರದವರು, ಮತ್ತು ತಂಟೆಕೋರರು.

ಪೂರ್ವನಿಶ್ಚಿತ ಜೀವನ ವಿಧಾನವನ್ನು ಚಿಕ್ಕಂದಿನಲ್ಲೇ ಶಾಲೆಯಲ್ಲಿ ಮಕ್ಕಳಿಗೆ ಕಲಿಸಲಾಗುತ್ತದೆ; ಚರ್ಚುಗಳಲ್ಲೂ ಪತ್ರಿಕೆಗಳಲ್ಲೂ ರೇಡಿಯೋ ಮುಖಾಂತರವೂ ಟೆಲಿವಿಷನ್ ದ್ವಾರವೂ ಈ ಜೀವನ ವಿಧಾನದ ಮರ್ಮವನ್ನು ತಿಳಿಯ ಹೇಳಲಾಗುತ್ತದೆ. ಇಂಥ ಪರಂಪರಾಗತ ಜೀವನ ವಿಧಾನವನ್ನು ಅನುಸರಿಸುವುದು ರಾಷ್ಟ್ರಕ ಪ್ರಜೆಗೆ ಧರ್ಮವೂ ದೇಶಾಭಿಮಾನ ದ್ಯೋತಕವಾದ ಕರ್ತವ್ಯವೂ ಆಗುತ್ತದೆ. ಯಾರು ಅದನ್ನು ಒಪ್ಪಿಕೊಂಡು ಆಚರಿಸುತ್ತಾರೋ ಅವರಿಗೆಲ್ಲ ಪ್ರಥಮ ದರ್ಜೆಯ ರಾಷ್ಟ್ರಕರಿಗೆ ಸಲ್ಲುವ ಹಕ್ಕು ಬಾಧ್ಯತೆಗಳೂ ಸ್ಥಾನ ಮಾನಗಳೂ ದಕ್ಕುತ್ತವೆ. ಅನುವರ್ತನೆಗೆ ಒಡಂಬಡದವರು ದ್ವಿತೀಯ ಶ್ರೇಣಿಗೆ ಇಳಿಯಬೇಕು.

(3) ಪ್ರತಿಕ್ರಾಂತಿಯ ಹೋರಾಟದಲ್ಲಿ ಬಳಸುವ ಶಸ್ತ್ರಮಾಲಿಕೆಯಲ್ಲಿ ಕ್ಷುದ್ರ ಸುಧಾರಣೆಗಳೂ ಸೇರಿರುತ್ತವೆ. ಕ್ರಾಂತಿಕಾರರ ಬೇಡಿಕೆಗಳು ಬೇರಿನ ವರೆಗೆ ಇಳಿಯತಕ್ಕವು; ದೂರ ಪರಿಣಾಮಗಳನ್ನು ನಿರೀಕ್ಷಿಸತಕ್ಕವು. ಹೀಗೆ ಆಮೂಲಾಗ್ರವಾಗಿ ಸುಧಾರಣೆಗಳನ್ನು ಕೋರುವ ಕ್ರಾಂತಿಕಾರರು ಮುಂದೊತ್ತುವ ಬಾಬುಗಳು ಇವು: ಸೊತ್ತಿನ ಬಗ್ಗೆ ಮಾರ್ಪಾಟುಗಳು; ಸ್ಥಾನ ಮಾನಗಳ ಸಂಬಂಧಗಳ ಬಗ್ಗೆ ಮಾರ್ಪಾಟುಗಳು. ಕ್ಷುದ್ರ ಸುಧಾರಣೆಗಳಾದರೋ ಹೊಟ್ಟೆತುಂಬ ರೊಟ್ಟಿ ಬೇಡುವವನ ಮುಂದೆ ಚೂರುಪಾರು ಎಸೆದ ಹಾಗೆ!

ಕ್ಷುದ್ರ ಸುಧಾರಣೆಗಳು ತತ್ ಕ್ಷಣದ ಬೇಡಿಕೆಗಳನ್ನು ಅಷ್ಟಿಷ್ಟು ಪೂರೈಸಿಯಾವು. ಆದರೆ ಸೊತ್ತುಗಳ ಬಗೆಗೂ ಜನದಲ್ಲಿ ವರ್ಗ ಸಂಬಂಧಗಳ ಬಗೆಗೂ ಪ್ರತಿಕ್ರಾಂತಿಕಾರರ ಘೋಷಣೆ ಇದು: ಈ ಅಲ್ಪ ಸುಧಾರಣೆಗಳನ್ನು ಕರುಣಿಸುವುದಕ್ಕೆ ಮುಂಚೆ, ಅವರು ಹೇಗಿದ್ದರೋ ಹಾಗೆ ಅವನ್ನಿರಿಸುವುದೇ ಉದ್ದೇಶ. ಅವರು ಔದಾರ್ಯ ತೋರಿ

ಕರುಣಿಸಬಹುದಾದ ಸುಧಾರಣೆಗಳು ಇವು: ಕಾರ್ಮಿಕರಿಗೆ ಕನಿಷ್ಠಾವಧಿಯ ದೈನಿಕ ಕಾಯಕ, ಉತ್ತಮವಾದ ಸೇವಾನಿಯಮಗಳು, ವ್ಯಾಪಕ ಶಿಕ್ಷಣ ವ್ಯವಸ್ಥೆ, ರಾಜಕೀಯ ಪ್ರಾತಿನಿಧ್ಯ, ವಿಸ್ತೃತವಾದ ಮತದಾನದ ಹಕ್ಕು, ನಿಯತ ಕಾಲಿಕ ಚುನಾವಣೆಗಳು, ವ್ಯಾಪಕವಾದ ಪೌರಬಾಧ್ಯತೆಗಳು ಮತ್ತು ಸಾಮಾಜಿಕ ಸೇವೆಗಳ ಭರವಸೆ–ಇಷ್ಟನ್ನು ನೀಡಲೊಡಂಬಡಬಹುದು ಪ್ರತಿಕ್ರಾಂತಿ ಪ್ರಭುತ್ವ. ಎಂದರೆ, ಈ ಸುಧಾರಣೆಗಳು ಸಮಾಜದ ಮುಖ್ಯಲಕ್ಷಣವನ್ನು ಬಾಹ್ಯತಃ ಕಾಪಾಡಿ, ಸದ್ಯಃಸ್ಥಿತಿಯಲ್ಲಿ ಅಧಿಕಾರಾರೂಢರು ಜನತೆಯನ್ನು ಅಂಕೆಯಲ್ಲಿರಿಸುವ ಸ್ವಾತಂತ್ರ್ಯವನ್ನು ಎಳ್ಳಷ್ಟೂ ಬಿಟ್ಟುಕೊಡರು.

ಅಲ್ಪ ಸುಧಾರಣೆಗಳ ವಾಗ್ದಾನವು ಸಾಹುಕಾರನಿಗೆ ಸಾಲಗಾರನು ಬರೆದು ಕೊಡುವ ಸಾಲತೀರುವೆಯ ಓಲೆಯನ್ನು (IOU) ಅನುಕರಿಸುತ್ತಿದೆ. ಈ ಆನೃಣ್ಯ ಭಾವದ ಆಚರಣೆ ಹೇಗೆ? ಸಾಲಗಾರನು ಕಡತೀರಿಸಿದ ಮೇಲೆ ತಾನೆ ಋಣಭಾರ ಇಳಿದೀತು? ಪ್ರತಿಕ್ರಾಂತಿ ಈ ತಂತ್ರವನ್ನು ಪ್ರಯೋಗಿಸಿ ಕ್ರಾಂತಿಯ ಬೇಡಿಕೆಗಳಲ್ಲಿರುವ ಮೊನಚನ್ನು ಮೊಂಡುಮಾಡಿ, ಕ್ರಾಂತಿಯ ಉತ್ಸಾಹವನ್ನು ಇಳಿಸುತ್ತದೆ.

ಆದರೂ (ಒಡೆಯರು ಎಷ್ಟೇಗೊಣಗಿಕೊಂಡು ನೀಡಿದರೂ)ಅವರು ಜಾರಿಗೆ ತರುವ ಒಂದೊಂದು ಸುಧಾರಣೆಯೂ ನಿರಂಕುಶಾಧಿಕಾರಕ್ಕೆ ಅಷ್ಟಿಷ್ಟು ಮಿತಿಯನ್ನುಂಟು ಮಾಡುವುದರಲ್ಲಿ ಪರಿಣಾಮಗೊಳ್ಳುತ್ತದೆ; ಮತ್ತು ಅಧೀನ ಪ್ರಜೆಗಳು ಸದ್ಯಃಸ್ಥಿತಿಯಲ್ಲಿ ಬಳಸಿ ಅನುಭವಿಸ ಬಹುದಾದಷ್ಟು ಹಕ್ಕು ಬಾಧ್ಯತೆಗಳಾದರೂ ಹೆಚ್ಚಿದುವೆಂಬ ತೃಪ್ತಿಗೆ ಅವಕಾಶ ಕೊಡುತ್ತದೆ. ಸ್ಕಾಂಡಿನೇವಿಯಾ ಮತ್ತು ಗ್ರೇಟ್ ಬ್ರಿಟನ್‌ಗಳು ಈ ಬಗ್ಗೆ ನೀಡುವ ಅನುಭವವು ಗಮನಾರ್ಹವಾದದ್ದಾಗಿದೆ. ಈ ದೇಶಗಳಲ್ಲಿ ಈಚಿನ ವರ್ಷಗಳಲ್ಲಿ ಜನತೆಯ ಜೀವನ ಹಾಗೂ ಜೀವಿಕೆಯ ಸ್ಥಿತಿಗತಿಗಳನ್ನು ಉತ್ತಮ ಪಡಿಸಲು ವಿವಿಧ ಸುಧಾರಣೆಗಳನ್ನು ಜಾರಿಗೆ ತರಲಾಯಿತು. ಅಲ್ಲಿ ಸಾಮಾಜಿಕ ಸೇವೆಗಳು ಉತ್ತಮ ಪಟ್ಟುವು; ವಸತಿಸೌಕರ್ಯ ಹೆಚ್ಚಿತು; ನಿರುದ್ಯೋಗದ ಮಟ್ಟ ಇಳಿಯಿತು. ಇವುಗಳ ಪರಿಣಾಮವಾಗಿ, ಸುಧಾರಣೆಗಳ ಪರಿಮಾಣಕ್ಕೆ ತಕ್ಕಂತೆ, ಈ ದೇಶಗಳಲ್ಲಿ ಕ್ರಾಂತಿ ಚಳುವಳಿಗಳು ದುರ್ಬಲವಾದುವು.

(4) ಭ್ರಷ್ಟಾಚಾರವೆಂದರೆ ಚೊಕ್ಕಟ ತಪ್ಪಿಸುವ ಕಲಬೆರಕೆತನ, ನೀತಿಪಾತ, ಮತ್ತು ಬಾಳ್ನಡೆಯಲ್ಲಿ ಘನತೆ ಸಭ್ಯತೆಗಳ ಮಟ್ಟವನ್ನು ಇಳಿಸಿಕೊಳ್ಳುವಿಕೆ. ಭ್ರಷ್ಟಾಚಾರವು ನಡತೆಯಲ್ಲಿ ನೇರ್ಮೆಯನ್ನು – ಪ್ರಾಮಾಣಿಕತೆಯನ್ನು–ತೊರೆದುಆದರ್ಶದಿಂದ ಜಾರುತ್ತದೆ. ಮನುಷ್ಯಶಕ್ತಿಯನ್ನು ಅಪವ್ಯಯಮಾಡಿ ಹಾಳುಮಾಡುತ್ತದೆ. ದಕ್ಷತೆಯನ್ನು ಇಳಿಸಿ ಕೆಲಸವನ್ನು ಕೆಡಿಸುತ್ತದೆ. ಆದದ್ದರಿಂದ ಕ್ರಾಂತಿಯ ವಿರುದ್ಧ

ಪ್ರತಿಕ್ರಾಂತಿ ಕೈಕೊಳ್ಳುವ ಪ್ರತೀಕಾರದ ಶಸ್ತ್ರಗಳಲ್ಲಿ ಭ್ರಷ್ಟಾಚಾರವು ಅತ್ಯಂತ ಮುಖ್ಯವಾದದ್ದು. ಎಲ್ಲಿ ಪ್ರತಿಕ್ರಾಂತಿಕಾರರ ಒಡೆತನದಲ್ಲಿ, ಅಂಕೆಯಲ್ಲಿ ದಕ್ಷತೆಯಿಂದ ನಡೆಯಬೇಕಾದ ವಸ್ತೂತ್ಪಾದಕ ಯಂತ್ರಗಳಿದ್ದು, ಅವು ಪುಷ್ಕಲವಾಗಿ ಸರಕು ಸೇವೆಗಳನ್ನೂ ಮನೆವಾರ್ತೆಗೆ ಬೇಕಾದ ಯಂತ್ರಗಳನ್ನೂ ಉತ್ಪಾದಿಸಿ ಸರಪರಾಜು ಮಾಡುತ್ತವೆಯೋ; ಎಲ್ಲಿ ಬರಿಯ ನಗದು ಹಣದ ಕೈವಾಡವೇ ಅರ್ಥವ್ಯವಸ್ಥೆ ಎನ್ನಿಸಿ ಅದರ ಆಧಾರದಮೇಲೆ ಸಮಾಜವನ್ನು ಕಟ್ಟಲಾಗುತ್ತದೆಯೋ; ಎಲ್ಲಿ ಜನದ ನಿತ್ಯ ವ್ಯಾಪಾರಕ್ಕೆ ಧಾರಾಳವಾದ ಹಣದ ಪಾತ್ರ ಅಧಿಕವಾಗಿರುತ್ತದೆಯೋ ಅಲ್ಲಿ ಭ್ರಷ್ಟಾಚಾರದ ಪ್ರಲಯ ತಾಂಡವಕ್ಕೆ ವೇದಿಕೆ ಲಭ್ಯವಾಗುತ್ತವೆ.

ವರ್ತಮಾನ ಕಾಲದಲ್ಲಿ ಪ್ರತಿಕ್ರಾಂತಿ ದೊಡ್ಡ ಪರಿಮಾಣದಲ್ಲೂ ಬಹು ವೈವಿಧ್ಯಪೂರ್ಣವಾಗಿಯೂ ಸರಕು ಸೇವೆಗಳನ್ನು ನೀಡಬಲ್ಲದ್ದಾಗಿದೆ. ಅಲ್ಲದೆ ಅದು ತನ್ನ ವಶದಲ್ಲಿರಿಸಿಕೊಂಡಿರುವ ವಿಸ್ತಾರ ಯಂತ್ರಸಂಧಾನದ ಮೂಲಕ ಸಾಲನೀಡಿಕೆಯ ಮತ್ತು ನೆಮ್ಮದಿ ಬಾಳಿನ ಭರವಸೆ ನೀಡಿಕೆಯ ಹುಸಿ ನಂಬಿಕೆಯನ್ನು ಜನಕ್ಕೆ ಕೊಡುತ್ತದೆ. ಅದರ ಪರಿಣಾಮವೇನೆಂದರೆ, ಪ್ರತಿಕ್ರಾಂತಿಕಾರರಿಗೆ ವಿಧೇಯರಾಗಿ ಬೆಸನೆಸಗುವವರನ್ನು ಶಾಶ್ವತವಾಗಿ ಪರಪುಷ್ಟರನ್ನಾಗಿ ( ಬಂದಳಿಕೆಗಳನ್ನಾಗಿ ) ಮಾಡುವುದು.

ಪುಷ್ಕಲವಾಗಿ ಸರಕುಸೇವೆಗಳ ಸರಪರಾಜು, ಧನದಾನ, ಸಾಲದ ನೆರವಿನ ಭರವಸೆ ಮೊದಲಾದ ಪ್ರಲೋಭನ ಜಾಲವನ್ನೊಡ್ಡಿ ಪ್ರತಿಕ್ರಾಂತಿ ಮನುಷ್ಯನ ಹಸಿವುಗಳನ್ನು ಕಟ್ಟರೆಯಾಗುವಷ್ಟುಮಟ್ಟಿಗೆ ತಣಿಸಬಹುದು; ಜೂಜುಗಾರರ ಹಸಿವನ್ನು ತಣಿಸಬಹುದು. ಹಾಗೆಯೇ ಆಡಂಬರದ ಮಟ್ಟದಲ್ಲಿ ಜನತೆಗೆ ವಿನೋದವನ್ನೂ, ಪ್ರಸ್ತುತ ಸಮಸ್ಯೆಗಳಿಂದ ಜನತೆಯ ಮನಸ್ಸನ್ನು ಅನ್ಯತ್ರ ತಿರುಗಿಸುವ ವಿಹಾರ ತಂತ್ರವನ್ನೂ ಒದಗಿಸಬಹುದು. ಕೊರತೆಯನ್ನು ಪೂರೈಸುವ ಈ ಅನುಗ್ರಹಗಳೆಲ್ಲ ಜನತೆಗೆ ಲಭ್ಯವಾಗಬೇಕಾದರೆ ಅದು ಯಥಾಸ್ಥಿತಿ ರಸಂಕ್ಷಣೆಯನ್ನು ವಿಧಾಯಕ ಮಾಡುವ ಪ್ರತಿಕ್ರಾಂತಿಯ ಉದ್ದೇಶಗಳಿಗೆ ವಿಧೇಯತೆಯಿಂದ ಒಡಂಬಡಲೇಬೇಕು.

ಪ್ರತಿಕ್ರಾಂತಿಕಾರರು ತಮ್ಮ ಭ್ರಷ್ಟಾಚಾರದ ಚಟುವಟಿಕೆಗಳನ್ನು ಹರಡಲು ಕ್ರಾಂತಿಯ ಅನನುಭವಿ ಯುವಕ ನಾಯಕರನ್ನು ಆಕರ್ಷಿಸಿ ಅವರ ಮೂಲಕ ತಮ್ಮ ಹೂಟಗಳನ್ನು ನಡಸುತ್ತಾರೆ. ಭದ್ರವಾದ ಒಳ್ಳೆಯ ಸಂಬಳವಿರುವ ಉದ್ಯೋಗಗಳನ್ನು ಈ ನಾಯಕರಿಗೆ ನೀಡುವುದು, ಕ್ರಮವಾಗಿ ಅವರನ್ನು ಮೇಲು ಮೇಲಿನ ಪದವಿಗಳಿಗೇರಿಸುವುದು, ದ್ರವ್ಯದಾನ–ಲಂಚ-ಉದ್ಯೋಗಾವಕಾಶಗಳ ದಾನ ಮೊದಲಾದ ಯುಕ್ತಿಗಳಿಂದ ತಮ್ಮ ಪ್ರಭಾವವಲಯಕ್ಕೆ ಬಂದವರ ಸ್ಥಾನಮಾನಗಳನ್ನು ಸಾಮಾಜಿಕ

ಪ್ರತಿಷ್ಠೆಯನ್ನೂ ಹೆಚ್ಚಿಸುವುದು – ಇವೆಲ್ಲ ಪ್ರತಿಕ್ರಾಂತಿಕಾರರು ಅನುಸರಿಸುವ ಭ್ರಷ್ಟಾಚಾರ ತಂತ್ರಗಳು

(5) ಪ್ರತಿಕ್ರಾಂತಿಯ ಅತ್ಯಂತ ಪ್ರಧಾನವಾದ ಮುಖ ಬೇಹುಗಾರಿಕೆ. ಈ ಶತಮಾನದ ಆದಿಯಲ್ಲಿ ಅಮೇರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ಬೇಹುಗಾರರನ್ನೂ ಬೇಹುಗಾರಿಕೆಯನ್ನೂ ಸಾಮಾನ್ಯವಾಗಿ ಅನಿಷ್ಟ ನೀತಿಯೆಂದು ಅವಜ್ಞೆಯಿಂದ ನೋಡ ಲಾಗುತ್ತಿತ್ತು. ಬೇಹುಗಾರಿಕೆ ನಡಸಬೇಕಾದ ಜೀವನ ಪರಿಸರವೂ ಆಗ್ಗ ಅಮೆರಿಕದಲ್ಲಿರ ಲಿಲ್ಲ. ಆದರೆ ಯೂರೋಪಿನಲ್ಲಿ ಬೇಹು ಚಟುವಟಿಕೆಗೆ ತುಂಬಾ ಅವಕಾಶವಿತ್ತು. ಅಲ್ಲಿಯ ಅರ್ಧಮರ್ಧ ಪ್ರಜಾಸತ್ತೆಗಳು, ಅಲ್ಲಿಯ ತೀವ್ರವಾದ ಕಕ್ಷಿಪ್ರತಿಕಕ್ಷಿಗಳು, ಅಲ್ಲಿಯ ಅಲ್ಪಸಂಖ್ಯಾಕ ಆಕ್ರಮಣಶೀಲ ಕಾಂತ್ರಿಕಾರರ ಚಲನವಲನಗಳು, ಇವೆಲ್ಲ ಅಲ್ಲಿ ಬೇಹುಗಾರಿಕೆ ನಡೆಯುವುದನ್ನು ಸ್ವಾಭಾವಿಕವಾದ, ನಿರೀಕ್ಷಿಸಬಹುದಾದ ಚಟುವಟಿ ಕೆಯೇ ಎನ್ನಿಸಿತ್ತು. ಆದರೆ ಅಮೆರಿಕದಂಥ ಪ್ರಜಾಸತ್ತಾತ್ಮಕ ಗಣರಾಜ್ಯದಲ್ಲಿ ಬೇಹು ಗಾರಿಕೆಯೆಂಬುದು ಅವಶ್ಯವಲ್ಲದ್ದೂ ಕಿರುಕುಳಕೊಡತಕ್ಕದ್ದೂ ಆದ ಮಧ್ಯಪ್ರವೇಶ ವೆಂದು ಪರಿಗಣಿಸಲಾಗಿತ್ತು.

ಈ ಹೊತ್ತು ಎಲ್ಲೆಲ್ಲೂ ಕ್ರಾಂತಿ ಚಟುವಟಿಕೆಗಳು ಹೆಚ್ಚಿಕೊಂಡ ಪರಿಣಾಮ ವಾಗಿ, ಶೀತಲ ಸಮರದ ವ್ಯಾಪ್ತಿಯೂ ಹೆಚ್ಚಿದ ಪರಿಣಾಮವಾಗಿ, ಪ್ರತಿಕ್ರಾಂತಿಯ ಚಟುವಟಿಕೆಗಳಿಗೆ ಭೂಗ್ರಹವ್ಯಾಪ್ತಿಯಾದ ಮಹಾವಕಾಶ ಒದಗಿತು. ಪ್ರತಿ ಕ್ರಾಂತಿಯ ವಿಸ್ತೃತ ಕಾರ್ಯಕಲಾಪಗಳಿಗೆ ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಪೋಷಣೆಯೂ ಶಸ್ತ್ರಾಸ್ತ್ರಗಳ ಸರಬರಾಜೂ ಸಂಘಟನ ಬಲವೂ ಒದಗಿದ್ದರಿಂದ ಬೇಹು ಗಾರರೂ ಬೇಹುಗಾರಿಕೆಯೂ ಅಮೆರಿಕದ ಜೀವನ ವಿಧಾನದ ಅವಿಭಾಜ್ಯವಾದ ಅಂಗ ವಾಗಿ ಬಿಟ್ಟಿದೆ. ಪ್ರಭುತ್ವದ ಗೂಢಚಾರ ಸಂಸ್ಥೆ [ಫೆಡರಲ್ ಬ್ಯೂರೋ ಆಫ್ ಇನ್ವೆ ಸ್ಟಿಗೇಷನ್] ಸ್ವದೇಶದಲ್ಲೆಲ್ಲ ತನ್ನ ಬೇಹುಗಾರಿಕೆಯ ಜಾಲವನ್ನು ಹರಡಿ, ಲಕ್ಷ ಲಕ್ಷಾಂತರ ವ್ಯಕ್ತಿ ಪ್ರಜೆಗಳ ಬಗ್ಗೆ ವಾಸ್ತವಾಂಶ, ಕಲ್ಪನಾಂಶ ಹಾಗೂ ಬೀದಿ ಮಾತು ಗಳ ಒಕ್ಕಣೆಯಲ್ಲಿ ದಸ್ತೈವಜುಗಳನ್ನು ನಿರ್ಮಾಣ ಮಾಡಿಕೊಳ್ಳುತ್ತಿದೆ. ಅಮೆರಿಕದ ಕೇಂದ್ರ ಬೇಹುಗಾರ ಸಂಸ್ಥೆ [ ಸೆಂಟ್ರಲ್ ಇಂಟೆಲಿಜೆನ್ಸ್ ಏಜೆನ್ಸಿ ] ಪರದೇಶಗಳಲ್ಲಿ ಇಣಿಕುನೋಟ ಹೊಂಚುನೋಟಗಳನ್ನು ಬೀರುತ್ತ, ಸಂಚುಗಳನ್ನೆಬ್ಬಿಸುತ್ತ ಪ್ರತಿ ಕ್ರಾಂತಿಯನ್ನು ಸಂಘಟಿಸುವ ನಿತ್ಯವ್ಯಾಪಾರದಲ್ಲಿ ತೊಡಗಿವೆ.

ಈ ಎರಡು ಬೇಹುಗಾರ ಸಂಸ್ಥೆಗಳು ಅಮೆರಿಕದ ಸಂಯುಕ್ತ [ ಫೆಡರಲ್ ] ಪ್ರಭುತ್ವದ ಸಾಕ್ಷಾತ್ ನಿರ್ದೇಶನದಲ್ಲಿ ಇರತಕ್ಕವು–"ಎಫ್.ಬಿ.ಐ"; "ಸಿ.ಐ.ಎ"– ಎಂಬ ಸಂಕ್ಷಿಪ್ತ ನಾಮಗಳಿಂದ ಇವು ಎಲ್ಲೆಲ್ಲೂ ವಿಖ್ಯಾತವಾಗಿವೆ. ಇವುಗಳ ಜೊತೆಗೆ ಅಮೆರಿಕದ ರಾಯಭಾರಿ ಕಚೇರಿಗಳ ಸಿಬ್ಬಂದಿಗಳೂ ಬೇಹುಗಾರಿಕೆಯ ಚಟುವಟಿಕೆ

ನಡಸುವ ಹೊಣೆಹೊತ್ತುಕೊಂಡಿವೆ. ಸೈನ್ಯದ ವಿವಿಧ ಖಾತೆಗಳಾದ ಭೂ-ಜಲ-ವಾಯು ಪಡೆಗಳೂ ತಂತಮ್ಮ ಗುಪ್ತಚಾರರನ್ನಟ್ಟುವ ಏರ್ಪಾಟನ್ನಿರಿಸಿಕೊಂಡಿವೆ. ರಾಷ್ಟ್ರದ ಶಾಸನ ಸಭೆಗಳಾದ ಕೆಳ-ಮನೆ ಪ್ರಜಾಪ್ರತಿನಿಧಿ ಸಭೆಯೂ [ಕಾಂಗ್ರೆಸ್] ಮತ್ತು ಮೇಲ್ಮನೆ ನ್ಯಾಯ ವಿಧಾಯಕ ಸಭೆಯೂ [ಸೆನೆಟ್] ಗೂಢಚಾರ ಸಮಿತಿಗಳನ್ನು ಪಡೆದಿವೆ. ಉದಾಹರಣೆಗೆ - ಅನಮೆರಿಕೀಯ ಚಟುವಟಿಕೆಗಳ ಅಧ್ಯಯನವನ್ನು ಕುರಿತದ್ದು - (Home Committee on un-American Activities). ಅಂಚೆ ಖಾತೆಯೂ ರಾಷ್ಟ್ರದ ಒಳ-ವರಮಾನದ ಇಲಾಖೆಯೂ (Internal Revenue) ಮತ್ತು ಹೊರದೇಶಗಳಿಂದ ಆಮದುಮಾಡಿಕೊಳ್ಳುವ ಸರಕುಗಳು ಮೇಲಣ ಸುಂಕದ ಕಟ್ಟೆಯೂ (Customs) ತನ್ನತನ್ನ ಬೇಹುಕಾರ ಪಡೆಯನ್ನು ಪಡೆದಿವೆ. ಅಂಚೆಕಚೇರಿಗಳೂ ಕಸ್ಟಮ್ಸ್ ಕಚೇರಿಗಳೂ ಫೆಡರಲ್ ಗುಪ್ತಚಾರ ಸಂಸ್ಥೆಯೂ ಅಮೆರಿಕಾ ದೇಶದೊಳಕ್ಕೆ ಬರುವ ಸಮಸ್ತ ಮುದ್ರಿತ ವಿಷಯಗಳ ಪತ್ರ ಭಾಂಗಿಗಳನ್ನೂ ತನಿಖೆಮಾಡಿ, ಅಮೆರಿಕದ ಪ್ರಜಾಗಮನಕ್ಕೆ ಅನುಪೇಕ್ಷಿತಗಳೆನಿಸುವ ಪ್ರಕಟನೆಗಳನ್ನು ಒಳಕ್ಕೆ ಬಿಡದೆ ತಡೆಯುತ್ತವೆ. ಅಂಚೆ ಕಚೇರಿಯ ವಿಶೇಷ ಜಾಗರೂಕತೆಯ ಏರ್ಪಾಟು ಇದು: ಅನುವರ್ತನೆಗೆ ಒಡಂಬಡದ ವ್ಯಕ್ತಿಮನುಷ್ಯರಿಗೆ ಬರುವ ಪತ್ರವ್ಯವಹಾರವನ್ನೆಲ್ಲ ಬಟವಾಡೆಗೆ ಮುಂಚೆ ತಡೆಹಿಡಿದು ತನಿಖೆಗೊಳಪಡಿಸುವುದು. ಅಮೆರಿಕದ ಬೇರೆಬೇರೆ ರಾಜ್ಯ ಸರಕಾರಗಳೂ ದೊಡ್ಡ ದೊಡ್ಡ ಪಟ್ಟಣಗಳ ಪೌರ ಸಭೆಗಳೂ ತಂತಮ್ಮ ಸ್ವತಂತ್ರ ಬೇಹುಕಾರ ಪಡೆಯನ್ನು ಪಡೆದಿರುತ್ತವೆ. ರಾಜ್ಯಶಾಸನ ಸಭೆಗಳು ಕೂಡ ತನಿಖಾ ಸಮಿತಿಗಳನ್ನು ಪೊಲೀಸು ಪಡೆಗಳನ್ನೂ ಇರಿಸಿಕೊಂಡ ಬೇಹು ನಡಸುತ್ತವೆ.

ಅಮೆರಿಕದ ಭಾರೀ ವಾಣಿಜ್ಯೋದ್ಯಮವೂ ಬೇಹುಗಾರಿಕೆಯ ಚಟುವಟಿಕೆಯ ಮುಖ್ಯಕೇಂದ್ರ ವಾಗಿದೆ. ದೊಡ್ಡ ಕಾರ್ಪೊರೇಷನ್ನುಗಳು ಬೇಹುಗಾರರ ದಳಗಳನ್ನಿರಿಸಿಕೊಂಡು, ಬೇಹುಗಾರರನ್ನೂ ಬೇಹುಗಾರಿಕೆಯ ಯಂತ್ರಸಂಧಾನಿಗಗನ್ನೂ ಕಾರ್ಖಾನೆಗಳ ವಿವಿಧ ಶಾಖೆಗಳಲ್ಲೂ ಕಚೇರಿಗಳಲ್ಲೂ, ಡೈರೆಕ್ಟರುಗಳ ಬೋರ್ಡ್ ಸಭಾಂಗಣಗಳಲ್ಲೂ ಹಂಚಿ ತಮಗೆ ಬೇಕಾದ ರಹಸ್ಯಗಳ ದಾಖಲೆಯನ್ನು ಪಡೆಯುತ್ತವೆ. ಸ್ವಲ್ಪ ಪ್ರಮಾಣದ ಉದ್ಯಮ ಗಳಿಗೆ ನೆರವಾಗಲು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಪತ್ತೇದಾರಿ ಸಂಸ್ಥೆಗಳು ಸಿದ್ಧವಾಗಿರುತ್ತವೆ. ಈ ಪತ್ತೇದಾರಿ ಸಂಸ್ಥೆಗಳು ಬೇಹುಕಲೆಯಲ್ಲಿ ನೈಪುಣ್ಯವುಳ್ಳವು, ಪ್ರತಿಕಕ್ಷಿಗಳ ಗುಟ್ಟನ್ನೆಲ್ಲ ತಿಳಿಸಿ ತಮ್ಮ ಕೃಷಿಗಾರಿಕೆಗೆ ಬೇಕಾದ ಸೇವೆಯನ್ನು ನೀಡತಕ್ಕವು. ‡ ಬೇಹುಗಾರಿಕೆಯನ್ನು ಒಂದುಮಾತಿನಲ್ಲಿ

‡ ವಿವರಗಳನ್ನು ವ್ಯಾನ್ಸ್ ಪಕಾಡ್ ಅವರ "ನಗ್ನ ಸಮಾಜ" (The Naked Society) ನ್ಯೂಯಾರ್ಕ್, ಡೆವಿಡ್ ಮೆಕ್ಕೇ ಪ್ರಕಾಶನ, 1964— ಈ ಪ್ರಕಟನೆಯಿಂದ ತಿಳಿದುಕೊಳ್ಳಬಹುದು.

ಸಮರ್ಥಿಸಿ ಕೊಳ್ಳುವುದುಂಟು. ಅದು "ರಕ್ಷಣೆ". ಬೇಹುಗಾರಿಕೆಯ ಏರ್ಪಾಟಿದ್ದರೆ ಮಾತ್ರ ಉದ್ಯಮಕ್ಕೆ ರಕ್ಷಣೆಯುಂಟಂತೆ! ಆದರೆ ಬೇಹುಗಾರಿಕೆಯ ಬಲೆ ಹರಡಿಕೊಂಡು ಹಾಸುಹೊಕ್ಕಾದಂತೆ ಅದು ಸಮಾಜದ ಪ್ರತಿಯೊಂದು ಮೂಲೆಯೊಳಕ್ಕೂ ಬಿಡದೆ ನುಗ್ಗಿ ಇಣಿಕಿನೋಡುತ್ತದೆ. ಗೋಪ್ಯಗಳೂ ಗುಟ್ಟುಗಳೂ ಪರವಶವಾಗುತ್ತವೆ. ಆಮೇಲೆ ಅರುಗು ಬಾಳಿಗೂ ಆಪ್ತವಿಚಾರಕ್ಕೂ ದಿಟವಾಗಿ ಸಂರಕ್ಷಣೆಯೇ ಇಲ್ಲದೆ ಹೋಗುತ್ತದೆ.

ಆಮೂಲಾಗ್ರಸುಧಾರಣಾವಾದಿ (ರ್‍ಯಾಡಿಕಲ್) ಗಳಿಗೆ ಅತ್ಯಂತ ಆತಂಕಕಾರಿಯಾದ ಪ್ರತಿಕ್ರಾಂತಿಕಾರರ ಚಟುವಟಿಕೆಗಳೆಂದರೆ ಅವರು ಬಳಸುವ ಹಿಂಸೆ ಮತ್ತು ಭಯೋತ್ಪಾದನೆ. ಈ ಶತಮಾನದ ಆದಿವರ್ಷಗಳಲ್ಲಿ ಪಾಶ್ಚಾತ್ಯ ಬುದ್ಧಿಜೀವಿಗಳು ಎರಡು ಪ್ರಮಾಣ ಶೂನ್ಯ ಭಾವನೆಗಳಿಗೆ – ಅಪರೀಕ್ಷಿತ ಊಹಾಪೋಹಗಳಿಗೆ – ತುಂಬ ಇಂಬುಗೊಡುತ್ತಿದ್ದರು. ಮೊದಲನೆಯದು: ಪಾಶ್ಚಾತ್ಯ ಮನುಷ್ಯನು ಇನ್ನೊಂದು ಸಾರ್ವತ್ರಿಕ ಸಮರಕ್ಕೆ ಒಪ್ಪಿಗೆ ಕೊಡಲಾರದಷ್ಟು ಸುಸಂಸ್ಕೃತನು ಎಂಬುದು. ಇನ್ನೊಂದು: ಪಶ್ಚಿಮವು ವಾಸ್ತವವಾಗಿ ವ್ಯಕ್ತಿ ಮನುಷ್ಯನ ಮೇಲೇರಿ ಕೈಮಾಡುವ ಅಭ್ಯಾಸವನ್ನೂ, ಶಾರೀರಕವಾಗಿ ಹಿಂಸಾಪ್ರಯೋಗ ಮಾಡುವ ಆಚಾರವನ್ನೂ ತೊರೆದಿದೆ ಎಂಬುದು. 1914ನೆಯ ಇಸವಿಯಾದಮೇಲೆ ನಡೆದ ಘಟನೆಗಳು ಒಂದಲ್ಲ ಎರಡು ಮಹಾಯುದ್ಧಗಳನ್ನು ಬರಮಾಡಿದ ಹಗರಣದಿಂದ ಈ ಎರಡು ಸ್ವೀಕೃತ ಭಾವನೆಗಳೂ ಸುಳ್ಳಾಗಿ ಧೂಳುಮುಕ್ಕಿವೆ.

1914ರಿಂದೀಚೆಗೆ ಹುಟ್ಟಿದವರು ಯಾರಿಗೂ ಈ ಕಾಲಾವಧಿಯಲ್ಲಿ ನಡೆದು ಬಂದ ಸಾಮಾಜಿಕ ಪರಿವರ್ತನೆಯನ್ನು ಕುರಿತ ಸಮಗ್ರ ದೃಷ್ಟಿ ಸುಲಭವಲ್ಲ. 1914ರಲ್ಲಿ ಮುಗಿದ ವಿಕ್ಟೋರಿಯಾ ರಾಣಿಯ ಯುಗದಲ್ಲಿ ಬ್ರಿಟಿಷರೂ ಜರ್ಮನರೂ ಫ್ರೆಂಚ್ ಜನರೂ ಇತರ ಪಾಶ್ಚಾತ್ಯ ದೇಶಜನರೂ ಸ್ಪಷ್ಟವೂ ಸ್ವತಸ್ಸಿದ್ಧವೂ ಆದ ಸಂಗತಿಯೆಂದು ನಂಬಿಕೊಂಡಿದ್ದ ನಂಬಿಕೆ ಒಂದು ಇತ್ತು. ಮಧ್ಯಯುಗದ ಮಟ್ಟಕ್ಕಿಂತ ಮೇಲಾಗಿ ಮನುಷ್ಯವರ್ಗ ಮುನ್ನಡೆದಿದೆ ಎಂಬುದು ಆ ನಂಬಿಕೆ. ಈ ಪ್ರಗತಿಯ ಚಿಹ್ನೆಯೆಂದರೆ ಮಾನವತಾವಾದ; ಮನುಷ್ಯತ್ವದಲ್ಲಿ ಘನತೆ ಗೌರವಬುದ್ಧಿಗಳು. "ಕಾಡುತನ" "ಬರ್ಬರತೆ" ಎಂದು ಮೊದಲಾದ ಕರ್ಕಶಸ್ವಭಾವವನ್ನು ಸೂಚಿಸುವ ಶಬ್ದಗಳನ್ನು ಇನ್ನು ಮನುಷ್ಯವರ್ಗಕ್ಕೆ ಅನ್ವಯಿಸುವಂತಿಲ್ಲ. ಜನ ಎದೆಯಾರ ತಮ್ಮ ಒರಟುತನವನ್ನು ತೊರೆದಿದ್ದಾರೆ. "ನಾಗರಿಕತೆ" "ಸಂಸ್ಕೃತಿ" ಎಂಬ ಶಬ್ದಗಳು ಅಂದು ಅರ್ಥಕೊಡುತ್ತಿದ್ದ ಬಗೆಯಲ್ಲಿ–ಜೀವನವಿಧಾನಕ್ಕೆ ಸಂಬಂಧಿಸಿದಂತೆ ಎಲ್ಲ ರೀತಿಯ ಸೂಕ್ಷ್ಮಚರ್ಯೆಗಳನ್ನೂ ಯಾರ ಒತ್ತಾಯವೂ ಇಲ್ಲದೆ ಜನ ತೊರೆದು ಸಭ್ಯರಾಗಿದ್ದಾರೆ. ನಂಬಿಕೆ ಹೀಗಿದ್ದರೂ ಯುದ್ಧ, ಕ್ರಾಂತಿ, ಪ್ರತಿಕ್ರಾಂತಿ ಮೊದಲಾದುವು–ನಾಗರಿಕತೆಯ ಯುಗಪೂರ್ವದ

ರಜತಜೀವನ ಯುಗದಲ್ಲಿ ಇದ್ದಕ್ಕಿದ್ದಂತೆ ಭಾರಿ ಪ್ರಮಾಣದಲ್ಲಿ ಹಿಂಸೆ ಭಯೋತ್ಪಾದನೆಗಳಿಗೆ ಮುಕ್ತದ್ವಾರಗಳನ್ನು ಮತ್ತೆ ತೆರೆದುವೆಂಬುದು ಸೋಜಿಗದ ಸಂಗತಿ.

ರಾಜಕೀಯ ಕ್ಷೇತ್ರದಲ್ಲಿ ಕ್ರಾಂತಿ ಪ್ರತಿಕ್ರಾಂತಿಗಳು ಶೀತಲ ಸಮರವೋ ಇಲ್ಲದಿದ್ದರೆ ಶಾಖ ಸಮರವೋ ಆಗಿ ಪರಿಣಮಿಸಿ ಸಾಗಿ, ನಂಟರು ನಂಟರ ಮೇಲೆ ಹಾಗು ನೆರೆಹೊರೆಯುವರ ಮೇಲೆ ಕಾದಾಡಿದ್ದುಂಟು. ಇಂಥ ಹೋರಾಟಗಳು ಪಾಡಿಕೆಯಂತೆ ಭೀಕರವೂ ರಕ್ತಪಾತಕ್ಕೆಡೆಕೊಟ್ಟವೂ ಆಗಿದ್ದುವು. ಇಂದಿನ ಕಾಲಮಾನದ ಘಟನೆಗಳು ಕೊಟ್ಟ ಅನುಭವದಂತೆ ಸಾಮಾಜಿಕ ಕ್ರಾಂತಿಯೂ ತದ್ವಿರುದ್ಧ ಪ್ರತಿಕ್ರಾಂತಿಯೂ ನಿಜವಾಗಿ ಅಂತಃಕಲಹದ ರೂಪವನ್ನೇ ತಳೆಯಿತು.

ಹತ್ತೊಂಬತ್ತನೆಯ ಶತಮಾನದ ಕೊನೆಯ ವರ್ಷಗಳು ಮುಗಿಯುತ್ತಿದ್ದಂತೆ ಐದು ಚಳವಳಿಗಳು ಪರಸ್ಪರ ಸಂಬದ್ಧವಾಗಿ ಸಮಾಂತರದಲ್ಲಿ ನಡೆದುವು. (1) ತಾಂತ್ರಿಕ ವಿಷಯಗಳಲ್ಲಿ ಕ್ರಾಂತಿ ಅಥವಾ ಮಹಾಪರಿವರ್ತನೆ; (2) ದಬ್ಬಾಳಿಕೆಗೂ ಸುಲಿಗೆಗೂ ಒಳಪಟ್ಟ ಅಧೀನ ಜನವರ್ಗ ಎಲ್ಲೆಲ್ಲೂ ದಂಗೆಯೆದ್ದು, ಆತ್ಮನಿರ್ಣಯದ ಹಕ್ಕನ್ನು ಮುಂದೊತ್ತಿ, ತಮ್ಮ ತಮ್ಮ ದೇಶಗಳಿಗೆ ನೂತನ ರಾಜ್ಯಾಂಗ ಶಾಸನವನ್ನು ತಂದುಕೊಳ್ಳಲು ಪ್ರಯತ್ನಿಸಿ, – ಪ್ರಜಾಪ್ರಾತಿನಿಧ್ಯ ಸ್ವರೂಪವದ್ದೋ ಪೂರ್ಣ ಪ್ರಜಾಸತ್ತಾತ್ಮಕವೋ ಆದ ಗಣರಾಜ್ಯಗಳನ್ನು ರಚಿಸಿಕೊಂಡದ್ದು; (3) ಸೈನಿಕ ಬಲವನ್ನು ಹೆಚ್ಚಿಸಿಕೊಂಡದ್ದು, ಮತ್ತು ಎರಡು ಮಹಾಯುದ್ಧಗಳನ್ನು ನಿರ್ವಾಹ ಮಾಡುವುದಕ್ಕೂ ಇಪ್ಪತ್ತು ಇಪ್ಪತ್ತೈದು ಸಣ್ಣ ಸಣ್ಣ ಯಾದವೀ ಕಲಹಗಳನ್ನು ನಿಭಾಯಿಸುವುದಕ್ಕೂ ಬೇಕಾದ ಶಸ್ತ್ರಾಸ್ತ್ರಗಳನ್ನು ಸಜ್ಜುಮಾಡಿಕೊಂಡದ್ದು; (4) ಆರ್ಥಿಕ ರಾಜಕೀಯ ಕಾರ್ಮಿಕ ಚಳವಳಿಗಳು ಬೆಳೆದು, ಈ ಬೆಳವಣಿಗೆಯ ಪರಮಾವಧಿಯ ಗುರುತಾಗಿ, ಯೋಜನಾಬದ್ಧ ಸಮತಾವಾದಿ ಸಮಾಜಗಳನ್ನು ಕಟ್ಟಿಕೊಂಡದ್ದು; ಮತ್ತು (5) ಸಾಮಾಜಿಕ ಪರಿವರ್ತನೆ ಮತ್ತು ತತ್ಸಂಬಂಧವಾದ ಇತಿಹಾಸದ ಪಾಠಕ್ಕೂ ತೀರ್ಪಿಗೂ ಬಾಗಿ ಒಡಂಬಡಲು ಬೂರ್ಜ್ವಾ ಜನವರ್ಗ ಸಾಮಾನ್ಯವಾಗಿ ಮೊಂಡುತನದಿಂದ ನಿರಾಕರಿಸಿದ್ದು. ಈ ನಿರಾಕರಣೆಯ ಪರಿಣಾಮ ಇದು:—

ಮಾನವತೆಯನ್ನು ಶೀತಲ ಸಮರದ ಬಿರುಸಿಗೂ ಅದರ ಫಲವಾಗಿ ಪ್ರಕಟವಾದ ಹಿಂಸೆ ಭಯೋತ್ಪಾದನೆಗಳಿಗೂ ಗುರಿಮಾಡಿ, ಸಮಾಜವಾದಕ್ಕೆ ಮಾತ್ರವಲ್ಲದೆ, ಪ್ರಜಾಸತ್ತಾತ್ಮಕ ಧ್ಯೇಯಗಳ ವಿಸ್ತರಣೆಗೂ ಪ್ರಯೋಗಕ್ಕೂ ವಿರೋಧವನ್ನು ಸಂಘಟಿಸುತ್ತ ಬಂದ ಬೃಹದ್ವಾಣಿಜ್ಯ ವರ್ಗವು ಅಮೆರಿಕದ ನೇತೃತ್ವದಲ್ಲಿ ತನ್ನ ಚಟುವಟಿಕೆಗಳನ್ನೇರಿಸಿ, ನಾಯಕನು ನಿರ್ದೇಶಮಾಡಿದ ಧೋರಣೆಯನ್ನು ಚಾಚೂ ತಪ್ಪದೆ ನಡಸಿಕೊಂಡು ಬಂತು.

ಕಳೆದ ಅರ್ಧಶತಮಾನದಲ್ಲಿ ಪ್ರತಿಕ್ರಾಂತಿಕಾರರು ನಡಸಿದ ಹಿಂಸೆ ಭಯೋತ್ಪಾದನೆಗಳ ಚಟುವಟಿಕೆಯಲ್ಲಿ, ಸಂಯುಕ್ತರಾಷ್ಟ್ರ ಸಂಸ್ಥೆ ಘೋಷಿಸಿರುವ ಪ್ರಸಿದ್ಧ ಪತ್ರಿಕೆಯಂತೆ, ಮಾನವತೆಗೆ ನ್ಯಾಯತಃ ಸಲ್ಲಬೇಕಾದ ಹಕ್ಕು ಬಾಧ್ಯತೆಗಳನ್ನು ವಿಧಿವತ್ತಾಗಿ ನಿರಾಕರಿಸುವ ಪ್ರಯತ್ನವನ್ನೂ ಸೇರಿಸಿಕೊಂಡು, ಆ ಚಟುವಟಿಕೆ ಪ್ರಪಂಚ ರಾಷ್ಟ್ರ ಸಂಸ್ಥೆಯ ಗಮನವನ್ನು ಸೆಳೆಯುವಷ್ಟು ಪ್ರಬಲಿಸಿತು. ಈ ಹಕ್ಕು ಬಾಧ್ಯತೆಗಳು ಯಾವುವೆಂದರೆ–ಚಲನವಲನ ಸ್ವಾತಂತ್ರ್ಯ, ಸಂಪರ್ಕ ಸಾಧನಗಳ ಬಳಕೆಗಿರುವ ಹಕ್ಕು ವಿವಾದಗಳ ಇತ್ಯರ್ಥಕ್ಕಾಗಿ ನಯನೀತಿಪೂರ್ವಕವಾದ ಸಂಧಾನ; ಸಾಮೂಹಿಕ ಕ್ರಿಯೆಗಳ ಮೂಲಕ ಸಂಘಟಿತವಾಗಿ ಸಾರ್ವಜನಿಕ ಶಾಂತಿ ಭದ್ರತೆಗಳನ್ನು ಕಲಕದೆ ಇರುವಷ್ಟು ಮಟ್ಟಿಗೆ, ಮತ್ತು ನೆಲೆಗೊಂಡಿರುವ ಪ್ರಭುತ್ವಗಳಿಗೆ ಅಪಾಯ ತಂದೊಡ್ಡದಿರುವಷ್ಟು ಮಟ್ಟಿಗೆ, ಒಂದು ಕ್ರಮದಲ್ಲಿ ವ್ಯಾಪಕವಾದ ಚಳವಳಿಗಳನ್ನು ನಡಸುವ ಬಾಧ್ಯತೆ ಪ್ರಜಾಗಣಕ್ಕೆ ಉಂಟು. ಪರಸ್ಪರ ಒಪ್ಪಿಕೆಯಂತೆ, ಗಂಭೀರವಾದ "ತುರ್ತು ಪರಿಸ್ಥಿತಿ" (ಎಮರ್ಜೆನ್ಸಿ) ಗಳಲ್ಲಿ ಈ ಪೌರ ಹಕ್ಕು ಬಾಧ್ಯತೆಗಳಲ್ಲಿ ಕೆಲವನ್ನಾದರೂ ಸಮಾಜಕಲ್ಯಾಣ ಸಾಧಕ ಕಾರ್ಯಕ್ರಮಗಳಿಗೆ ಎಡರಾಗದಂತೆ ಕೊಂಚಕಾಲಾವಧಿಯವರೆಗೆ ತಡೆಹಿಡಿದು ಗೌಣೀಕರಿಸುವುದು ಅವಶ್ಯವಾಗುತ್ತದೆ. ಆದರೆ ಪೌರ ಹಕ್ಕು ಬಾಧ್ಯತೆಗಳ ನಿರಾಕರಣೆ ಉಲ್ಲಂಘನೆಗಳು, ವಿಶೇಷವಾಗಿ ವಸಾಹತು ಮತ್ತು ಅಧೀನ ರಾಜ್ಯಗಳಲ್ಲಿ ಇಂದಿಗೂ ಸಹಜವೆಂಬಂತೆ ನಡೆಯುತ್ತ ಬಂದಿವೆ. ಈ ನಿರಾಕರಣೆಗಳು ವಸಾಹತು ಕ್ಷೇತ್ರಗಳಿಂದ ಮಹಾಸಾಮ್ರಾಜ್ಯಗಳ ಜನ್ಮಕ್ಷೇತ್ರಗಳಿಗೂ ಇಂದು ವ್ಯಾಪಿಸಿರುವುದು ನಿಜ.

ಪ್ರತಿಕ್ರಾಂತಿಯ ಉದ್ದೇಶ ಸಾಧನೆಗಾಗಿ ಅವಶ್ಯವಾದಾಗ ಪುಂಡುತನಕ್ಕಿಳಿಯುವ ಪಡೆಯನ್ನು ಕಟ್ಟಲು ಪ್ರೋತ್ಸಾಹವಿರುತ್ತದೆ. ಗುಂಪುಜನದ ಪೂರ್ವನಿಶ್ಚಿತ ಹಿಂಸಾಚರಣೆಗೂ ಬೆಂಬಲವಿರುತ್ತದೆ. ಅನೇಕ ವೇಳೆ ಪೋಲೀಸರೂ ಈ ಹಿಂಸಾಚಾರಗಳಿಗೆ ಕುಮ್ಮಕ್ಕಾಗಿರುವುದುಂಟು. ಪುಂಡರ ತಂಡಗಳು ತಮಗೆ ಅಧಿಕಾರವಿದೆಯೆಂದು ಹೇಳಿಕೊಳ್ಳದಿದ್ದರೂ ಮಾನವಹಕ್ಕು ಬಾಧ್ಯತೆಗಳನ್ನು ಉಲ್ಲಂಘಿಸಿ, ಸೊತ್ತುಗಳನ್ನು ಹಾಳು ಮಾಡಿ, ಜನಕ್ಕೆ ಪೆಟ್ಟುಗಳನ್ನು ಕೊಟ್ಟು ಹಾವಳಿ ನಡಸುತ್ತ ಕೆಲವು ವೇಳೆ ವಿರೋಧಿಗಳ ಪ್ರಾಣಗಳನ್ನೂ, ತಮ್ಮ ಆಕ್ರಮಣಕ್ಕೆ ಅಕಸ್ಮಾತ್ತಾಗಿ ಸಿಕ್ಕಿದವರ ಪ್ರಾಣಗಳನ್ನೂ, ಬಲಿ ತೆಗೆದುಕೊಳ್ಳುತ್ತವೆ.

ರಾಜಕೀಯ ವಿರೋಧಿಗಳು ಕಿರುಕುಳಗಳಿಗೆ ಸಿಕ್ಕಬೇಕು; ಮತ್ತು ಅಧಿಕಾರಿಗಳ ಕೋಪಕ್ಕೆ ಪಾತ್ರರಾಗಿ ನ್ಯಾಯಾಲಯಗಳಲ್ಲಿ ಮೊಕದ್ದಮೆಗಳನ್ನು ಎದುರಿಸಬೇಕು. ವಿರೋಧಿಗಳನ್ನು ದಸ್ತಗಿರಿಮಾಡಿ, ಅವರ ಮೇಲೆ ನಿರ್ದಿಷ್ಟವಾದ ಆಪಾದನೆಗಳನ್ನು ಹೊರಿಸದೆ ದೀರ್ಘಕಾಲಾವಧಿಗಳವರೆಗೆ ಸೆರೆಯಲ್ಲಿಡಲಾಗುತ್ತದೆ. ವಿಚಾರಣೆಗೂ ಗುರಿ

ಪಡಿಸದೆ ಕಾರಾಗೃಹದಲ್ಲಿರಿಸಿಕೊಳ್ಳುವುದೂ ವಾಡಿಕೆಯೇ. ಒಂದು ವೇಳೆ ಅವರನ್ನು ವಿಚಾರಣೆಗೆ ಗುರಿಮಾಡಿದರೆ ರಹಸ್ಯವಾದ ವಿಚಾರಣೆಗೆ ಏರ್ಪಾಟು ಮಾಡಿಕೊಳ್ಳುತ್ತಾರೆ. ನ್ಯಾಯ ವಿತರಣದ ತೆರವೇನೆಂದು ಅರಿತುಕೊಳ್ಳುವ ಕುತೂಹಲವುಳ್ಳ ಸಾರ್ವಜನಿಕರಿಗೂ ಪತ್ರಿಕಾಕರ್ತರಿಗೂ ಕೋರ್ಟುಗಳಿಗೆ ಪ್ರವೇಶಾವಕಾಶ ಕೊಡದೆ ಅವರನ್ನು ಬಹಿಷ್ಕರಿಸುವುದೂ ಉಂಟು. ಆಪಾದಿತರನ್ನು ದೀರ್ಘಾವಧಿಯ ಕಾರಾಗೃಹವಾಸದ ದಂಡನೆಗಳಿಗೆ ಒಳಪಡಿಸಲಾಗುತ್ತದೆ; ಮತ್ತು ಸೆರೆಮನೆಯ ನಿಯಮಗಳೋ ಮನುಷ್ಯಮಟ್ಟದವರಿಗೆ ಯೋಗ್ಯವಲ್ಲದಷ್ಟು ಕ್ರೂರವಾಗಿರುತ್ತವೆ. ಅನೇಕ ವೇಳೆ ರಾಜಕೀಯ ವಿರೋಧಿಗಳನ್ನು ಗುಂಡಿಟ್ಟು ಕೊಲ್ಲಲಾಗುತ್ತದೆ. ಶಾರೀರಕವಾಗಿಯೂ ಮಾನಸಿಕವಾಗಿಯೂ ಚಿತ್ರಹಿಂಸೆಕೊಟ್ಟು ಆಪಾದಿತರು ತಮ್ಮ ಅಪರಾಧವನ್ನು ಒಪ್ಪಿಕೊಳ್ಳಬೇಕೆಂದು ನಿರ್ಬಂಧಪಡಿಸುವುದೂ ಉಂಟು. ಜೊತೆಗಾರರ ಪತ್ತೆಸಾರಿರೆಂದು ಅಧಿಕಾರಿಗಳ ಒತ್ತಾಯಕ್ಕೂ ಆಪಾದಿತರು ಸಿಕ್ಕಬೇಕು.

ರಾಜಕೀಯ ಕೊಲೆಗಳೂ ಸರಕಾರಿ ಸಿಬ್ಬಂದಿ ಯಿಂದಲೋ ಆ ಹೀನೋದ್ದೇಶಕ್ಕೋಸ್ಕರ ನೇಮಕವಾದ ಖಾಸಗೀ ಜನದಿಂದಲೋ ನಡೆಯುತ್ತವೆ. ಇಂಥ ನಡವಳಿಕೆಗೆ ಪ್ರಭುತ್ವದ ಮನ್ನಣೆಯುಂಟು. ಈ ಕೊಲೆಗಳನ್ನು ರಾಜಕೀಯೋದ್ದೇಶಗಳಿಗೆ ಸಾಧನಗಳೆಂದು ಪರಿಗಣಿಸಲಾಗುತ್ತದೆ.

ಸಾಮೂಹಿಕವಾಗಿ ಜನದ ಕಗ್ಗೊಲೆಗಳೂ ಅಂಗಚ್ಛೇದಗಳೂ ಸೈನ್ಯದಿಂದಲೋ ಪೊಲೀಸು ದಳದಿಂದಲೋ ನಡೆಯುತ್ತವೆ ಶಸ್ತ್ರರಹಿತರಾದ ಜನದ ಗುಂಪುಗಳ ಮೇಲೆ ಗುಂಡು ಹಾರಿಸಲಾಗುತ್ತದೆ. ಗುಂಪಿನಲ್ಲಿ ಹೆಂಗಸರು ಮಕ್ಕಳಿದ್ದರೂ ಗೋಲಿಬಾರಿಗೆ ಅಡ್ಡಿಯೆನಿಸುವುದಿಲ್ಲ. ಪೆಟ್ರೋಗ್ರಾಡ್ ಹತ್ಯಾಕಾಂಡ, 1905 ರ ವಿಂಟರ್ ಪ್ಯಾಲೇಸ್ ಪ್ರಕರಣ, 1919ರಲ್ಲಿ ಬ್ರಿಟಿಷ್ ಅಧಿಕಾರಿಗಳಿಂದ ಆದ ಅಮೃತಸರದ ಜನತಾಹತ್ಯೆಯ ಪ್ರಕರಣ, ಮತ್ತು 1964–65 ರಲ್ಲಿ ಅಮೆರಿಕಾ ಸಂಯುಕ್ತ ಸ್ಥಾನಗಳ ದಕ್ಷಿಣದ ತುದಿಯಲ್ಲಿ ಶಸ್ತ್ರರಹಿತರಾದ ನೀಗ್ರೋಗಳ ಮೇಲೆ ದಾಳಿಮಾಡಿ ಲಾಠೀಪ್ರಹಾರಮಾಡಿದ್ದು, ಹಾಗೆಯೇ ಬಿಳಿಯ ಜನರ ಪ್ರದರ್ಶನ ನಡೆದದ್ದು—ಇವೆಲ್ಲ ಇಳೆಯಲ್ಲಿ ಅಲ್ಲಲ್ಲಿ ನಡೆದ ಹಿಂಸಾಕಾಂಡದ ಕೆಲವು ನಿದರ್ಶನಗಳು.

ಸಾಲುಸಾಲಾಗಿ ಅಲ್ಪಸಂಖ್ಯಾಕರ ವಧೆಯೂ ಆಗುತ್ತದೆ. ರಾಜಕೀಯ ವಿರೋಧಿಗಳೆಲ್ಲರ ಒಟ್ಟುನಾಶವೂ ಅಲ್ಪಸಂಖ್ಯಾಕ ಜನಾಂಗಗಳ ಸಾಲುಗೊಲೆಯೂ ನಡೆಯುತ್ತವೆ. ಬಯಲು ಸೆರೆ ಶಿಬಿರಗಳಲ್ಲಿ ಅರೆಹೊಟ್ಟೆಗೆ ಉಣಿಸುಪಡೆದು ಪಾಡು ಪಡಬೇಕು. ಅನಿಲಗೃಹಗಳಿಗೆ ದೂಡಲ್ಪಟ್ಟು ಉಸಿರುಕಟ್ಟಿ ಅಳಿಯಬೇಕು. ಈ ಹತ್ಯಾವಿಧಾನಗಳು ದಕ್ಷವೈಜ್ಞಾನಿಕಮಟ್ಟಕ್ಕೆ ಏರಿದ್ದು ಜರ್ಮನಿಯಲ್ಲಿ—ನಾಜಿಗಳ ನೇತೃತ್ವದಲ್ಲಿ. ಆಗ ಯೆಹೂದ್ಯಜನರೂ ಪೋಲೆಂಡಿನ ಪ್ರಜೆಗಳೂ ರಷ್ಯಾ ಯೂಗೋಸ್ಲೇ

ನಿಯಾ ದೇಶೀಯರೂ ಇತರ ವಿರೋಧಿ ಜನವರ್ಗವೂ ಮಿಲಿಯ (ಹತ್ತಾರುಲಕ್ಷ) ಸಂಖ್ಯೆಯಲ್ಲಿ ನಿರ್ನಾಮವಾದರು. ಹೀಗೆ ಬಲಿಬಿದ್ದವರಲ್ಲಿ ಹೆಂಗಸರೂ ಇದ್ದರು, ಗಂಡಸರೂ ಇದ್ದರು, ಮಕ್ಕಳೂ ಇದ್ದರು.

ಪೊಲೀಸು ಮತ್ತು ಮಿಲಿಟರಿ ಪಡೆಗಳಿಂದ ಅಲ್ಪಸಂಖ್ಯಾಕ ಜನರ ವಿರುದ್ಧ ಹಾವಳಿ, ದಬ್ಬಾಳಿಕೆ ನಡೆದುವು ; ಹಾಗೆಯೇ ರಾಜಕೀಯ ಪಕ್ಷಗಳೂ ಅನ್ಯಮತ ಪಂಥಗಳೂ ಕೇವಲ ರಾಜಕೀಯೋದ್ದೇಶದ ಗಡಿಗಳೊಳಗಡೆ ದಾಳಿ ಕಿರುಕುಳಗಳಿಗೆ ಸಿಕ್ಕಿದುವು. ರಷ್ಯಾ ದೇಶದ ಕ್ರಾಂತಿ ನಡೆದಮೇಲೆ, ಮಧ್ಯ ಹಾಗೂ ಪೂರ್ವ ಯೂರೋಪುದೇಶಗಳಲ್ಲಿಯೂ, ಸಮತಾವಾದ ವಿರೋಧಿ ಚಟುವಟಿಕೆಯೂ 1945 ನೆಯ ವರ್ಷಾನಂತರ ಕಾಮ್ಯುನಿಷ್ಟ್ ರಾಷ್ಟ್ರಗಳ ಮೇಲೆ ನಡೆದ ಶೀತಲ ಸಮರವೂ ಈ ದಾಳಿ ಕಿರುಕುಳಗಳಿಗೆ ನಿದರ್ಶನಗಳು. ಶೀತಲ ಸಮರ ಪ್ರಯೋಗಾರಂಭವಾದಮೇಲೆ ಅದರ ಚಾಲಕರಿಂದ ಚೋದಿತಗಳಾದ ಪುಂಡು ಜನರ ಹಿಂಸೆಗಳು ಮತ್ತು ಸಾರ್ವಜನಿಕರಲ್ಲಿ ಒಂದು ವರ್ಗದ ಮಧ್ಯಪ್ರವೇಶದ ಪಾತ್ರಗಳು ಜನಾಂಗಗಳ ವಿರುದ್ಧವೂ ಸ್ವಲ್ಪಸಂಖ್ಯಾಕ ಮತಧಾರ್ಮಿಕರ ವಿರುದ್ಧವೂ ಹೆಚ್ಚು ಹೆಚ್ಚಾಗಿ ನಡೆಯುತ್ತ ಬಂದದ್ದಕ್ಕೆ ದಕ್ಷಿಣ ಆಫ್ರಿಕಾ, ಇಂಡಿಯಾ ಮತ್ತು ಅಮೆರಿಕಾ ಸಂಯುಕ್ತ ಸಂಸ್ಥಾನಗಳು ನಿದರ್ಶನಗಳನ್ನೊದಗಿಸುತ್ತವೆ.

ರಾಜಕೀಯ ಕಾರಣಗಳಿಗೋಸ್ಕರ ಜನರನ್ನು ಗುಂಪುಗುಂಪಾಗಿ ಸ್ವದೇಶಗಳಿಂದ ಉಚ್ಚಾಟಿಸಿದ್ದು ಯುದ್ಧ ಪರಿಣಾಮಗಳಲ್ಲೊಂದು. ರಾಜಕೀಯದ ಉದ್ದೇಶಗಳನ್ನು ನೆರವೇರಿಸಿಕೊಳ್ಳಲು ಈ ಮನುಷ್ಯಘಾತಕ ಪಾತಕವನ್ನು ನಡಸಲಾಯಿತು.

1910 ರಿಂದೀಚೆಗೆ ಇಡಿಯ ಅರ್ಧಶತಮಾನದ ಅವಧಿಯಲ್ಲಿ ಅನಧಿಕೃತವಾಗಿಯೂ ಅಧಿಕೃತವಾಗಿಯೂ ನಡಸಲಾದ ಹಿಂಸೆ ಭಯೋತ್ಪಾದನೆಗಳು—"ಮನುಷ್ಯನ ಮೇಲೆ ಮನುಷ್ಯನು ನಡಸಿದ ಅಮಾನುಷವರ್ತನೆ"ಯ ಸೂಚನೆಯಾಗಿ, ಭೂಮಂಡಲದ ಅಂದವನ್ನು ಕೆಡಿಸಿ, ಮಾನವತೆ ಪಡೆದ ಗಾಯದ ಗುರುತುಗಳನ್ನು ಸಾರಿಹೇಳುವ ಇತಿಹಾಸ ಸಾಕ್ಷ್ಯಗಳಾಗಿ ಉಳಿದುಬಿಟ್ಟಿವೆ.

ಆಮೂಲಾಗ್ರ ಸುಧಾರಕನು (ರ್‍ಯಾಡಿಕಲ್) ಈ ಇಡಿಯ ಕಾಲಮಾನದ ಮನುಷ್ಯ ಚಾರಿತ್ರ್ಯವನ್ನು ಜುಗುಪ್ಸಾಕರ, ಅಸಹ್ಯ, ಹೇಯ, ಭೀತಿಜನಕ, ಅಸಮರ್ಥನೀಯ, ನೀತಿವಿಲಯನ ಸೂಚಕ ಎಂದೂ, ಅನೀತಿ ಅಧರ್ಮಗಳ ಉದ್ದೇಶದಿಂದ ಪ್ರೇರಿತರಾದ ಜನರು ಯುಕ್ತಾಯುಕ್ತ ವಿವೇಕಶೂನ್ಯರಾಗಿ ನಡಸಿದ ಕೇವಲ ಅನುಚಿತವರ್ತನೆ ಎಂದೂ ವರ್ಣಿಸಬೇಕು. ‡

---

‡ ಕಳೆದ ಅರ್ಧ ಶತಮಾನಗಳ ಅವಧಿಯಲ್ಲಿ ಮನುಷ್ಯವರ್ಗ ಹಿಂಸೆ ಭಯೋತ್ಪಾದನೆಗಳನ್ನು, ಪ್ರಾಚೀನಕಾಲದ ಅನಾರ್ಯ ಪಾಶವೀವರ್ತನೆಯೆಂಬಷ್ಟು ಕೆಟ್ಟ

## ಅಂತರ ರಾಷ್ಟ್ರೀಯ ಸಾಮ್ರಾಜ್ಯವಾದಿ ಪ್ರಭುತ್ವಗಳ ಪಿತೂರಿ

ಕ್ರಾಂತಿ ನೆರವೇರಿದಾಗ, ಅದು ವಿದ್ಯಮಾನ ಸಾಮಾಜಿಕ ಸಂಬಂಧಗಳನ್ನು ಮುರಿದು, ಕೆಲವು ವ್ಯಕ್ತಿಮನುಷ್ಯರಿಗೂ ಜನಸಮುದಾಯಗಳಿಗೂ ಕೆಲವು ಜನವರ್ಗಗಳಿಗೂ ಲಾಭದಾಯಕವಾಗುತ್ತದೆ. ಕ್ರಾಂತಿಪೂರ್ವಕಾಲೀನ ಸಾಮಾಜಿಕವ್ಯವಸ್ಥೆಯಲ್ಲಿ ಅಧಿಕಾರದಲ್ಲಿದ್ದವರಿಗೆ ಸೊತ್ತು, ವಿಶೇಷ ಸೌಲಭ್ಯ ಮತ್ತು ಶಕ್ತಿ ಪ್ರಭಾವಗಳ ನಷ್ಟವಾಗುತ್ತದೆ. ಹೀಗೆ ನೇರವಾಗಿ ನಷ್ಟಪಟ್ಟವರು, ಕ್ರಾಂತಿಯ ಆಕ್ರಮಣಕ್ಕೆ ಗುರಿಯಾದವರು, ಹಳೆಯ ಸಮಾಜ ತಮಗೆ ಖಾತರಿಪಡಿಸಿದ್ದ "ಹಕ್ಕು" ಗಳನ್ನು ಕಳೆದುಕೊಂಡವರು-ಎಲ್ಲರೂ ಪ್ರತಿಭಟಿಸುತ್ತ, ಮರಳಿ ಸಂಘಟನೆಗೆ ಮನಸ್ಸುಕೊಟ್ಟು, ನಷ್ಟವಾದದ್ದನ್ನೆಲ್ಲ ಪುನಸ್ಸಂಪಾದಿಸಿಕೊಳ್ಳಲು ಶತ ಪ್ರಯತ್ನಮಾಡುತ್ತಾರೆ. ಇಂಥ ಪ್ರಯತ್ನಗಳಿಗೇ ಪ್ರತಿ-ಕ್ರಾಂತಿ ಎಂಬ ಹೆಸರು ಸಲ್ಲುತ್ತದೆ.

ಕಳೆದ ಅರ್ಧಶತಮಾನದ ಅವಧಿಯಲ್ಲಿ ಕ್ರಾಂತಿ ಭೂಗ್ರಹವ್ಯಾಪಿಯಾಗಿ ನಡೆದು, ತನಗೆ ಪ್ರತಿಕಕ್ಷಿಯಾಗಿ ಎಲ್ಲೆಲ್ಲೂ ಪ್ರತಿ-ಕ್ರಾಂತಿಯನ್ನು ಚೋದಿಸಿತಲ್ಲದೆ, ಪ್ರಕಟವಾದಾಗ ಆ ಪ್ರತಿಕ್ರಾಂತಿಯನ್ನು ಎದುರಿಸಲು ಸಿದ್ಧವಾಯಿತು. ಒಂದೊಂದು ದೇಶದಲ್ಲಿ ನಡೆಯುವ ಕ್ರಾಂತಿಯೂ ಪ್ರತಿಕ್ರಾಂತಿಗೆ ದಾರಿ ಮಾಡಲೇ ಮಾಡುತ್ತದೆ.

---

ಮಟ್ಟದಲ್ಲಿ, ಬೆಳಸಿತೆಂಬ ಆಪಾದನೆಗೆ ರಾಶಿರಾಶಿಯಾಗಿ ಸಮರ್ಥನೆಕೊಡುವ ಕರಾಳ ಸಾಕ್ಷ್ಯಗಳ ಪಕ್ಕದಲ್ಲಿ ನಾವು ಮನುಷ್ಯ ಚಾರಿತ್ರದ ಇನ್ನೊಂದು ಆರ್ಯೋಚಿತ ಸುಸಂಸ್ಕೃತ ಮುಖವು ಅದೇ ಯುದ್ಧ ಹಾಗೂ ಕ್ರಾಂತಿಕಾಲದಲ್ಲಿ ಪ್ರಕಟವಾಯಿತೆಂಬುದನ್ನು ಗಮನಿಸಿ, ಪಶುಬಲದ ಉಗ್ರತೆಯನ್ನು ಸ್ವಲ್ಪವಾದರೂ ಸಹ್ಯವಾಗಿ ಮಾಡಿಕೊಳ್ಳಬಹುದಾಗಿದೆ. ಹಿಂಸೆಯ ಪಕ್ಕದಲ್ಲಿ ಅದನ್ನು ಎದುರಿಸಿದ ಅಹಿಂಸಾತ್ಮಕ ಭವ್ಯ ಮುಖವದು, ಈ ಹೊಸ ಬಗೆಯ ಕಾರ್ಯಕ್ರಮವೊಂದು ಅಲ್ಲಲ್ಲಿ ತಲೆಯೆತ್ತಿ ಚಳವಳಿಯ ಮಟ್ಟದಲ್ಲಿ ನಡೆದದ್ದು ನಮಗೆ ಅಪೂರ್ವವೆನ್ನಿಸುವ ಮಾನವೋಚಿತ ಗುಣವಾಗಿ ಪ್ರಕಟವಾಯಿತು.

ಪ್ರಾಣವಿತ್ತಗಳ ವಿನಾಶಕ್ಕೋಸ್ಕರ ಸರಕಾರಗಳು ಕಟ್ಟಿಕೊಂಡ ವಿಸ್ತಾರವಾದ ಸೈನಿಕಯಂತ್ರಗಳ ನಡುವೆ, ಗಡಿಯೊಳಗಿನಿಂದ ಗಡಿಯಾಚೆಯವರೆಗೆ, ವ್ಯಕ್ತಿ ಮನುಷ್ಯರ ಧರ್ಮೇಂದ್ರಿಯದ ಪ್ರತಿಭಟನೆ ಯುದ್ಧ ಹಿಂಸೆಗಳ ವಿರುದ್ಧವಾಗಿ ಅಭಿವ್ಯಕ್ತವಾಯಿತು. ಹೀಗೆ ವಿರೋಧ ಮಾಡಿದವರಲ್ಲಿ ಕೆಲವರನ್ನು ಸಹಸಾ ಗುಂಡಿಕ್ಕಿ ಕೊಲ್ಲಲಾಯಿತು. ಆದರೆ ಪಾಪಕ್ಕೆ ವಿರುದ್ಧ ಧರ್ಮೇಂದ್ರಿಯದ ಪ್ರತಿಭಟನೆಯು ಚಳವಳಿಯಾಗಿ ಬೆಳೆದು, ಯುದ್ಧ ಸಿದ್ಧತೆಯಲ್ಲಿದ್ದ ದೇಶಗಳಿಗೂ ವ್ಯಾಪಿಸಿತು.

ಸ್ಥಾನಭ್ರಷ್ಟರು ತಮಗೆ ಅಸ್ಥಿರವಾಗಿ ತಪ್ಪಿಹೋದ ಅಧಿಕಾರ ಪದವಿಗಳನ್ನು ಮರಳಿ ಗಳಿಸಲು ಹೆಣಗುತ್ತಾರೆ. ಪ್ರತಿಕ್ರಾಂತಿಯ ಆಶ್ರಯದಲ್ಲಿ ಸಾಮಾನ್ಯವಾಗಿ ನಡೆಯುವ ಘಟನೆಗಳ ಪರಂಪರೆ ಇದು: ಹಸ್ತಾಂತರವಾದದ್ದರ ಪುನರ್ಗ್ರಹಣಕ್ಕಾಗಿ ನಡಸುವ ಪ್ರಯತ್ನವು ನೆರೆನಾಡುಗಳಲ್ಲಿಯ ಶ್ರೀಮಂತರನ್ನೂ ವಿಶೇಷ ಸೌಲಭ್ಯವುಳ್ಳ ಆಢ್ಯರನ್ನೂ ಆಶ್ರಯಿಸಿ, ಅವರು ಕೊಡುವ ಸಹಾಯೋಪಪತ್ತಿಗಳಿಂದ ಕ್ರಾಂತಿಕಾರರ ಮೇಲೆ ಕೈಮಾಡುತ್ತದೆ. ಎಲ್ಲಿ ಕ್ಷೋಭೆ ವ್ಯಾಪಕವಾಗಿ ಹರಡಿ ಕುಮುಲುತ್ತಿದೆಯೋ ಅಲ್ಲಿಯ ಪ್ರಭುಶಕ್ತಿಗಳು ಕ್ರಾಂತಿ ನಡೆಯುತ್ತಿರುವ ಪ್ರದೇಶಕ್ಕೆ ಮುತ್ತಿಗೆಹಾಕಿ, ಪ್ರಭುತ್ವದ ಮಿತ್ರವರ್ಗಕ್ಕೆ ಎಲ್ಲೆಲ್ಲಿ ಯಾವಯಾವುದು ನಷ್ಟವಾಗಿದೆಯೋ ಅಲ್ಲಲ್ಲಿ ಅವನ್ನವರಿಗೆ ಮರಳಿ ಗಳಿಸಿಕೊಡಲು ತಕ್ಕ ಪ್ರತೀಕಾರೋಪಾಯಗಳನ್ನು ಕೈಕೊಂಡು, ಕ್ರಾಂತಿ ಪ್ರಯತ್ನಗಳನ್ನು ಮುರಿದು ಅಣಗಿಸುತ್ತಾರೆ.

---

"ಶತ್ರು" ಸಮಕ್ಷದಲ್ಲಿ ಸೆಟೆದುನಿಂತು ಕರ್ತವ್ಯಪಾಲನೆ ಮಾಡುವುದಿಲ್ಲವೆಂದು ವಿಶಾಲಜನತೆ ನಿರಾಕರಿಸಿತು. 1917 ರ ಅಕ್ಟೋಬರ್ ಕ್ರಾಂತಿ ಗಳಿಸಿದ ಗೆಲುವಿಗೆ ಸ್ವಲ್ಪಕಾಲ ಹಿಂದೆ ರಷ್ಯದ ಭಾರೀ ಸೇನಾವ್ಯೂಹಗಳಲ್ಲಿ ಒಡಕುಂಟಾಗಿ, ಪರಿಸ್ಥಿತಿ ಕೈಮೀರಿದ್ದನ್ನು ಅದು ಸೂಚಿಸಿತು. 1914-18 ರ ಯುದ್ಧ ಕಾಲದಲ್ಲಿ ಮುಂಚೂಣಿಯಲ್ಲಿದ್ದ ಸೈನಿಕರು ವಿರೋಧಿಗಳೊಡನೆ ಸಖ್ಯಭಾವದಿಂದ ನಡೆದುಕೊಳ್ಳಲು, ತಮಗೆ ವಾಡಿಕೆಯಾಗಿದ್ದ ಸೈನಿಕ ಶಿಸ್ತನ್ನು ಸಡಲಿಸಿದರು. ಇದರಿಂದ ಸಮರ ನಿರ್ವಾಹ ದಕ್ಷತೆ ಕುಸಿದು ಬೀಳುವ ಅಪಾಯದ ಸೂಚನೆ ಹೊರಟು ಪ್ರಭುತ್ವಗಳಿಗೆ ಆತಂಕವಾಯಿತು. ಜನತೆಯ ಕೈಗೆ ಶಸ್ತ್ರಾಸ್ತ್ರಗಳು ಬಂದುವು; ಯಾದವೀ ಕಲಹಗಳು ಕೈಗಟ್ಟಿದುವು. ಆದರೆ ಜನತೆಗೆ ಯುದ್ಧದಲ್ಲಿ ಆದರೋತ್ಸಾಹಗಳು ಇಂಗಿದುವು. ಬೇಗ ಅವರು ಭೂವ್ಯವಸಾಯಕ್ಕೂ ಯಂತ್ರೋದ್ಯಮಕ್ಕೂ ತಿರುಗಿ, ವಿನಾಶಕಾರ್ಯಕ್ಕಿಂತ ವಸ್ತೂತ್ಪಾದನೆಯಲ್ಲಿ ಆದರೋತ್ಸಾಹಗಳನ್ನು ತೋರಿಸಿದರು. ಈ ಒಂದು ಶುಭಪ್ರತಿಕ್ರಿಯೆ ಚೀಣದ ಜನತಾ ವಿಮೋಚನ ಸೇನೆಗಳ ವಿಷಯದಲ್ಲಿ ಹೆಚ್ಚು ಗಮನಾರ್ಹವಾದ ಸಂಗತಿಯಾಯಿತು. ಸುತ್ತಮುತ್ತಣಿಂದ ಮಹಾಸೈನಿಕಶಕ್ತಿ ಕವಿಯುತ್ತಿದ್ದರೂ ಅಹಿಂಸಾತ್ಮಕವಾಗಿ ಕಾರ್ಯಾಚರಣೆ ನಡೆದ ಹಲವು ದೇಶೀಯ ಘಟನೆಗಳಲ್ಲಿ ಮೋಹನದಾಸ್ ಗಾಂಧಿ ಭಾರತೀಯರ ನಡುವೆ ದಕ್ಷಿಣ ಆಫ್ರಿಕಾ ದೇಶದಲ್ಲೂ, ತಮ್ಮ ತಾಯ್ನಾಡಾದ ಭರತಖಂಡ (ಇಂಡಿಯ) ದಲ್ಲಿಯೂ ನಡಸಿದ ಚಳವಳಿಗಳು ಪ್ರಾಧಾನ್ಯ ಪಡೆದುವು.

ಸೈನ್ಯದ ಚಟುವಟಿಕೆಗಳಿಗೆ ಎಡೆಗೊಡದಿರಲು ಜನತೆ ನಡಸಿದ ಅಸಹಕಾರ ಚಳವಳಿಗಳು ಅಹಿಂಸಾತ್ಮಕ ಕಾರ್ಯಾಚರಣೆಯ ಇತ್ತೀಚಿನ ಉದಾಹರಣೆಗಳು. ಜಪಾನ್ ದೇಶವನ್ನು ಆಕ್ರಮಿಸಿಕೊಂಡು ಆಳಲು ಸೈನಿಕ ಠಾಣ್ಯ ಹಾಕಿದ ಅಮೆರಿಕಾ

ಮೆಕ್ಸಿಕೋ ದೇಶದ 1910 ರ ಕ್ರಾಂತಿ, ಚೀಣಾದೇಶದಲ್ಲಿ ನಡೆದ 1911 ರ ಕ್ರಾಂತಿ, 1917 ರಲ್ಲಿ ರಷ್ಯಾದೇಶದಲ್ಲಿ ನಡೆದ ಕ್ರಾಂತಿ – ಇವೆಲ್ಲವೂ ಆಯಾದೇಶಗಳಲ್ಲಿ ಪ್ರತಿಕ್ರಾಂತಿಗಳಿಗೆ ಅವಕಾಶ ಕೊಟ್ಟುವು. ಈ ಪ್ರತಿಕ್ರಾಂತಿಗಳು ನಡಸಿದ ಪ್ರತೀಕಾರ ಪ್ರಯತ್ನಗಳಲ್ಲಿ ಸಾಮ್ರಾಜ್ಯವಾದಿ ದೇಶ ಸೈನ್ಯಗಳು ತಲೆಹಾಕಿ ಹಾವಳಿ ನಡಸಿದುವು. 1945 ರಲ್ಲಿ ಯುದ್ಧ ಮುಗಿದಮೇಲೆ, ವಸಾಹತುಗಳ ಮತ್ತು ಅಧೀನ ರಾಜ್ಯಗಳ ಜನ ತಮ್ಮ ಸಾಮ್ರಾಜ್ಯ ಪ್ರಭುಗಳ ಮೇಲೆ ದಂಗೆಯೆದ್ದಾಗ, ಪ್ರತಿಕ್ರಾಂತಿಯ ಪ್ರತಿಕಾರಾಚರಣೆಗಳನ್ನು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಸಂಘಟಿಸಲಾಯಿತು. ಈ ಸಾಮ್ರಾಜ್ಯ ಪ್ರಭುವರ್ಗ ಮಿತ್ರರಾಷ್ಟ್ರಗಳನ್ನೂ ಎತ್ತಿಕಟ್ಟಿ ಅವುಗಳ ಸೈನ್ಯಬಲವನ್ನು ಪ್ರತಿಕ್ರಾಂತಿಯ ಉದ್ದೇಶಗಳಿಗೋಸ್ಕರ ರಷ್ಯಕ್ಕೆ ಅಲ್ಲಿಯ ಕ್ರಾಂತ್ಯುತ್ತರ ಕಾಲದಲ್ಲಿ ಕಳಿಸಿದ್ದಲ್ಲದೆ, ರಷ್ಯದ ಪ್ರಭಾವ ವಿಸ್ತರಣವನ್ನು ತಡೆಯಲು ಪ್ರತಿಕ್ರಾಂತಿಯ ವಿವಿಧ ತಂತ್ರಗಳನ್ನು ಪ್ರಯೋಗಿಸುತ್ತ ಸಾಗಿ, ಕಡೆಗೆ ತಮ್ಮ ಯೋಜನೆಗೆ ಸಂಯುಕ್ತ ರಾಷ್ಟ್ರಸಂಸ್ಥೆಯ ನೇತೃತ್ವವನ್ನೂ ಮಾರ್ಗದರ್ಶನವನ್ನೂ ಪಡೆಯಲು ಅಣಿಯಾದುವು. ಈ ಯೋಜನೆ

---

ಸಂಯುಕ್ತಸಂಸ್ಥಾನ ಸೇನಾಬಲದ ವಿರುದ್ಧ ಜಪಾನಿಗಳು ಜನತೆಯನ್ನು ಕಟ್ಟಿ ಪ್ರತಿಭಟಿಸಿದರು. "ಪೊಲಾರಿಸ್ ಮಿಸ್ಸೈಲ್ಸ್" ಕ್ಷಿಪಣಿಗಳ ಸ್ಥಾಪನೆಯನ್ನು ವಿರೋಧಿಸಿ ಬ್ರಿಟನ್ನಿನ ವಿರುದ್ಧ ಪ್ರಕಟವಾದ ಪ್ರದರ್ಶನ; ಅಮೆರಿಕದ ಜನತೆ ತನ್ನ ಪ್ರಭುತ್ವವು ವಿಷಾಣುಕ್ರಿಮಿಗಳ ಪ್ರಯೋಗ ಹಾಗೂ ರಾಸಾಯನಿಕ ದ್ರವ ಸೇಚನೆಯ ಸಮರ ತಂತ್ರವನ್ನು ಕೈಕೊಳ್ಳಕೂಡದೆಂದು ಸಾರುತ್ತ ಜನತಾ ಪ್ರದರ್ಶನವನ್ನು ಏರ್ಪಡಿಸಿ ಪ್ರಭುತ್ವವನ್ನು ಎಚ್ಚರಿಸಿದ್ದು; ಬಿಳಿಯರಿಂದ ಕಪ್ಪು ಜನಾಂಗವನ್ನು ಪ್ರತ್ಯೇಕಿಸುವ, ಮತ್ತು ಅವರಿಗಾಗಿಯೇ ಅರುಗಾದ ಬೇರೆ ನೆಲೆಯನ್ನು ತೋರಿಸುವ, ಬಿಳಿಯರ ರಾಜಕೀಯ ಭೇದನೀತಿಯನ್ನು ವಿರೋಧಿಸಿ ದಕ್ಷಿಣ ಆಫ್ರಿಕದಲ್ಲಿ ವ್ಯಕ್ತವಾದ ಸ್ಥಳೀಯ ಜನ ಪ್ರದರ್ಶನ; ಅಮೆರಿಕದ ದಕ್ಷಿಣ ತುದಿಯಲ್ಲಿ ವರ್ಣ ಭೇದ ನೀತಿಯನ್ನು ಪ್ರತಿಭಟಿಸಿ ಏರ್ಪಡಿಸಿದ ಭಾರೀ ಜನಪ್ರದರ್ಶನ; ಇವೆಲ್ಲ ಅಹಿಂಸಾತ್ಮಕ ಪ್ರತಿಭಟನೆಗೆ ಗಮನಾರ್ಹವಾದ ನಿದರ್ಶನಗಳು.

ಕಳೆದ ಅರ್ಧಶತಮಾನದಲ್ಲಿ ಪ್ರಗತಿಪರ ಧ್ಯೇಯವುಳ್ಳ ವಿದ್ಯಾರ್ಥಿ ಸಮುದಾಯಗಳು ಅಡಿಗಡಿಗೆ ನಡಸಿದ ಪ್ರದರ್ಶನಗಳನ್ನೂ ಅಹಿಂಸಾತ್ಮಕ ಪ್ರತಿಭಟನೆಗೆ ಉದಾಹರಣೆಗಳನ್ನಾಗಿ ಎತ್ತಿಕೊಳ್ಳಬೇಕು. ಈ ವಿದ್ಯಾರ್ಥಿ ಪ್ರದರ್ಶನಗಳು ಜಪಾನ್, ದಕ್ಷಿಣ ಕೊರಿಯಾ, ದಕ್ಷಿಣ ವಿಯತ್ನಾಂ, ತುರ್ಕಿ, ಈಜಿಪ್ಟ ದೇಶಗಳಲ್ಲಿ ನಡೆದುವು. ಈ ಮೇಲ್ಪಂಕ್ತಿಯನ್ನನುಸರಿಸಿ ಪಶ್ಚಿಮಾರ್ಧಗೋಳದಲ್ಲಿ ವಿದ್ಯಾರ್ಥಿಗಳು ಈಗ ಪ್ರತಿಭಟನೆಗೆ ಜಮಾಯಿಸುತ್ತಿದ್ದಾರೆ.

ವಿಫಲವಾದಾಗ, ಯೂರೋಪಿನಲ್ಲಿ "ನ್ಯಾಟೋ" (North Atlantic Treaty Organization) ಎಂಬ ಸೈನ್ಯಸಹಾಯದ ಏರ್ಪಾಟುಳ್ಳ ಮಿಲಿಟರಿ ಒಕ್ಕೂಟವನ್ನು ರಚಿಸಿಕೊಂಡಿತು. ಈ ನ್ಯಾಟೋ ಸಂಸ್ಥೆಯಲ್ಲಿ ಹತ್ತೊಂಬತ್ತನೆಯ ಶತಮಾನದ ಎಲ್ಲ ಸಾಮ್ರಾಜ್ಯ ಪ್ರತಿನಿಧಿಗಳೂ ಆಹ್ವಾನಿತವಾಗಿ ಸೇರಿ ಸಂಚುಕೂಟದ ಸದಸ್ಯ ಸಂಪತ್ತನ್ನು ಹೆಚ್ಚಿಸಿದರು. ಯೂರೋಪ್, ಏಷ್ಯಾ, ಲ್ಯಾಟಿನ್ (ದಕ್ಷಿಣ) ಅಮೇರಿಕಾ ಖಂಡಗಳಲ್ಲಿ ಎಲ್ಲೆಲ್ಲಿ ಕ್ರಾಂತ್ಯುದ್ದೇಶನಿಷ್ಠ ಆಡಳಿತಗಳು ಅಸ್ತಿತ್ವಕ್ಕೆ ಬಂದಿದ್ದುವೋ ಅಲ್ಲಲ್ಲಿಗೇ ಆ ಆಡಳಿತಗಳ ಪ್ರಭಾವವನ್ನು ಮಿತಿಪಡಿಸುವುದಲ್ಲದೆ, ಅವುಗಳೊಡನೆ ಹೋರಾಡುತ್ತ ಕಡೆಗೆ ಅವನ್ನು ಮೂಲೋತ್ಪಾಟನ ಮಾಡುವುದು ಈ ನ್ಯಾಟೋ ಸಂಸ್ಥೆಯ ಘೋಷಿತ ಧೋರಣೆ.

ನ್ಯಾಟೋ ಸಂಸ್ಥೆಯ ಪ್ರಧಾನ ಶಿಲ್ಪಿಗಳಾದ ಜಾನ್ ಫಾಸ್ಟರ್ ಡಲೆಸ್ ಆ ಸಂಸ್ಥೆಯ ಉದ್ದೇಶ ವಿವರಣೆ ಕೊಟ್ಟದ್ದು ಹೀಗೆ:—"ಅಂತರ ರಾಷ್ಟ್ರೀಯ ಕಾಮ್ಯುನಿಸ್ಟ್ ಸಂಚನ್ನು" ಧ್ವಂಸಮಾಡುವುದು. ಒಂದು ಶತಮಾನಕ್ಕಿಂತ ಸ್ವಲ್ಪ ಮುಂಚೆ ಇಂಥ ಒಂದು ಪ್ರಯತ್ನವನ್ನು ಸಮ್ರಾಜರುಗಳೂ, ರಾಜರುಗಳೂ ಏಕೀಭವಿಸಿ ಪರಸ್ಪರ ಪವಿತ್ರ ಸಖ್ಯದ ಕರಾರಿನಂತೆ ಕೈಕೊಂಡದ್ದುಂಟು. ಈ ಪವಿತ್ರ ಮಿತ್ರಕೂಟದ ಉದ್ದೇಶ ಇದು: ಪ್ರಭುತ್ವ ವಿರೋಧಿಯಾದ "ಅಂತರ ರಾಷ್ಟ್ರೀಯ ಗಣರಾಜ್ಯವಾದಿಗಳ (ರಿಪಬ್ಲಿಕನ್) ಪಿತೂರಿಯನ್ನು" ಧ್ವಂಸಮಾಡುವುದು.

ಒಂದು ಸಂಚುಕೂಟ ಅಕ್ರಮಾಚರಣೆಯ ಅಥವಾ ಕೇಡುಮಾಡುವ ಜಂಟೀ ಪ್ರಯತ್ನಕ್ಕೋಸ್ಕರ ಅಸ್ತಿತ್ವಕ್ಕೆ ಬಂದದ್ದೆಂದು ಆಕ್ಷೇಪಿಸಬಹುದಾದರೆ, ನ್ಯಾಟೋ ಕೂಟವೂ 1815 ರಲ್ಲಿ ಅಸ್ತಿತ್ವಕ್ಕೆ ಬಂದ "ಪವಿತ್ರ ಮಿತ್ರಕೂಟ"ದಂತೆಯೇ ಒಂದು ಪಿತೂರಿಗಾರ ಸಂಸ್ಥೆಯೇ. ಈ ಎರಡು ಸಂಸ್ಥೆಗಳಲ್ಲೂ ನಾಮಾವಶೇಷವಾಗುತ್ತಿದ್ದ ಸಮಾಜ ಪದ್ಧತಿಯನ್ನು ಬಳಸಿಕೊಂಡ ಧನಿಕರ ಪ್ರತಿನಿಧಿಗಳೂ, ವಿಶೇಷ ಸೌಕರ್ಯ ಭೋಗಿಗಳ ಪ್ರತಿನಿಧಿಗಳೂ ಪಾತ್ರವಹಿಸಿದರು. ಈ ಉಭಯ ಸಂಸ್ಥೆಗಳೂ ಇತಿಹಾಸದ ಕಾಲಚಕ್ರವನ್ನು ಮುಂದಕ್ಕುರುಳದಂತೆ ತಡೆದು, ಅದನ್ನು ಹಿಂದಕ್ಕೆ ತಿರುಗಿಸುವ ವ್ಯರ್ಥ ಪ್ರಯತ್ನ ಮಾಡಿದುವು; ಪದಚ್ಯುತರಾದ ತಮ್ಮ ಒಡೆಯರನ್ನು ಅವರ ಪೂರ್ವದ ಸ್ಥಾನಗಳಿಗೂ ಅಧಿಕಾರಕ್ಕೂ ಏರಿಸಿ ಪುನಃ ಪ್ರತಿಷ್ಠಾಪಿಸುವುದಕ್ಕೂ ಅಧೀನ ಪ್ರಜೆಗಳನ್ನು ಮರಳಿ ದಾಸ್ಯದಲ್ಲಿರಿಸುವುದಕ್ಕೂ ಪ್ರತಿಜ್ಞೆ ಮಾಡಿದುವು.

1964 ರಲ್ಲಿ ಬ್ರೆಜಿಲ್ ದೇಶದಲ್ಲಿ ಪ್ರಜೆಗಳೇ ಆರಿಸಿದ ಪ್ರಗತಿಪರ ಜನನಾಯಕ ಪ್ರಭುತ್ವವನ್ನು ಗದ್ದುಗೆಯಿಂದ ಉರುಳಿಸಿದ್ದನ್ನು ಈ ಅಂತರ ರಾಷ್ಟ್ರೀಯ ಸಂಚು ಕೂಟದ ಹೇಯ ಕಾರ್ಯಕ್ಕೆ ಅಗ್ರಶ್ರೇಣಿಯ ಉದಾಹರಣೆಯಾಗಿ ಎತ್ತಿಕೊಳ್ಳ

ಬಹುದು. ಬ್ರೆಜಿಲ್ ದೇಶದ ಪ್ರಗತಿಗಾಮಿಗಳು ಆ ದೇಶದ ದೊಡ್ಡ ಜಮೀನ್ದಾರರ ಪೈಕಿ ಒಬ್ಬನಾದ ಜೋಒ ಗೌಲರ್ಟ್ ಎಂಬಾತನ ನಾಯಕತ್ವದಲ್ಲಿ ರಾಷ್ಟ್ರಶಾಸನಾನುಸಾರಿಯೂ ಕ್ರಮಬದ್ಧವೂ ಆದರೀತಿಯಲ್ಲಿ ಚಳವಳಿನಡಸಿ, ಆಗ್ಗೆ ಅಧಿಕಾರದಲ್ಲಿದ್ದ ಸ್ವಾಮಿ–ಭೃತ್ಯ ಪದ್ಧತಿಯ ಪ್ರತಿನಿಧಿಗಳನ್ನು ಹೊರದೂಡಿ, ದೇಶವನ್ನು ಆಧುನಿಕ ಮಾರ್ಗಗಳಲ್ಲಿ ಕಟ್ಟಿಕೊಳ್ಳಲು ಶ್ರದ್ಧೆಯಿಂದ ಪ್ರಯತ್ನಿಸಿದರು. ಅವರು ಸಾಧಿಸಹೊರಟ ಕಾರ್ಯ ತುಂಬ ಕಷ್ಟಸಾಧ್ಯವೂ ಜಟಿಲವೂ ಆಗಿತ್ತು. ಆದರೆ ಗೌಲರ್ಟ್‌ನ ಸ್ವದೇಶೀಯ ವಿರೋಧಿಗಳು ಅಂತರರಾಷ್ಟ್ರೀಯ ಸಾಮ್ರಾಜ್ಯವಾದಿ ಪಿತೂರಿಗಾರರ ಬೆಂಬಲ ಪಡೆದು, ಆತನ ಕ್ರಾಂತಿಕಾರ್ಯಕ್ಕೆ ವಿಘ್ನ ತಂದೊಡ್ಡದೆ ಇದ್ದಿದ್ದರೆ ಆತ ಖಂಡಿತವಾಗಿ ತನ್ನ ದೇಶ ಸೇವಾ ಪ್ರಯತ್ನದಲ್ಲಿ ಯಶಸ್ವಿಯಾಗುತ್ತಿದ್ದನು. ಗೌಲರ್ಟನ್ನು ವಿರೋಧಿಸಿದ ಶಕ್ತಿಗಳು ಹಲವು:— ಅವುಗಳಲ್ಲಿ ಮೊದಲನೆಯದು ದೇಶೀಯ ಜಮೀನ್ದಾರರು, ಚರ್ಚಿನ ಅಧಿಕಾರಿಜನ, ಪ್ರಭುತ್ವಸೇನೆಯ ಪ್ರಭಾವಶಾಲಿ ಅಧಿಕಾರಿಗಳು ಮತ್ತು ವಿದೇಶಗಳ ಬಂಡವಾಳಸ್ಥರ ಮರುದ್ವೇಶಗಳಿಗೆ ವಶರಾಗಿ ಸ್ವದೇಶ ದ್ರೋಹಾಚರಣೆಯಲ್ಲಿ ತೊಡಗಿದ ದೇಶೀಯ ವಾಣಿಜ್ಯರಂಗದ ಸ್ವಾರ್ಥಜನವರ್ಗ–ಇವರೆಲ್ಲ ಕೂಡಿಕೊಂಡು ಒಡ್ಡಿದ ಎಡರು. ವಿದೇಶೀಯ ಸ್ವಾರ್ಥಿಗಳ ತಂಡತಂಡಗಳೂ ಬಗೆಬಗೆಯಾಗಿ ಗೌಲರ್ಟ್‌ನ ವಿರುದ್ಧ ಕಾರ್ಯಮಾಡಿದುವು: (1) ಬ್ರೆಜಿಲ್ ದೇಶದ ಉದ್ಯಮಗಳಲ್ಲಿ ಬಂಡವಾಳ ಹೂಡಿದ ಧನಿಕರು; (2) ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಮತ್ತು ಇತರ ದೇಶಗಳ ಸೇನಾಧಿಕಾರಿಗಳು, (3)ಅಮೆರಿಕಾ ಸಂಯುಕ್ತ ಸಂಸ್ಥಾನಗಳ ವಿವಿಧ ಮಟ್ಟದ ರಾಯಭಾರಿ ಸಂಸ್ಥೆಗಳಲ್ಲಿಯ (ಎಂಬಸಿಗಳು, ಕಾನ್ಸಲೇಟುಗಳು ಇತ್ಯಾದಿ). ಮತ್ತು ಮಿಲಿಟರಿ ನಿಯೋಗಗಳು. (4) ಬ್ರೆಜಲಿನ ಪ್ರಗತಿಗಾಗಿ ಅದರ ಮಿತ್ರಕೂಟಗಳು (Alliance for Progress); (5) ಸಿ.ಐ.ಎ ಎಂದು ಪ್ರಸಿದ್ಧವಾದ ಅಮೆರಿಕದ ಗೂಢಚಾರ ಸಂಸ್ಥೆಯ ಮತ್ತು ಇತರ ಬೇಹುಕಾರ ನಿಯೋಗಿಗಳ ಚಟುವಟಿಕೆಗಳು. ಪ್ರತಿಕ್ರಾಂತಿ ಕಾರ್ಯಕ್ಕೆ ನಿಯುಕ್ತವಾದ ಈ ಚಾರತಂಡಗಳು ಬ್ರೆಜಿಲಿನ ಅಧಿಕೃತ ಗುಪ್ತಚಾರ ತಂಡಗಳೊಡನೆ ಸಂಪರ್ಕ ಬೆಳಸಿ, ಬ್ರೆಜಿಲಿನ ಸೈನಿಕ ಯಂತ್ರದ ನೆರವನ್ನು ಬಳಸಿಕೊಂಡು, ದೇಶಕಾನೂನಿನ ಪ್ರಕಾರ ಆರಿಸಿಬಂದ ಪ್ರಭುತ್ವವನ್ನು 1964 ನೆಯ ಏಪ್ರಿಲ್ ತಿಂಗಳಲ್ಲಿ ಉರುಳಿಸಿದುವು. ಆ ಹತಭಾಗ್ಯ ದೇಶದಮೇಲೆ, ಬ್ರೆಜಿಲಿನವರೈ ಆದ ಧನಿಕರು ಹಾಗೂ ವಿಶೇಷ ಸೌಲಭ್ಯ ಭೋಗಿಗಳ ಪರವಾಗಿ ಈ ಚಾರತಂಡಗಳು ಕೈವಾಡ ನಡಸಿ ಸೈನಿಕ ಸರ್ವಾಧಿಕಾರವನ್ನು ಹೇರಿದುವು.

"ಸ್ವತಂತ್ರ ಪ್ರಪಂಚ" ದ ಪರವಾಗಿ ಬಾಯಿತ್ತುವ ವಕ್ತಾರರು ಈ ವಯತ್ನಾಮ್, ಲಾಓಸ್ ಕಾಂಗೋ, ಕ್ಯೂಬಾ ಮತ್ತು ಚೀಣಾದೇಶಗಳಲ್ಲಿ ಸ್ವಾತಂತ್ರ್ಯವನ್ನು ರಕ್ಷಿಸುವ ಧರ್ಮಕಾರ್ಯದಲ್ಲಿದ್ದೇವೆಂದು ಘನೋದ್ದೇಶವನ್ನು ಸಾರುತ್ತ, ಅಲ್ಲಲ್ಲಿಯ ಜನಪ್ರಿಯವಲ್ಲದ ಪ್ರಭುತ್ವಗಳಿಗೆ ಊರುಗೋಲುಗಳಾಗಿ ವರ್ತಿಸುತ್ತಿದ್ದಾರೆ.

ಇವರು ಸೂಚಿಸುವ "ಸ್ವಾತಂತ್ರ್ಯ" ಎಂದರೆ,—ಆಗ್ನೇಯ ಏಷ್ಯಾದಲ್ಲೂ ಜಗತ್ತಿನ ಇತರ ಪ್ರದೇಶಗಳಲ್ಲೂ ಕಾಮ್ಯುನಿಸ್ಟ್ ತತ್ತ್ವಾನುಸರಣೆಯ ಜೀವನ ವಿಧಾನವು ರೂಢಿಗೆ ಬರದಂತೆ ತಡೆದು, ಅವುಗಳಮೇಲೆ ಬಂಡವಾಳಶಾಹಿಯನ್ನು ಅನುಸರಿಸುವ ಸ್ವತಂತ್ರೋದ್ಯಮ ತತ್ತ್ವಕ್ಕೆ ನಿಷ್ಠವಾದ ಜೀವನಕ್ರಮವನ್ನು ಹರಡುವ ಹಟದ ಸ್ವಭಾವ.

ಕಳೆದ ಅರ್ಧಶತಮಾನದಲ್ಲಿ ಸಾಮ್ರಾಜ್ಯ ತತ್ತ್ವವಾದಿಗಳು ನುಚ್ಚುನೂರಾಗುವ ದಶೆಗೆ ಬೀಳುವಂಥ ಸೋಲನ್ನು ಅನುಭವಿಸಿದ್ದಾರೆ. ಮೊದಲನೆಯದಾಗಿ, ತಮ್ಮದೇ ಆದ ಕೈವಾಡದ ಫಲವಾಗಿ, ತಮಗೆ ವಿರೋಧಿಗಳಾದ ಇತರ ಸಾಮ್ರಾಜ್ಯವಾದಿಗಳ ಮೇಲೆ ವಿರಸದಿಂದ ಸೆಣಸಿ, ಎರಡು ಆತ್ಮಘಾತಕ ಮಹಾಸಮರಗಳನ್ನು ಹಾಯ ಬೇಕಾಯಿತು; ಎರಡನೆಯದಾಗಿ, ತಮ್ಮ ನೆಲಸುನಾಡುಗಳ ದೇಶೀಯ ಪ್ರಜೆಗಳೂ ಅಧೀನ ರಾಜ್ಯ ಪ್ರಜೆಗಳೂ ದಬ್ಬಾಳಿಕೆಯನ್ನು ಸಹಿಸಲಾರದೆ ವಿರೋಧಿಸಿ, ಎಲ್ಲೆಲ್ಲೂ ಭೂಗ್ರಹ ವ್ಯಾಪಿಯಾಗಿ ಎಬ್ಬಿಸಿದ ದಂಗೆಗಳನ್ನು ಅವರು ಎದುರಿಸಬೇಕಾಯಿತು. ಮೂರನೆಯದಾಗಿ, ಭೂಗ್ರಹದ ಮೂರನೆಯ ಒಂದು ಭಾಗದಷ್ಟು ಪ್ರದೇಶವು, ಅಲ್ಲಲ್ಲಿ ನಡೆದ ಕ್ರಾಂತಿಪರಂಪರೆಗಳ ಪರಿಣಾಮವಾಗಿ, ಸಾಮ್ರಾಜ್ಯವಾದಿಗಳು ಹೇರಿದ್ದ ದಾಸ್ಯದಿಂದ ವಿಮೋಚನೆ ಪಡೆದು ಸಮತಾವಾದಿ ಸಮಾಜ ರಚನೆಗೆ ತಿರುಗಿದ್ದನ್ನೂ ಎದುರಿಸಬೇಕಾಯಿತು.

ಈಗ ಇರಾನಿನಲ್ಲಿಯೂ ಮಲೇಷ್ಯಾದಲ್ಲಿಯೂ ಆಫ್ರಿಕದ ಕಾಂಗೋದೇಶ ದಲ್ಲಿಯೂ ಆಗ್ನೇಯ ಏಷ್ಯಾದಲ್ಲಿಯೂ ಅಂತರರಾಷ್ಟ್ರೀಯ ಸಾಮ್ರಾಜ್ಯವಾದಿಗಳ ಪಿತೂರಿ ಪ್ರಯತ್ನ ನಡೆಯುತ್ತಿದೆ. ಇಲ್ಲಿ ಹೆಸರಿಸಿರುವ ಆಯಾದೇಶಗಳಲ್ಲಿ ಸಾಮ್ರಾಜ್ಯ ವಾದಿಗಳು ಹೂಡಿದ ಪ್ರತಿಕ್ರಾಂತಿಯ ಕಾರ್ಯಕ್ರಮಗಳು ಇವು :— ಆಯಾ ದೇಶಗಳಲ್ಲಿ ಜನತೆಯ ಚಳವಳಿಗಳು ಸೋಷಲಿಸ್ಟ್-ಕಾಮ್ಯುನಿಸ್ಟ್ ತತ್ತ್ವಗಳ ಕಡೆಗೆ ತಿರುಗುವುದನ್ನು ತಡೆಯುವುದು; ವಸಾಹತುಗಳಾಗಿದ್ದ ಈ ಪ್ರದೇಶಗಳಲ್ಲಿ ಪದಚ್ಯುತ ರಾದ ಸಾಮ್ರಾಜ್ಯನಿಷ್ಠರಿಗೆ ಕೈತಪ್ಪಿ ಹೋಗಿದ್ದ ಸ್ಥಾನಮಾನ ಸೌಲಭ್ಯಗಳನ್ನು ಪುನಃ ಸಂಪಾದಿಸಿ ಕೊಡುವುದು; ವರ್ಣ ಜನಾಂಗಗಳ ಮೇಲೆ ಬಿಳಿಯರ ಪಾರಮ್ಯವನ್ನು ಪುನಃ ಸ್ಥಾಪಿಸುವುದು; ಮತ್ತು ಹಿಂದೆ ಇದ್ದಂತೆ ಸ್ವತ್ತು-ವರ್ಗ ಸಂಬಂಧಗಳನ್ನು ಜೀರ್ಣೋದ್ಧಾರ ಮಾಡಿ ಮತ್ತೆ ದೃಢಪಡಿಸುವುದು; ಖಾಸಗಿ ಉದ್ಯಮ ಸಾಹಚರ್ಯ ದಿಂದ ಶೋಷಣ ಕ್ಷೇತ್ರವನ್ನು ವಿಸ್ತರಿಸಿ, ಸೈನಿಕ ಯಂತ್ರದ ಪ್ರಾಬಲ್ಯಕ್ಕೆ ಅವಕಾಶ ಮಾಡಿ, "ರಾಷ್ಟ್ರೀಯ" (ಎಂದರೆ ಸಾಮ್ರಾಜ್ಯವಾದಿ) ಪ್ರಭುತ್ವಕ್ಕೆ-ಜನತೆಯ ನಿಷ್ಠೆ ಯನ್ನು ಭರವಸೆಪಡಿಸಿಕೊಳ್ಳುವುದು—ಇವೆಲ್ಲ ಅಂತರ ರಾಷ್ಟ್ರೀಯ ಸಾಮ್ರಾಜ್ಯವಾದಿ ಸಂಚುಕೂಟದ ಉದ್ದೇಶದಲ್ಲಿ ಸೇರಿರುವ ಕಾರ್ಯಕಲಾಪಗಳು.

## ದಾರಿಯೆಡರುಗಳನ್ನು ತಟಾಯಿಸಿ ನಾವು ಮುಂಬರಿಯಬಲ್ಲವೆ ?

ಮನುಷ್ಯವರ್ಗವನ್ನು ಉತ್ತಮ ಜೀವನ ಸ್ಥಿತಿಗೆ ನಡಸುವ ದೊಡ್ಡ ಹೋರಾಟ ವನ್ನು ಲಕ್ಷಾಂತರ ಆಮೂಲಾಗ್ರ ಸುಧಾರಣಾವಾದಿಗಳಾದ ನಾವು ಪ್ರತೀಕ್ಷೆಯಿಂದ ಗಮನಿಸುತ್ತ ಬಂದಿದ್ದೇವೆ. ನಮ್ಮಲ್ಲಿ ಅನೇಕರು ಹೋರಾಟದಲ್ಲಿ ಪಾತ್ರವಹಿಸಿದ್ದೇವೆ. ಎಲ್ಲೆಲ್ಲಿ ಅದಕ್ಕೆ ಸೋಲು ಆಯಿತೋ ಆ ಸೋಲುಗಳಿಂದ ಪಾಠ ಕಲಿಯಲು ಪ್ರಯತ್ನಿ ಸುತ್ತಿದ್ದೇವೆ. ಮಾನವವರ್ಗದ ರಚನಾತ್ಮಕವೂ ನಿರ್ಮಾಣಕ್ಷಮವೂ ಆದ ಸಾಮರ್ಥ್ಯಗಳಲ್ಲಿ ನಮಗೆ ನಂಬಿಕೆಯುಂಟು. ಶೋಷಣೆಗೆ ಸಿಕ್ಕಿದ ಜನರು ಮುಂಬ ರಿಯಲು ಇಡುವ ಒಂದೊಂದು ಹೆಜ್ಜೆಯನ್ನೂ ನಾವು ಸ್ವಾಗತಿಸುತ್ತೇವೆ; ಮತ್ತು ಅವರು ಪಡೆದ ಲಾಭವು ಪ್ರಪಂಚದಲ್ಲಿ ಆದಷ್ಟು ವಿಸ್ತಾರವಾದ ಪ್ರದೇಶಗಳಿಗೆ ವಿತರಣ ವಾಗಲು ನಾವು ಕೈಮೀರಿ ನೆರವು ಕೊಡುವ ಸಂಕಲ್ಪಮಾಡಿದ್ದೇವೆ ಮನುಷ್ಯನ ಉತ್ಕರ್ಷಗೋಸ್ಕರ ನಡೆಯುತ್ತಿರುವ ಹೋರಾಟ ಒಂದು ನಿರ್ಣಾಯಕ ಘಟ್ಟವನ್ನು ಸಮೀಪಿಸುತ್ತ ಇದೆ. ಇತ್ತ ಯಥಾಸ್ಥಿತಿ ರಕ್ಷಣೆಗೆ, ಅತ್ತ ಪರಿವರ್ತನ ಕಾಂಕ್ಷೆಗೆ ತಿಕ್ಕಾಟ ಮುಂಬರಿಯುತ್ತ, ಈಗಣ ಹೋರಾಟವು ಇತ್ಯರ್ಥವಿಷಯದಲ್ಲಿ ತೂಗುಯ್ಯಾಲೆ ಯಾಡುತ್ತಿದೆಯೆಂದು ನಮಗೆ ಖಚಿತವಾಗಿದೆ. ಪ್ರಗತಿಪರಶಕ್ತಿಗಳಿಗೆ ವಿಜಯವಾಗ ಬೇಕೆಂಬುದೇ ನಮ್ಮ ಹೆಬ್ಬಯಕೆ. ನಮ್ಮ ಧರ್ಮೇಂದ್ರಿಯಗಳು ಈ ಒಂದು ಪರಿಣಾಮ ಸಿದ್ಧಿಯನ್ನು ನಾವು ಕಾಣುವವರೆಗೆ ನಮ್ಮನ್ನು ತಿವಿಯುತ್ತ ಕಾಡುತ್ತವೆ. ಪಟ್ಟಭದ್ರ ಹಿತಗಳಿಗೂ ಜನತೆಗೂ ನಡುವೆ ಇರುವ ಇಂದಿನ ಅಸ್ಥಿರ ಸಮತೋಲನವು ಜನತೆಯ ಲಾಭದ ಕಡೆಗೆ ವಾಲುವವರೆಗೆ ನಾವು ಧರ್ಮೇಂದ್ರಿಯ ಚೋದನೆಯನ್ನು ತಪ್ಪಿಸಿ ಕೊಳ್ಳಲಾರೆವು. ಆದದ್ದರಿಂದ ಸುಸಂಯೋಜಿತ ಸಾಮಾಜಿಕ ಉತ್ಕರ್ಷಕ್ಕೆ ನಾವು ಎದೆಯಾರ ದುಡಿಯುವ ದೀಕ್ಷೆಗೆ ಬದ್ಧರಾಗಿದ್ದೇವೆ.

ಹಳೆಯ ಹೇಳಿಕೆಯೊಂದಿದೆ: ಬುದ್ಧಿವಂತನು ಒಮ್ಮೆ ತಪ್ಪುಮಾಡುತ್ತಾನೆ; ದಡ್ಡನು ಅದೇ ತಪ್ಪನ್ನು ಇಮ್ಮೆ (ಎರಡುಸಲ) ಮಾಡುತ್ತಾನೆ. ನಾವೇಕೆ ಮಾಡಿದ ತಪ್ಪನ್ನು ಮರಳಿ ಮಾಡಬೇಕು? ಇತಿಹಾಸದಲ್ಲಿ ಅಪಾಯ ಸೂಚನೆಯ ಚಿಹ್ನೆಗಳಿವೆ, ಎಚ್ಚರಿಕೆ ಹೇಳುವ ವಾಕ್ಯಗಳಿವೆ; ಜೋಕೆ ಎನ್ನುವ ಬೋನು ಬಲೆಗಳ ಪ್ರಸ್ತಾವಗಳಿವೆ. ಮಹತ್ವಾಕಾಂಕ್ಷೆಯುಳ್ಳ ಬಿಡಿಬಿಡಿ ವ್ಯಕ್ತಿ ಮನುಷ್ಯರೂ ಸ್ವಲ್ಪಜನಾಧಿಪತ್ಯಗಳೂ ಆಗಿಂದಾಗ್ಗೆ ಮನುಷ್ಯವರ್ಗವನ್ನು ಗೆದ್ದು, ಅಂಕೆಯಲ್ಲಿರಿಸಿಕೊಂಡು, ದಬ್ಬಾಳಿಕೆ ನಡಸಲು ಮೇಲಕ್ಕೆದ್ದು ಬಂದದ್ದುಂಟು. ಕೈಯಲ್ಲಿ ಈ ಶೋಷಣ ಪ್ರಯತ್ನ ಮಾಡು ತ್ತಿರುವಾಗ ಬಾಯಲ್ಲಿ ತಮ್ಮ ಉದ್ದೇಶ ನಿರೂಪಣೆಯಾಗಿ ಸಮಸ್ತ ಜನ ಹಿತ ಚಿಂತನೆಯ ಕಾತರದ ಮಾತುಗಳು ಹೊರಡುತ್ತಿರುತ್ತವೆ. ಎಣಿಕೆಗೆ ಸಿಕ್ಕದಷ್ಟು ಜನ ಬಗೆಬಗೆಯ

ಉಪಾಯಗಳನ್ನು ಕೈಕೊಂಡು, ಪ್ರತ್ಯುಪಕಾರ ಪ್ರವೃತ್ತಿಯೆಳ್ಳಷ್ಟನ್ನೂ ತೋರಿಸದೆ, ಜೊತೆ ಮನುಷ್ಯರ ಕಾಯಕ ಸೇವೆಯನ್ನು ಅವಲಂಬಿಸಿ ಬಂದಳಿಕೆ ಬಾಳನ್ನು ನಡಸುತ್ತ ಬಂದಿದ್ದಾರೆ. ಕಪಟ, ಮೋಸ, ಅನೃತವಚನ, ಚಿತ್ರ ಹಿಂಸೆ, ಅಗ್ನಿಸ್ಪರ್ಶ, ದರೋಡೆ, ಕೊಲೆ-ಪುಂಡುತನದ ಈ ಸಾಧನಗಳನ್ನು ಬಳಸಿ, ಸೋತವನು ಗೆದ್ದವನ ಹಿತಕ್ಕೋಸ್ಕರ ದುಡಿಯುವಂತೆ ಒತ್ತಾಯಪಡಿಸುವ ಪ್ರಯತ್ನ ನಡೆದುಬಂದಿದೆ.

ಸಂಪತ್ತು ಅಧಿಕಾರಗಳಿಗೋಸ್ಕರ ಹುರುಡಿನಿಂದ ನಡೆಯುವ ಹೋರಾಟದ ಕಥೆ ಇತಿಹಾಸಕ್ಕಿಂತ ಪ್ರಾಚೀನವಾದದ್ದು. ಯಾರಿಗೆ ಹೋರಾಟದಲ್ಲಿ ಗೆಲುವಾಯಿತೋ ಅವರನ್ನೂ, ಯಾರಿಗೆ ಸೋಲಾಯಿತೋ ಅವರನ್ನೂ ಹುರುಡು ಮತ್ತೆ ಕೊಳುಗುಳಕ್ಕೆ ಸೆಳೆತಂದು ಅವರಿಂದ ಕಾಳಗ ಮಾಡಿಸಿದೆ. ಯುದ್ಧದ ಗತಿಯೋ ಪರ್ಯವಸಾನದಲ್ಲಿ ಇಬ್ಬರಿಗೂ ತರುವುದಿಷ್ಟನ್ನೇ—ಪರಾಭವ, ವಿನಾಶ.

ನೀತಿಬೋಧಕರೂ, ಇತಿಹಾಸಕಾರರೂ, ದಾರ್ಶನಿಕರೂ ಈ ತೀರ್ಮಾನಕ್ಕೆ ಮತ್ತೆಮತ್ತೆ ಬಂದು, ಒಳ್ಳೆಯ ಜೀವನದ ನಿರ್ವಾಹಕ್ಕೋಸ್ಕರ ಹಿಡಿಯಬೇಕಾದ ಬೋಧೆಯನ್ನು ಕ್ರೋಢೀಕರಿಸಿ ಬರೆದಿಟ್ಟದ್ದಾರೆ. ಕಳೆದ ಅರ್ಧಶತಮಾನದಿಂದ ನಾವು ಮನುಷ್ಯರು ಯುಗಾಂತರಗಳಷ್ಟು ಪ್ರಾಚೀನವಾದ ಅಪರಾಧಗಳಲ್ಲೇ ಮರಳಿ ಮರಳಿ ತೊಡಗಿ ಕಾಲಯಾಪನೆಮಾಡುತ್ತಿದ್ದೇವೆ.

ಈ ಜಿಜ್ಞಾಸೆ ನಮ್ಮೆದುರಿಗ ನಿರ್ಣಯ ಬೇಡುವ ಎರಡು ಪ್ರಶ್ನೆಗಳನ್ನು ನಿಲ್ಲಿಸುತ್ತವೆ. ಮೊದಲನೆಯ ಪ್ರಶ್ನೆ – ವಾಷಿಂಗ್‌ಟನ್ ಪಟ್ಟಣದ ನಾಯಕತ್ವದಲ್ಲಿ, ಲಂಡನ್ ಪಟ್ಟಣದ ಒತ್ತಾಸೆ ಪಡೆದು, ಪಾಶ್ಚಾತ್ಯ ಮನುಷ್ಯನು ಆತ್ಮಘಾತಕ್ಕೆಡೆಗೊಡುವಂಥ ವಧ್ಯಶಿಲೆಗೆ ಢಿಕ್ಕಿಬಡಿಯಲು ಧಾವಿಸುತ್ತಿರುವುದನ್ನು ಕಂಡು, ಕಾಲಾತೀತವಾಗುವುದಕ್ಕೆ ಮುಂಚೆ ಅವರನ್ನು ಈ ಆತ್ಮಹತ್ಯಾ ಪ್ರಯತ್ನದಿಂದ ಬಿಡಿಸಲು, ಪ್ರಪಂಚದಲ್ಲಿ ಗೊತ್ತಾದಷ್ಟು ಸಂಖ್ಯೆಯ ಜನರು ಎಚ್ಚತ್ತು ಸರಿಯಾದ ದಾರಿಗೆ ಅವನನ್ನು ಕರೆತಂದುಬಿಡುವರೆ? ಎರಡನೆಯ ಪ್ರಶ್ನೆ—ಈ ಅಧ್ಯಾಯದಲ್ಲಿ ನಾನು ಪಟ್ಟಿ ಮಾಡಿರುವ ಏಳು ದಾರಿಯೆಡರುಗಳನ್ನು ಕಟಾಯಿಸಿ, ಇನ್ನೂ ನಮ್ಮ ತಿಳಿವಳಿಕೆಗೆ ಬಾರದೆ, ಬಹುಮಟ್ಟಿಗೆ ಇನ್ನೂ ಯಾರೂ ಕಂಡುಹಿಡಿಯದೆ ಇರುವ ದಾರಿಯನ್ನು ಹಿಡಿದು, ಗುರಿಯಲ್ಲಿರುವ ಅನ್ಯೋನ್ಯಾಧೀನವೂ(ಪರಸ್ಪರಾವಲಂಬಕವೂ), ಸಾಮಾಜಿಕವಾಗಿ ಸಂಯೋಜಿತವೂ, ಜಗದ್ವ್ಯಾಪಿಯಾದ ಆಡಳಿತದಲ್ಲಿ ಸರ್ವತ್ರ ಶಾಂತಿ ಸುಭಿಕ್ಷಗಳ ಭರವಸೆಯುಳ್ಳದ್ದೂ, ದಕ್ಷರಾದ ಜನಸಮುದಾಯದ ಕಾರ್ಯಪರಿಶ್ರಮಕ್ಕೆ ಅವಕಾಶ ಕೊಡತಕ್ಕದ್ದೂ ಆದ ವಿಶ್ವಕುಟುಂಬ ಭಾವನೆಯನ್ನು ನಮ್ಮ ಧ್ಯೇಯವಾಗಿ ಸ್ವೀಕರಿಸಿ ಧೈರ್ಯದಿಂದ ಪಯಣಮಾಡಲು–ಇದುವರೆಗಣ ಅಭಿವೃದ್ಧಿಯ ಮಟ್ಟ

ದಲ್ಲಿ ನಮಗೆ ಕರ್ತವ್ಯವಾದ ಸಾರ್ಥಕ ಪ್ರಯತ್ನ ಇದೆಂದು ತಿಳಿದು, ಇಷ್ಟದಿಂದ ಗೊತ್ತಾದಷ್ಟು ಸಂಖ್ಯೆಯ ಜನರು ಅಧ್ಯವಸಾಯ ನಡಸಲು ಅಣಿಯಾಗಿದ್ದಾರೆಯೆ?

ಆಮೂಲಾಗ್ರ ಸುಧಾರಣೆಯಲ್ಲಿ ನಂಬಿಕೆಯುಳ್ಳ ನಾವು ಈ ಪ್ರಶ್ನೆಗಳಿಗೆ **ಅಣಿಯಾಗಿದ್ದೇವೆ** ಎಂದು ಸ್ವರಭಾರ ಹಾಕಿ ಉತ್ತರ ಹೇಳುತ್ತೇವೆ; ಮತ್ತು ಈ ಪ್ರಶ್ನೆಗಳಲ್ಲಿ ಸ್ಪಷ್ಟವಾಗಿರುವ ಧ್ಯೇಯಸಿದ್ಧಿಗೋಸ್ಕರ ಹುರುಪಿನಿಂದಲೂ ಚುರುಕಾಗಿಯೂ ಕಾರ್ಯ ಮಾಡುತ್ತೇವೆ. ಇಂದಿನ ಮನುಷ್ಯನು ವೈಭವ ತುಂಬಿದ ಭವಿಷ್ಯನ್ಮಂಗಳ ಜೀವನದ ಗುರಿಯನ್ನು ಮುಟ್ಟಲು ಅಡ್ಡಿಯಾದ ಏಳುದಾರಿಯೆಡರುಗಳ ಸವಾಲನ್ನು ಎದುರಿಸಿ ಅವನ್ನು ಗೆದ್ದು ಮುಂಬರಿಯಬಲ್ಲನೆಂದು ಆಮೂಲಾಗ್ರ ಸುಧಾರಣಾವಾದಿಗಳು (ರ್‍ಯಾಡಿಕಲ್ಸ್) ನಂಬುತ್ತಾರೆ. ಇಂದು ಮನುಷ್ಯವರ್ಗದ ಎದುರು ನಿಂತ ಇಂಥ ಕೆಲವು ಪ್ರಶ್ನೆಗಳ ಗುರುತರ ಗಂಭೀರ ಮುಖವನ್ನು ಒಪ್ಪಿಕೊಂಡು, ಆಮೂಲಾಗ್ರ ಸುಧಾರಣಾವಾದಿಗಳಾದ ನಾವು ನಿಶ್ಚಯ ಬುದ್ಧಿಯಲ್ಲಿದ್ದು, ನಿಜವಾಗಿ ಕಷ್ಟಗಳೂ ಭೀಕರ ಅಪಾಯಗಳೂ ತುಂಬಿರುವ ಪ್ರಚಲಿತ ಸಾಮಾಜಿಕ ಪದ್ಧತಿಯನ್ನು ತೊರೆದು ಮುಂದಡಿಯಿಟ್ಟು, ಇದಕ್ಕಿಂತ ಗುಣದಲ್ಲೂ ಪ್ರಮಾಣದಲ್ಲೂ ಉತ್ತಮವಾದ ಇನ್ನೊಂದು ಸಾಮಾಜಿಕ ಪದ್ಧತಿಯನ್ನು ಹಿಡಿಯಲು ಮನುಷ್ಯವರ್ಗಕ್ಕೆ ತಕ್ಕ ಸದ್ಗುಣಶೀಲ ಸಾಮರ್ಥ್ಯವೂ, ಹೊಸ ಪದ್ಧತಿಗೆ ಹೊಂದಿಕೊಳ್ಳಬಲ್ಲ ನಮನ ಪ್ರವೃತ್ತಿಯೂ ಇವೆಯೆಂದು ನಮಗ ಖಚಿತವಾಗಿದೆ, ವಿವೇಕದಿಂದಲೂ ನಿರ್ಣಯದಿಂದಲೂ ಈ ಗೊತ್ತಾದ ಸಂಖ್ಯೆಯ ಜನವರ್ಗ ಕಾರ್ಯಮಾಡಿದ್ದೇ ಆದರೆ ಇಂದಿನ ಹೊಸ ಪೀಳಿಗೆ ನಾಳೆಯ ಆಸೆ ಭರವಸೆಗಳ ಪ್ರಪಂಚದಲ್ಲಿ ನೆಮ್ಮದಿಯಾಗಿ ಬಾಳುತ್ತಾರೆ.



## ಅಧ್ಯಾಯ ನಾಲ್ಕು

# ಸಹಕರಿಸಿ ಸೌಕರ್ಯಗಳನ್ನು ಪಾಲ್ಗೊಳ್ಳಲು ಮನುಷ್ಯನಿಗಿರುವ ಸಾಮರ್ಥ್ಯ

ತೀವ್ರ ಸುಧಾರಣಾವಾದಿಗಳು (ರ್‍ಯಾಡಿಕಲ್ಸ್) ಜನವರ್ಗದಲ್ಲಿ ತಮ್ಮಂತೆಯೇ ಪ್ರಜಾಹಿತಕಾರ್ಯವನ್ನು ಮಾಡುತ್ತಿರುವುದಾಗಿ ನಂಬಿಕೊಂಡಿರುವ ಮಿತಸುಧಾರಣಾ ವಾದಿಗಳಿಂದಲೂ (ಲಿಬರಲ್ಸ್) ಮತ್ತು ಸಂಪ್ರದಾಯಪಾಲನವಾದಿಗಳಿಂದಲೂ (ಕನ್ಸರ್ವೆಟೀವ್ಸ್) ಅನೇಕ ದೃಷ್ಟಿಗಳಿಂದ ಭಿನ್ನೋದ್ದೇಶವುಳ್ಳವರು. ಮನುಷ್ಯ ಸ್ವಭಾವವನ್ನೂ, ಅದಕ್ಕಿರುವ ಧ್ಯೇಯ ಸಿದ್ಧಿಯ ಸಾಧ್ಯತೆಯನ್ನೂ ಕುರಿತು ಈ ಮೂರು ಪಂಥದವರು ಕೊಡುವ ವ್ಯಾಖ್ಯಾನಗಳಿಂದ ಅವರವರಲ್ಲಿರುವ ಭೇದವೇನೆಂಬುದು ಗೊತ್ತಾಗುತ್ತದೆ. ಈ ವ್ಯಾಖ್ಯಾನಗಳ ತಿಳಿವಳಿಕೆ ಬಹುಮುಖ್ಯವಾಗಿದ್ದು, ಅದೇ ತೀವ್ರ ಸುಧಾರಣಾವಾದಿಗಳ ಸ್ಥಾನವನ್ನೂ ಕಾರ್ಯಮಹತ್ತ್ವವನ್ನೂ ಎತ್ತಿತೋರಿಸುತ್ತದೆ. ಮನುಷ್ಯ ಸ್ವಭಾವದಲ್ಲಿರುವ ಅಜ್ಞಾತ ಸಾಮರ್ಥ್ಯಗಳಲ್ಲೆಲ್ಲ ನಾವಿನ್ನೂ ಪೂರ್ತಿಯಾಗಿ ತಿಳಿದುಕೊಳ್ಳಲಾರದೆ ಇರುವ ಒಂದು ಸಾಮರ್ಥ್ಯವೆಂದರೆ—ತೀವ್ರ ಪರಿಸ್ಥಿತಿಗಳನ್ನು ಮನುಷ್ಯನು ದಿಟ್ಟತನದಿಂದ ಎದುರಿಸಬಲ್ಲವನಾಗಿರುವುದು; ಮತ್ತು ತಾನಿದ್ದು ಕೊಂಡಿರಲೇಬೇಕಾದ ನೈಸರ್ಗಿಕ ಹಾಗೂ ಸಾಮಾಜಿಕ ಪರಿಸರಗಳಿಗೆ ಗಮನಾರ್ಹ ವಾದ ಹೊಂದಾಣಿಕೆಯ ಪ್ರವೃತ್ತಿಯನ್ನು ತೋರಿಸಿ, ಎಡರುಗಳನ್ನು ತಪ್ಪಿಸಿಕೊಂಡು ಬಾಳುವುದು. ಯುಗಾಂತರಗಳಿಂದಲೂ ಮನುಷ್ಯ ಪ್ರಾಣಿಗಳು ಭೂಮಿಯ ಮೇಲೆ ತಮ್ಮ ಜೀವಯಾಪನೆಗಾಗಿ ಬಗೆಬಗೆಯಾದ ವಾಯುಗುಣವುಳ್ಳ ನೈಸರ್ಗಿಕ ಸನ್ನಿವೇಶ ಗಳಿಗೆ ಹೊಂದಿಕೊಂಡು ವಾಸಮಾಡುತ್ತ ಬಾಳಿಕೊಂಡು ಬಂದಿದ್ದಾರೆ. ಅವರ ವಸತಿ ಭೂಮಧ್ಯ ರೇಖೆಯ ಸುತ್ತ ಮುತ್ತಣ ಅತ್ಯುಷ್ಣ ಪ್ರದೇಶಗಳೋ, ಸಮುದ್ರತೀರ ಪ್ರದೇಶದಿಂದ ಹಿಡಿದು ಸಾವಿರಾರು ಅಡಿ ಎತ್ತರದ ದೊಡ್ಡ ಬೆಟ್ಟಗಳ ಕಣಿವೆ ತಪ್ಪಲು ಗಳೋ, ಮರುಭೂಮಿಗಳಿಂದ ಹಿಡಿದು ಮಳೆಯ ಒದವನ್ನು ಕಾಣುತ್ತ ಜೀವಿಕಾ ಸೌಕರ್ಯಗಳನ್ನು ಹೆಚ್ಚು ತಣಿವೂಡುವಂತೆ ಕೊಡುವ ಪ್ರದೇಶಗಳವರೆಗೆ, ದಕ್ಷಿಣೋ ತ್ತರ ಧ್ರುವಗಳಷ್ಟು ಅತಿ ಶೀತಲ ಪ್ರದೇಶಗಳವರೆಗೆ, ವಸತಿಗಳನ್ನು ನೆಲೆಗೊಳಿಸಿಕೊಂಡು ಬದುಕು ಸಾಗಿಸುತ್ತ ಬಂದಿದ್ದಾರೆ. ಪರಿಸರವೆಷ್ಟೇ ಪ್ರತಿಕೂಲವಾಗಿರಲಿ ಅದಕ್ಕೆ ಒಗ್ಗಿ ಕೊಂಡು, ಅಧೀರರಾಗದೆ, ತಮ್ಮ ಬದುಕಿಗೆ ಬೇಕಾದ ಸಾಧನ ಸೌಕರ್ಯಗಳನ್ನು ಚೆನ್ನಾಗಿ ಪರ್ಯಾಲೋಚಿಸಿ ಕಲ್ಪಿಸಿಕೊಂಡು, ಬುದ್ಧಿಪ್ರಯೋಗದಿಂದ ಪರಿಸರವನ್ನು ತಿದ್ದಿಕೊಂಡು ಬಾಳುತ್ತ ಬಂದಿದ್ದಾರೆ.

ಹಾಗೆಯೇ ಮನುಷ್ಯಪ್ರಾಣಿಗಳು ಭಿನ್ನ ಭಿನ್ನ ಸಾಮಾಜಿಕ ವಿದ್ಯಮಾನಗಳಲ್ಲಿ ಬಾಳುತ್ತ ಉಳಿದುಕೊಂಡು ಬಂದಿದ್ದಾರೆ. ಆಹಾರ ಧಾನ್ಯಗಳ ಉತ್ಪಾದನೆಯಿಂದ

ಹಿಡಿದು ಮಾಂಸಾಹಾರೋತ್ಪಾದನೆಯವರೆಗೆ ಬೇರೆಬೇರೆ ಬೇಸಾಯಗಳಲ್ಲಿ ತೊಡಗಿ, ಗ್ರಾಮಗಳಲ್ಲಿ ಕೃಷಿಜೀವನದಿಂದ ಹಿಡಿದು ಪಟ್ಟಣಗಳಲ್ಲಿ ಯಂತ್ರೋದ್ಯಮ ಶಿಷ್ಟ ಜೀವನದ ವರೆಗೆ, ಸಾಮಾನ್ಯ ಶಿಲೆ, ಅಸ್ಥಿ ಮತ್ತು ದಾರುಗಳಿಂದ–ಕಲ್ಲು ಎಲುಬು ಮರಗಳಿಂದ–ಮಾಡಿಕೊಂಡ ಆಯುಧಗಳಿಂದ ಹಿಡಿದು ತುಂಬ ಜಟಿಲವಾದ ಯಂತ್ರ ಸಂಧಾನಗಳವರೆಗೆ; ಕೈದುಡಿಮೆ–ಬಾಯುಣಿಸಿನಷ್ಟುಮಾತ್ರದ ಕೃಪಣ ಜೀವನದಿಂದ ಹಿಡಿದು, ಕೈಯಳತೆ ತೂಕಗಳ ಒರಟು ಉಪಾಯಗಳಿಂದ ಹೊರಟು ಕಲೆ ವಿಜ್ಞಾನಗಳ ನವಿರು ನಯೋಪಾಯಗಳವರೆಗೆ, ಸಮೃದ್ಧವಾದ ಜೀವನಕ್ಕೋಸ್ಕರ ಸಂಯೋಜನೆ ಉತ್ಪಾದನೆ ವಿತರಣೆಗಳ ಕ್ರಮಬದ್ಧವಾದ ಉಪಾಯಗಳನ್ನನುಸರಿಸಿ ನೆಮ್ಮದಿಯ ದಾರಿಗಳನ್ನು ಹುಡುಕುತ್ತ ಮನುಷ್ಯ ಕುಲವನ್ನು ಬಾಳಿಸಿ ಸಾಗಿಸಿಕೊಂಡು ಬಂದಿದ್ದಾರೆ. ಮಾನವ ಸಂಸ್ಕೃತಿಯ ವಾಹಿನಿ ವಿಸ್ತಾರವಾಗಿಯೂ ಅಗಾಧವಾಗಿಯೂ ಹರಿಯಲು ಮೊದಲಾಗಿ, ವಿವಿಧ ಸಾಮಾಜಿಕ ಪದ್ಧತಿಗಳಲ್ಲಿ ಹೊಂದಿಕೆಯಿಂದ ಬಾಳಲು ಮನುಷ್ಯರು ಕಲಿತು ಕೊಂಡಿರುವುದಲ್ಲದೆ, ಸಂಶೋಧನೆ ನಿರ್ಮಾಣಗಳ ಹದನನ್ನೂ ಕಲಿತು, ಆಡುಮಾತು ಲಿಖಿತ ದಾಖಲೆಗಳ ಪ್ರಯೋಜನವನ್ನು ಕಂಡುಕೊಳ್ಳುತ್ತ ಬಂದಿದ್ದಾರೆ. ಈ ಸಂಸ್ಕೃತಿ ವಾಹಿನಿಯನ್ನು ತಲೆಮಾರಿನಿಂದ ತಲೆಮಾರಿನ ವರೆಗೆ ಸಂಕಲನ ವ್ಯವಕಲನಗಳ ಮೂಲಕ ತಿದ್ದಿ ಪರಿಷ್ಕರಿಸಿಕೊಂಡು, ಅದರ ಉಚ್ಛ್ರಾಯ ಸ್ಥಿತಿಯನ್ನು ಪೋಷಿಸಿಕೊಂಡು ಬಂದಿದ್ದಾರೆ.

ಪ್ರಕೃತಿಯೂ ಸಮಾಜವೂ ಆಗಾಗ್ಗೆ ಮಾರ್ಪಡತಕ್ಕ ವಸ್ತುಗಳು. ಆದದ್ದರಿಂದ ಗತಕಾಲದ ಪರಿಸರಗಳಲ್ಲಿ ಮನುಷ್ಯನಿಗೆ ಆದ ಸೋಲುಗಳನ್ನೋ, ಗೆಲವುಗಳನ್ನೋ ಗಟ್ಟಿ ಸಾಕ್ಷ್ಯಗಳಿಂದ ನಾವು ಒಪ್ಪಿಕೊಂಡು ಸ್ವೀಕಾರ ಮಾಡಿ, ಭವಿಷ್ಯತ್ಕಾಲದಲ್ಲಿ ಅವನು ಎದುರಿಸಬೇಕಾದ ಸನ್ನಿವೇಶಗಳನ್ನು ಅವಕ್ಕುಚಿತವಾದ ಸಾಮರ್ಥ್ಯದಿಂದ ನಿಭಾಯಿಸುತ್ತಾನೋ ಇಲ್ಲವೋ ಎಂದು ನಿರ್ಣಯ ಹೇಳಲು ಆ ಸಾಕ್ಷ್ಯಗಳನ್ನು ಮಾತ್ರ ಆಧಾರವಾಗಿ ಇರಿಸಿಕೊಳ್ಳಲಾಗುವುದಿಲ್ಲ. ಆದರೆ, ಇತಿಹಾಸ ಕೊಡುವ ಅನುಭವದ ಆಧಾರದ ಮೇಲೆ, ವ್ಯತ್ಯಾಸವಾಗುತ್ತ ಹೋಗುವ ಸನ್ನಿವೇಶಗಳಲ್ಲಿ ಮನುಷ್ಯನು ತನ್ನಲ್ಲಿರುವ ಹೊಂದಾಣಿಕೆಯ ಬಲವನ್ನು ಬಳಸುತ್ತಾನೆಂದೂ, ತನ್ನ ಬದುಕಿನ ಸುತ್ತ ತೋರಿಕೊಳ್ಳುವ ಸನ್ನಿವೇಶವನ್ನು ಸ್ವಪ್ರಯತ್ನದಿಂದ ತನಗೆ ಅನುಕೂಲವಾಗುವಂತೆ ತಿದ್ದಿ ಬದಲಾಯಿಸಿಕೊಳ್ಳುವ ಅಳವು ಅವನಿಗಿದೆಯೆಂದೂ ಭಾವಿಸುವುದು ಕೂಡ ನನ್ನ ಪ್ರಕೃತ ಚರ್ಚೆಗೆ ಸಂಗತವಲ್ಲ. ಮನುಷ್ಯನಲ್ಲಿ ವಿಧವಿಧವೂ ಭಿನ್ನೋದ್ದೇಶವುಳ್ಳವೂ ಆದ ಸಾಮರ್ಥ್ಯಗಳು ಮನೆ ಮಾಡಿಕೊಂಡಿವೆ, ಸಾಂಪ್ರತ ಜೀವನ ಸ್ಥಿತಿ ಸಂದರ್ಭಗಳಿಗೆ ಅವನು ಆ ಸಾಮರ್ಥ್ಯಗಳನ್ನು ಬಳಸುತ್ತ ಉತ್ತರೋತ್ತರ ಕಾಲದಲ್ಲಿ ಸಿದ್ಧಿಯನ್ನು ಹೇಗೆ ಕಂಡಾನು ಎಂಬುದನ್ನು ಈಗ ವಿಚಾರಮಾಡೋಣ. ಮನುಷ್ಯ ಸ್ವಭಾವವನ್ನು ಕುರಿತು ನಾವು ಊಹಾಪೋಹದ್ವಾರಾ ಅನುಮಾನಿಸಿ ರಚಿಸಿಕೊಳ್ಳಬಹು

ದಾದ ಸಾಮಾನ್ಯಸೂತ್ರ ನಿರೂಪಣೆಯನ್ನು ವ್ಯರ್ಥಪ್ರಯತ್ನವೆಂದು ನಮ್ಮನ್ನು ಹಂಗಿಸುವ ಮುಖ್ಯವಾದ ಒಂದು ಸಂದರ್ಭವನ್ನು ನಾವು ಎದುರಿಸಬೇಕು. ಯಾವುದೇ ಜನವರ್ಗದಲ್ಲಾದರೂ ವಿವಿಧ ಸಾಮರ್ಥ್ಯಗಳು ಹರಡಿಕೊಂಡಿರುತ್ತವೆ; ಭಿನ್ನೋದ್ದೇಶಗಳೂ ಹಾಸುಹೊಕ್ಕಾಗಿ ಮನುಷ್ಯ ಸ್ವಭಾವವನ್ನು ಗೋಜುಗಂಟಾಗಿ ಮಾಡಿರುತ್ತವೆ. ಈ ಸ್ವಭಾವ ಪರೀಕ್ಷಣಕ್ಕೆ ನಾವು ಎತ್ತಿಕೊಳ್ಳುವ ಮಾನದಂಡದ ಒಂದು ಕೊನೆಯಲ್ಲಿ ಅವನ ದಡ್ಡತನವನ್ನು ನೋಡುತ್ತೇವೆ. ಇನ್ನೊಂದು ಕೊನೆಯಲ್ಲಿ ಕ್ರಮಕ್ರಮವಾಗಿ ವಿಕಾಸವಾಗುತ್ತ ಪೂರ್ಣಸಿದ್ಧಿ ಪಡೆದ ಪ್ರತಿಭೆ ಮೇಧಾಶಕ್ತಿಗಳಿರುವುದನ್ನು ನೋಡುತ್ತೇವೆ. ಆದರೆ ಪ್ರತಿಭಾಶಾಲಿಗಳು, ಮೇಧಾವಿಗಳು ಎನ್ನಿಸಿಕೊಂಡವರಲ್ಲೂ ತರ-ತಮ ಪ್ರಮಾಣದ ಮಹಾಭಿನ್ನತೆ ಕಂಡುಬರುತ್ತದೆ. ಈ ಭಿನ್ನತೆ ಜೀವನದ ಬೇರೆ ಬೇರೆ ಹಂತಗಳಲ್ಲಿ ಕಾಣಿಸಿಕೊಳ್ಳುತ್ತವೆ. ಕಿಶೋರ ದಶೆಯಲ್ಲಿ ಮನುಷ್ಯನ ಪ್ರತಿಭೆ ಒಂದು ಮಟ್ಟದ ಪ್ರೌಢಿಯನ್ನು ತೋರಿಸಿದರೆ, ಅದು ಅವನ ಜೀವಮಾನದ ಬೇರೆ ಬೇರೆ ಮೆಟ್ಟಲುಗಳನ್ನು ದಾಟುತ್ತ, ಪ್ರೌಢಿಯಲ್ಲೂ ಬೇರೆ ಬೇರೆ ಮಟ್ಟಗಳನ್ನು ತೋರಿಸುತ್ತ, ಯಾವುದೋ ಒಂದು ಘಟ್ಟದಲ್ಲಿ ಪರಿಣತ ಪ್ರೌಢಿಯನ್ನು ಪ್ರಕಾಶಪಡಿಸುತ್ತದೆ. ನಮಗೆ ಸ್ಪಷ್ಟವಾಗಿ ಮನದಟ್ಟಾಗುವ ಸಂಗತಿ ಇದು: ಮನುಷ್ಯ ಸ್ವಭಾವವು ಒಂದು ಪಡಿಯಚ್ಚಿನಲ್ಲಿ ಬಿದ್ದು ಎರಕಗೊಂಡ ಸರಕಲ್ಲ. ಸರ್ವಸಮಾನ ಸ್ವಭಾವವನ್ನು ಮನುಷ್ಯನಲ್ಲಿ ಕಾಣುವುದು ದುಷ್ಕರ. ಇದಕ್ಕೆ ಪ್ರತಿಯಾಗಿ, ಭಿನ್ನತೆಗಳ ನಾನಾ ಸ್ತರಗಳಲ್ಲಿ ನಾನಾದಶೆಗಳಲ್ಲಿ ತೋರಿಕೊಳ್ಳುತ್ತ ಮನುಷ್ಯ ಜೀವನದ ಮಾನದಂಡಗಳ ಮೊದಲು ಕೊನೆಗಳಲ್ಲಿಯೂ ಮಧ್ಯಂತರವಾಗಿಯೂ ನಮ್ಮ ಪರೀಕ್ಷಣಕ್ಕೆ ಸಿಕ್ಕುವ ಪ್ರತಿನಿಧಿಗಳು ಆಳವಾದ ವಿವರಗಳನ್ನು ಪ್ರಕಟಪಡಿಸದೆ ಮೇಲುಮೇಲಿನ ಸಾಮಾನ್ಯ ಲಕ್ಷಣಗಳನ್ನು ಮಾತ್ರ ತೋರಿಸುತ್ತವೆ. ಮನುಷ್ಯನ ಅಂತರಂಗವನ್ನು ತಲಸ್ಪರ್ಶಿಯಾಗಿ ಶೋಧಿಸಿದ ಹೊರತು ಅದರ ವೈವಿಧ್ಯ ಪ್ರಕಾಶನವು ಆಗುವುದಿಲ್ಲ.

ಅಲ್ಲದೆ ಮನುಷ್ಯ ಸ್ವಭಾವವು ವಜ್ರಕಾಠಿನ್ಯದಂತೆಯೋ ಅಯಃಪಿಂಡದ ಉಕ್ಕಿನ ಗಟ್ಟಿಯ ದಾರ್ಢ್ಯದಂತೆಯೋ ಜಲದ ಪ್ರವಾಹಶೀಲತೆಯಂತೆಯೋ ಪರಿವರ್ತನ ವಿಕಾರ ದೂರವಾದ ಸ್ಥಿರಗುಣವಲ್ಲ. ಮನುಷ್ಯ ಸ್ವಭಾವ ಜೀವಂತವಾದ, ಪಕ್ವ ಪ್ರಕಾಶನ ಪರಿಣಾಮಕ್ಕೋಸ್ಕರ ನಿತ್ಯವರ್ಧಿಷ್ಣುವಾದ, ನಿತ್ಯವಿಕಸನ ಪಥದಲ್ಲಿರುವ ಪ್ರಾಣಶಕ್ತಿ. ವೃಕ್ಷಜಾತಿ ಒಂದು ಋತುಕಾಲದಲ್ಲಿ ತೋರಿಸುವ ಚಿಗುರೆಲೆ ಮೊಗ್ಗುಗಳು ಇನ್ನೊಂದು ಋತುಕಾಲದಲ್ಲಿ ಹೂವಾಗಿ ಹೀಚಾಗಿ ಮಾಗಿ ಹಣ್ಣಾಗುವ ಪರಿಯಲ್ಲೇ ಮನುಷ್ಯ ಪ್ರಾಣಿಗಳೂ ಸೃಜನಶೀಲರಾಗಿ, ಸಂಸ್ಕೃತಿ ಕುಸುಮ ಫಲಗಳ ಉದಯಕ್ಕೆ ಪರಿಶ್ರಮ ಮಾಡುತ್ತಾರೆ. ಆದರೂ ಮನುಷ್ಯ ಸ್ವಭಾವವು ಹೂಮೊಗ್ಗುಗಳಿಗಿಂತ ಮೇಲ್ಪಟ್ಟ ಗುಣವುಳ್ಳದ್ದಾಗಿದ್ದು, ಎರಡು ಗಮನಾರ್ಹವಾದ ವಿಶೇಷಾನುಕೂಲಗಳನ್ನು ಪಡೆದಿದೆ. ಮೊದಲನೆಯದಾಗಿ, ಹೂಮೊಗ್ಗುಗಳಿಗೆ ಇರದ ಬಗೆಯಲ್ಲಿ ಮನುಷ್ಯ ಸ್ವಭಾವಕ್ಕೆ ತನ್ನ

7033



ತನದ ಅರಿವುಂಟು; ಮತ್ತು ಮನುಷ್ಯನಿಗೆ ಸ್ವಚಿದ್ವಿಕಾಸದ ಪರಿಜ್ಞಾನವೂ ಉಂಟು. ಎರಡನೆಯದಾಗಿ, ಮನುಷ್ಯ ಸ್ವಭಾವಕ್ಕೆ ಉದ್ದೇಶಗ್ರಹಣ ಮಾಡುವ, ಉದ್ದೇಶಸಾಧನೆಗಾಗಿ ಯೋಜನೆ ಮಾಡುವ, ಅದರ ಸಿದ್ಧಿಗಾಗಿ ಬೇಕಾಗುವ ಪುನರ್ವಿಚಾರ ಪುನಸ್ಸಂಸ್ಕಾರ ಮಾಡುವ, ಮತ್ತು ಆತ್ಮವಿಕಾಸಕ್ಕೂ ತಾನಿದ್ದುಕೊಂಡು ಬಾಳಬೇಕಾದ ಪರಿಸರಾಭಿವೃದ್ಧಿಗೂ ತಕ್ಕಂತೆ ಕೃಷಿಮಾಡುವ ಸಾಮರ್ಥ್ಯವುಂಟು.

ಮನುಷ್ಯಸ್ವಭಾವವು ಪ್ರೇರಕಶಕ್ತಿಮಂತವಾದದ್ದು, ಜಟಿಲವಾದದ್ದು, ಮತ್ತು ಪರಸ್ಪರ ವಿರುದ್ಧ ಲಕ್ಷಣಗಳುಳ್ಳದ್ದು. ಅದು ಪ್ರೇರಕ ಶಕ್ತಿಮಂತವಾಗಿರುವುದೇಕೆಂದರೆ,—ಅದರ ಒಳಗಡೆ ಸ್ವಯಂಚಾಲಕ ಶಕ್ತಿಗಳು ಇರುತ್ತ, ಅದು ಇದ್ದುಕೊಂಡಿರುವ ನೆಲೆಯಿಂದ ಅದನ್ನು ಆಗುವ ನೆಲೆಗೆ ಬಲಿಯಿಸಿ ಅರಳಿಸತಕ್ಕವು. ಅದು ಜಟಿಲವಾಗಿರುವುದೇಕೆಂದರೆ,—ಬೇರೆ ಬೇರೆ ಮಟ್ಟಗಳಲ್ಲಿ ಅದು ಕಾರ್ಯಮಾಡಬಲ್ಲ ಅಳವನ್ನು ಪಡೆದಿರುತ್ತದೆ—ಶಾರೀರಕಸ್ತರದಲ್ಲಿ, ಭಾವತುಮುಲದ ಸ್ತರದಲ್ಲಿ, ಬುದ್ಧಿವಿಚಾರದ ಸ್ತರದಲ್ಲಿ, ಮತ್ತು ಮಾನವ ಜೀವನದ ಸಾರವಾಗಿ ಮಾನವತಾಭಾವದ ತಿರುಳಾಗಿ ಆತ್ಮವಿಭೂತಿಯಸ್ತರದಲ್ಲಿ. ಅನೇಕ ಶರೀರಾವಯಗಳು, ಅಂಗಗಳು, ಅವುಗಳ ವಿವಿಧ ಕಾರ್ಯಗಳು—ಅಂಶಾಂಶವಾಗಿ, ವಿಶೇಷವಾಗಿ ಮತ್ತು ಸಮಗ್ರವಾಗಿ ಸ್ವಯಮಾಧಿಕಾರದಿಂದ ವರ್ತಿಸತಕ್ಕವು, ಹೃದಯ ಕ್ರಿಯೆಯಂತೆ, ರಕ್ತ ಸಂಚಲನ ಕ್ರಿಯೆಯಂತೆ, ಸ್ಮರಣ ಶಕ್ತಿಯಂತೆ, ಭಯ-ಕ್ರೋಧ ಪ್ರೇಮ-ದ್ವೇಷ ಮೊದಲಾದ ವಿವಿಧಭಾವ ಪ್ರಕಾಶನದಂತೆ.

ಇಂದು ನಾವುಯಾವುದನ್ನು ಮನುಷ್ಯ ಸ್ವಭಾವ ಎಂದು ಕರೆಯುತ್ತೇವೋ ಅದು ಹೇಗೆ ರೂಪಾಂತರ ಹೊಂದುತ್ತ ಸಾಗಿಬರುತ್ತಿದೆ ಎಂಬುದನ್ನು ನಾವು ಸೂಕ್ಷ್ಮವಾಗಿ ಗಮನಿಸಿ ಪರಿಶೀಲಿಸಬೇಕು. ಅದರ ನಡೆಯಲ್ಲಿ ಉಳಿಯಬಲ್ಲದ್ದರ ಆಯ್ಕೆಯಾಗುತ್ತದೆ ಸಾಂಪ್ರತ ಪರಿಸರ ಪರಿಸ್ಥಿತಿ ಹಾಗೂ ಆವಶ್ಯಕತೆಗಳ ನಡುವಣಿಂದ ಮನುಷ್ಯ ಸ್ವಭಾವದ ಒಂದು ಭಾಗವು ಮೇಲಕ್ಕೆದ್ದುಕೊಳ್ಳುತ್ತದೆ. ಅದೇ ಕಾರ್ಯಗತಿಯಲ್ಲಿ ಎಣಿಕೆಗೆ ಸಿಕ್ಕದಷ್ಟು ನಿನ್ನೆಗಳನ್ನು ಹಾದು ಇವೊತ್ತನ್ನು ತಲಪುವ ಅದೇ ಸ್ವಭಾವದ ಇನ್ನೊಂದು ಭಾಗದ ಮೇಲೆ ಪ್ರತಿಕ್ರಿಯೆ ನಡಸುವ ಅಳವನ್ನು ಪಡೆದಿರುತ್ತದೆ. ಉಳಿಯಬಲ್ಲದ್ದು ಉಳಿದು ಉಳಿಯಲಾರದ್ದು ಅಳಿಯುತ್ತದೆ–ಈ ಸ್ವಭಾವ ಚರಿತೆ ಕ್ರಿಯೆಗಳ ಫಲವಾಗಿ, ನಿಷ್ಠುರ ವರಣ ನಿರ್ಬಂಧದ ಫಲವಾಗಿ.

ಮನುಷ್ಯ ಪ್ರಾಣಿ ಜೀವಂತ ವ್ಯಕ್ತಿಯಾಗಿ ಅಸ್ತಿತ್ವಕ್ಕೆ ಬಂದು, ತನ್ನೊಳಗಡೆ ಪಿತ್ರಾರ್ಜಿತ ಗುಣನಿಧಿಗಳನ್ನು ಅಡಗಿಸಿಕೊಂಡಿರುತ್ತ, ತನ್ನ ನೈಸರ್ಗಿಕ ಹಾಗೂ ಸಾಮಾಜಿಕ ಪರಿಸರಗಳ ಪ್ರಭಾವಕ್ಕೆ ಸಿಕ್ಕುತ್ತ, ಗಳಿಸಿದ ಅನುಭವಗಳ ಫಲವಾಗಿ ತನ್ನ

ಪ್ರಜ್ಞೆಯನ್ನೂ ಸ್ಥಾನ ಮಹಿಮೆಯನ್ನೂ ಹೆಚ್ಚಿಸಿಕೊಳ್ಳುತ್ತಾನೆ. ಮನುಷ್ಯನು ಜನ್ಮ ಕಾಲದಲ್ಲಿ ತನ್ನೊಡನೆ ಹೊತ್ತು ತರುವ ವಂಶಪರಂಪರಾಗತ ಗುಣವೋ-ಅದು ಕೂಡ ಅದರ ಹಿಂದಣ ಪಿತ್ರಾರ್ಜಿತಗುಣ ಸಂಪತ್ತನ್ನು ಸೋರಿಸಿಕೊಂಡು ಪ್ರಭಾವಿತ ವಾಗಿ ಬೆಳೆದು ಬಂದದ್ದು. ಅಂದಂದಿನ ಪರಿಸರಗಳಲ್ಲಿ ಗಳಿಸಿದ ಅನುಭವಗಳು ಮನುಷ್ಯ ಸ್ವಭಾವವನ್ನು ವೃದ್ಧಿಕ್ರಮದಲ್ಲಿ ಬೆಳಸುತ್ತವೆ. ಈ ಅನುಭವಗಳ ಮೊತ್ತವೇ ಮನುಷ್ಯಪ್ರಜ್ಞೆಗೆ ಬಲಾಧಾರ.

ಮನುಷ್ಯ ಜೀವನದ ಒಂದೊಂದು ದಿನವೂ ವಂಶಗುಣಕ್ಕೂ ಪರಿಸರ ಪ್ರಭಾವಕ್ಕೂ ನಡುವೆ ನಡೆಯುವ ಅನ್ಯೋನ್ಯ ಪ್ರಭಾವ ಪ್ರತಿಕ್ರಿಯಾ ಕಾರಣದಿಂದ ಅನುಭವ ಪರಂಪರೆಗಳು ಮೂಡಿ, ಈಗಾಗಲೆ ಅನೇಕ ನೆನ್ನೆಗಳಲ್ಲಿ ರಾಸಿಗೂಡಿದ ಅನುಭವ ಸಂಪತ್ತನ್ನು ಹೆಚ್ಚಿಸುತ್ತ, ಇಂದಿನ ಮಾನವತೆಯ ವ್ಯಕ್ತಿತ್ವವನ್ನು ಬಲಿಯಿಸಿ ನಿಲ್ಲಿಸುತ್ತವೆ. ಮನುಷ್ಯಗುಣದ ಈ ಒಂದು ಅಂಶದಲ್ಲೋ ಹಲವಂಶದಲ್ಲೋ ಆಗುವ ಮಾರ್ಪಾಟುಗಳು ಅವನ ಜೀವನ ವಿಧಾನವನ್ನು ಸ್ವಲ್ಪವಾಗಿಯೋ ಆಮೂಲಾಗ್ರ ವಾಗಿಯೋ ಬದಲಾಯಿಸಿ, ಇಂದಿನ ಹಾಗೂ ನಾಳೆಯ ಮನುಷ್ಯ ಸ್ವಭಾವಗಳಿಗೆ ಜನ್ಮ ಕೊಡಬಹುದು. ವಂಶಗುಣಾರ್ಜನೆ, ಸಾಂಪ್ರತ ಜೀವನ ಪರಿಸರಕ್ಕೆ ಹೊಂದಿಕೆ, ಗುಣ ಕರ್ಮಗಳ ಆಯ್ಕೆ ಮತ್ತು ತತ್ಫಲವಾದ ಅನುಭವ—ಇವೆಲ್ಲ ವ್ಯಕ್ತಿಮನುಷ್ಯನ ಜೀವನ ಶಿಲ್ಪವನ್ನೂ ಸಾಮಾಜಿಕ ಜೀವನ ಶಿಲ್ಪವನ್ನೂ ಕಟ್ಟಿ ನಿಲ್ಲಿಸುವ ಶಿಲೆಗಳು, ಇಟ್ಟಿಗೆಗಳು.

ಈ ತಲೆಮಾರಿನ ಜನ (ಎಂದರೆ, ಉದಾಹರಣೆಗೆ ನ್ಯೂಯಾರ್ಕ್ ಪಟ್ಟಣ ದಲ್ಲೊ ಇಲಿನಾಯ್ ಪಟ್ಟಣದಲ್ಲೋ ವಾಸಿಸುವ ಜನ) ಅವರ ಪೂರ್ವಿಕರಂತೆ ಸ್ಪರ್ಧಾತ್ಮಕವೂ ವಿತ್ತಪ್ರೀತಿಸಿಷ್ಮವೂ ಆದ ಸಮಾಜದಲ್ಲಿ ಬಾಳುತ್ತಿರುವವರು. ಇವ ರನ್ನು ಮುಂದಾಳುಗಳಾಗಿ ಅಂಕುಸವಿಟ್ಟು ನಡಸುತ್ತಿರುವವರು ಕೈ ಚಾಚಿ ಬಾಚಿ ಕೊಳ್ಳುವ ಛಾತಿವಂತರು ಮತ್ತು ದರ್ಪಿಷ್ಠರು. ಈ ತಲೆಮಾರು ಮುಗಿದು ಹೋದ ಮೇಲೆ ಉಳಿದು ಬಾಳಲು ಬರುವ ತಲೆಮಾರಿನ ಜನಕ್ಕೆ ಸ್ಪರ್ಧೆಯ ತಂತ್ರದಲ್ಲೂ ವಿತ್ತಾರ್ಜನೆಯ ತಂತ್ರದಲ್ಲೂ ತಕ್ಕ ಗುಣಮಟ್ಟದ ಶಿಕ್ಷಣ ದೊರೆತಿರುತ್ತದೆ. ಪ್ರತಿ ಯೊಂದು ಪರಿಸರವೂ ತಾನು ಸೃಷ್ಟಿ ಮಾಡಿದ ಸರಕಿನ ಮೇಲೆ ತನ್ನ ಗುರುತು ಮುದ್ರೆ ಯನ್ನೊತ್ತುತ್ತದೆ-ಟಂಕಸಾಲೆಯಲ್ಲಿಯ ನಾಣ್ಯ ನಿರ್ಮಾಪಕಯಂತ್ರ ಖಾಲಿ ನಾಣ್ಯದ ಹಿಂಬದಿ ಮುಂಬದಿಗಳಿಗೆ ಪೂರ್ವಯೋಜಿತ ವಿನ್ಯಾಸವನ್ನು ಮುದ್ರೆಯೊತ್ತುವಂತೆ ಅಮೆರಿಕಾ ಸಂಯುಕ್ತಸಂಸ್ಥಾನಗಳಲ್ಲಿ ಖಾಲಿನಾಣ್ಯವು ಕ್ವಾರ್ಟರ್ ಆಗಿ ಮುದ್ರೆ ಪಡೆದರೆ, ಬ್ರಿಟನ್ನಿನಲ್ಲಿ ಅದು ಷಿಲಿಂಗ್ ಆಗಿ ಮುದ್ರೆ ಪಡೆಯುತ್ತದೆ. ನಮ್ಮ ಗಮನದಲ್ಲಿರವ ಮನುಷ್ಯ ಸ್ವಭಾವವು ಸಾಮಾಜಿಕಚರಿತ್ರೆಯ ಯಾವ ಘಟ್ಟ ದಲ್ಲೇ ಆದರೂ ಅಂದಂದಿ ನಕಾಲಮಾನದ ನಿರ್ಮಾಣವಾಗಿರುತ್ತದೆ. ಹೀಗೆ ಸಾಮಾಜಿಕ

ಪರಿಸರ ಪ್ರಭಾವ ಅನುಭವಗಳಿಂದಲೇ ಮನುಷ್ಯ ವ್ಯಕ್ತಿತ್ವ ಗುರುತು ಮುದ್ರೆಯನ್ನು ಪಡೆದು ವಿಶಿಷ್ಟ ಗಣನೆಗೆ ಬರುತ್ತದೆ.

ನಾಣ್ಯ ನಿರ್ಮಾಪಕ ಯಂತ್ರಗಳು ತಮ್ಮ ಕೊಡುವ ಗುರುತುಗಳನ್ನು ಲೋಹದ ಖಾಲಿ ತಗಡಿನಮೇಲೆ ಒತ್ತುತ್ತವೆ. ಪರಿಸರವೂ ಅದರ ಪ್ರಭಾವಾನುಭವಗಳೂ ಸಾಂಪ್ರತ ಕಾಲದ ಮನುಷ್ಯ ವರ್ಗಕ್ಕೆ ತಮ್ಮ ಮುದ್ರೆಯನ್ನೊತ್ತಿ ಜಗದ್ವ್ಯಾಪಾರದಲ್ಲಿ ಚಲಾವಣೆಗೆ ಸ್ವಭಾವಗಳನ್ನು ಬಿಡುತ್ತವೆ. ಈ ಮನುಷ್ಯವರ್ಗ ತನ್ನ ವಂಶಪರಂಪರೆ ಕನಿಷ್ಠಪಕ್ಷ ಐದುಲಕ್ಷ ವರ್ಷಗಳ ಹಿಂದೆ ಮೊದಲಾಯಿತು ಎಂದು ಅಷ್ಟು ಪ್ರಾಚೀನ ಕಾಲಕ್ಕೆ ತನ್ನ ವಂಶವೃಕ್ಷದ ಮೂಲಾಭಿವೃದ್ಧಿಗಳ ಪೂರ್ವಚರಿತ್ರೆಯನ್ನು ಬೇರಿನವರೆಗೆ ರೇಖಿಸಿ ತಿಳಿಸುತ್ತವೆ. ಮಾನವ ಸಂಸ್ಕೃತಿಯೂ ಅದರ ಚರಿತೆಯೂ ಅಷ್ಟೇ ದೀರ್ಘ ಕಾಲದಿಂದ ಸಾಗಿಬಂದಿರಬೇಕು.

ಮನುಷ್ಯನ ವಿವಿಧ ಸಾಮರ್ಥ್ಯಗಳೂ ಬೇರೆಬೇರೆ ಸಾಮಾಜಿಕ ಪದ್ಧತಿಗಳಿಗೆ ಹೊಂದಿಕೊಂಡು ಬಾಳುವ ಅಳವೂ ಆಮೂಲಾಗ್ರ ಸುಧಾರಕನಿಗೆ ಕೊಡುವ ಭರವಸೆ ಇದು: ಸಾಮಾಜಿಕ ಪರಿಸರದಲ್ಲಿ ಆಗುವ ವ್ಯತ್ಯಾಸವು ಉಳಿಯಬಲ್ಲ ಮನುಷ್ಯರನ್ನು ಆಯ್ಕೆ ಮಾಡುತ್ತದೆ; ಉಳಿಯಬಲ್ಲವರು ಮಾತ್ರ ಉಳಿದು ಉಳಿಯಲಾರದವರು ಅಳಿಯುತ್ತಾರೆ. ಆದರೆ ಸ್ಪರ್ಧಾತ್ಮಕ ವಿತ್ತಾರ್ಜನನಿಷ್ಠ ಪರಿಸರಕ್ಕೆ ಹೊಂದಿಕೊಂಡ ಜನವರ್ಗಕ್ಕೆ ಈ ಭವಿಷ್ಯಜ್ಜೀವನ ಯೋಗವಿಲ್ಲ.

ಸಹಕಾರವು ಸ್ಪರ್ಧೆಗೆ ವಿಸದೃಶವಾದದ್ದು–ಎದುರು ಬದುರಾಗಿರತಕ್ಕ ಭಾವನೆ. ಉಭಯ ಭಾವನೆಗಳೂ ಪರಸ್ಪರ ವಿರೋಧವನ್ನು ಎತ್ತಿತೋರಿಸತಕ್ಕವು. ಸ್ಪರ್ಧೆಯೆಂದರೆ ಒಬ್ಬನು ಸ್ವಹಿತೈಕ ದೃಷ್ಟಿಯಿಂದ ಇನ್ನೊಬ್ಬನ ವಿರುದ್ಧವಾಗಿ ಕೆಲಸ ಮಾಡುವುದು; ಸಹಕಾರವೆಂದರೆ ಒಬ್ಬನು ಇನ್ನೊಬ್ಬನೊಡನೆ ಉಭಯಹಿತಾರ್ಥವಾಗಿ ಕೆಲಸ ಮಾಡುವುದು.

ಪಾಶ್ಚಾತ್ಯ ನಾಗರಿಕತೆ ಸ್ಪರ್ಧೆಯ ತತ್ತ್ವವನ್ನು ಅವಲಂಬಿಸಿ ರಚಿತವಾದದ್ದು. ವಣಿಜರ ವಿರುದ್ಧ ವಣಿಜರು–ಒಂದೇ ಮಾರುಕಟ್ಟೆಯನ್ನು ಮುತ್ತಲು ಹುರುಡು ನಡಸುವವರು. ಕಾರ್ಮಿಕನ ವಿರುದ್ಧ ಕಾರ್ಮಿಕನು–ಒಂದೇ ಉದ್ಯೋಗಕ್ಕೋಸ್ಕರ ಪೈಪೋಟಿ ನಡಸುವವರು. ರಾಷ್ಟ್ರದ ವಿರುದ್ಧ ರಾಷ್ಟ್ರ–ಅನ್ನಕ್ಕೋಸ್ಕರ, ಕಚ್ಚಾಮಾಲಿಗೋಸ್ಕರ ಮತ್ತು ಅಧಿಕಾರಕ್ಕೋಸ್ಕರ ಪೈಪೋಟಿ ನಡಸುತ್ತವೆ. ಅಮೆರಿಕದ ಹಾಗೂ ಪಶ್ಚಿಮದ ಇತರ ಪ್ರದೇಶಗಳ ಜೀವನ ವಿಧಾನಕ್ಕೆ ಅನ್ವಯಿಸಿಕೊಂಡ ತತ್ತ್ವ ಸಮುದಾಯದಲ್ಲಿ ಸ್ಪರ್ಧೆಯ ತತ್ತ್ವವು ಪ್ರಮುಖವಾದದ್ದು.

ಸ್ಪರ್ಧೆಯ ಪರಿಣಾಮ ಫಲದ ವಿಷಯದಲ್ಲಿ ಸಂಶಯಕ್ಕೆ ಅವಕಾಶವೇ ಇಲ್ಲ. ಸ್ಪರ್ಧೆ ಅದರ ವ್ಯಾಪಕವಾದ ಮಟ್ಟದಲ್ಲಿ ರಾಷ್ಟ್ರ-ಸಾಮ್ರಾಜ್ಯಗಳ ನಡುವೆ ಉಳಿವಿಗಾಗಿ ನಡೆಯುವ ಸಮರ ಸಂರಂಭ. ರಾಷ್ಟ್ರ-ಸಾಮ್ರಾಜ್ಯಗಳ ಮಟ್ಟದಲ್ಲಿ ಸಮರವೇ ಉದ್ದೇಶಸಿದ್ಧಿಸಾಧಕವಾದ ನೀತಿಸಾಧನ. ಯುದ್ಧದ ಫಲಿತಾಂಶವು ಮರಣವೇ ಹೊರತು ಜೀವನವಲ್ಲ. ಆದದ್ದರಿಂದ ಸ್ಪರ್ಧೆಯ ತತ್ತ್ವಾವಲಂಬನದಿಂದ ಸಂಘಟಿತವಾಗಿರುವ ಪಾಶ್ಚಾತ್ಯ ನಾಗರಿಕತೆ ಸಾವಿನ ದಾರಿಯನ್ನು ತುಳಿಯುತ್ತಿದೆಯೇ ಹೊರತು ಬದುಕಿನ ದಾರಿಯನ್ನಲ್ಲ.

ಕಾರ್ಯ ಕಾರಣ ಸರಣಿಯ ದೃಷ್ಟಿಯಿಂದ ನೋಡುವ ವಿಚಾರವಂತನಾದ ಯಾವ ಮನುಷ್ಯನಿಗಾದರೂ ಇದು ಸ್ವತಃಸಿದ್ಧವಾದ ಸಂಗತಿ. 1914-18ರ ಯುದ್ಧದ ಅವಧಿಯ ಮತ್ತು 1939-45 ರ ಯುದ್ಧಾವಧಿಯ ಬಳಿಕ ನಡೆಯುತ್ತ ಬಂದ ಘಟನೆಗಳು ಇದೇ ನಿರ್ಣಯವನ್ನು ಸಾರುತ್ತವೆ. ಕಳೆದ ಅರ್ಧಶತಮಾನದ ಅವಧಿ ಕೊಡುವ ಅನುಭವದಿಂದ ಬುದ್ಧಿಶಾಲಿಗಳಾದ ಮನುಷ್ಯರು ಇದೇ ನಿರ್ಣಯಕ್ಕೆ ಬಂದೇ ಬರಬೇಕು.

1945 ಕ್ಕೆ ಮುಂಚೆ, ಆಗ ವಾಡಿಕೆಯಾಗಿದ್ದ ಶಸ್ತ್ರಾಸ್ತ್ರಗಳನ್ನು ಬಳಸಿ ಹೂಡಿದ ಯುದ್ಧಗಳಿಗೆ ಈ ಕಾರ್ಯ ಕಾರಣ ಸಂಬಂಧದ ಯುಕ್ತಿಯನ್ನು ಅನ್ವಯಿಸಲಾಯಿತು. 1945ನೆಯ ಆಗಸ್ಟ್ 6 ನೆಯ ತಾರೀಖು ಮೊದಲನೆಯ ಅಣುಬಾಂಬನ್ನು ಪ್ರಯೋಗಿಸಿದಮೇಲೂ ಯುದ್ಧಸಂಬಂಧವಾಗಿ ಈ ತರ್ಕಪ್ರಯೋಗಕ್ಕೆ ಇನ್ನಷ್ಟು ಬಲಬರುತ್ತದೆ. ಏಕೆಂದರೆ ಅಣ್ವಸ್ತ್ರ ಪರಮಾಣ್ವಸ್ತ್ರಗಳು ತರುವ ವಿನಾಶ ಶಕ್ತಿಸಾಧ್ಯತೆ ಸಂಪ್ರದಾಯವಾಗಿ ರೂಢಿಗೆ ತಂದುಕೊಂಡಿದ್ದ ಶಸ್ತ್ರಗಳು ತರುತ್ತಿದ್ದ ವಿನಾಶಕ್ಕಿಂತ ಬಲು ಹೆಚ್ಚಾಗಿರುತ್ತದೆ ಎಂಬುದು ಹಿರೋಷೀಮಾ ನಾಗಾಸಾಕಿಗಳಲ್ಲಿ ನಡಸಿದ ಪ್ರಯೋಗದಿಂದ ಖಚಿತವಾಯಿತು – ರೈಲುಬಂಡಿ, ಮೋಟರುಬಂಡಿ ಮತ್ತು ವಿಮಾನಗಳು ಸಾಗುವ ವೇಗ ಮನಷ್ಯನಿಗೂ ಕುದುರೆಗಳಿಗೂ ಸಾಧ್ಯವಾದ ವೇಗಕ್ಕಿಂತ ಎಷ್ಟೋಪಾಲು ಹೆಚ್ಚಾಗಿರುವಂತೆ.

ಮನುಷ್ಯನಿಗೆ ಪೈಪೋಟಿ ನಡಸುವುದಕ್ಕೆ ಯಥೇಚ್ಛವಾದ ಸಾಮರ್ಥ್ಯವಿರುತ್ತದೆ ಎಂಬುದನ್ನು ಯಾರೂ ಶಂಕಿಸರು. ನಾಗರಿಕ ಮನುಷ್ಯನು ಅಭಿವೃದ್ಧಿಹೊಂದುತ್ತಿದ್ದಾನೆ, ಸಾವಿರಾರು ವರ್ಷಗಳ ಪ್ರಗತಿ ಪಥದಲ್ಲಿ ನಡೆದ ಮುನ್ನಡೆ ಇದು ಎಂಬುದನ್ನವನು ತೋರಿಸಿಕೊಟ್ಟಿದ್ದಾನೆ. ಇಲ್ಲಿ ನಮ್ಮ ಪರಿಶೀಲನೆಗೆ ಇರುವ ವಿಷಯ ಸ್ಪರ್ಧಾಸಂಬಂಧದಲ್ಲಿ ಮನುಷ್ಯ ಸಾಮರ್ಥ್ಯವೆಷ್ಟು ಎಂಬುದಲ್ಲ, ಸಹಕಾರ ಸಂಬಂಧದಲ್ಲಿ ಅವನ ಸಾಮರ್ಥ್ಯವೆಷ್ಟು ಎಂಬುದು.

ಅಣ್ವಸ್ತ್ರಗಳ ಆದಿಪರೀಕ್ಷಾ ಪ್ರಯೋಗಗಳಿಂದ ಸಂಪಾದಿಸಿದ ಪರಿಮಿತಾನುಭವ ದಿಂದ ಹುರುಪೇರಿ, ನಾನಾ ರಾಷ್ಟ್ರ ಪ್ರಭುತ್ವಗಳು ಆ ಆದ್ಯಸ್ತ್ರಗಳಿಗಿಂತ ಭೀಕರ ಪರಿಣಾಮ ತರುವ ಪರಮಾಣ್ವಸ್ತ್ರಗಳನ್ನು ತಯಾರಿಸಿ. ಭಾರೀ ಪರಿಣಾಮದಲ್ಲಿ ಪ್ರಪಂಚದ ಅನೇಕ ಕಡೆಗಳಲ್ಲಿ ದಾಸ್ತಾನು ಮಾಡಿಕೊಂಡಿವೆ. ಪ್ರಥಮ ಪ್ರಯೋ ಗದ ಅನುಭವ ಕಣ್ಣೆದುರಿಗಿರುವಾಗ, ಮನುಷ್ಯನು ಆತ್ಮಪರೀಕ್ಷಣ ಮಾಡಿಕೊಳ್ಳಲು ತನಗಿರುವ ಸಾಮರ್ಥ್ಯವನ್ನು ಬಳಸಿ, ಸ್ಪರ್ಧೆಯನ್ನು ತುಚ್ಛೀಕರಿಸಿ, ಸಹಕಾರದ ಮೇಲ್ಮೆಯನ್ನು ಕಂಡುಕೊಂಡಾನೆ ? ಇನ್ನು ಸರಳವಾದ ಮಾತುಗಳಲ್ಲಿ ಹೇಳಬೇಕಾದರೆ —ಇಂದು ಮನುಷ್ಯವರ್ಗ ಎದುರಿಸಬೇಕಾದ ಮುಖ್ಯತಮ ಸಮಸ್ಯೆಯನ್ನು ಒಂದೇ ವಾಕ್ಯದಲ್ಲಿ ಹೇಳಿಬಿಡಬಹುದು ; ಜನ ಸಂಪರ್ಕವೂ ಸಹವಾಸವೂ ಎಲ್ಲೆಲ್ಲಿ ಆಗು ತ್ತತೆಯೋ ಅಲ್ಲೆಲ್ಲ ಎಲ್ಲ ಮಟ್ಟಗಳಲ್ಲೂ ಸಹಕರಿಸುವ ಆವಶ್ಯಕತೆಯನ್ನು—ಅನಿ ವಾರ್ಯತೆಯನ್ನು—ಮನುಷ್ಯನು ಕಲಿತುಕೊಂಡಾನೆ ?

ಪ್ರಶ್ನೆಯನ್ನು ಕೇಳಿದೊಡನೆ, ಸ್ವರಭಾರಹಾಕಿ – "ಹೌದು, ಕಲಿಯಲು ಮನುಷ್ಯನಿಗೆ ಸಾಧ್ಯ" ಎಂದು ಉತ್ತರ ಹೇಳಬಹುದು. ನಿಜ, ಮನುಷ್ಯನಿಗೆ ಸಹ ಕಾರ ಕೊಡುವ ಸಾಮರ್ಥ್ಯವುಂಟು. ಪ್ರತಿನಿತ್ಯದ ಕುಟುಂಬ ಜೀವನ ವಿವರದಲ್ಲೂ, ನೆರೆಹೊರೆಯವರೊಡನೆ ಇಟ್ಟುಕೊಂಡ ವ್ಯವಹಾರ ಸಂಬಂಧದಲ್ಲೂ, ವಸ್ತುಗಳ ಉತ್ಪಾದನೆ ಸಾಗಣೆ ಸಮಾಚಾರ ನಿವೇದನೆ ಸಂಘಟಿತ ಕ್ರೀಡೆಗಳು ಮತ್ತು ವಿನೋದ ಕೇಳಿಗಳಲ್ಲೂ ಈ ಸಹಕಾರವೃತ್ತಿ ನಡೆಯುತ್ತಿರುವುದನ್ನು ಮನುಷ್ಯರು ಪ್ರದರ್ಶನ ಮಾಡುತ್ತಲೇ ಬಂದಿದ್ದಾರೆ. ಸಹಕಾರ ಕಲೆಯ ಒಳ್ಳೆಯ ತಿಳಿವಳಿಕೆ ಮನುಷ್ಯನಿಗೆ ಇದೆ. ; ಮತ್ತು ಸಂಸ್ಕೃತಿಯ ಸ್ತರದಲ್ಲಿ ಸಹಕಾರದ ಆಚರಣೆಯೂ, ಅಭಿವ್ಯಕ್ತವಾಗುತ್ತಿದೆ. ಇನ್ನೂ ಪ್ರಾಚೀನ ಅಸಭ್ಯ ಗ್ರಾಮ್ಯ (ಪ್ರಾಕೃತ) ದಶೆಯಲ್ಲಿ ರುವ ಜನಕ್ಕೆ ಮಾತ್ರ ಸಹಕಾರ ತತ್ತ್ವದ ರುಚಿಗೊತ್ತಿಲ್ಲ, ಅಷ್ಟೆ.

ಮನುಷ್ಯಪ್ರಾಣಿಗಳು ಸ್ಪರ್ಧೆಯನ್ನೂ ಸಹಕಾರವನ್ನೂ ತಮ್ಮ ಯುವದಶೆಯ ಜೀವನದಲ್ಲಿ ಆಚರಣೆಯಲ್ಲಿರಿಸಿಕೊಂಡಿರುತ್ತಾರೆ. ಈ ಎರಡು ಪರಸ್ಪರ ವಿರುದ್ಧ ಪ್ರವೃತ್ತಿ ಗಳು ಪ್ರತಿಯೊಂದು ಮನುಷ್ಯ ಸಮಾಜದಲ್ಲೂ ಎದುರುಬದುರಾಗಿರುತ್ತ, ಸಮಾಂತರ ದಲ್ಲಿ ಕಾರ್ಯ ಮಾಡುತ್ತವೆ. ಆದರೆ ನಾಗರಿಕ ಮನುಷ್ಯನು ಇವೆರಡರಲ್ಲಿ ಒಂದನ್ನು ಆಯ್ದುಕೊಳ್ಳುವ ಗೋಜಿಗೆ ಎಂದಾದರೊಂದು ದಿನ ಸಿಕ್ಕುತ್ತಾನೆ. ಇತಿಹಾಸದ ನಿರ್ಣಾಯಕ ಘಟ್ಟದಲ್ಲಿ ನೀವು ಸ್ಪರ್ಧಿಸಬೇಕೆ, ಇಲ್ಲವೆ ಸಹಕರಿಸಬೇಕೆ ? ಪ್ರಾಯಶಃ ಸ್ಪರ್ಧೆಗೇ ಬಗೆ ಒಲಿಯಬಹುದು ; ಏಕೆಂದರೆ ಪದ್ಧತಿ ಅಭ್ಯಾಸಗಳೆರಡೂ ಸ್ಪರ್ಧೆಯ ಕಡೆಗೆ ವಾಲುತ್ತವೆ; ಮತ್ತು ನಾಗರಿಕತೆಯ ವಿವಿಧ ಸಂಸ್ಥೆಗಳು ಸ್ಪರ್ಧೆಗೆ ಮೊದಲ ನೆಯ ಮುಖ್ಯಸ್ಥಾನವನ್ನು ಕೊಟ್ಟು, ಸಹಕಾರಕ್ಕೆ ಎರಡನೆಯ–ಗೌಣ–ಸ್ಥಾನವನ್ನು

ತೋರಿಸುತ್ತನೆ. ಒಂದೊಂದು ದೇಶದ ಒಳಗಡೆಯೂ ವರ್ತಕ ಸಂಸ್ಥೆಗಳೂ ಸೈನ್ಯ ಬಲವೂ ಕೆಲವು ಕ್ಷೇತ್ರಗಳಲ್ಲಿ ಸ್ಪರ್ಧಿಸುತ್ತ, ಇನ್ನು ಕೆಲವು ಕ್ಷೇತ್ರಗಳಲ್ಲಿ ಸಹಕರಿಸುತ್ತ ಇರುವುದನ್ನು ನಾವು ನೋಡಬಹುದು. ವಾಣಿಜ್ಯ ಕೂಟಗಳ ರಚನೆ, ಅನ್ಯೋನ್ಯ ಸಂಬಂಧ ಸಂಘಟನೆ, ಧನ ಸಂಚಯನ ವ್ಯವಸ್ಥೆ–ಇವು ಕೌಟುಂಬಿಕ ಕ್ಷೇತ್ರದಲ್ಲಿಯೂ ಅಂತರರಾಷ್ಟ್ರೀಯ ಸ್ತರದಲ್ಲೂ ಮನುಷ್ಯ ವೃತ್ತಿಯು ಸಹಕಾರದ ಕಡೆಗೆ ವಾಲುವುದನ್ನು ಸೂಚಿಸುತ್ತವೆ. ಸೈನಿಕ ಸಂಸ್ಥೆಗಳು ಬೇರೆ ವರ್ಗದಲ್ಲಿ ಪರಿಶೀಲನೆಗೆ ಬರತಕ್ಕವು. ವಾಣಿಜ್ಯದ ಗುರಿ ಲಾಭಸಂಪಾದನೆ. ಸ್ಪರ್ಧೆಗಿಂತ ಸಹಕಾರದಲ್ಲಿ ನಡೆಯುವ ವಾಣಿಜ್ಯ ವ್ಯವಹಾರಗಳಿಂದ ಹೆಚ್ಚು ಲಾಭಸಂಪಾದನೆಯಾಗುತ್ತದೆ. ವಾಣಿಜ್ಯವು ಧನ-ಸಂಚಯನ ಸಹಕಾರಗಳ ಕಡೆಗೆ ವಾಲಿದರೆ ಸೈನ್ಯ ಸಂಸ್ಥೆಗಳು ಸ್ಪರ್ಧೆಯ ಕಡೆಗೆ ವಾಲುತ್ತವೆ.

## ವಾಣಿಜ್ಯಕ್ಷೇತ್ರ ಸೈನಿಕಕ್ಷೇತ್ರಗಳಲ್ಲಿ ಆಯ್ಕೆ

ಸ್ಪರ್ಧೆ ಸಹಕಾರಗಳೆರಡರಲ್ಲಿ ಒಂದನ್ನು ಆಯ್ಕೆಮಾಡುವ ವಿವೇಚನೆಯ ಪ್ರಶ್ನೆ ನಮ್ಮಮುಂದೆ ನಿಂತಾಗ, ಲಿಬರಲ್ (ಮಿತಸುಧಾರಣೆಯ) ಪಂಥಿಗಳೂ ಕನ್ಸರ್ವೆಟಿವ್ (ಸಂಪ್ರದಾಯಪಾಲಕ) ಪಂಥಿಗಳೂ ತಮ್ಮ ಅಭಿಮತವನ್ನು ಸ್ಪರ್ಧೆಯ ಪರವಾಗಿಯೇ ಚಲಾಯಿಸುತ್ತಾರೆ. ಏಕೆಂದರೆ, ಅವರ ಆಯ್ಕೆಗೆ ಆಧಾರವಾದ ಕಾರಣವನ್ನು ಬಿಡಿಸಿ ನೋಡಿದಾಗ, ಅವರು ಪದ್ಧತಿಯಂತೆ ಸಾಗಿಬಂದ ನಾಗರಿಕ ಜೀವನ ವಿಧಾನವನ್ನು ಕಾಪಾಡಲು ಬಯಸುತ್ತಾರೆಂಬುದು ಗೊತ್ತಾಗುತ್ತದೆ. ರ್‍ಯಾಡಿಕಲ್ (ಆಮೂಲಾಗ್ರ ಸುಧಾರಕ) ಪಂಥದವರಾದರೋ ಸಹಕಾರವನ್ನೇ ಚುನಾಯಿಸಿಕೊಳ್ಳುತ್ತಾರೆ. ಏಕೆಂದರೆ, ಮನುಷ್ಯವರ್ಗದಲ್ಲಿ ಮೊದಲು ಸಹಕಾರ ವೃತ್ತಿಯನ್ನು ಬಲಿಯಿಸುವುದಕ್ಕೆ ನಾವು ಅಣಿಯಾಗದಿದ್ದರೆ, ಕಾರಣ ಸನ್ನಿವೇಶಗಳು ಒದಗಿಬಂದಾಗ ಮಾತ್ರ ಸ್ಪರ್ಧೆಯನ್ನು ಪ್ರಯೋಗಿಸದೆ–ಎಲ್ಲ ಸಂದರ್ಭಗಳಲ್ಲೂ ಸ್ಪರ್ಧೆಯನ್ನೇ ಹೂಡುತ್ತ ಬಂದೆವಾದರೆ, ಪರಮಾಣು ಶಸ್ತ್ರಾಸ್ತ್ರಸಜ್ಜಿತವಾದ ಸಮಾಜದಲ್ಲಿ ಮನುಷ್ಯನು ಉಳಿದು ಬಾಳಲಾರನು.

ಆದದ್ದರಿಂದ ನಾವು ಸಹಕಾರ–ಸ್ಪರ್ಧೆಗಳ ಬಗ್ಗೆ ಬಹುಕಾಲೋಪಯೋಗದ ಮರ್ಯಾದೆಯಿಂದ ಸಾಗಿಬಂದಿರುವ ಸಾಂಪ್ರದಾಯಿಕ ಸಂಬಂಧವನ್ನು ಮಾರ್ಪಡಿಸಬೇಕು. ಪದ್ಧತಿ ಅಭ್ಯಾಸಗಳ ದೃಷ್ಟಿಯಿಂದ ಸಹಕಾರವೇ, ಅಥವಾ ಸ್ಪರ್ಧೆಯೆ ಎಂಬ ಪ್ರಯೋಗಾನ್ವಯ ಸಂಬಂಧವನ್ನು ಇದುವರೆಗೆ ಪರಿಶೀಲಿಸಿ ಸ್ಪರ್ಧೆಗೇ ಪ್ರಾಶಸ್ತ್ಯ ಕೊಟ್ಟು ಕೊಂಡುಬಂದೆವು. ಸಹಕಾರಕ್ಕೆ ಕೊಡಬೇಕಾದ ಬೆಲೆಯನ್ನು ಸ್ಪರ್ಧೆಗೆ ಕೊಟ್ಟು, ಆಚರಣೆಗೆ ತಂದು, ಅದರ ಫಲಾಫಲಗಳನ್ನು ನೋಡಿದ್ದಾಯಿತು. ಇನ್ನು ಮುಂದೆ ಸಮಾನ ಪರಿಸ್ಥಿತಿ ಸನ್ನಿವೇಶಗಳಲ್ಲಿ ಸ್ಪರ್ಧೆಯನ್ನು ಪಕ್ಕಕ್ಕೆ ಸರಿಯಿಸಿಸಬೇಕು;

ಸಹಕಾರಕ್ಕೆ ಹೆಚ್ಚು ಬೆಲೆ ಸಲ್ಲಿಸಿ ಅದನ್ನು ಅನುಷ್ಠಾನಕ್ಕೆ ತರಬೇಕು–ಭೂಗ್ರಹದಲ್ಲಿ ಮನುಷ್ಯವರ್ಗ ನಾಮಾವಶೇಷವಾಗದಂತೆ ಉಳಿದು ಬಾಳಬೇಕಾದರೆ.

ಮನುಷ್ಯರು ಸಹಕರಿಸುತ್ತಾರೆ; ಹೊಸದಾಗಿ ಅವರು ಬೆಳಸಿಕೊಂಡ ಶಕ್ತಿಯನ್ನು ಸೃಜನಾತ್ಮಕವಾಗಿ ಬಳಸಿಕೊಳ್ಳುತ್ತಾರೆ, ಬದುಕುತ್ತಾರೆ—ಇಲ್ಲದಿದ್ದರೆ ಸಂಪ್ರದಾಯ ವನ್ನವಲಂಬಿಸಿ, ಸಹಕಾರವನ್ನೊಲ್ಲದೆ, ಸಮೀಪದೃಷ್ಟಿದೋಷದಿಂದಲೂ ಪ್ರಮಾದ ದಿಂದಲೂ ಸ್ಪರ್ಧೆಗೆ ಇಂಬುಗೊಟ್ಟು, ತಾವೇ ಕಟ್ಟಿದ ನಾಗರಿಕತೆಯನ್ನೂ ಒದಗಿದ ಜೀವನಾವಕಾಶವನ್ನೂ ಧ್ವಂಸಮಾಡಿಕೊಳ್ಳುತ್ತಾರೆ. ಇಂದು ಮನುಷ್ಯನ ಮುಂದಿ ರುವ ಮಹಾನಿರ್ಣಾಯಕ ಪ್ರಶ್ನೆ ಇದು: ಅದರಲ್ಲೂ ತಾನು ಈಚೆಗೆ ಕಂಡ ನೂತನ ಶೋಧನೆ ಮತ್ತು ಮಾಡಿಕೊಂಡ ನಿರ್ಮಾಣಗಳಿಂದ, ಮನುಷ್ಯನು–ಪ್ರಕೃತಿಗರ್ಭದಲ್ಲಿ ಅಡಗಿದ್ದು ಮುಂದೆ ಅತ್ಯಂತ ಪ್ರಭಾವಶಾಲಿಯಾಗಿ ಪ್ರಬಲಿಸಿ ಬೆಳೆಯುವ ಶಕ್ತಿಗಳನ್ನು ಸ್ವಾಧೀನ ಪಡಿಸಿಕೊಂಡಿರುವಾಗ, ಅವನ ಮುಂದಿರುವ ಈ ಆಯ್ಕೆಯ ಪ್ರಶ್ನೆ ಎಷ್ಟು ಗಂಭೀರ, ಗುರುತರ ಎಂಬುದು ಸ್ಪಷ್ಟವಾಗುತ್ತದೆ.

ಕಳೆದ ಅರ್ಧಶತಮಾನದ ಅವಧಿಯಲ್ಲಿ ನಾವು, ಕೆಲವು ರಾಷ್ಟ್ರಗಳಲ್ಲಿ ಮನು ಷ್ಯನು ಕ್ರಮಕ್ರಮವಾಗಿ ಸಹಕಾರಕ್ಕೆ ಮೇಲ್ಮೆಯನ್ನು ಕೊಟ್ಟು ಸ್ಪರ್ಧೆಗೆ ಕೆಳನೆಲೆ ಯನ್ನು ಕೊಡುತ್ತ ಬಾಳುತ್ತಿರುವುದನ್ನು ನೋಡಿದ್ದೇವೆ. ಈ ಒಂದು ಪರಿವರ್ತನ ಚಲನೆಯನ್ನು ಇದುವರೆಗೆ ಸ್ಪರ್ಧೆಗೆ ಪ್ರಾಮುಖ್ಯವನ್ನುಕೊಟ್ಟುಕೊಂಡು ಬಂದ ಖಾಸಗಿ ಉದ್ಯಮವ್ಯಾಪಾರದಲ್ಲಿ ನಾವು ಗಮನಿಸಿದ್ದೇವೆ. ಇಂದು ಜನರ ಆಸಕ್ತಿ ಧನಸಂಚ ಯನದ ಐಕ್ಯ–ಸಹವರ್ತನೆಗಳ ಕಡೆಗೆ ತಿರುಗುತ್ತಿದೆ. ಈ ಪರಿವರ್ತನೆಯೇನೂ ಆಯ್ಕೆ ಮಾಡಿಕೊಂಡ ವಿವೇಚನೆಯ ಫಲವಲ್ಲ; ಅಭಿವೃದ್ಧಿ ಕ್ರಮದಲ್ಲಿರುವ ತಂತ್ರಜ್ಞಾನವು ನಿರ್ಬಂಧವಾಗಿ ಮುಂದೊತ್ತಿದ ನಿಯತಿ ಕಾರಣದಿಂದ ಮೂಡಿದ ಕಾರ್ಯಫಲ.

ಅದೇ ಸಂದ ಅರ್ಧಶತಮಾನದ ಅವಧಿಯಲ್ಲಿ ಶಸ್ತ್ರಸಜ್ಜಿತ ಸೇನಾಸಂಸ್ಥೆಗಳು ಸ್ಪರ್ಧೆಯಲ್ಲಿ ತೊಡಗಿ ಎರಡು ಮಹಾಯುದ್ಧಗಳನ್ನೂ ಹದಿನೈದಿಪ್ಪತ್ತು ಅಷ್ಟು ದೊಡ್ಡವಲ್ಲದ ಯುದ್ಧಗಳನ್ನೂ ಹಾಯಬೇಕಾಗಿಬಂದದ್ದನ್ನು ನಾವು ನೋಡಿದ್ದೇವೆ. ಇಂದಿನ ಶೀತಲಸಮರವೂ ಅದಕ್ಕೆ ಹೊಂದಿಕೊಂಡಂತೆ ನಡೆಯುತ್ತಿರುವ ಶಸ್ತ್ರಾಸ್ತ್ರಗಳ ನಿರ್ಮಾಣ ಸಂಚಯನ ಸ್ಪರ್ಧೆಯೂ ಸೈನ್ಯಯಂತ್ರದಲ್ಲಿ ಚಟುವಟಿಕೆಯನ್ನೇರಿಸಿವೆ; ಸೈನ್ಯದ ಒತ್ತಡಗಳಿಗೆ ಸಿಕ್ಕಿ ರಾಷ್ಟ್ರನೀತಿಗಳನ್ನು ರೂಪಿಸುವ ಒಂದೊಂದು ರಾಷ್ಟ್ರ ವನ್ನೂ ಇನ್ನಷ್ಟು ತೀವ್ರ ಸ್ಪರ್ಧಾತ್ಮಕ ಘರ್ಷಣೆಗೆ ಇವು ದೂಡುತ್ತಿವೆ. ರಾಷ್ಟ್ರರಾಷ್ಟ್ರಗಳ ನಡುವೆ ಸಾಂಪ್ರದಾಯಿಕವಾಗಿ ನೆಲಸಿರುವ ವೈಮನಸ್ಯವೂ ಶೀತಲಸಮರವು ವ್ಯಾಪಕ ವಾಗಿ ಹರಡುತ್ತಿರುವ ದ್ವೇಷಾಸೂಯೆಗಳೂ ಇನ್ನೂ ಹೆಚ್ಚಾಗುವ ಪರಿಸರವಿಂದು ಮನುಷ್ಯನಿಂದ ಕಲ್ಪನೆಯಾಗಿದೆ.

ಈ ಧೋರಣೆಯ ಫಲ ಇನ್ನೂ ಅನಿಶ್ಚಯದಲ್ಲೇ ಇರುವಾಗ, ಚರ್ಚೆಯಲ್ಲಿರುವ ವಿಷಯಗಳನ್ನು ಇತ್ಯರ್ಥಮಾಡಲು ಸೈನ್ಯಯಂತ್ರವನ್ನು ಬಳಸಿ ಯುದ್ಧಮುಖದಿಂದಲೂ ವಿಜಯ ಪ್ರಭಾವದಿಂದಲೂ ಕೈಕೊಳ್ಳುವ ಪ್ರಯತ್ನಗಳು ಹೆಚ್ಚುತ್ತಿರುವಾಗ ಕೂಡ-ವೈಯಕ್ತಿಕವಾದ ಅಹಂಕಾರೈಕ ವೃತ್ತಿಯನ್ನು ತೊರೆಯಲು ಮನುಷ್ಯರಲ್ಲಿ ಸಾಮಾಜಿಕ ಪ್ರಜ್ಞೆ ಎಚ್ಚುತ್ತು, ಅಂತರರಾಷ್ಟ್ರೀಯ ಸಂಬಂಧಗಳ ಮಟ್ಟದಲ್ಲಿ ಕೂಡ ಅದು ಸಹಕಾರ ಮುಖದಿಂದ ಕಾರ್ಯ ಮಾಡುತ್ತದೆಯೆಂದೂ; ಸ್ಪರ್ಧೆಗಿಂತ ಸಹಕಾರವೇ ಅನುಷ್ಠಾನ ಯೋಗ್ಯವೆಂಬ ನಿರ್ಣಾಯಕ ಘಟ್ಟಕ್ಕೆ ಮನುಷ್ಯನು ಬರುತ್ತಾನೆಂದೂ ಆಮೂಲಾಗ್ರ ಸುಧಾರಕರಾದ ನಾವು-ರ್‍ಯಾಡಿಕಲ್ ಪಂಥದವರು-ನಂಬುತ್ತೇವೆ.

ಆದರೆ ಲಿಬರಲ್ ಮತ್ತು ಕನ್ಸರ್ವೆಟಿವ್ ಪಂಥದವರು ಒಕ್ಕೊರಲಿಂದ ಸಾರುತ್ತಾರೆ-ಸ್ಪರ್ಧೆಯನ್ನು ಸಹಕಾರಕ್ಕೆ ಅಧೀನವಾಗಿಮಾಡಿಬಿಟ್ಟರೆ ಜೀವನದಲ್ಲಿರುವ ರುಚಿಯನ್ನೇ ನೀವು ತೆಗೆದುಹಾಕುತ್ತೀರಿ. ಬರಿಯ ಸಪ್ಪೆಯನ್ನು ಸವಿಯುವುದುಹೇಗೆ? ಮನುಷ್ಯರು ಸ್ಪರ್ಧಿಸಲಾರರಾದರೆ, ಹೋರಾಟದಲ್ಲಿ ಗೆಲುವನ್ನು ಗಳಿಸಲಾರರಾದರೆ, ಸೋತವರ ಮುಂದೆ ಗೆದ್ದವರ ಮೇಲ್ಮೆಯನ್ನು ಖಚಿತ ಪಡಿಸುವ ಅವಕಾಶ ಇಲ್ಲವಾದರೆ-ಬದುಕಿರುವುದಾದರೂ ಯಾತಕ್ಕೆ? ಸ್ಪರ್ಧೆಯನ್ನು ತೊರೆದ ಜನ ಬದುಕಿ ಸಾಧಿಸುವುದಾದರೂ ಏನನ್ನು ?

ಅವರೆತ್ತಿದ ಈ ಪ್ರಶ್ನೆಗಳಿಗೆ ರ್‍ಯಾಡಿಕಲ್ ಪಂಥದ ನಾನು ಹೀಗೆ ಉತ್ತರ ಹೇಳುತ್ತೇನೆ. ಮೊದಲನೆಯದಾಗಿ, ರಾಶಿರಾಶಿಯಾಗಿ ಪೇರಿಸಿಕೊಂಡಿರುವ ಮೆಗಟಾನ್ ಬಾಂಬುಗಳ ಪ್ರಯೋಗ ಸಂಭವದ ಇಕ್ಕಟ್ಟಿನಲ್ಲಿ ಮನುಷ್ಯನು ಅಳಿಯದೆ ಉಳಿಯಬಲ್ಲನಾದರೆ, ಆ ಉಳಿವು ಅಂತರರಾಷ್ಟ್ರೀಯ ಸಹಕಾರ ತತ್ತ್ವದ ಆಧಾರವಿದ್ದಾಗ ಮಾತ್ರ ನಿಜವಾದೀತು. ಈ ಸಹಕಾರ ಸಿದ್ಧಿಯಾಗಿ, ಅಣ್ವಸ್ತ್ರ ಲೋಭಿಗಳಾದ ರಾಷ್ಟ್ರಗಳು ಮಾರಕಾಸ್ತ್ರಗಳನ್ನು ಯುದ್ಧದಲ್ಲಿ ಪ್ರಯೋಗಮಾಡುವುದಕ್ಕೆ ಮುಂಚೆಯೇ ಅಣು ವಿದ್ಯೆಯನ್ನು ಶಾಂತ್ಯುದ್ದೇಶಗಳಿಗೆ, ಬಳಸಲು ಅಣಿಯಾಗಬೇಕು. ಎರಡನೆಯದಾಗಿ, ರ್‍ಯಾಡಿಕಲ್ ಪಂಥದ ನಾವು ಈ ಸಹಕಾರಸಿದ್ಧಿಗೋಸ್ಕರ ಮನುಷ್ಯನ ಸೃಜನಾತ್ಮಕ ಶಕ್ತಿಗಳನ್ನು ವಿಸ್ತರಿಸಿ ಪೂರ್ತಿಯಾಗಿ ಉಪಯೋಗಿಸಿಕೊಳ್ಳಬೇಕು.

## ಮನುಷ್ಯನ ಸೃಜನಾತ್ಮಕ ಶಕ್ತಿಗಳು

ಪ್ರತಿಕಕ್ಷಿಗಳೊಡನೆ ಸ್ಪರ್ಧೆಮಾಡುವುದಕ್ಕಿಂತ ಮನುಷ್ಯರು ಜೊತೆಯ ಮನುಷ್ಯರೊಡನೆ ಕ್ರಿಯಾತ್ಮಕವಾಗಿ ಸಹಕರಿಸುತ್ತ ಪ್ರಕೃತಿ ಸಂಪತ್ತನ್ನು ಸಮಸ್ತ ಜನಹಿತಕ್ಕೋಸ್ಕರ ಬಳಸಿಕೊಳ್ಳುವುದು ಹೇಗೆಂಬುದನ್ನು ಕಲಿತುಕೊಳ್ಳುತ್ತಿದ್ದಾನೆ. ಸಮಾಜವನ್ನು ಸರಿಯಾಗಿ ಸಂಘಟಿಸುವುದು ಹೇಗೆಂಬುದನ್ನು ಮನುಷ್ಯರು ಕಲಿತುಕೊಳ್ಳುತ್ತಿ

ದ್ದಾರೆ. ಮುಂದೆ ಬರುವತ ಲೆಮಾರಿಗೆ ಸ್ಫೂರ್ತಿಪ್ರದವಾಗುವಂತೆ ಉಪಯುಕ್ತವೂ ಸುಂದರವೂ ನೀತಿನಿಷ್ಠವೂ ಸಮರಸಭರಿತವೂ ಆಗಿರುವಂತೆ ನಿತ್ಯವರ್ಧಿಷ್ಣುವಾದ ಮನುಷ್ಯ ಸಮಾಜವನ್ನು ನಮ್ಮ ಭೂ ಗ್ರಹದಲ್ಲಿ ನೆಲೆಗೊಳಿಸುವುದಕ್ಕಾಗಿ ಜನರು ತಮ್ಮ ಸಾಮರ್ಥ್ಯಗಳನ್ನು ಹೂಡಿ, ಮೇಧಾಶಕ್ತಿಯನ್ನು ಪ್ರಯೋಗಿಸಿ ಕಾರ್ಯ ಮಾಡು ತ್ತಿದ್ದಾರೆ. ಈ ಪ್ರಯತ್ನಕ್ಕೆ ಸಲ್ಲುತ್ತಿರುವ ಗೆಲುವು ಎಷ್ಟೆಂಬುದನ್ನು ಮುಖ್ಯವಾಗಿ ಯೂರೋಪು ಮತ್ತು ಏಷ್ಯಾಖಂಡಗಳ ಸಮುತಾವಾದಿ ರಾಷ್ಟ್ರಪ್ರಜೆಗಳು ಎತ್ತಿ ತೋರಿಸು ತ್ತಿದ್ದಾರೆ.ಈ ಪ್ರಯತ್ನದಿಂದ ಪಶ್ಚಿಮದ ಖಾಸಗಿ ಜನಜೀವನಕ್ಕೂ ಸಾರ್ವಜನಿ ಜನಜೀವನಕ್ಕೂ ಮುಖ್ಯವಾದ ಕಾಣಿಕೆ ಸಲ್ಲುತ್ತಿದೆ.

ಪ್ರತಿಯೊಂದು ಜೀವರೂಪ ಪ್ರಕಾರವೂ–ಸೂಕ್ಷ್ಮಾಕಾರದಿಂದ ಹಿಡಿದು ದೈತ್ಯಾ ಕಾರದ ವರೆಗೆ–ಸೃಜನ ಕಾರ್ಯಗತಿಯಲ್ಲಿ ತನ್ನ ತನ್ನ ಪಾತ್ರವನ್ನು ವಹಿಸುತ್ತಿದೆ. ಸಸ್ಯಗಳು ಕೀಟಗಳು ಜಂತುಗಳು ಮನುಷ್ಯರು ತಂತಮ್ಮ ಜಾತಿಯನ್ನು ಸೃಷ್ಟಿ ಸುತ್ತಾರೆ. ಪುನಃ ಸೃಷ್ಟಿಸುತ್ತಾರೆ. ಸೃಷ್ಟಿಕಾರ್ಯವೆಂದರೆ ಎಂದೋ ಬಹುದೂರದ ಭೂತಕಾಲದ ಯಾವುದೋ ಒಂದು ಘಟ್ಟದಲ್ಲಿ ಆಗಿ ಮುಗಿದ ಮಾತಲ್ಲ. ಸಂಖ್ಯಾಮಾನ ದಲ್ಲಿ ಸಂವರ್ಧಿಸುತ್ತ, ಗುಣಾಕಾರ ಪ್ರಮಾಣದಲ್ಲಿ ಪರಿವರ್ಧಿಸುತ್ತ, ಉತ್ತರೋತ್ತಮ ವಾಗಿ ಬೆಳೆಬೆಳೆಯುತ್ತ ಹೋಗುತ್ತದೆ. ಎಂಬುದು ಸೃಷ್ಟಿಯನ್ನು ಕುರಿತ ಅನುಭವ ಪೂರ್ವಕವಾದ ಪ್ರತಿನಿತ್ಯದ ಚರಿತೆ, ಘಂಟೆಘಂಟೆಯ ಚರಿತೆ.

ಸೃಷ್ಟಿಕಾರ್ಯಪರಂಪರೆಯು ಉದ್ದೇಶಬೋಧೆಯ ಸಾಕ್ಷ್ಯಾಧಾರವೊದಗಿಸುತ್ತ ಸಾಗದೆ ಇರಬಹುದು. ಸಸ್ಯಪ್ರಪಂಚ ಸಂವರ್ಧಿಸುತ್ತದೆ, ಗುಣಾಕಾರ ಕ್ರಮದಲ್ಲಿ ಸಂವರ್ಧಿಸುತ್ತದೆ. ಸಸ್ಯಗರ್ಭದಲ್ಲೇ ನೆಲಸಿರುವ ಶಕ್ತಿಗಳ ಪ್ರಭಾವದಿಂದ, ಅಭಿವೃದ್ಧಿ ಗೊಂಡು ವಿಕಸಿತವಾಗುತ್ತದೆ. ಭೂವ್ಯವಸಾಯಕ್ಷೇತ್ರದ ಜೀವಗತಿಯಲ್ಲಾಗಲಿ, ಅರಣ್ಯಕ್ಷೇತ್ರದ ಜೀವಗತಿಯಲ್ಲಾಗಲಿ ಉದ್ದೇಶಬೋಧೆಯ ಸಾಕ್ಷ್ಯ ಸ್ವಲ್ಪವೂ ಇಲ್ಲ. ಆದರೆ ಅನೇಕ ಕೀಟಗಳೂ ಜಂತುಗಳೂ ಕೃಷಿಕ್ಷೇತ್ರವನ್ನೂ ಅರಣ್ಯಕ್ಷೇತ್ರ ವನ್ನೂ ತವರಾಗಿ ಮಾಡಿಕೊಂಡು ಹುಟ್ಟಿ, ಒಂದಷ್ಟುಮಟ್ಟಿನ ಉದ್ದೇಶಸಾಧಕವಾದ ಬದುಕನ್ನು ಬಾಳುತ್ತ ಅಸ್ತಿತ್ವದಲ್ಲಿ ಇರುತ್ತವೆ. ಹಕ್ಕಿಗಳು ಗೂಡು ಕಟ್ಟುತ್ತವೆ, ಮೊಟ್ಟೆ ಯಿಡುತ್ತವೆ—ಮರಿಗಳು ಹುಟ್ಟಿದಾಗ ಅದಕ್ಕೆ ಉಣಿಸಿತ್ತು ಬೆಳಸುತ್ತವೆ.— ಉದ್ದೇಶವೊಂದನ್ನು ಸ್ಪಷ್ಟವಾಗಿ ಗಮನದಲ್ಲಿರಿಸಿಕೊಂಡು ಬೀವರ್ ಪ್ರಾಣಿಗಳು ತಮ್ಮ ಕುಟುಂಬಗಳನ್ನು ಸಂಘಟಿಸಿ ವ್ಯವಸ್ಥೆಗೆ ತಂದುಕೊಳ್ಳುತ್ತವೆ, ಅಣೆಕಟ್ಟುಗಳನ್ನು ಕಟ್ಟುತ್ತವೆ, ತಮ್ಮ ವಾಸಕ್ಕೆ ಕೊಳಗಳನ್ನು ಅಗೆದುಕೊಳ್ಳುತ್ತವೆ. ಇರುವೆ ದುಂಬಿಗಳೂ ಬಹುಮೇಲ್ಮಟ್ಟದ ಸುಸಂಘಟಿತ ಸಾಮಾಜಿಕ ವರ್ಗಗಳನ್ನು ಸ್ಥಾಪಿಸಿ ಪೋಷಣೆ ಕೊಡ ಬಲ್ಲುವು.

ಮನುಷ್ಯಪ್ರಾಣಿಗಳೂ ಹಾಗೆಯೇ, ಇತರ ಪ್ರಾಣಿವರ್ಗಗಳಿಗಿಂತ ಹೆಚ್ಚಾಗಿ, ಉದ್ದೇಶಬೋಧೆಯಿಂದ ಸೃಜನಾತ್ಮಕವಾದ ಕಾರ್ಯಕಲಾಪಗಳಲ್ಲಿ ತೊಡಗುತ್ತಾರೆ. ಕುಟುಂಬಗಳಲ್ಲಿ ಅವರು ನಿಜ ಸ್ತ್ರೀಸಹವಾಸದಲ್ಲಿ ಮಕ್ಕಳನ್ನು ಹೆತ್ತು ಹೊರೆಯುತ್ತಾರೆ. ಅವರ ಮನೆಗಳೂ ಅಲ್ಲಿಯ ಪೀಠಾದ್ಯುಪಕರಣಗಳೂ ಗೃಹಾಲಂಕರಗಳೂ ಮನೆಗಳ ಸುತ್ತಣ ಆವರಣವೂ ಅಂದವಾಗಿ, ಉಪಯುಕ್ತ "ಸೃಷ್ಟಿಕಾರ್ಯ''ಗಳಾಗಿ ಇರುತ್ತವೆ. ಕುಟುಂಬಗಳಲ್ಲಿ ಪ್ರತಿಭಾವಿಶೇಷದಿಂದಲೂ ಸಹಕಾರ ಮನೋಭಾವದಿಂದಲೂ ತಾಯಿ ತಂದೆ ಮಕ್ಕಳು ಕಲ್ಪಿಸಿ ಸಂರಕ್ಷಿಸುವ ಸಾಮಾಜಿಕ ಪರಿಸರಕ್ಕೂ ಇದೇ ಉದ್ದೇಶಬೋಧೆಯ ವರ್ಣನೆ ಅನ್ವಯಿಸುತ್ತದೆ.

ಇತರ ಅನೇಕ ಪ್ರಾಣಿಗಳಂತೆ ಮನುಷ್ಯರೂ ತಮ್ಮ ವರ್ಗಕ್ಕೆ ಜೀವನ ವಿಧಾನವೊಂದನ್ನು ಸ್ಥಾಪಿಸಿ ಊರ್ಜಿತವಾಗಿ ನಡಸಬಲ್ಲರು. ಈ ಜೀವನ ವಿಧಾನವು ತಲೆಮೊರೆಯಿಂದ ತಲೆಮೊರೆಗೆ ಸಾಗಿಕೊಂಡು ಹೋಗುತ್ತದೆ. ವ್ಯಕ್ತಿ ಮನುಷ್ಯನ ಮಟ್ಟದಲ್ಲಿ ಅದು ಮೊದಲಾಗುತ್ತದೆಯಾದರೂ, ಕ್ಷಿಪ್ರವಾಗಿ ಅದು ಸಾಮಾಜಿಕವಾಗಿ ಪರಿವರ್ತನೆಗೊಂಡು, ಅದರಲ್ಲಿ ವ್ಯಕ್ತಿ ಮನುಷ್ಯರು, ಕುಟುಂಬಗಳು, ನೆರೆಹೊರೆಗಳು ಮತ್ತು ದೊಡ್ಡದೊಡ್ಡ ಜನ ಸಮುದಾಯಗಳು ಬೆಳೆಯುತ್ತವೆ. ಈ ಬಗೆಯ ಬಾಳ್ನಡೆಯನ್ನು ಎಳೆಯರಿಗೆ ಕಲಿಸಲಾಗುತ್ತದೆ; ಬಳಿಕ ಅಷ್ಟಿಷ್ಟು ಮಾರ್ಪಾಟುಗಳೊಡನೆ ಮುಂದಿನ ಪೀಳಿಗೆಯುವರು ಅದನ್ನು ಒಪ್ಪಿಕೊಂಡು ಅನುಸರಿಸುತ್ತಾರೆ.

ಸ್ವೀಕೃತವಾದ ಜೀವನ ವಿಧಾನದಲ್ಲಿ ಮನುಷ್ಯರು ಅಷ್ಟಿಷ್ಟು ಸವರಿಸಿ ಮಾಡಿಕೊಳ್ಳುವ ಮಾರ್ಪಾಟುಗಳು ಉದ್ದೇಶಬೋಧೆಯಿಂದಲೂ ಕ್ರಿಯಾಕರಣ ಸೌಕರ್ಯ ದೃಷ್ಟಿಯಿಂದಲೂ ಮಾಡಿಕೊಂಡವು. ಪರಿಷ್ಕರಣದಿಂದ ಉತ್ತಮಪಡಿಸಿದ ಸಂಸ್ಕೃತಿ ಗುಣಗಳು ಒಂದು ತಲೆ ಮೊರೆಯಲ್ಲಿ ಕಾರ್ಯಾರಂಭ ಮಾಡಿ ಮುಂದಿನ ಪೀಳಿಗೆಗೆ ಶಿಕ್ಷಣ ವಿಷಯವಾಗುತ್ತದೆ. ಆಡುಮಾತಿಗೂ ಬರವಣಿಗೆಯ ಮಾತಿಗೂ ಈ ಕಾರ್ಯಗತಿಯಲ್ಲಿ ಮುಖ್ಯಪಾತ್ರವುಂಟು.

ಆಧುನಿಕ ಯುಗವು ಸೃಜನಾತ್ಮಕ ಸಾಮಾಜಿಕ ಕಾರ್ಯಗತಿಯ ಫಲ. ಇದು ವೈಜ್ಞಾನಿಕ ಹಾಗೂ ಪರಿಕರ್ಮ ತಂತ್ರಶಾಸ್ತ್ರಗಳ ಕ್ಷೇತ್ರದಲ್ಲಿ ಸುಲಭ–ಸ್ಪಷ್ಟ–ಗೋಚರವಾಗಿದ್ದು ಮಾನ್ಯತೆ ಪಡೆದಿದೆ. ಒಂದು ಪೀಳಿಗೆಯಲ್ಲಿ, ಹೆಚ್ಚೆಂದರೆ ಎರಡು ಪೀಳಿಗೆಗಳಲ್ಲಿ ಪಾಶ್ಚಾತ್ಯ ಮನುಷ್ಯರು ಕೈಯಲ್ಲಿ ಮಾಡಿಕೊಂಡ ಕೈದುಗಳನ್ನೇ ಬಳಸುವ ಹೊತ್ತನ್ನು ದಾಟಿ, ನೀರು ಆವಿ ವಿದ್ಯುತ್ ಮತ್ತು ಅಣುಶಕ್ತಿಗಳನ್ನು ಹೂಡಿ ಬಳಸುವ ಯಂತ್ರತಂತ್ರಗಳನ್ನು ನಿರ್ಮಿಸಿ ಸ್ವತಶ್ಚಲಿ ಯಂತ್ರಗಳನ್ನು ಕಟ್ಟಿಕೊಂಡು ಅವುಗಳನ್ನು ಸಂಧಾನ ಮಾಡುವುದರಲ್ಲಿ ದಕ್ಷನಾಗಿದ್ದಾನೆ. ಪಿಂಗಾಣಿ ಕಲೆ, ಹೆಣಿಗೆ ಬುಟ್ಟಿಗಳ ತಯಾರಿಕೆ, ಕೊಂಬುಗಳಿಂದಲೂ, ಎಲುಬು ನಾರು ಶಿಲೆ ದಾರು ಲೋಹಗಳಿಂದಲೂ

ಮಾಡಿದ ಸರಕುಗಳು — ಇವೆಲ್ಲ ಮನುಷ್ಯನ ಸಹಕಾರ ನಿಷ್ಠ ಸಾಮುದಾಯಿಕ ಪ್ರಯತ್ನಗಳಾಗಿ ಬೆಳೆದು ಬಂದಿವೆ. ಹಿಂದಣ ಈ ಸಿದ್ಧಿಗಳನ್ನು ಬೆಳಸಲು ಮುಂದಣ ಪೀಳಿಗೆಗಳಲ್ಲಿ ವ್ಯಕ್ತಿಮನುಷ್ಯರು ಶೋಧನೆಯಿಂದ ಲಭ್ಯವಾಗುವ ನೂತನ ವಿಷಯಗಳ ಅನಾವರಣಗಳಲ್ಲೂ ಸ್ವಂತ ಪ್ರತಿಭೆ ಕೌಶಲಗಳಿಂದ ಮಾಡುವ ನೂತನ ನಿರ್ಮಾಣ ಗಳಲ್ಲೂ ತೊಡಗಿ ಯಶಸ್ವಿಗಳಾಗುತ್ತ ಬಂದಿದ್ದಾರೆ.

ಗತಕಾಲದಲ್ಲಿ ತಂತ್ರಜ್ಞಾನದ ಸಹಾಯದಿಂದ ಜಗದ್ವ್ಯಾಪಾರದಲ್ಲಿ ತಂದು ಕೊಂಡ ಮಾರ್ಪಾಟುಗಳೆಲ್ಲ ಹೆಚ್ಚುಕಡಮೆ ಏಕಾಂತದಲ್ಲಿ ಅಧ್ಯವಸಾಯದಲ್ಲಿರುತ್ತಿದ್ದ ವ್ಯಕ್ತಿಮನುಷ್ಯರು ಮಾಡಿಕೊಂಡವು. ಅವರೆಲ್ಲ ಹೊಸಕಲ್ಪನೆಗಳನ್ನು ಕಂಡು ಆಚರಣೆಗೆ ತಂದವರು. ಇವೊತ್ತು ಸಾಧ್ಯವಾದ ನೂತನ ವಸ್ತುಗಳ ಅನಾವರಣಗಳೂ ನಿರ್ಮಾಣ ಗಳೂ ಕರಡು ಕೆಲಸ ನಡೆಯುವ ಕೋಣೆಗಳಲ್ಲೂ ಪ್ರಯೋಗ ಮಂದಿರಗಳಲ್ಲೂ ಜಾಗರೂ ಕತೆಯಿಂದ ಆಯ್ದು ನೇಮಕಗೊಂಡ ವಿಜ್ಞಾನಿಗಳಿಂದಲೂ ತಂತ್ರಜ್ಞರಿಂದಲೂ ಆಗ ಮಾಡಿಸಿದವು. ಇವರ ಪರಿಶ್ರಮ ವಿವರ ಹೀಗೆ: ಅವರು ಪರಿಶೀಲನೆಗೆತ್ತಿಕೊಂಡ ಪ್ರಶ್ನೆ ಸ್ವತಶ್ವಲಿಗಳಿಗೆ ಸಂಬಂಧಪಟ್ಟದ್ದಾಗಲಿ ರಸಾಯನ ಶಾಸ್ತ್ರಕ್ಕೋ ಭೂವ್ಯವಸಾಯಕ್ಕೋ ಸಂಬಂಧ ಪಟ್ಟದ್ದಾಗಲಿ. — ಇಟ್ಟಿಗೆಗಾರರೂ ಬಡಗಿಗಳೂ ಕಟ್ಟಡಗಳಿಗೋಸ್ಕರ ಕಾರ್ಯಪೂರ್ವದಲ್ಲಿ ಮಾಡಿಕೊಳ್ಳುವ ಯೋಜನ ಪ್ರಯೋಗ ವಿವರಗಳನ್ನು ಅನುಸ ರಿಸಿ ಇವರು ತಮ್ಮ ಕಾಯಕದಲ್ಲಿ ಸಿದ್ಧಿಯ ಕಂಡವರು. ಬಡಗಿಗಳೂ ಇಟ್ಟಿಕೆ ಗಾರರೂ ಉದ್ದಿಷ್ಟ ಕಾರ್ಯವನ್ನು ಕೈಕೊಳ್ಳುವುದಕ್ಕೆ ಮುಂಚೆ ನಕ್ಷೆಗಳನ್ನೂ ರೇಖಾ ಚಿತ್ರಗಳನ್ನೂ ರಚಿಸಿಕೊಂಡು ಪರಿಶೀಲಿಸುತ್ತಾರೆ. ಹಾಗೆಯೇ ವಿಜ್ಞಾನಿಗಳೂ ತಂತ್ರಜ್ಞಾನಿಗಳೂ ಪರಿಕರ್ಮ ಪ್ರಶ್ನೆಗಳಿಗೆ ಸಂಬಂಧಪಟ್ಟ ವಿವರಾಂಶಗಳನ್ನೆಲ್ಲ ತಪ ಶೀಲಾಗಿ ಗಮನಕೊಟ್ಟು ತಿಳಿದು ಕಾರ್ಯವನ್ನು ಆರಂಭಿಸುತ್ತಾರೆ.

ಹೊಸ ಪರಿಕರ್ಮತಂತ್ರಶಾಸ್ತ್ರದ ಸಂಬಂಧವಾಗಿ ಹುಟ್ಟುವ ಸಮಸ್ಯೆಗಳನ್ನು ಪರಿಹರಿಸಲು - ವಿವಿಧ ವಿಶೇಷಜ್ಞಾನ (ವಿಷಯ) ಕ್ಷೇತ್ರಗಳಲ್ಲಿ ಆರಂಭ ಕಾರ್ಯಗಳನ್ನು ಮಾಡುವ ಕಷ್ಟಭೇದಕರೂ ದಕ್ಷಕಾರ್ಯಕರ್ತರ ತಂಡಗಳೂ ಪರಿಶ್ರಮಿಸುತ್ತಾರೆ. ತಾವು ವಿಶೇಷಜ್ಞರಾಗಿರುವ ಕ್ಷೇತ್ರಗಳಲ್ಲಿ ಇಷ್ಟು ಹೊತ್ತಿಗಾಗಲೆ ಆಗಿರುವ ಹಿಂದಣ ಸಿದ್ಧಿಗಳ ಪರಿಚಯ ಮಾಡಿಕೊಂಡಿರುವ ಇವರು ವಾಡಿಕೆಯ ದೈನಂದಿನ ಕಾಯಕದಲ್ಲಿ ನಿರತರಾಗಿ, ತಾವು ಹೊಸದಾಗಿ ಕಂಡದ್ದನ್ನು ಜ್ಞಾನರಾಶಿಗೆ ಸೇರಿಸುತ್ತಿರುತ್ತಾರೆ. ಅವರ ಪಾಲಿಗೆ ಸೃಷ್ಟಿ ಅನುದಿನದ ಕಾಯಕದ ಒಂದು ಭಾಗವಾಗಿ ಸಾಗುತ್ತಿರುತ್ತದೆ. ಅವರು ಶೋಧಿಸಿದ ಹೊಸ ವಿಷಯಗಳ ಅನಾವರಣವೂ ( discoveries ) ನಿರ್ಮಾಣಗಳೂ (inventions) ಒಂದೊಂದು ಕ್ಷೇತ್ರದಲ್ಲೂ ಆಗಬೇಕಾದ ಮುಂದಣ ಅಭಿವೃದ್ಧಿ ಪರಿವರ್ತನೆಗಳಿಗೆ ತಳಪಾಯ ಹಾಕುತ್ತದೆ. ಭೂವ್ಯವಸಾಯ ಕ್ಷೇತ್ರ, ಭೂನಿಕ್ಷೇಪ ಖನನಕ್ಷೇತ್ರ, ವಸ್ತುಗಳನ್ನು ಉತ್ಪಾದನೆ ಮಾಡುವ ಉದ್ಯಮ

ಕ್ಷೇತ್ರ, ತಯಾರಾದ ವಸ್ತು ಸಂಚಲನ, ವಿಷಯನಿವೇದನ ಕ್ಷೇತ್ರಗಳು, ಮತ್ತು ಕಚೇರಿ ಸಂಘಟನೆ ವ್ಯವಸ್ಥಾಪನೆಗಳು ಮತ್ತು ಕಚೇರಿಯಲ್ಲಿ ದಾಖಲೆಗಳನ್ನು ಅಣಿಮಾಡಿ ಅಡಕವಾಗಿರಿಸುವ ಕಾಯಕವಿವರ– ಈ ಎಲ್ಲ ಬಾಬುಗಳಿಗೂ ನೆರವನ್ನು ಕೊಡುವವರು ಈ ತಜ್ಞ ಕಾರ್ಯಕರ್ತರು. ಅವರ ವೃತ್ತಿಜೀವನವು ಸಿಕ್ಷ್ಯಯೋದ್ದೇಶದಿಂದ ಕೂಡಿ, ಸಂಘಟಿತ ಸೃಜನಾತ್ಮಕ ಚಟುವಟಿಕೆಗಳಿಂದ ಬೆಳೆದು ಸಮಾಜಕ್ಕೆ ಉಪಕಾರಕವಾಗಿ ಸಾಗುತ್ತದೆ.

ವೈಜ್ಞಾನಿಕ ತಂತ್ರ ಕ್ಷೇತ್ರದಲ್ಲಿ ಸಮಾಜ ಹಿತ ದೃಷ್ಟಿಯ ಸೃಜನಾತ್ಮಕ ಕಾರ್ಯದಲ್ಲಿ ಪಡೆದ ಅನುಭವವನ್ನು ಈಗ ಸಮಾಜ ಹಿತಕ್ಕೋಸ್ಕರ ಆರ್ಥಿಕ ಯೋಜನೆ, ಸಂಘಟನೆ ಮತ್ತು ಆಡಳಿತ ಕ್ಷೇತ್ರಗಳಿಗೆ ವರ್ಗಾಯಿಸಲಾಗುತ್ತದೆ. ಒಟ್ಟನಲ್ಲಿ ಈ ವಿವಿಧ ಕ್ಷೇತ್ರ ಸಮುದಾಯವನ್ನು ಈಚೆಗೆ "ಸಮಾಜ ಶಾಸ್ತ್ರದ ಕ್ಷೇತ್ರ" ಎಂದು ಕರೆಯುತ್ತಾರೆ. ಹೀಗೆ ನಾವು ಮೆಕ್ಯಾನಿಕಲ್ (ಯಂತ್ರ ಶಿಲ್ಪ), ಸಿವಿಲ್ (ವಾಸ್ತು ಶಿಲ್ಪ), ಕೆಮಿಕಲ್ (ರಸಾಯನ ಶಾಸ್ತ್ರೋದ್ಯಮ), ಎಲೆಕ್ಟ್ರಿಕಲ್ (ವಿದ್ಯುತ್ಸಂಧಾನ) ಮತ್ತು ಆಟಾಮಿಕ್ (ಅಣು) ವಿಜ್ಞಾನಗಳ ಅಧ್ಯಯನದಿಂದ ಸಮಾಜ ವಿಜ್ಞಾನ ಕ್ಷೇತ್ರದ ವಿವಿಧ ಶಿಲ್ಪಗಳ ವಿಶೇಷಾಧ್ಯಯನಕ್ಕೆಸಾಗುತ್ತಿದ್ದೇವೆ.

ಸಾಮಾಜಿಕ ಕ್ಷೇತ್ರದಲ್ಲಿ ಕಾರ್ಯಮಾಡುತ್ತ, ಸಮಾಜ ವಿಜ್ಞಾನಿಗಳೂ ಸಮಾಜ ಶಿಲ್ಪಿಗಳೂ ಕಾಯಕ ಸಮಸ್ಯಾಭೇದಕರೂ ವಿವಿಧ ಕಾರ್ಯಕರ್ತ ತಂಡಗಳೂ ತಮ್ಮ ತಮ್ಮ ಪಾಲಿಗೆ ಬಂದ ಕರ್ತವ್ಯ ಭಾಗಗಳನ್ನು ಅಧ್ಯಯನಕ್ಕೆ ಎತ್ತಿಕೊಂಡು, ಸಾಂಪ್ರತ ಕಾಲದ ಸಮಾಜ ವೈಜ್ಞಾನಿಕ ಪ್ರಶ್ನೆಗಳಿಗೆ ಪರಿಹಾರವನ್ನು ಹುಡುಕುತ್ತಾರೆ. ಬೇರೆಬೇರೆ ಸಮಾಜಿಕ ಪದ್ಧತಿಗಳಲ್ಲಿ ಬಾಳುತ್ತಿರುವ ಇವರೆಲ್ಲರೂ ಜೊತೆಯಾಗಿ ಬಾಳಲು ಪ್ರಯತ್ನಿಸುತ್ತಿರುವರು; ಮತ್ತು ತಮ್ಮ ಬಾಳ್ನಡೆಗೆ ಬರುವ ಎಡರುಗಳನ್ನು ದಾಟಿ ಉಳಿಯಬೇಕೆಂದು ಪ್ರಯತ್ನಿಸುತ್ತಿರುವರು.

ಸಮಾಜ ವಿಜ್ಞಾನದಲ್ಲಿಯೂ ಶಿಲ್ಪ ಕ್ಷೇತ್ರಗಳಲ್ಲಿಯೂ ವಿಜ್ಞಾನ ತಂತ್ರ ಕ್ಷೇತ್ರಗಳಲ್ಲಿಯೂ ಆಗಿರುವ ಅಭಿವೃದ್ಧಿಯ ಫಲವಾಗಿ ರೂಪಗೊಂಡ ಒಂದು ಸಮಾಜ ಸಮುದಾಯಕ್ಕೆ–ತನಗೆ ಬೇಕಾದ ಸಾಮಾಜಿಕ ಹಿತ ಸಾಧನವನ್ನು ಆಯ್ದುಕೊಳ್ಳುವ ಸೌಲಭ್ಯ ಅದಕ್ಕೆ ಉಂಟು;–ಪಾಠಶಾಲೆಯನ್ನು ನಡಸಲು ಸೌಕರ್ಯವುಳ್ಳ ಕಟ್ಟಡವನ್ನು ಸುಲಭವಾಗಿ ಆಯ್ದುಕೊಳ್ಳುವಂತೆ.

## ಹಾಳುಮಾಡುವುದಕ್ಕಿಂತ ಹಂಚಿಕೊಳ್ಳಲು ಮನುಷ್ಯನಿಗಿರುವ ಸಾಮರ್ಥ್ಯ

ಮನುಷ್ಯರು ವ್ಯಕ್ತಿಶಃ ಸ್ವಾಭಾವಿಕವಾಗಿ ಸಾಮಾಜಿಕ ಸಾಹಚರ್ಯದಲ್ಲಿ ಇರತಕ್ಕವರು ಎಂದೂ ಇದು ಸ್ವತಃಸಿದ್ಧವಾದ ಸತ್ಯಸಂಗತಿಯೆಂದೂ ರ್‍ಯಾಡಿಕಲ್ ಆಗಿ

ನಾನು ನಂಬುತ್ತೇನೆ. ವ್ಯಕ್ತಿಮನುಷ್ಯನಾಗಿ ಮನುಷ್ಯನು ಸ್ವಯಮಾಧಿಕಾರವುಳ್ಳವನು; ಸ್ವಚಿತ್ತಚಾಲನೆಯಿಂದ ಕಾರ್ಯ ಮಾಡತಕ್ಕವನು; ಆದರೆ ಅವನಲ್ಲಿ ಎದ್ದುಕೊಳ್ಳುವ ತೀವ್ರ ಬಲತಮವಾದ ಪ್ರೇರಣೆಗಳಲ್ಲಿ ಒಂದೆಂದರೆ — ತನ್ನ ಜೊತೆಗಾರರೊಡನೆ ಬಾಳ್ಕೆಯನ್ನು ಪಾಲ್ಗೊಳ್ಳುವುದು. ಅವನ ಜೊತೆಗೆ ಬಾಳಲು ಕೆಲವು ಪ್ರಾಣಿಗಳೂ ಅವನ ಕುಟುಂಬಕ್ಕೆ ಸದಸ್ಯರಾಗಿ ಸೇರುತ್ತಾರೆ: ಆದದ್ದರಿಂದ ತನ್ನ ಕುಲದೇವತಾ ಭಜನೆಯ ಪ್ರತೀಕವಾಗಿ,—ಅವನ್ನುತಮ್ಮ ಕುಟುಂಬದಲ್ಲಿರಿಸಿಕೊಂಡು ಮುದ್ದು ಮಾಡುತ್ತ ಜೆಳಸುವುದು, ಮನೆಯಲ್ಲಿರುವ ಇತರ ಸಾಕು ಪ್ರಾಣಿಗಳಲ್ಲೂ ಪ್ರಣಯಭಾವನೆಯಿಂದ ಬಾಳ್ಕೆಯನ್ನು ಹಂಚಿಕೊಳ್ಳುವುದು — ಇದೆಲ್ಲ ಮನುಷ್ಯನಿಗೆ ಸುಲಭವಾಗಿದೆ. ಆದದ್ದರಿಂದ ಜೊತೆಯ ಜೀವರಾಶಿಗಳೊಡನೆ ಮನುಷ್ಯನ ಸಾಹಚರ್ಯ ಸಂಪರ್ಕಗಳು ಕುಟುಂಬದಲ್ಲಿ ಸ್ಥಳೀಯವಾಗಿ ಮೊದಲಾಗಿ, ಅಂತರರಾಷ್ಟ್ರೀಯ ಮಟ್ಟಕ್ಕೇರಿ, ಸಂಪರ್ಕ ಸಮುದಾಯ ಸಂಸ್ಥೆಗಳ ಜಾಲ ವಿಸ್ತರಿಸುತ್ತದೆ. ಸಾಕಾದಷ್ಟು ದೊಡ್ಡದೂ ಜಟಿಲವೂ ಆದ ಸಾಮಾಜಿಕ ಸಮುದಾಯಗಳಲ್ಲೂ ಬಾಳುವ ಇಷ್ಟವೂ ಉತ್ಸುಕತೆಯೂ ಮನುಷ್ಯನಿಗೆ ಇದೆ ಎಂಬುದನ್ನು ಕಳದ ಐದುಸಾವಿರ ವರ್ಷಗಳ ಲಿಖಿತ ಇತಿಹಾಸವು ನಿರ್ಣಾಯಕವಾದ ಸಾಕ್ಷ್ಯವನ್ನೊದಗಿಸುತ್ತದೆ.

ಮಾನವ ನಾಗರಿಕತೆಗಳು ದೊಡ್ಡದೊಡ್ಡವಾಗುತ್ತ ಹೋಗುವ ಸಾಮಾಜಿಕ ಪದ್ಧತಿಗಳನ್ನು ಪೋಷಿಸಿ ಅಭಿವೃದ್ಧಿಪಡಿಸಿವೆ. ವೈಯಕ್ತಿಕ ಸಂಪರ್ಕಗಳು ಸಂಖ್ಯೆಯಲ್ಲೂ ವೈವಿಧ್ಯದಲ್ಲೂ ಬಹುವಾಗಿ ಹೆಚ್ಚಿದ ಫಲ ಈ ಸಾಮಾಜಿಕ ಪದ್ಧತಿಗಳು. ಅದೇ ಕಾಲಕ್ಕೆ ಮಾನವನಾಗರಿಕತೆಗಳು ಮನುಷ್ಯನಲ್ಲಿ ವ್ಯಕ್ತಿನಿಷ್ಠೆಗಳನ್ನು ಬಲಿಯಿಸಿ ಕಟ್ಟುತ್ತವೆ. ಪ್ರತಿಯೊಂದು ಹೊಸ ತಲೆಮಾರೂ ತನ್ನ ಜನ್ಮದಾತ ಸಮುದಾಯದೊಡನೆ ನಿಕಟ ಬಾಂಧವ್ಯದ ಬಂಧನಕ್ಕೆ ಇಷ್ಟದಿಂದ ಸಿಕ್ಕಿ, ಬಾಳಿನ ಬಗೆಬಗೆಯ ಚಟುವಟಿಕೆಗಳಿಗೂ ಜೀವನ ವ್ಯಾಪಾರೋಪಕರಣ ಹಾಗೂ ಸಂಘಸಂಸ್ಥೆಗಳ ಮೂಲಕ ಸಂಪರ್ಕವೃದ್ಧಿಗೂ ಅವಕಾಶ ಮಾಡುತ್ತದೆ. ಇದೆಲ್ಲ ವ್ಯಕ್ತಿಮನುಷ್ಯನ ಒಳಿತಿಗೂ ಸಮುದಾಯದ ಉಳಿವಿಗೂ ಅವಶ್ಯವಾದವು. ಬಹು ವಿಶಾಲವಾದ ಅರ್ಥದಲ್ಲಿ ವ್ಯಕ್ತಿಮನುಷ್ಯನು ಕುಟುಂಬದಲ್ಲೂ ಜಾತಿಯಲ್ಲೂ ಗ್ರಾಮ ಪಟ್ಟಣ ರಾಷ್ಟ್ರಗಳಲ್ಲೂ ಜೊತೆಮನುಷ್ಯನೊಡನೆ ಜೀವನವನ್ನೂ ಜೀವನ ಸೌಕರ್ಯಗಳನ್ನು ಹಂಚಿಕೊಂಡು ಬಾಳುತ್ತಿದ್ದಾನೆ. ಕಾಲದ ಉಪಯೋಗ ದೃಷ್ಟಿಯಿಂದ ನೋಡಿದರೆ, ಮನುಷ್ಯ ಜೀವನವು ತನ್ನಷ್ಟಕ್ಕೆ ತಾನೆ ವ್ಯಕ್ತಿಯಾಗಿ ಬಾಳಲು ಕಳೆಯುವ ಹೊತ್ತಿಗಿಂತ ತನ್ನ ಜೀವನ ವಿಧಾನ ಹಾಗೂ ಸೌಕರ್ಯಗಳನ್ನು ಜೊತೆ ಮನುಷ್ಯರೊಡನೆ ಹಂಚಿಕೊಂಡು ಬಾಳಲು ಕಳೆಯುವ ಹೊತ್ತೇ ಹೆಚ್ಚೆಂದು ಖಚಿತವಾಗುತ್ತದೆ.

ಪ್ರಕೃತಿಯನ್ನು ತನಗೆ ಅನುಕೂಲವಾಗಿ ತಿದ್ದಿ ಮಾರ್ಪಡಿಸಿ ಬಳಸಿಕೊಳ್ಳುತ್ತ, ಗೆಲುವಿನಿಂದ ಬದುಕುವ ಸಾಮಾಜಿಕ ಸೃಜನ ಶೀಲತೆಯನ್ನು ಪಡೆದ ಮನುಷ್ಯನು

ಇನ್ನೊಂದು ಹೆಜ್ಜೆ ಮುಂದಕ್ಕಿಟ್ಟು, ಮನುಷ್ಯ ಸಮಾಜಶಿಲ್ಪವನ್ನು ತಿದ್ದಿ ಕಾಲೋಚಿತವಾಗಿ ಮುನ್ನಡೆಯುವುದಕ್ಕೆ ಬೇಕಾದ ಪೂರ್ವಸಿದ್ಧತೆಗಳನ್ನು ಯೋಚಿಸಬಲ್ಲನೆಂದೂ, ಇಂದಿನ ಕ್ರಾಂತಿ ಸಂದರ್ಭಗಳು ಪ್ರಕೃತಿವಿಜ್ಞಾನ ಸಮಾಜವಿಜ್ಞಾನ ಕ್ಷೇತ್ರಗಳಲ್ಲಿ ಜನ್ಮಕೊಡುವ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಬಲ್ಲ ಸಾಮರ್ಥ್ಯ ಅವನಿಗೆ ಉಂಟೆಂದೂ ರ್‍ಯಾಡಿಕಲ್ ಆಗಿ ನಾನು ಇವೆಲ್ಲ ಸ್ವಭಾವಸಿದ್ಧ ಸಂಗತಿಗಳೆಂದು ನಂಬಿದ್ದೇನೆ.

ಪ್ರಕೃತಿವಿಜ್ಞಾನ, ಸಮಾಜವಿಜ್ಞಾನ ಮತ್ತು ಇವೆರಡಕ್ಕೂ ಸಂಬಂಧಪಟ್ಟ ತಾಂತ್ರಿಕಜ್ಞಾನ (ಟೆಕ್ನಾಲಜಿ) ಎಂದು ವಿಭಾಗ–ಭೇದಮಾಡುವುದು ಅವಿಚಾರವಾಗುತ್ತದೆ. ಒಂದುವೇಳೆ ಉಭಯ ವಿಜ್ಞಾನಕ್ಷೇತ್ರಗಳನ್ನೂ ಬೇರೆಬೇರೆಯಾಗಿ ಪರಿಗಣಿಸಿದರೂ ಸಾಂಪ್ರತ ಮನುಷ್ಯಜೀವನಕ್ಕೆ ಅವುಗಳ ಉಪಯೋಗಾರ್ಹತೆ ಹೇಗೆ ಹೇಗೆ ಎಂಬ ದೃಷ್ಟಿಯಿಂದ ಮಾತ್ರ ಹಾಗೆ ಭೇದಮಾಡಬಹುದು. ವಾಸ್ತವ ಸಂಗತಿಯೇನೆಂದರೆ— ಈ ಉಭಯ ಕ್ಷೇತ್ರಗಳೂ ಒಂದೇ ಜೀವ ವಿಜ್ಞಾನದ ಎರಡು ಭಾಗಗಳು. ಇವು ಹರಡುವ ಪರಿಸರ ಸಮಷ್ಟಿಯಲ್ಲಿ ಮನುಷ್ಯನು ವ್ಯಕ್ತಿತ್ವವಿಕಾಸ ಪಡೆಯುವುದಕ್ಕೆ, ಪಡೆದು ಮೇಲೇರುವುದಕ್ಕೆ, ಉಭಯ ಕ್ಷೇತ್ರಗಳೂ ಅವಕಾಶ ಮಾಡತಕ್ಕವೇ. ಉಭಯ ಕ್ಷೇತ್ರಗಳಲ್ಲೂ ಪ್ರಯೋಗವಾಗುವ ವಿಜ್ಞಾನ ಸೂತ್ರಗಳು ಸಮಾನೋದ್ದೇಶವುಳ್ಳವು. ಒಂದು ಕ್ಷೇತ್ರದಲ್ಲಿ ತರಬೇತಿಪಡೆದ ಶಿಲ್ಪಿಗಳೂ ಪರಿಕರ್ಮ ತಂತ್ರಜ್ಞರೂ ಮೆಹನತ್ತುಮಾಡಿ ಕೊಂಚ ಹೆಚ್ಚಿನ ಅಧ್ಯಯನ ಶಿಕ್ಷಣಗಳನ್ನು ಪಡೆದರೆ, ಇನ್ನೊಂದು ಕ್ಷೇತ್ರದಲ್ಲೂ ದಕ್ಷತೆಯಿಂದ ದುಡಿಯುವ ಅರ್ಹತೆಯನ್ನವರು ಪಡೆಯುತ್ತಾರೆ. ಅವರ ಸೇವೆ ಉಭಯ ಕ್ಷೇತ್ರಗಳಿಗೂ ಸಮಾನವಾಗಿ ಸಲ್ಲಬಹುದಾಗಿದೆ.

ಸಂಘಜೀವನ ವ್ಯಾಪಾರದ ಒಂದು ಲಕ್ಷಣ ಅಥವಾ ಫಲ ಪಾಲ್ಗೊಳ್ಳುವಿಕೆ. ಸಾಮಾಜಿಕ ಸಂಘದ ಸದಸ್ಯರು ಸ್ವಲ್ಪಮಂದಿಯಾಗಲಿ ಬಹುಮಂದಿಯಾಗಲಿ– ಜೀವನಾವಶ್ಯಕತೆಗಳಾದ ಅಶನ ವಸತಿಗಳನ್ನು ಅವರು ಹಂಚಿಕೊಳ್ಳುತ್ತಾರೆ, ಬೇಟೆಯ ಪುಳಕವನ್ನೂ ಜಾತ್ರೆಗಳ ಉತ್ಸವ ಆನಂದಗಳನ್ನೂ ಹಂಚಿಕೊಳ್ಳುತ್ತಾರೆ. ಸಮಾನವಾಗಿ ಎದುರಿಸಬೇಕಾದ ಅಪಾಯ ಸಂದರ್ಭಗಳಿಗೆ ಪ್ರತೀಕಾರಚಿಂತನೆಯನ್ನು ಮಾಡುವಾಗ, ಸಹಕರಿಸಿ ದುಡಿದು ಅಪಾಯಗಳನ್ನು ನಿವಾರಿಸಿಕೊಳ್ಳುತ್ತಾರೆ. ಹೀಗೆ ನೋವು ನಲಿವುಗಳಲ್ಲಿ ಪಾಲ್ಗೊಂಡು ಜೀವನ ನಿರ್ವಾಹಮಾಡುವುದು ಬಹುವಿಧದ ಸಮಾಜ ಜೀವನಾನುಭವಗಳ ಪರಿಣಾಮಫಲ.

ಸಮಾಜ ಚರಿತ್ರೆಯನ್ನು ಬಹುಮುಖವಾಗಿ ಬೆಳಸಿರುವ ವಿವಿಧ ಮಾನವ ನಾಗರಿಕತೆಗಳನ್ನು ಕುರಿತ ದಾಖಲೆಗಳನ್ನು ನೋಡಿದಾಗ, ಆ ನಾಗರಿಕತೆಗಳಲ್ಲಿ ಕೆಲವು

ದೊಡ್ಡವಾಗಿದ್ದು ಬಹುಮಟ್ಟಿಗೆ ಪರಸ್ಪರಾವಲಂಬನದಿಂದ ಸಾಗಿದುವೆಂದು ಗೊತ್ತಾಗುತ್ತದೆ. ಅವುಗಳ ವಿಸ್ತಾರದ ಕಥೆಯೇ ಅವುಗಳ ವ್ಯಾಪ್ತಿಯನ್ನೂ ಸೂಚಿಸುತ್ತದೆ. ಪ್ರಾಚೀನ ನಾಗರಿಕತೆಗಳನ್ನು ಕುರಿತ ದಾಖಲೆಗಳು ಈ ಜಟಿಲಬಾಂಧವ್ಯಗಳ ಸಂಗತಿಯನ್ನು ವಿಶದಪಡಿಸುತ್ತವೆ. ಪಾಶ್ಚಾತ್ಯ ನಾಗರಿಕತೆಗಳು ತಮ್ಮ ಸಾವಿರ ವರ್ಷಗಳ ನಡೆಯಲ್ಲಿ ಜನಸಂಪರ್ಕಗಳನ್ನು ಬೆಳಸಿ ಹರಡಿವೆ–ವಾಹನ ಸೌಕರ್ಯ, ವ್ಯಾಪಾರ, ಪ್ರವಾಸ ಮತ್ತು ಸಂಸ್ಕೃತಿ ಸುಖ ವಿನಿಮಯಗಳನ್ನು ಆಗಮಾಡಿಸಿವೆ. ಈ ಒಂದು ಜನಸಂಪರ್ಕದ ಹಿತಕರ ಪ್ರಭಾವವು ವಿಶ್ವವ್ಯಾಪಕವಾಗಿ, ಮನುಷ್ಯರು ತಮ್ಮ ತಮ್ಮ ಮುಖ್ಯ ದೈನಿಕ ಕಾರ್ಯಗಳಲ್ಲಿ ನಿರುಪಾಧಿಕವಾಗಿ ಮಗ್ನರಾಗಿದ್ದರು. ಹೀಗೆ ಜೀವನಾವಶ್ಯಕತೆಗಳನ್ನು ಹಂಚಿಕೊಂಡು ಬಾಳುವ ಮನುಷ್ಯನ ಸಾಮರ್ಥ್ಯವನ್ನು ಕುರಿತು ಆಡಂಬರದಿಂದ ಸಾಕ್ಷ್ಯ ಪ್ರದರ್ಶನಕ್ಕೆ ಹೊರಡಬೇಕಾಗಿಲ್ಲ; ಸಾಮಾಜಿಕ ಚರಿತ್ರೆಯಲ್ಲಿ ಬರೆದಿರುವುದನ್ನು ಓದಿಕೊಳ್ಳುವುದಷ್ಟು ಸಾಕು.

ಒಂದುವೇಳೆ ಜೀವನ ಸೌಕರ್ಯಗಳನ್ನು ಇತರರೊಡನೆ ಹಂಚಿಕೊಳ್ಳಲು ಮನುಷ್ಯನಲ್ಲಿರುವ ಸಾಮರ್ಥ್ಯವನ್ನು ಕುರಿತು ಹೆಚ್ಚಿನ ಸಾಕ್ಷ್ಯಪರೀಕ್ಷಣೆಮಾಡಬೇಕೆಂದು ಯಾರಿಗಾದರೂ ಇಷ್ಟವಿದ್ದರೆ, ಅವರು ನಮ್ಮ ಸಮಕಾಲೀನ ನಗರಜೀವನ ಹೇಗೆ ನಡೆಯುತ್ತಿದೆಯೆಂದು ಗಮನಿಸಬಹುದು: ಮೃಗಯಾವಿಹಾರ, ಮತ್ಸ್ಯಾಪಚಯ, ಹುಲ್ಲಾವಲುಗಳಲ್ಲಿ ಗೊಲ್ಲಕುರುಬರ ಚಕ್ಕಂದದ ಆಟಪಾಟಗಳು. ಹಾಗೆಯೇ ಗ್ರಾಮಜೀವನ ಹೇಗೆ ನಡೆಯುತ್ತಿದೆಯೆಂದೂ ಗಮನಿಸಬಹುದು: ಮುಖ್ಯವಾಗಿ ಕೃಷಿಯಲ್ಲಿ ತೊಡಗಿದಜನರು ತಮ್ಮ ದಿನದ ಕಾಯಕವನ್ನು ಮುಗಿಸಿದಮೇಲೆ ಹೆಚ್ಚಾಗಿ ಉಳಿಯುವ ವಿಶ್ರಾಂತಿಕಾಲದಲ್ಲಿ ಪಡುವ ವಿನೋದಗಳು,—ಇವೆಲ್ಲ ಮನುಷ್ಯರು ಸೌಕರ್ಯ ಸಂತೋಷಗಳನ್ನು ಹಂಚಿಕೊಳ್ಳಲು ಕೈಕೊಳ್ಳುವ ವಿವಿಧೋಪಾಯಗಳಿಗೆ ನಿದರ್ಶನಗಳು. ಆಧುನಿಕ ನಗರವು ಈ ಚಿತ್ರವನ್ನು ಬೇಗಬೇಗ ಮಾರ್ಪಡಿಸುತ್ತಿದೆ. ಮುಖ್ಯವಾಗಿ ಇಂದು ನಗರಗಳಲ್ಲಿ ಕಾಣಬರುವುದು ಸಾಂಘಿಕ ಅಥವಾ ಜನಮೊತ್ತದ ಜೀವನ. ವ್ಯಕ್ತಿ ಮನುಷ್ಯರು ಒಂಟೊಂಟಿಯಾಗಿ ಇರುವುದೇ ಅಸಂಭವವಾಗಿದೆ. ಎಚ್ಚರದಲ್ಲೋ ನಿದ್ರೆಯಲ್ಲೋ ಸಹವಾಸಾಪೇಕ್ಷೆ ಜನಸಾಂದ್ರತೆಯಿಂದ ಆಗಿರುವ ಪರಿಣಾಮ.

ಚರ್ಚೆಯ ಈ ಘಟ್ಟದಲ್ಲಿ ಒಂದು ಆಕ್ಷೇಪಣೆಯನ್ನು ನಾವು ಎದುರಿಸಬೇಕಾಗಿದೆ. ದೊಡ್ಡ ಪಟ್ಟಣಗಳ ಸಾಂಘಿಕ ಜೀವನದಲ್ಲಿ ಅನುಭವಕ್ಕೆ ಬರುವ ನಿರ್ಬಂಧಗಳೂ ಒತ್ತಡಗಳೂ ಅನೇಕ ವ್ಯಕ್ತಿ ಮನುಷ್ಯರಿಗೆ ಕಿರಿಕಿರಿಯಾಗಿ ಬೇಸರತರುತ್ತದೆ; ಅವರು ಈ ಅನನುಕೂಲವನ್ನು ಸಹಿಸಿಕೊಳ್ಳಲಾರದೆ, ನಗರದಿಂದ ವಿಮಾನದಲ್ಲಿ ಹಾರಿ, ಜನಸಾಂದ್ರತೆ ಕಡಮೆಯಾಗಿರುವ ಪ್ರದೇಶಗಳಿಗೆ ಹೋಗಿ, ಕೊಂಚಕಾಲ ಹಾಯಾಗಿ ಮೈ

ಕೈಯಾಡಿಸುವ ಅವಕಾಶಗಳನ್ನು ಪಡೆದುಕೊಳ್ಳುತ್ತಾರೆ—ಎಂದು ಯಾರಾದರೂ ಪ್ರತಿವಾದವನ್ನು ಹೂಡಬಹುದು. ಈ ಸಂದರ್ಭವು ನಿಜವೆಂಬುದರಲ್ಲಿ ಸಂಶಯವಿಲ್ಲ, ಜನ – ಧನ ಸಾಂದ್ರತೆ ಹೆಚ್ಚಿದಾಗ ಆಕ್ರಮಣ ಯುದ್ಧಗಳಿಗೆ ದಾರಿಯಾಗುವುದೂ ನಿಜವೇ. ಈಚೆಗೆ ಮಾರ್ಗಸೌಕರ್ಯಗಳೂ ವಾಹನ ಸಂಚಾರಗಳೂ ಹೆಚ್ಚಿಕೊಂಡು, ಜನನಿಬಿಡವಾದ ನಗರಗಳಿಗೆ ಆಹಾರವೂ ಕಚ್ಚಾಪದಾರ್ಥಗಳೂ ಸಕಾಲಕ್ಕೆ ಸರಬರಾಜಾಗುತ್ತಿವೆ. ಆದದ್ದರಿಂದಲೇ ಗ್ರಾಮಜೀವನದ ಸೌಕರ್ಯಹೀನ ಸ್ಥಿತಿಯನ್ನು ತಪ್ಪಿಸಿಕೊಳ್ಳಲು ಹಳ್ಳಿಗರು ಒಬ್ಬರ ಹಿಂದೊಬ್ಬರು ಪಟ್ಟಣಗಳಿಗೆ ಗುಂಪುವಲಸೆಯ ಪಲಾಯನೋಪಾಯವನ್ನು ಹಿಡಿದಿದ್ದಾರೆ. ದೇಶದೊಟ್ಟು ಜನಸಂಖ್ಯೆಯಲ್ಲಿ ಪಟ್ಟಣಸ್ಥರ ಸಂಖ್ಯಾಪ್ರಮಾಣವು ಕ್ರಮವಾಗಿ ಹೆಚ್ಚುತ್ತಿದೆ.

ಮನುಷ್ಯ ವ್ಯಕ್ತಿಗಳು ತಂತಮ್ಮ ಅನುಭವಗಳನ್ನು ಜೊತೆ ಮನುಷ್ಯರೊಂದಿಗೆ ಹಂಚಿಕೊಳ್ಳುವ ಅಳವನ್ನು ಪಡೆದಿರುತ್ತಾರಲ್ಲದೆ, ಭಿನ್ನಭಿನ್ನ ಸಾಮಾಜಿಕ ಸಂಘಜೀವನದ ಎಲ್ಲ ಮುಖಗಳಲ್ಲೂ ಸಹಕಾರವನ್ನು ದೃಢಪಡಿಸಿಕೊಳ್ಳಲು ಪಟ್ಟಣಗಳ ಜನಸಾಂದ್ರತೆಯನ್ನು ಒತ್ತಾಯದಿಂದ ಪ್ರೋತ್ಸಾಹಿಸುತ್ತಿದ್ದಾರೆಂಬುದು ಸಾಂಪ್ರತಾನುಭವ.

ಮನುಷ್ಯನು ವ್ಯಕ್ತಿಯಾಗಿ ಹುಟ್ಟುತ್ತಾನೆ; ಆದರೆ ತನ್ನ ಜನ್ಮದಿನದಿಂದ ಅವನ ಮನಸ್ಸು ಮಗ್ನವಾಗಿರುವುದು ಹಲವು ಭಿನ್ನಭಿನ್ನ ಸಾಮಾಜಿಕ ಸಂಘಗಳೊಡನೆ ಸಾಮೂಹಿಕ ಜೀವನಕ್ಕೋಸ್ಕರ ತನಗೆ ಬಂದ ಪಾತ್ರವನ್ನು ನಿರ್ವಹಿಸುತ್ತ ಬಾಳುವುದು ಹೇಗೆಂಬುದನ್ನು ಕಲಿಯುವುದೇ ಆಗಿದೆ.

ಹಂಚಿಕೊಳ್ಳುವ ಅಳವು ಯಾರಲ್ಲಿರುತ್ತದೆಯೋ ಅವನೇ ಅಳಿಯದೆ ಉಳಿದು ಬಾಳಬಲ್ಲನು. ಈ ಅಳವೇ ಅವನು ಜೀವಿತ ಪರ್ಯಂತ ಊರ್ಜಿತಾವಸ್ಥೆಯಲ್ಲಿ ಇದ್ದಾನೋ ಹೇಗೆ, ಮತ್ತು ಪ್ರಕೃತಿಯ ಮೇಲೆ ಮನುಷ್ಯಾಧಿಕಾರ ಹೆಚ್ಚುತ್ತಿರುವ ಈ ಯುಗದಲ್ಲಿ ನಗರ ಸಮಾಜಗಳನ್ನು ಸಂಘಟಿಸಿ, ಅವುಗಳ ಕಾರ್ಯವನ್ನು ಸಂಯೋಜಿಸುವ ಸಾಮರ್ಥ್ಯವನ್ನವನು ಪಡೆದಿದ್ದಾನೋ ಹೇಗೆ? ಎಂಬ ಪರೀಕ್ಷೆಯಲ್ಲಿ ಈ ಅಳವೇ ನಿರ್ಣಾಯಕ ಸಂಗತಿ.

ನಾಗರಿಕ ಸಮಾಜವು ವಿಕಸನದ ಹಂತದಲ್ಲಿದ್ದಾಗ ಬರಗಾಲದ ಅಭಾವ ಪ್ರತಿಕೂಲಗಳನ್ನು ಎದುರಿಸಿ, ಪರಸ್ಪರ ಹಂಚಿಕೊಂಡು ಬಾಳುವ ಬಗೆಯನ್ನು ಮನುಷ್ಯವರ್ಗ ಕಲಿತುಕೊಂಡಿತು. ನಾಯಕನಲ್ಲಿ ನಿಷ್ಠೆಯ ಸಮರ್ಪಣೆ; ಸಾಮಾಜಿಕ ಪದ್ಧತಿಗಳಿಗೂ ನಗರ ರಾಷ್ಟ್ರಗಳಿಗೂ ವಿಧೇಯತೆಯ ಸಮರ್ಪಣೆ; ಮತಧರ್ಮಕ್ಕೆ ಭಕ್ತಿಯ ಸಮರ್ಪಣೆ; ಒಪ್ಪಿಕೆಯಾದ ಬಾಳ್ನಡೆಗೆ ಇಷ್ಟದಿಂದ ನೇಹನಂಟುಗಳ ಸಲ್ಲಿಕೆ—ಇವೇ

ಮನುಷ್ಯನ ಅಸ್ತಿತ್ವವನ್ನು ಸಮರ್ಥಿಸುವ ಸಂದರ್ಭಗಳು. ಈ ನಿರ್ಬಂಧ ಒತ್ತಾಯಗಳಿಗೆ ಸಿಕ್ಕಿ, ಪ್ರತಿಕೂಲಗಳಲ್ಲಿ ಅನುಕೂಲಗಳನ್ನರಸುತ್ತ, ಸೇವಾ ತ್ಯಾಗ ಗುಣಗಳ ಅವಲಂಬನವಿಂದ ಬದುಕನ್ನು ಸಾಗಿಸುವ ಜಾಣನ್ನು ಜನ ಕಲಿತುಕೊಂಡರು. ವಿಪದಗಳನ್ನೇ ಸೋಪಾನಗಳನ್ನಾಗಿ ಬಳಸಿಕೊಂಡು ಮುನ್ನಡೆಯುವ ಹದನನ್ನು ಜನರು ಪ್ರಯತ್ನದಿಂದ ಕಂಡು ವಾಡಿಕೆಯಲ್ಲಿರಿಸಿಕೊಂಡರು.

ಸ್ವತಶ್ಚಲೀಕರಣ (automation) ಹೆಚ್ಚು ಹೆಚ್ಚಾಗಿ ಪ್ರಧಾನಾಂಗವಾಗಿ ಸೇರಿಕೊಳ್ಳುತ್ತಿರುವ ಯಂತ್ರೋದ್ಯಮದ ಅಭಿವೃದ್ಧಿಯು ಮನುಷ್ಯನ ಮುಂದೆ ಸವಾಲಾಗಿ ನಿಂತು, ನಿರ್ಣಯಮಾಡುವ ಪ್ರಸಕ್ತಿಯನ್ನೊಡ್ಡಿದೆ. "ಪುಷ್ಕಲತೆಯನ್ನು ನೀವೊಬ್ಬರೇ ಅನುಭವಿಸುತ್ತೀರಾ, ಇಲ್ಲವೆ ಜೊತೆ ಮನುಷ್ಯರೊಡನೆ ಸಮಭಾಗಿತೆಯ ತತ್ತ್ವವನ್ನು ಅನುಸರಿಸಿ ಹಂಚಿಕೊಳ್ಳುತ್ತೀರಾ?" ಮನುಷ್ಯನಲ್ಲಿ ಹಂಚಿಕೊಳ್ಳುವ ಅಳವಿದ್ದಾಗ ಮಾತ್ರ ಈ ಸವಾಲನ್ನವನು ಎದುರಿಸಬಲ್ಲನು. ಇಂದಿನ ನಾಗರಿಕ (ಪಟ್ಟಣಸ್ಥ) ಸಮಾಜದ ಚಟುವಟಿಕೆಗಳ ಆರಂಭದ ಘಟ್ಟಗಳಲ್ಲಿ ಅಲ್ಪಸಂಖ್ಯಾಕರು ಮಾತ್ರ ಬದುಕಲು ಎಷ್ಟುಬೇಕೋ ಆ ಜೀವಿಕೆಯ ಮಟ್ಟಕ್ಕಿಂತ ಹೆಚ್ಚಿನದನ್ನು ಅನುಭವಿಸುತ್ತಿದ್ದರು. ಪಟ್ಟಣಪ್ರದೇಶಗಳಲ್ಲಿ ಯಂತ್ರೋದ್ಯಮ ಹೆಚ್ಚಿದಂತೆ, ಹೆಚ್ಚು ಜನಕ್ಕೆ ಮೇಲುಮೇಲು ಮಟ್ಟದ ಜೀವಿಕಾ ಸಂಪಾದನೆ ಸಾಧ್ಯವಾಗುತ್ತ ಬಂತು, ಪಟ್ಟಣ ಪ್ರದೇಶಗಳ ಉದ್ಯಮಾಭಿವೃದ್ಧಿಯಿಂದ ಮಧ್ಯಮತರಗತಿಯ ಜನವರ್ಗದಲ್ಲಿ ದಿನೇದಿನೇ ಪುಷ್ಕಲತೆ ಕ್ರಮಶಃ ಹಬ್ಬುತ್ತ ಬಂತು. ಪುಷ್ಕಲತೆಯ ಮಟ್ಟದ ಈ ಜೀವಿಕಾ ಸಂಪಾದನೆಯ ಅಭಿವೃದ್ಧಿಯು ವಾಣಿಜ್ಯ ಅಥವಾ ಇತರ ಔದ್ಯಮಿಕ ಚಲನವಲನಗಳು ಹೆಚ್ಚಿರುವ ನಗರ ಪ್ರದೇಶಗಳಲ್ಲಿ ಈ ಜೀವಿಕೆಯ ಲಾಭ ಸಂಪಾದನೆ ಐದರಲ್ಲಿ ಮೂರರಷ್ಟು ಅಥವಾ ಎರಡರಷ್ಟು ಪ್ರದೇಶಕ್ಕೆ ವಿಸ್ತರಿಸುವಂತಾಯಿತು.

ಈಚೆಗೆ ಪುಷ್ಕಲತೆಯ ಮಟ್ಟದ ಜೀವಿಕಾ ಸಂಪಾದನೆ ಔದ್ಯಮಿಕ ಕ್ಷೇತ್ರಗಳಲ್ಲಿಯ ಕಾರ್ಮಿಕ ವರ್ಗಕ್ಕೂ ಲಭ್ಯವಾಗುತ್ತಿದೆ. ಈ ಸಂಗತಿ ಪ್ರಜಾಗಣದಲ್ಲಿ ಬಹುಸಂಖ್ಯಾಕ ಜನ ಈ ಪುಷ್ಕಲತೆಯಲ್ಲಿ ಪಾಲು ಪಡೆಯುವ ಬಗೆ ಹೇಗೆ ಎಂಬ ಪ್ರಶ್ನೆಯನ್ನು ಎದುರಿಸುವ ಹಾಗೆ ಆಗಿದೆ. ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿಯೂ ಕೆನಡಾ ದೇಶದಲ್ಲಿಯೂ ಈಚೆಗೆ ಹೊಸದಾಗಿ ಜನ ಬಂದು ನೆಲಸಿದ ಪ್ರದೇಶಗಳ ಜನ ಈ ಹಂಚಿಕೆಯ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಹಾಗೆಯೇ ಉತ್ತರ ಯೂರೋಪಿನ ಸಮುದ್ರ ತೀರದ ದೇಶಗಳಲ್ಲೂ ಸ್ವಿಟ್ಸರ್ಲೆಂಡ್ ಮತ್ತು ಸ್ಕಾಂಡಿನೇವಿಯಾ ದೇಶಗಳಲ್ಲೂ ವಿಶೇಷಜ್ಞತೆಯಿಂದ ಕಾಯಕ ಮಾಡುತ್ತಿರುವ ಕೃಷಿಕ ವರ್ಗವೂ ಹಂಚಿಕೆಯ ಈ ಪ್ರಶ್ನೆಯನ್ನು ಎದುರಿಸಬೇಕಾಗಿ ಬಂದಿದೆ. ಪುಷ್ಕಲತೆಯನ್ನು ಹಂಚಿಕೊಳ್ಳುವ ವಿಧಾನ ಹೇಗೆ ? ಸೊತ್ತಿನ ಆಧಾರದಂತೆಯೆ, ಕಾಯಕದ

ಪರಿಮಾಣದಂತೆಯೇ ? ಅಲ್ಲ. ಜನವರ್ಗದ ಆವಶ್ಯಕತೆಯನ್ನು ಇದಕ್ಕೆ ಆಧಾರವಾಗಿರಿಸಿಕೊಳ್ಳಬೇಕು ಎಂಬುದು ಈ ಪ್ರಶ್ನೆಗೆ ಸಂಘಟಿತವಾದ ಸಮಾಜಸ್ವವಾದಿ (ಸೋಷಲಿಸ್ಟ್) ರಾಷ್ಟ್ರಗಳು ಕಂಡುಕೊಂಡ ತಾತ್ತ್ವಿಕ ಪರಿಹಾರ. ಆದರೆ ಇದು ಪ್ರಯೋಗಾನುಭವದಿಂದ ಆಖೈರಾಗಿ ಇತ್ಯರ್ಥಕ್ಕೆ ಬರಬೇಕಾದ ಪ್ರಶ್ನೆಯೆಂದು ತೋರುತ್ತದೆ.

### ''ನನ್ನದು'' – ''ನಿನ್ನದು'' – ''ನಮ್ಮದು''ಗಳ ನೀತಿಧರ್ಮ: ಸೊತ್ತಿಗೆ ಹೊಣೆ ಗಂಟು ಬೀಳಬೇಕು

ಪುಷ್ಕಲತೆ (Abundance) ಯನ್ನು ಹಂಚಿಕೊಳ್ಳುವ ಏರ್ಪಾಟು ಸೊತ್ತು ಸಂಬಂಧಗಳಲ್ಲಿ ಮೊದಲು ತಂದುಕೊಳ್ಳಬೇಕಾದ ಹೊಸದೊಂದು ನೀತಿಸೂತ್ರವನ್ನು ಒತ್ತಾಯ ಪಡಿಸುತ್ತದೆ. ಅಭಾವ ಪರಿಸ್ಥಿತಿಯಲ್ಲಿ ಅನುಕೂಲಾನುಗ್ರಹ ಪಡೆದ ಸ್ವಲ್ಪ ಜನಕ್ಕೆ ಮಾತ್ರ ಜೀವಿಕೆಯ ಕನಿಷ್ಠಮಿತಿಯ ಮಟ್ಟಕ್ಕಿಂತ ಹೆಚ್ಚಾದ ಸೌಕರ್ಯಗಳನ್ನು ಅನುಭವಿಸುವ ಅವಕಾಶವಿತ್ತು. ಜಾಗರೂಕರೂ ಜನಹೃದಯಮರ್ಮಜ್ಞರೂ ಪ್ರಬಲರೂ ಆಕ್ರಮಣಶೀಲರೂ ಆದ ಸ್ವಲ್ಪಸಂಖ್ಯಾಕರು ಬೇಸಾಯದ ಭೂಸ್ವತ್ತನ್ನು ಪಡೆದು, ಬಂಡವಾಳದಲ್ಲೂ ಸ್ಥಾನಮಾನಅಧಿಕಾರಗಳಲ್ಲೂ ಬಲ್ಲಿದರಾಗಿ,-ತಮ್ಮ ನೆಲೆಯಲ್ಲಿ ತಾವೂ, ತಮ್ಮ ನಿಕಟವರ್ಗಗಳಾದ ಆಶ್ರಿತವರ್ಗದವರೂ, ತಾವು ಉಳಿಗಕ್ಕೆ ನೇಮಿಸಿಕೊಂಡ ಭೃತ್ಯವರ್ಗದವರೂ ರಕ್ಷಣೆ ಸೌಕರ್ಯ ಭೋಗಗಳನ್ನು ನೆಮ್ಮದಿಯಾಗಿ ಅನುಭವಿಸಲು ಏಕಸ್ವಾಮ್ಯಪಡೆದವರಾಗಿದ್ದರು. ಒಡೆಯರಾಗಿ, ಸುಲಿಗೆಗಾರರಾಗಿ, ಈ ಅಲ್ಪಸಂಖ್ಯಾಕವರ್ಗ ತಮಗೆ ಅನುಕೂಲವಾಗುಂತೆ ಖಾಸಗಿ ಸೊತ್ತುಗಳಿಗೆ ಸಂಬಂಧಪಟ್ಟ ಶಾಸನಗಳನ್ನು ರಚಿಸಿ ಹೊರಡಿಸಲು ಪ್ರಭಾವ ಬೀರಿದರು. ಈ ಕಾನೂನಿನ ಪ್ರಯೋಜನವನ್ನು ಪಡೆದು ತಮಗೆ ವಿಶೇಷಾಧಿಕಾರಗಳು ಬರುವಂತೆ ಮಾಡಿಕೊಂಡರಲ್ಲವೆ, ತಾವು ದುಡಿಯದೆಯೇ ವಿತ್ತರಾಶಿಗಳನ್ನು ಗಳಿಸುವ ಸುಲಭಾವಕಾಶಗಳನ್ನು ಪಡೆದುಕೊಂಡರು. ಸೊತ್ತು ಕಾನೂನುಗಳೂ ಇಂಥ ವರಮಾನಗಳನ್ನು ಸಂರಕ್ಷಿಸುವ ಭರವಸೆಕೊಡತಕ್ಕವಾಗಿದ್ದವು. ಇಂಥ ಸಿರಿವಂತನು ಸಮಾಜಸೇವೆಯ ಹೊಣೆಯನ್ನು ಹೊರಬೇಕೆಂಬ ಒತ್ತಾಯವನ್ನು ಋಣಭಾರವನ್ನು-ಕಾನೂನು ತಪ್ಪಿಸಿತು.

### ಸಿರಿ ನೆಮ್ಮದಿಗಳು ಜನ ಸಮಸ್ತಕ್ಕೆ ಒದಗುವುದು ಬಾಳ ಹೆಗ್ಗುರಿಯಾಗಬೇಕು

ಸ್ವತಶ್ಚಲಿಯಂತ್ರ ಸಂಧಾನ, ಪುಷ್ಕಲವಾಗಿ ವಸ್ತುಗಳ ಉತ್ಪಾದನೆ, ಒಟ್ಟು ಜನ ಸಮುದಾಯದಲ್ಲಿ ಬಹುಸಂಖ್ಯಾಕರಿಗಾದರೂ ಮುಂದೆ ಇನ್ನೂ ಹಲವು ಪಟ್ಟಾದರೂ ಹೆಚ್ಚಾಗುತ್ತ ಹೋಗುವ ಪುಷ್ಕಲ ಧನಸ್ವತ್ತುಸಂಪತ್ತು – ಈ ಗುರಿಯನ್ನೈದಿಸುವ

ಅವಕಾಶಗಳು ಅಭಾವ ಕಾಲದಲ್ಲಿ ಜಾರಿಗೆ ಬಂದ ವಿತ್ತ ಸ್ವತ್ತುಗಳಿಗೆ ಸಂಬಂಧಿಸಿದ ನೀತಿಗೆ ಸವಾಲಾದುವು. ಸ್ವಲ್ಪ ಜನಕ್ಕೆ ವಂಶಪಾರಂಪರ್ಯವಾಗಿ ಆಸ್ತಿ ಮಾಡಿ ಕೊಳ್ಳುವ ಗುತ್ತಿಗೆಯೇಕೆ, ಅವರಿಗೆ ಮಾತ್ರ ಈ ಹಕ್ಕುಬಾಧ್ಯತೆಯೇಕೆ—ಎಂದು ಈ ನೂತನ ಧ್ಯೇಯವಕಾಶಗಳು ನ್ಯಾಯದ ಪ್ರಶ್ನೆಯನ್ನೆತ್ತಿದುವು. ಹೊಸ ಪರಿಸ್ಥಿತಿಯಲ್ಲಿ ಪುಷ್ಕಲತೆಯ ಅನುಕೂಲಗಳನ್ನು ಸಾಧ್ಯವಾದಮಟ್ಟಿಗೂ ಇಡಿಯ ಜನ ಸಮುದಾಯ ಹಂಚಿಕೊಳ್ಳಬೇಕೆಂಬ ವಾದಕ್ಕೆ ಪುಷ್ಟಿಬಂದಿತು

## ಸ್ವಾತಂತ್ರ್ಯದ ಕೂಗು ಅರ್ಥಹೀನ

ಪುಷ್ಕಲತೆ ಹೆಚ್ಚುತ್ತಹೋಗುವ ಸಂಭವವಿರುವಾಗ ಅದನ್ನು ಅನುಭವಿಸುವ ಸ್ವಲ್ಪ ಜನ "ಸ್ವತಂತ್ರರು" ಯಾರಾದರೂ ತಮ್ಮ ಹಕ್ಕನ್ನು ಮುಂದೊತ್ತಿದರಾದರೆ ಅದು ಪುಷ್ಕಲತೆಯನ್ನು ನ್ಯಾಯ ದೃಷ್ಟಿಯಿಂದ ಜನ ಸಮಸ್ತಕ್ಕೆ ಹಂಚಬೇಕೆಂಬ ಪ್ರಶ್ನೆಗೆ ಸಂಗತವೆನ್ನಿಸುವುದಿಲ್ಲ. ಈ ಸ್ವಾತಂತ್ರ್ಯವನ್ನು ಯಾರಿಗೆ ಯಾರು ಕೊಟ್ಟದ್ದು? ಜೀವನ ಒದಗಿಸುವ ಒಳ್ಳೆಯ ವಿಷಯಗಳನ್ನು ಮಿಕ್ಕ ಹೆರವರಿಗಿಂತ ಹೆಚ್ಚಾಗಿ ತಾವೇ ಅನುಭವಿಸಲು ಬಾಧ್ಯರು ಎಂಬುದು "ಸ್ವಾತಂತ್ರ್ಯ"ಕ್ಕೆ ಇರುವ ಅರ್ಥವಾದರೆ, ಅದು ಆ ಸಂದರ್ಭದಲ್ಲಿ ನಿರ್ಬಂಧದಿಂದ ಮಾತ್ರ ಸಂಗತವೆನ್ನಿಸೀತು. ಜೀವಿಕಾಸೌಕರ್ಯಗಳ ವಿತರಣೆಯಲ್ಲೂ ಸೇವೆಗಳು ಹಾಗು ಅವಕಾಶಗಳ ಹಂಚಿಕೆಯಲ್ಲೂ ಶಾಶ್ವತವಾದ ಅಸಮಾನತೆಯಿರುವ ವ್ಯವಸ್ಥೆ ದೊಡ್ಡ ಅಪಾಯಗಳಿಗೆ ದಾರಿ ಮಾಡುತ್ತವೆ ಎಂದು ಒಮ್ಮೆ ಅರಿವಿಗೆ ಬಂದಿತಾದರೆ, ವೈಯಕ್ತಿಕ ಇಚ್ಛೆಯೂ, ಸಮಾಜದ ಇತರ ಜನ ಸಮುದಾಯದ ಅಥವಾ ಜನಸಮಸ್ತದ ಸುಖಕ್ಕಿಂತ ವ್ಯಕ್ತಿಯೊಬ್ಬನ ಏಳಿಗೆಯೂ ಮೇಲೆನ್ನಿಸುವ ವ್ಯವಸ್ಥೆಗಿಂತ ನ್ಯಾಯಕ್ಕೆ ಸಮ್ಮತವೂ ಸಮಸ್ತ ಜನದ ಸುಖಕ್ಕೆ ಸಾಧಕವೂ ಆದ ವ್ಯವಸ್ಥೆಯೇ ಉತ್ತಮವೆಂಬ ಭಾವನೆಗೆ ಸರ್ವತ್ರ ಆದರ ದೊರೆಯುತ್ತದೆ.

## ಮನುಷ್ಯ ಪ್ರಜ್ಞೆ 'ಅಹಂತೆ' ಯಿಂದ 'ವಯಂತೆ'ಯ ಕಡೆಗೆ ಸಾಗಬೇಕು

ಜೀವನ ಸೌಕರ್ಯಗಳ ಪುಷ್ಕಲತೆ ಹೆಚ್ಚುತ್ತ ಹೋದ ಹಾಗೆಲ್ಲ, ಸೌಕರ್ಯಗಳ ಅಭಾವವಿದ್ದ ಕಾಲದಲ್ಲಿ, ಅವನ್ನೇ ಕಾರಣವಾಗಿ ಮಾಡಿಕೊಂಡು, ಕೇವಲ ಸ್ವಲ್ಪ ವಿಚಾರದ ಆಧಾರದಂತೆ ಜನರು ಮಾಡಿಕೊಂಡು, ವಿತ್ತ ಸ್ವತ್ತುಗಳ ಶಾಸನವು ಭರವಸೆ ಕೊಡುವ ಸನ್ನದು ನಿನ್ನದುಗಳೆಂಬ ಮನುಷ್ಯ ಸ್ನೇಹ ಸಂಬಂಧಗಳನ್ನು ಊರ್ಜಿತ ಪಡಿಸವೆ, ಪುಷ್ಕಲತೆ ಅಂಥಾ ಸಂಬಂಧಗಳು ಅಸಮಂಜಸವೆಂದು ಆಕ್ಷೇಪಿಸುತ್ತದೆ. ಈ ಹಳೆಯ ಶಾಸನದ ಆಧಾರದಂತೆ ನಡೆಯುವ ಸಮಾಜದಲ್ಲಿ ಕಡಮೆ ಸೌಕರ್ಯಗಳನ್ನು ಅನುಭವಿಸುತ್ತಿರುವ ಜನಸಮುದಾಯವು ಸರ್ವಜನ ಕಲ್ಯಾಣದೃಷ್ಟಿಯಿಂದ

ವಿತ್ತಸ್ವತ್ತುಗಳ ಅಸಮಾನವಿತರಣೆಮಾಡುತ್ತಿರುವ ಪದ್ಧತಿಯ ಮೇಲೆ ದಾಳಿ ಮಾಡುವುದಾಗಲಿ ಎಂದು ನ್ಯಾಯವಾಗಿಯೇ ತಗಾದೆ ಮಾಡಬಹುದು. ಕಾರಣ ಯಾವುದೇ ಆದರೂ ಹೊಟ್ಟೆಗಿಲ್ಲದೆ ಯಾರಾದರೂ ಉಪವಾಸದ ಬವಣೆಯಲ್ಲಿ ಇರುವವರಾದರೆ, ಸ್ವಲ್ಪ ಸೌಕರ್ಯ ವಿತರಣೆಯಿಂದ ಬಾಧಿತವಾದ ಜನಕ್ಕೆ ಸಾಕಾಗುವಷ್ಟು ಸೌಕರ್ಯ ವಿತರಣೆಯ ಭರವಸೆ ಬರುವವರೆಗೆ—ಮಿಕ್ಕ ಯಾರಿಗೂ ಸೌಕರ್ಯ ಪುಷ್ಕಲತೆಯನ್ನು ಅನುಭವಿಸುವ ಹಕ್ಕು ಇರತಕ್ಕದ್ದಲ್ಲ.

ಕುಟುಂಬಗಳಲ್ಲಿ ಪಕ್ಷಪಾತಕ್ಕೂ ಸೌಕರ್ಯಗಳ ತಿರಸ್ಕಾರಕ್ಕೂ ಒಳಗಾಗಿ, ಮೂಲೆಗೊತ್ತಿರಿಸಲ್ಪಟ್ಟು ಉಮ್ಮಳಿಸುವ ಬಾಲಕಿಯರಿರುವುದನ್ನು (Cynderellas) ನ್ಯಾಯ ಎಂದಿಗೂ ಒಡಂಬಡದು. ಜನ ಸಂಪರ್ಕಗಳು ವಿಸ್ತಾರವಾದಂತೆ, ವಾರ್ತಾ ವಾಹನ ಸಂಚಾರ ಸೌಲಭ್ಯಗಳು ಹರಡಿದಂತೆ 'ನಮ್ಮ' ಕುಟುಂಬ, "ನಮ್ಮ" ನೆರೆಹೊರೆ, "ನಮ್ಮ" ಗ್ರಾಮ, "ನಮ್ಮ" ಪಟ್ಟಣ, ಎಂಬ ಸಂಕುಚಿತ ಮನೋಭಾವವನ್ನು ತೊರೆದು, "ನಮ್ಮ" ದೇಶ "ನಮ್ಮ" ಭೂಖಂಡ, "ನಮ್ಮ" ವಿಶ್ವಪ್ರಪಂಚ ಎಂಬ ಉದಾರ ಮನೋಭಾವವನ್ನು ತಳೆಯಬೇಕೆಂಬ ಸಾಮಾಜಿಕನ್ಯಾಯ–ಇತರ ಯಾರ ಅಪ್ಪಣೆಯನ್ನು ಕೇಳದೆ,–ಸಮಸ್ತ ಜನಕ್ಕೆ ಅನ್ವಯವಾಗುವಂತೆ ವ್ಯಾಪಕವಾಗಿ ಹರಡುತ್ತದೆ. ಅನಿಚ್ಛಾಪ್ರಾರಬ್ಧದಿಂದ ದೈಹಿಕವಾಗಿ ನ್ಯೂನತೆಯೆಂಬುದು ಎಲ್ಲೂ ಅಸಹನೀಯವೇ ನೂತನ ಪ್ರಪಂಚಕ್ಕೆ ಸಿಂಡರೆಲ್ಲಗಳ‡ ಆವಶ್ಯಕತೆಯಿಲ್ಲ, ಮತ್ತು ಅವರು ಕುಟುಂಬಗಳಲ್ಲೂ ಸಮಾಜಗಳಲ್ಲೂ ಇರುವುದಕ್ಕೆ ಆವಕಾಶವನ್ನೂ ಕೊಡುವುದಿಲ್ಲ.

---

‡ **ಸಿಂಡರೆಲ್ಲ** (Cynderella) :– ಜರ್ಮನಿಯ ಗ್ರಿಮ್ ಸಹೋದರರು ಜಗತ್ತಿಗೆ ಕೊಟ್ಟ ಕಥಾಮಾಲಿಕೆಯಲ್ಲಿ ಒಂದು ಕಥೆ ಇದು. ಅದರ ಸಾರಾಂಶ :–

ಶ್ರೀಮಂತನೊಬ್ಬನಿಗೆ ಮೊದಲನೆಯ ಹೆಂಡತಿಯಲ್ಲಿ ಹುಟ್ಟಿದ ಹೆಣ್ಣುಮಗಳೊಬ್ಬಳ ದಾರುಣ ಜೀವನವನ್ನೂ, ಆ ಜೀವನವು ಸುಖಾಂತವಾಗಿ ಮುಗಿದ ಬಗೆಯನ್ನೂ ಈ ಕಥೆ ಚಿತ್ರಿಸುತ್ತದೆ. ಈ ಒಬ್ಬಳೇ ಮಗಳನ್ನು ಬಿಟ್ಟು ತಾಯಿ, ಮೃತ್ಯುಮುಖಳಾಗಿದ್ದ ಹೊತ್ತಿನಲ್ಲಿ ಅವಳನ್ನು ಹತ್ತಿರಕ್ಕೆ ಕರೆದು, "ನೀನು ದೇವರನ್ನು ನಂಬಿಕೊ. ಒಳ್ಳೆಯವಳಾಗಿರು, ಮಗು ಹೀಗೆ ನೀನಿದ್ದರೆ, ದೇವರು ಕಷ್ಟದಲ್ಲಿ ನಿನ್ನ ನೆರವಿಗೆ ಬರುತ್ತಾನೆ. ನಾನು ಇಲ್ಲಿಂದ ತೆರಳುತ್ತೇನೆ. ದೇವಲೋಕದಲ್ಲಿದ್ದುಕೊಂಡು, ಅಲ್ಲಿಂದ ನಿನ್ನ ಬಾಳಹದನನ್ನು ನೋಡಿಕೊಂಡಿರುತ್ತೇನೆ." ಎಂದು ಹರಸಿ ಕಣ್ಣುಮುಚ್ಚಿದಳು.

ಮಗಳು ನಿತ್ಯವೂ ತಾಯಿಯ ಗೋರಿಯ ಬಳಿಗೈದಿ ಕಂಬನಿಯ ಕಾಣಿಕೆ ಕೊಟ್ಟು ಹಿಂತಿರುಗುತ್ತಿದ್ದಳು. ತಾಯ ಕಡೆಗಾಲದ ಕೋರಿಕೆಯಂತೆ, ದೇವರಲ್ಲಿ

ಈ ತತ್ತ್ವಕ್ಕೆ ಇರುವ ವಾಸ್ತವಿಕಮುಖವು ಸ್ವತಸ್ಸಿದ್ಧವಾದ ವಿಷಯ. ಜನ ಜೀವನವು ಜಟಿಲವೂ ಪರಸ್ಪರಾವಲಂಬನಶೀಲವೂ ಆಗುತ್ತ ಹೋದಹಾಗೆಲ್ಲ "ನಮ್ಮದು" ಎಂಬ ವಿಶಾಲಭಾವನೆಯನ್ನು ಈ ತತ್ತ್ವವು ಅವಶ್ಯಪಡಿಸುತ್ತದೆ. "ನನ್ನದು," "ನಿನ್ನದು" ಎಂಬ ಸಂಕುಚಿತ ಸ್ವಾರ್ಥಭಾವನೆಯನ್ನು ಮುಖ್ಯತೆ ಆದ್ಯತೆಗಳ

---

ಭಕ್ತಿಯಿರಿಸಿ, ಒಳ್ಳೆಯ ನಡತೆಯಲ್ಲಿದ್ದಳು. ಅವಳ ತಂದೆ, ಮುಂದೆ ಕೆಲವು ದಿನ ಕಳೆದ ಮೇಲೆ, ಇನ್ನೊಬ್ಬ ಹೆಂಡತಿಯನ್ನು ಮದುವೆಯಾಗುತ್ತಾನೆ: ಅವಳೊಬ್ಬ ವಿಧವೆ. ಗತಿಸಿದ ಪತಿಯಿಂದ ಇಬ್ಬರು ಹೆಣ್ಣುಮಕ್ಕಳನ್ನು ಹೆತ್ತಿದ್ದಳು. ಈ ಇಬ್ಬರ ಮಕ್ಕಳೊಡನೆ ಮಲತಾಯಿ ಮನೆಗೆ ಬಂದಮೇಲೆ. ಮಲಮಗಳನ್ನು ಅಕ್ಕರೆಯಿಂದ ನೋಡದೆ ಹೋದಳು. ಮಲ ಸೋದರಿಯರೂ ತಾಯ ಮೇಲ್ಪಂಕ್ತಿಯನ್ನು ಅನುಸರಿಸಿದರು.

ಈ ಮಲಸೋದರಿಯರು ಚೆಲುವೆಯರೇ. ಹೊರಕ್ಕೆಮಾತ್ರ ಚೆಲುವು, ವೈಯ್ಯಾರ. ಆದರೆ ಒಳಗೆ ಪಾಪದ ತಪ್ಪುನಡೆಯುಳ್ಳವರು. ಇವರು ಮಲಸೋದರಿಗೆ ಇಟ್ಟ ಹೆಸರು **ಸಿಂಡರೆಲ್ಲ**. 'ಸಿಂಡರ್' ಎಂದರೆ ಇದ್ದಿಲು. ಕೈ ಮೈಗಳನ್ನು ಮಸಿ ಮಾಡುವ ಸರಕು. ಅವಳಿಗೆ ಪಾಕಶಾಲೆಯಲ್ಲೂ ಸ್ನಾನ ಮಂದಿರದಲ್ಲೂ ಕೆಲಸವಿಟ್ಟು ತೊತ್ತಿನಂತೆ ಅವಳನ್ನು ನಡಸಿಕೊಂಡರು. ಮನೆಯ ಸಿರಿಗೆ ಅವಳು ಹಕ್ಕುದಾರಳಲ್ಲವೆಂದು ಅವಳನ್ನು ಮೂಲೆಗೊತ್ತರಿಸಿದರು—ಕಸವೆಂಬಂತೆ. ಅವಳಿಗೆ ಕೊಳಕು ಬಟ್ಟೆ ಬಿಟ್ಟು ಬೇರೆ ಉಡೆಯಿಲ್ಲ. ಮನೆಯಲ್ಲಿ ಎಲ್ಲರಿಗೂ ನ್ಯಾಯತಃ ಸಮಾನವಾಗಿ, ಪಂಕ್ತಿ ಭೇದವಿಲ್ಲದೆ, ಹಂಚಿಕೆಯಾಗಿ ಸಲ್ಲಬೇಕಾದ ಸೌಕರ್ಯಗಳನ್ನು ಸಿಂಡರೆಲ್ಲಳಿಗೆ ಕೊಡದೆ ಮಲತಾಯಿ ಸೋದರಿಯರು ನಿರಾಕರಿಸುತ್ತ ಬಂದವರಲ್ಲದೆ, ಅವಳನ್ನು ಕೊರತೆ ಕಾರ್ಪಣ್ಯಗಳಲ್ಲಿರಿಸಿ ಗೋಳಾಡಿಸಿದರು. ತಮ್ಮ ಸಮೃದ್ಧಿಯನ್ನು ಲಜ್ಜೆಯಿಲ್ಲವೆ ಅನುಭವಿಸಿಕೊಂಡು ಹೋದರು.

ಸಿಂಡರೆಲ್ಲ ಸಹನೆ ಕ್ಷಮೆಗಳನ್ನು ಮೈಗೂಡಿಸಿಕೊಂಡಳು. ಸಹಾಯಕ್ಕೆ ದೈವವನ್ನು ಪಟ್ಟಾಗಿ ನಂಬಿದಳು. ದೈವ ಕೈಬಿಡಲಿಲ್ಲ. ಹೆಜ್ಜೆಹೆಜ್ಜೆಗೂ ಅವಳಿಗೆ ಮುಂದೆ ಸುಖವಾಗುವುದನ್ನು ಭರವಸೆ ಪಡಿಸಿತು. ಮಲತಾಯಿ ಮಲಸೋದರಿಯರ ಎಲ್ಲ ಸಂಚುಗಳನ್ನೂ ಮುರಿದು, ಸಿಂಡರೆಲ್ಲ ರಾಜಕುಮಾರನನ್ನು ಮದುವೆಯಾಗಿ ಸುಖದಲ್ಲಿರುವಂತೆ ದೈವ ಅನುಗ್ರಹ ಮಾಡಿತು.

ಪುರುಷ ಪ್ರಯತ್ನಕ್ಕೆ ದೈವ ಅನುಕೂಲವಾಗಿಯೇ ವರ್ತಿಸುತ್ತದೆ—ಎಂಬುದು ಸಿಂಡರೆಲ್ಲಳ ಕಥೆಯಿಂದ ಹೊರಡುವ ಪಾಠ. ಯಾವ ಮನೆಯಲ್ಲೂ ಸಿಂಡರೆಲ್ಲಳಂಥವರು ಇರಬಾರದು; ಮಕ್ಕಳನ್ನು ಹಾಗೆ ಇರಿಸುವುದಕ್ಕೆ ಸಮಾಜ ಅವಕಾಶಕೊಡಬಾರದು.

ಗಣನೆಯಲ್ಲಿ ಕೆಳಮಟ್ಟಕ್ಕೆ ಇಳಿಸುತ್ತದೆ. ಕೆಲವು ಬಗೆಯ ಭೌತ ಸೌಕರ್ಯ ಸಂಪತ್ತುಗಳು ಮುಖ್ಯವಾಗಿ ಜನಸಮುದಾಯದ ಒಟ್ಟನುಭವದಲ್ಲಿ ಇರತಕ್ಕವು; ಸಾಮಾಜಿಕ ಸ್ನೇಹ ಸಂಬಂಧಗಳನ್ನು ನೆಮ್ಮದಿಯಾಗಿ ನಡಸುವ "ನಮ್ಮದು"ಗಳೆಂಬ ವರ್ಗದಲ್ಲಿ ಸೇರಿರಬೇಕಾದವು ಸ್ವಭಾವತಃ ಈ ಸಂಪತ್ತುಗಳು. ಅಂಥಾ ಸೌಕರ್ಯಗಳು ಯಾವುವೆಂದರೆ—ಭೂಮಿ, ಜಲ, ವಾಯು, ಬಿಸಿಲು, ಚಂದ್ರ,ನಕ್ಷತ್ರಕಾಂತಿಗಳು; ಈ ಮಹಾಭೂತಗಳು ವಿಧಾಯಕಮಾಡುವ ಕ್ಲೇಶಗಳನ್ನು ಪರಿಹರಿಸಿಕೊಳ್ಳಲು ಸದ್ಯಕ್ಕಿರುವ ತಾತ್ಕಾಲಿಕ ರಕ್ಷಣೋಪಾಯಗಳನ್ನು ಉತ್ತಮ ಪಡಿಸುವುದು ಕಷ್ಟ, ಮತ್ತು ಅಸಾಧ್ಯ ಎಂಬ ಪರಿಸ್ಥಿತಿಯಿರುವ ಪಟ್ಟಣಗಳಲ್ಲಿ ಬಾಳುವ ಜನಸಮುದಾಯಗಳಿಗೆ ವಸತಿ ಸೌಕರ್ಯ, ಸರಕು ಸಾಗಣೆಗೆ ವಾಹನ ಸೌಕರ್ಯ, ಜನಸಂಚಾರಕ್ಕೆ ಮಾರ್ಗ ಸೌಕರ್ಯ, ಸಮಾಚಾರ ನಿವೇದನ, ವಿದ್ಯಾದಾನ, ಜನಾರೋಗ್ಯಪಾಲನೆ, ಮತ್ತು ನ್ಯಾಯವಾದ ಜೀವಿಕಾ ಸೌಕರ್ಯಗಳ ಹಂಚಿಕೆ ಮೊದಲಾದ ಇತರ ಸಾಮಾಜಿಕ ಸೌಲಭ್ಯಗಳು.

ಭೌತ ಸೌಕರ್ಯ ಸೇವೆಗಳು ಮನುಷ್ಯನಿಗೆ ಸಲ್ಲಬೇಕಾದ ಪ್ರಾಪ್ತವ್ಯಗಳ (ಹಕ್ಕುಬಾಧ್ಯತೆಗಳ) ಜೊತೆಗೆ, ಮತ್ತು ಅವುಗಳ ಪಕ್ಕದಲ್ಲಿ, ಭೌತೇತರ ಅನುಕೂಲಗಳೂ ಅವನ ಪ್ರಾಪ್ತವ್ಯಗಳಾಗಿ ಗಣನೆಗೆ ಬರುತ್ತವೆ—ಸಂಚಲನ ಸೌಕರ್ಯ, ರಕ್ಷಣೆ. ಒಂದೊಂದು ಜನ ಸಮುದಾಯದ ಒಟ್ಟು ಸಂಪನ್ಮೂಲಗಳು ಮತ್ತು ಉತ್ಪಾದಕ ಸಾಮರ್ಥ್ಯವನ್ನವಲಂಬಿಸಿ ಕನಿಷ್ಠ ಪ್ರಮಾಣದಷ್ಟಾದರೂ ಜನಸಾಮಾನ್ಯಕ್ಕೆ ಜೀವಿಕಾ ಸೌಕರ್ಯ — ಇವೆಲ್ಲ ಭರವಸೆಯಾಗಿರತಕ್ಕದ್ದು. ಒಮ್ಮೆ ವಿಶೇಷ ಸೌಕರ್ಯಗಳ ಕೋಟೆಕೊತ್ತಲಗಳನ್ನು ಛಿದ್ರಿಸಿದೆವೋ ಇಲ್ಲವೆ ನಾಶಮಾಡಿದೆವೋ ಆಗ ಸಾಮಾಜಿಕ ಶಿಲ್ಪಿ ( ಇಂಜಿನಿಯರು ) ಗಳಿಗೂ ಸಾಮಾಜಿಕ ಕಾರ್ಯತಂತ್ರ ( ಟೆಕ್ನಿಷಿಯನ್ನು ) ಗಳಿಗೂ ಕರ್ತವ್ಯ ಹೆಗಲಿಗೇರುತ್ತದೆ. ಅವರು ಸ್ಪಷ್ಟವಾಗಿ ವಿವರಿಸಬೇಕಾದ ವಿಷಯ ಇದು: ಜನಸಮುದಾಯವನ್ನು "ನಮ್ಮ" ವರ್ಗ ಎಂಬ ವಿಶದ ಪಡಿಸುವುದು. ಇದಾದಮೇಲೆ ಸಾಮಾಜಿಕ ಆಡಳಿತಗಾರರಿಗೆ ಹೊಣೆ ಬರುತ್ತದೆ. ಜನಮೊಟ್ಟಗೋಸ್ಕರ ಇರುವ ಸೌಕರ್ಯಗಳಲ್ಲಿ, ಸಾಮಾನ್ಯವಾಗಿ ಎಲ್ಲರೂ ಹಂಚಿಕೊಳ್ಳಬಹುದಾದ ಸೌಕರ್ಯಗಳ ಸಮಷ್ಟಿಯಲ್ಲಿ, ನಮ್ಮ ಪಾಲಿಗೆ ಬರಬಹುದಾದ—ಮಹತ್ತಮವೆನ್ನಿಸುವಷ್ಟು ಮಟ್ಟಕ್ಕೆ ಕನಿಷ್ಠನಿತಿಯ—ಸೌಕರ್ಯಗಳನ್ನು ಸಮುದಾಯದ ಒಬ್ಬೊಬ್ಬ ಸದಸ್ಯನಿಗೂ ಇವರು ಭರವಸೆಪಡಿಸಬೇಕು. ವ್ಯಕ್ತಿ ಮನುಷ್ಯನು ತನ್ನ ಜೀವಿತೋದ್ದೇಶಗಳಿಗೆ ಸಮುದಾಯದ ಒಟ್ಟು ವರಮಾನದಲ್ಲಿ ಕನಿಷ್ಠತರ ಪ್ರಮಾಣವನ್ನು ಪಡೆಯುತ್ತಾನೆ. ಆದರೆ ಸಮುದಾಯದ ಪಾಲಿಗೆ ಸಲ್ಲುವ ಒಟ್ಟುವರಮಾನ –ಸಮಾಜದೊಟ್ಟಿನ ಸಂಪಾದನೆ– ಹೆಚ್ಚುತ್ತ ಹೋಗುತ್ತದೆ.

ಕ್ಷಿಪ್ರವಾಗಿ ಅಭಿವೃದ್ಧಿ ಹೊಂದುತ್ತ ವಿಕಾಸವಾಗುತ್ತಿರುವ ಸಮತಾವಾದಿ ರಾಷ್ಟ್ರಗಳ ಜನ ಜೀವನದ ಅತ್ಯಂತ ಪ್ರಧಾನ ಲಕ್ಷಣಗಳಲ್ಲಿ ಒಂದು ಇದು: "ನನ್ನದು," "ನಿನ್ನದು," ಮತ್ತು "ನಮ್ಮದು" ಗಳೆಂಬ ದೃಷ್ಟಿತ್ರಯದಲ್ಲಿ ಆಗುತ್ತಿರುವ ಸಮಾಜ ಹಿತದ ಪರಿವರ್ತನೆ. ವೈಯಕ್ತಿಕ ಸ್ವತ್ತಿನ ಹಕ್ಕುಬಾಧ್ಯತೆಗಳು ಆರ್ಥಿಕ ಸಾಮಾಜಿಕ ಕ್ಷೇತ್ರಗಳ ಪರಿಸರಕ್ಕೆ ಬಾಧಕವಾಗಿ ವರ್ತಿಸತಕ್ಕವು. ವ್ಯಕ್ತಿಮನುಷ್ಯನು ಸ್ವಹಿತೈಕ ದೃಷ್ಟಿಯಿಂದ ತನ್ನ ಪಾಪ್ತವ್ಯಗಳನ್ನು – ಹಕ್ಕುಬಾಧ್ಯತೆಗಳನ್ನು–ಮುಂದೊತ್ತುವವ ನಾದರೆ, ಅವನು ಆಗ ತನ್ನ ಜೊತೆ ಜನದ ಸಮಾಂತರಗಳಾದ ಹಕ್ಕೂಬಾಧ್ಯತೆಗಳಿಗೆ ಲೋಪವಾಗುವ ಅಪಾಯವೊಡ್ಡುತ್ತಾನೆ. ವೈಯಕ್ತಿಕ ಸೊತ್ತುಗಳ ಹಕ್ಕುಗಳಿಗೆ ಕಟ್ಟುನಿಟ್ಟಾದ ಮಿತಿಯೊಡ್ಡಿ ಅವನ್ನು ನಿಯಮದಲ್ಲಿರಿಸುವ ನಾಲ್ಕು ಜೀವನ ತತ್ತ್ವ ಗಳಿವು: (1) ಜನ ಸಮುಸ್ತಕ್ಕೆ ಕನಿಷ್ಠ ಮಿತಿಯ ಸೌಕರ್ಯ ಪ್ರಾಪ್ತಿ; (2) ಮನುಷ್ಯನು ಮನುಷ್ಯನನ್ನು ಶೋಷಿಸದೆ – ಸುಲಿಯದೆ – ಅವರನ್ನು ಸಂಯಮದಲ್ಲಿರಿಸುವುದು; (3) ಸಾಮಾನ್ಯವಿದ್ಯಾಭ್ಯಾಸದ ವ್ಯವಸ್ಥೆ; ಮತ್ತು ಕಾರ್ಯ ತಂತ್ರಶಾಸ್ತ್ರವನ್ನು ವ್ಯಾಸಂಗ ಮಾಡಲು ಸಮಸ್ತ ಜನಕ್ಕೂ ಸಮಾನಾವಕಾಶ ಪ್ರಾಪ್ತಿ; (4) ವಿಹಾರ ಕ್ಷೇತ್ರ ಹಾಗೂ ಆರೋಗ್ಯವರ್ಧಕ ಧಾಮಗಳಿಗೆ ಹೋಗಿಬರುವುದಕ್ಕೂ ಇತರ ಸಾಂಸ್ಕೃ ತಿಕ ಚಟುವಟಿಕೆ ಗಳಿಗೂ ತಕ್ಕ ಸೌಲಭ್ಯ ಕಲ್ಪನೆ – ಸಮಸ್ತ ಜನವರ್ಗಕ್ಕೂ ಇವಕ್ಕೆ ಸುಲಭ ಪ್ರವೇಶ ಇರುವ ಅಧಿಕಾರ.

ಸಮತಾವಾದಿ ರಾಷ್ಟ್ರಗಳಲ್ಲಿ ಈ "ನಮ್ಮ" ಸೌಕರ್ಯಗಳನ್ನೂ ಅವಕಾಶಗಳನ್ನೂ ವಿಸ್ತರಿಸುತ್ತಹೋಗುವ ಕಾರ್ಯಪ್ರಯತ್ನಗಳು ಇನ್ನೂ ಪ್ರಾಥಮಿಕಾವಸ್ಥೆಯಲ್ಲಿಯೂ, ಮತ್ತು ಅನಿವಾರ್ಯವಾಗಿ ಪ್ರಯೋಗ ಪರೀಕ್ಷಾ ಘಟ್ಟದಲ್ಲಿಯೂ ಇವೆಯೆಂಬುದು ನಿಜ. ಸರ್ವಜನರಕ್ಷಣೆ, ಭಾರೀ ಬಂಡವಾಳ ಹೂಡಿಕೆ, ಮತ್ತು ಸಮಾಜವು ಹಾಯುತ್ತಿರುವ ಸಾಮಾಜಿಕ ಪರಿವರ್ತನೆಯ ತಾತ್ಪರ್ಯವನ್ನು ಮೆಚ್ಚಿಕೊಂಡು ಅರ್ಥ ಮಾಡಿಕೊಳ್ಳಲಾರದ ಹಳಬರಿಂದ ಅಸಹಕಾರ ಧೋರಣೆ – ಇವೆಲ್ಲ ಸೇರಿ ಸೌಕರ್ಯ ವಿಸ್ತರಣದ ಪ್ರಗತಿವೇಗವನ್ನು ನಿಧಾನ ಮಾಡುತ್ತಿವೆಯಾದರೂ, ಪ್ರಗತಿಗೆ ಅವಶ್ಯವಾದ ಸಂಗತಿಗಳ ಪೈಕಿ ಒಂದರ ಬಗ್ಗೆ ಸಮತಾವಾದಿ ರಾಷ್ಟ್ರಗಳಲ್ಲಿ ಸಾಮಾನ್ಯವಾಗಿ ಸರ್ವಜನ ಸಮ್ಮತಿಯಿರುತ್ತದೆ. ಸಾಂಪ್ರದಾಯಿಕವಾಗಿ ಸ್ಪರ್ಧಾಮೂಲವೂ ವಿತ್ತಸ್ವತ್ತುಗಳಲ್ಲಿ ಅತ್ಯಾಸಕ್ತವೂ ಆಗಿ, ಅಭ್ಯಾಸಬಲಕ್ಕೆ ವಶವಾಗಿ ನಡೆಯುತ್ತಿರುವ ಸಮಾಜದಲ್ಲಿ –ಸಮತಾವಾದದ ನೂತನ ದೃಷ್ಟಿಯಂತೆ ಪ್ರಾಪ್ತವಯಸ್ಕರಾದ ಯುವಕರಿಗೆ ಉಚಿತ ವಾದ ಸ್ಥಾನಮಾನಾಧಿಕಾರಗಳನ್ನು ಕೊಡುವುದು ಎಷ್ಟೇ ಕಷ್ಟವಾದರೂ,–"ನಮ್ಮ" ಸಮತಾವಾದಿ ಸಮುದಾಯವು ಕಿಶೋರ ವರ್ಗಕ್ಕೆ ಒದಗಿಸುವ ಪೂರ್ಣ ಸೌಕರ್ಯಾನು ಕೂಲಗಳನ್ನು ಹಂಚಲು ಅವಕಾಶವಿದೆ. ಇಂದು ಮಕ್ಕಳಿಗೆ ಸಂದದ್ದು ನಾಳೆ ಅವರು

ದೊಡ್ಡವರಾದಮೇಲೂ ಸಲ್ಲುತ್ತ ಊರ್ಜಿತಾವಸ್ಥೆಯಲ್ಲಿರುತ್ತ, ಹಂಚಿಕೆಯ ಗೋಜನ್ನು ಕಡಮೆ ಮಾಡುತ್ತದೆ.

## ಧನಸಂಪತ್ತು, ಅದರ ಅನುಭವ ಮತ್ತು ಅದರ ಆರ್ಜನೆಯು ಅವಕಾಶಗಳಲ್ಲಿ ಪಾಲ್ಗೊಳ್ಳುವಿಕೆ

ಸೈನ್ಸ್ (ವಿಜ್ಞಾನ), ಇಂಜಿನಿಯರಿಂಗ್ (ವಾಸ್ತುಶಿಲ್ಪಾದಿ ವೃತ್ತಿಗಳು) ಮತ್ತು ಟೆಕ್ನಾಲಜಿ (ನೂತನ ಕಾರ್ಯತಂತ್ರಜ್ಞಾನ) – ಇವು ಪ್ರಗತಿ ಹೊಂದಿದ ಪರಿಣಾಮವಾಗಿ, ನಮ್ಮ ಸಮ್ಮತಿ ಇರಲಿ, ಇಲ್ಲದಿರಲಿ, – ಮನುಷ್ಯನು ಪ್ರಕೃತಿಯ ಮೇಲೆ ಮೇಲ್ಮಟ್ಟದ ಹತೋಟಿಯನ್ನು ಚಲಾಯಿಸುವ ಅವಕಾಶ ಪಡೆದಿದ್ದಾನೆ. ಇದರಿಂದ ಭೌತ ಸೌಕರ್ಯಗಳ ಹಾಗೂ ಭೌತಾತೀತವಾದ ಸುಖಗಳು ಅವನಿಗೋಸ್ಕರ ಪುಷ್ಕಲವಾಗಲು ದಾರಿಯಾಗಿದೆ. ಎಲ್ಲೆಲ್ಲಿ ಪ್ರಕೃತಿ ಶಕ್ತಿಗಳನ್ನೂ ಸಮಾಜ ಶಕ್ತಿಗಳನ್ನೂ ಹೂಡಿ ಅವುಗಳಿಂದ ಕ್ರಿಯಾತ್ಮಕವಾಗಿ ಕಾರ್ಯರಂಗದಲ್ಲಿ ದುಡಿಸಲಾಗುತ್ತಿವೆಯೋ ಅಲ್ಲೆಲ್ಲ ಈ ಸೌಕರ್ಯ ಪುಷ್ಕಲತೆ ಜನಾನುಭವಕ್ಕೆ ಬರುತ್ತಿರುವುದನ್ನು ನೋಡಬಹುದು. ಗುಣಾಕಾರ ಪ್ರಮಾಣದಲ್ಲಿ ವಸ್ತುಗಳ ಉತ್ಪಾದನೆಗೆ ಅಸಮರ್ಥ ಕಾಯರು ಎಡರಾಗಬಹುದು; ಮತ್ತು ಸ್ವಾರ್ಥಿಗಳಾಗಿ ವಿಶೇಷ ಸೌಕರ್ಯಗಳನ್ನು ಅನುಭವಿಸುತ್ತಿರುವವರಿಂದ ಅದಕ್ಕೆ ಹಾನಿತಟ್ಟಬಹುದು; ಉತ್ಪಾದನೆಯ ಫಲಿತಾಂಶಗಳನ್ನು ಆಡಂಬರದ ಭೋಗದಲ್ಲಿ ಪೋಲುಮಾಡುವ ಸಾಧ್ಯತೆಯೂ ಉಂಟು; ಸಮರ ಸಿದ್ಧತೆಯಿಂದಲೂ, ಸಮರಾಚರಣೆಯಿಂದಲೂ ಸಮಾಜದ ಸಂಪತ್ತಿನ ಅಪವ್ಯಯವಾಗಬಹುದು; ಇಲ್ಲವೆ ಭ್ರಷ್ಟಾಚಾರದ ಹುಚ್ಚು ಹೊಳೆಯಲ್ಲಿ ಸಂಪತ್ತೆಲ್ಲ ತೇಲಿ ಸೂರೆಯಾಗಿ ಹೋಗಬಹುದು. ಆದರೆ ಆಧುನಿಕ ಪ್ರಪಂಚದ ಗಮನಾರ್ಹ ಲಕ್ಷಣವಾಗಿ, ಗುಣಾಕಾರ ಪ್ರಮಾಣದಲ್ಲಿ ವಸ್ತುಗಳನ್ನು ಉತ್ಪಾದಿಸುವ ಸಾಮರ್ಥ್ಯವಂತೂ ಮಹಾಸಿದ್ಧಿ ಸಾಧ್ಯವೆನ್ನಿಸಿ, ಆಧುನಿಕ ಸಮಾಜದ ಸಹಜಗುಣವೆನ್ನಿಸಿ, ಪ್ರಕಟವಾಗುತ್ತಿರುವುದನ್ನು ನಾವು ಅಲ್ಲಗಳೆಯುವಂತೆ ಇಲ್ಲ.

ಸಾಮ್ರಾಜ್ಯವಾದಿಗಳ ಪ್ರಭಾವ ಕ್ಷೇತ್ರಗಳಲ್ಲಿ ವಿದ್ಯಮಾನಗಳೇನು? ಸರಕುಗಳ ಅಭಾವವನ್ನು ಸೃಷ್ಟಿಸಿ, ಆದರೂ ಮಹಾಲಾಭ ಸಂಪಾದನೆ ಮಾಡಲು ಅವಕಾಶ ಕೊಡುವ ಆರ್ಥಿಕ ವ್ಯವಸ್ಥೆಯನ್ನು ಅವಲಂಬಿಸಿ, ಹೆಚ್ಚುತ್ತಿರುವ ಪುಷ್ಕಲತೆಯೂ ಫಲವನ್ನೂ ದೂರಮಾಡುವ, ವ್ಯರ್ಥಮಾಡುವ, ಇಲ್ಲವೆ ನಾಶಮಾಡುವ ಉದ್ರಿಕ್ತೋನ್ಮತ್ತ ಪ್ರಯತ್ನಗಳು ನಡೆಯುತ್ತಿವೆ. ಕಾಮ್ಯುನಿಸ್ಟ್ ತತ್ತ್ವವನ್ನು ವಿರೋಧಿಸುವ ಮನೋವೃತ್ತಿಯಿಂದ ಪ್ರಗತಿಕಂಟಕವಾದ ಈ ಪ್ರಯತ್ನಗಳೆಲ್ಲ ನಡೆಯುತ್ತಿದ್ದರೂ–ಪಶ್ಚಿಮವು ಉತ್ಪಾದನ–ಪುಷ್ಕಲತೆ ಧನ–ಸಮೃದ್ಧಿಗಳ ಭರವಸೆಯಿಂದ ಮುಂಬರಿಯುತ್ತಿದೆ. ವಿದ್ಯುದುತ್ಪಾದನೆ ಹೇಗೆ ತಮಸ್ಸನ್ನು ಬಹಿಷ್ಕರಿಸಿ

ಪೂರ್ತಿಯಾಗಿ ಅಣಗಿಸಿದೆಯೋ, ಇಲ್ಲವೆ ಕತ್ತಲನ್ನು ಕೂಡಿದ ಮಟ್ಟಿಗೂ ಕಡಿಮೆ ಮಾಡಿದೆಯೋ ಹಾಗೆ, ವಸ್ತೂತ್ಪಾದನ ಬಲದಿಂದ ಅಭಾವ ಪರಿಸ್ಥಿತಿಯನ್ನು ಪೂರಾ ಹೋಗಲಾಡಿಸುವುದೋ ಇಲ್ಲವೇ ಅಭಾವ ಪರಿಸ್ಥಿತಿಯ ಕಿರುಕುಳವನ್ನು ಜನಕ್ಕೆ ಕಡಮೆಮಾಡುವುದೋ ಅದು ನೂತನ ಆರ್ಥಿಕ ಪ್ರಯತ್ನಗಳನ್ನು ಪಶ್ಚಿಮವು ಕಂಡು ಕೊಂಡಿದೆ. ಅಭಾವವನ್ನು ರದ್ದುಪಡಿಸುತ್ತ ಹೋದಹಾಗೆ, ಅಭಾವದ ಆಸರೆಯಿಂದ ಬೆಳೆಯುತ್ತಿರುವ ಖಾಸಗಿ ಆರ್ಥಿಕ ವ್ಯವಸ್ಥೆ ಜನಸಮುದಾಯದೊಟ್ಟಿಗೆ ಜೀವಿಕೆಯನ್ನು ಒದಗಿಸಲು ಅಸಮರ್ಥವಾಗಿದೆ; ಮತ್ತು ಸಮಾಜದಲ್ಲಿ ದುಡಿಯಬಲ್ಲವರೆಲ್ಲರೂ ಸಮಷ್ಟಿರೂಪದ ಚಟುವಟಿಕೆಯಲ್ಲಿ ತೊಡಗುವುದಕ್ಕೆ ಅನುಕೂಲವಾಡುವ ಮಾರ್ಗ ದರ್ಶನವನ್ನು ನೀಡಲು ಅಸಮರ್ಥವಾಗಿದೆ.

ಉದ್ಯಮಗಳಲ್ಲಿ ಸ್ವತಶ್ಚಲಿ ಯಂತ್ರಗಳನ್ನು ಅಳವಡಿಸುವ ಸಾಂಪ್ರತ ಸಂದರ್ಭವು ಖಾಸಗಿ ಉದ್ಯಮಿಗಳನ್ನು ಕಡಲನೆರೆಯಂತೆ ಗಾಬರಿಪಡಿಸುತ್ತದೆ. ಸ್ವತ ಶ್ಚಲೀಕರಣವು ( automation ) ವಸ್ತುಗಳ ಅಭಾವ ಸನ್ನಿವೇಶಕ್ಕೆ ಮೃತ್ಯು ಸಂದೇಶವನ್ನು ಕೊಡತಕ್ಕದ್ದಾಗುತ್ತದೆ; ಮತ್ತು ಈ ಯಂತ್ರಪ್ರಯುಕ್ತ ಕಾರ್ಯ ಕಲಾಪವು ಮನುಷ್ಯರ ನೇರ ಚಟುವಟಿಕೆಗಳನ್ನು ಒಂದೊಂದು ಇಲಾಖೆಯಿಂದಲೂ ತಪ್ಪಿಸ ಬಲ್ಲದ್ದಾಗಿರುವುದಲ್ಲದೆ, ಮಿತವಾದ ಪ್ರಾಣಿಶಕ್ತಿಯ ಅವಲಂಬನೆಯನ್ನು ಬಹು ಪಾಗಿ ತೊರೆದು, ಅಮಿತವೂ ನಿತ್ಯೋರ್ಜಿತವಾಗಿ ಬೆಳೆಯುತಕ್ಕದ್ದೂ ಆದ ಪ್ರಕೃತಿ ಶಕ್ತಿ ಯನ್ನು ಅವಲಂಬಿಸಿ, ಅತಿಶಯವಾದ ಉತ್ಪಾದನ ಕಾರ್ಯಸಿದ್ಧಿಯನ್ನು ಪಡೆಯ ಬಲ್ಲದ್ದಾಗಿರುತ್ತದೆ.

ಸಮತಾವಾದವು ಈ ಬೆಳವಣಿಗೆಗಳನ್ನು ಸ್ವಾಗತಿಸುತ್ತದೆ. 18ನೆಯ ಮತ್ತು 19ನೆಯ ಶತಮಾನಗಳ ಅಜ್ಞಾನ, ಆರ್ಥಿಕವಾಗಿ ಹಿಂದುಳಿದಿರುವಿಕೆ, ಮತ್ತು ವಸ್ತು ಗಳ ಕೆಳಮಟ್ಟದ ಉತ್ಪಾದನ ಸ್ಥಿತಿಗೆ ಸ್ಪರ್ಧೆಯೂ ವಿತ್ತಸ್ವತ್ತುಗಳ ಆರ್ಜನ ಪ್ರವೃತ್ತಿಯೂ ಸಕಾರಣವಾದ ಮನುಷ್ಯ ಪ್ರತಿಕ್ರಿಯೆಯಾಯಿತು. ಪ್ರಕೃತಿ ಗರ್ಭಸ್ಥ ವಾದ ಭೌತಸಂಪತ್ತು ಹಾಗೂ ಶಕ್ತಿ ಸಮೃದ್ಧಿಗಳನ್ನು ಅತ್ಯಂತ ವ್ಯಾಪಕವಾಗಿಯೂ ಗಾಢವಾಗಿಯೂ ಬಳಸಿಕೊಂಡದ್ದರಿಂದ ಅತ್ಯಧಿಕ ಪರಿಮಾಣದಲ್ಲಿ ವಸ್ತೂತ್ಪಾದನೆಯ ಪುಷ್ಕಲತೆ ಫಲಿಸಿತು. ಈ ಪುಷ್ಕಲತೆಯು ಆಮೂಲಾಗ್ರ ಸುಧಾರಣಾವಾದಿಗಳಾದ ರ್ಯಾಡಿಕಲ್ ಪಂಥದವರ ಜೀವದುಸಿರಾಗಿದೆ. ಈ ಬಗೆಯ ಅಭಿವೃದ್ಧಿ ಸಾಧಕ ಪ್ರಯತ್ನಗಳು ಮಾತ್ರ ಪ್ರತಿಯೊಬ್ಬನಿಗೂ ಅವನವನ ಆವಶ್ಯಕತೆಗಳನ್ನು ಪೂರೈಸುವ ವಸ್ತುಪುಷ್ಕಲತೆಯನ್ನು ಆಗಮಾಡಿಸಿದೆ.

ಸಾಕಾಗುವಷ್ಟನ್ನು ಸ್ವಂತಕ್ಕೆ ಬಳಸಿ, ಹೆರವರ ಪ್ರಯೋಜನಕ್ಕಾಗಿ ಮಿಗಿಸಿ ಒದಗಿಸುವ ಪರಿಮಾಣದಲ್ಲಿ ಬಳಕೆಯ ವಸ್ತುಗಳನ್ನು ಮತ್ತು ಪಡೆಯುವ ಸೇವೆ

ಗಳನ್ನೂ ಇಂದು ಸಮಾಜ ಸಮುದಾಯಗಳು ಉತ್ಪಾದಿಸುತ್ತಿವೆ. ಸೈನ್ಸ್, ಇಂಜಿನಿಯರಿಂಗ್ ಮತ್ತು ಈ ಉಭಯ ಕ್ಷೇತ್ರಗಳಲ್ಲಿ ವಾಡಿಕೆಗೆ ಬಂದಿರುವ ಪ್ರಗತಿ ಫಲವಾದ ಕಾರ್ಯತಂತ್ರ ( ಟೆಕ್ನಾಲಜಿ ) ಇವೆಲ್ಲ ಮನುಷ್ಯನಿಗೆ ಕೊಟ್ಟ ನೆರವು. ಈ ಸಿದ್ಧಿಗೆ ಸಾಧನವಾದದ್ದು ಪ್ರಕೃತಿ ಸಂಪನ್ಮೂಲಗಳನ್ನೂ ಶಕ್ತಿಗಳನ್ನೂ ರೂಢಿಸಿಕೊಂಡು, ಸಮಾಜದ ಆಡಳಿತ ಯಂತ್ರದಲ್ಲಿ ಮುನ್ನಡೆ ಕಂಡ ಮನುಷ್ಯದಕ್ಷತೆ.

ದೊಡ್ಡ ಗಾತ್ರದ ಸುಖಸಮೃದ್ಧಿಗೆ ಪೂರ್ವಸೂಚನೆಯಾದ ವಸ್ತುಗಳ ಪುಷ್ಕಲವಾದ ಉತ್ಪಾದನೆಯ ಆಢ್ಯತೆಯು ಅಭಾವಪರಿಸ್ಥಿತಿಯನ್ನು ಆಧಾರವಾಗಿ ಮಾಡಿಕೊಂಡು ಚಟುವಟಿಕೆ ನಡಸುವ ಬಂಡವಾಳ ಪದ್ಧತಿಗೆ ಮರಣ ಸೂಚಕವಾಗಿ ಘಂಟಾನಾದ ಮಾಡುತ್ತದೆ; ಮತ್ತು ಅದೇ ಕಾಲಕ್ಕೆ ಈ ಪುಷ್ಕಲ ವಸ್ತೂತ್ಪಾದನ ದಕ್ಷತೆಯು ಆರ್ಥಿಕ ಪ್ರಗತಿಗೆ ಸ್ಪರ್ಧೆಯ ಆಧಾರವನ್ನೂ ವಿತ್ತಸ್ವತ್ತುಗಳ ಆರ್ಜನೆಯ ಮನೋವೃತ್ತಿಯ ಆಧಾರವನ್ನೂ ತಪ್ಪಿಸಿ, ಅವಕ್ಕೆ ಬದಲಾಗಿ ಸಹಕಾರ ವೃತ್ತಿಯನ್ನೂ ಸಾರ್ಥಕ ಕ್ರಿಯಾಶೀಲತೆಯನ್ನೂ ಜನ ಸಮುದಾಯದಲ್ಲಿ ಪಾಲು ಹಂಚಿಕೆಯ ಗಟ್ಟಿ ಏರ್ಪಾಟನ್ನೂ ತಳಪಾಯವಾಗಿ ಅಳವಡಿಸುತ್ತದೆ.

ಸಂಪ್ರದಾಯ ಪದ್ಧತಿಗಳ ಅವಲಂಬನದಿಂದ ಹುಟ್ಟಿಬಂದ ಅಭಾವ ಸ್ಥಿತಿಯಿಂದ ಯೋಜನಾಬದ್ಧವಾದ ಸಮೃದ್ಧಿ ಸಾಧನೆಯ ಕಡೆಗೆ ಸಾಗುವಾಗ ನಾವು ಸಂಕ್ರಮಣಾವಧಿಯನ್ನು ( transition )ಸಂತತ ಪರಿಷ್ಕೃತವೂ ( ದೀರ್ಘವೂ ) ಅನವರತವೂ ಆದ ಕಾರ್ಯಪ್ರಯತ್ನಗಳಿಂದ ತುಂಬಬೇಕಾಗುತ್ತದೆ. ಈ ಒಂದು ಪರಿವರ್ತನ ಕಾರ್ಯವನ್ನು ಅನೇಕ ದೇಶಗಳಲ್ಲಿ, ಬಗೆಬಗೆಯ ಆರ್ಥಿಕ ಸ್ತರಗಳಲ್ಲಿ ಬಾಳುವ ಜನವರ್ಗಗಳ ಸಹಕಾರದಿಂದ ಅಗಮಾಡಿಸಬೇಕಾಗುತ್ತದೆ. ನಿರ್ದಯ ಗುಲಾಮಗಿರಿಯ ಪದ್ಧತಿಯಿಂದ ನ್ಯಾಯ ಕಾರ್ಮಿಕ ಭೃತಿಯವರೆಗೆ, ಊಳಿಗಮಾನ್ಯ ಭೂವ್ಯವಸಾಯ ಪದ್ಧತಿಯಿಂದ ಬಂಡವಾಳದ ಆಸರೆಯುಳ್ಳ ಯಂತ್ರೋದ್ಯಮದವರೆಗೆ, ಸಾಗಿ ಮುಗಿದ ಸಂಕ್ರಮಣಾವಧಿಗಳು ವಸ್ತುಗಳ ಅಭಾವಸ್ಥಿತಿಯನ್ನು ನೇರ್ಪಡಿಸುತ್ತ ಪೂರಯಿಸುತ್ತ ಹೋದಹಾಗೆಲ್ಲ ಕೈಗೂಡುತ್ತ ಬರುವ ವಸ್ತುಸಮೃದ್ಧಿಯ ಪರಿಸ್ಥಿತಿಯವರೆಗೆ ಸಂಕ್ರಮಣಾವಧಿಕಾಲವನ್ನು ಚಟುವಟಿಕೆಗಳಿಂದಲೇ ದಾಟಬೇಕಾಗುತ್ತದೆ. ಇದಕೋಸ್ಕರ ಹಾದಿಹೋಕನು ತೀರಕಡಮೆಕಷ್ಟಕೊಡುವ ದಾರಿಯನ್ನು ಹಿಡಿಯಬೇಕಾಗುತ್ತದೆ. ಈ ಪರಿವರ್ತನ ಪಥದಲ್ಲಿ ಗತಿವೇಗವನ್ನು ನಿರ್ಣಯಮಾಡತಕ್ಕವು ಸಾಮಾಜಿಕ ನಿರ್ಬಂಧಗಳು, ಮತ್ತು ರಾಜಕೀಯ ಲೋಕಾನುಭವ; ಹಾಗೆಯೇ ಪರಿವರ್ತನೆಯ ಅನಿವಾರ್ಯತೆಯ ಪರವಾಗಿ ವಾದಿಸುವ ಪ್ರಾಜ್ಞರ ಲೋಕಾನುಭವಪರಿಣತಿ.

ಮೇಲಾಗಿ, ಮನುಷ್ಯವರ್ಗ ಮೊದಲು ವಸ್ತುಸಮೃದ್ಧಿಯ (affluence) ಕಾಲದಲ್ಲಿ, ಅನಂತರ ಸುಖಸಮೃದ್ಧಿಯ (abundance) ಕಾಲದಲ್ಲಿ ಬಾಳುವುದು ಹೇಗೆ ಎಂಬುದನ್ನು ಕಲಿತುಕೊಳ್ಳಬೇಕು. ಸುಖಸಮೃದ್ಧಿಯನ್ನು ಒದಗಿಸುವ ಯಥೇಚ್ಛಾವಕಾಶಗಳ ಪ್ರಯೋಜನವನ್ನು ಪಡೆಯಲು ಪ್ರಯತ್ನಿಸಬಹುದಾದರೂ ಅದು ಒಡ್ಡುವ ಪ್ರಲೋಭನ ಜಾಲಗಳಿಗೆ ನಾವು ಸಿಕ್ಕಿಕೊಳ್ಳಬಾರದು. ಸಮೃದ್ಧಿಕಾಲದಲ್ಲಿ ಪೋಲುವೆಚ್ಚಕ್ಕೋ ಮೈಗಳ್ಳತನಕ್ಕೋ ಬಂದಳಿಕೆ ಬಾಳಿಗೋ ( ಪರಪುಷ್ಟ ಜೀವನ ಪ್ರವೃತ್ತಿಗೋ ) ಅವಕಾಶ ಕೊಡುವ ದುಷ್ಪ್ರೇರಣೆಗಳಿಗೆ ನಾವು ವಶರಾಗಬಾರದು. ವಸ್ತುಸಮೃದ್ಧಿಯ ಕಾಲದಲ್ಲಿ ಸರಿಯಾಗಿ ಬದುಕು ನಡಸಬೇಕಾದರೆ ಮನುಷ್ಯನಿಗೆ ಆತ್ಮಸಂಯಮ – ಶಿಷ್ಟಿ – ಶಿಸ್ತು – ಇರಬೇಕು. ಅಭಾವಕಾಲದಲ್ಲಿ ಬಾಳುವವರಲ್ಲಿರಬೇಕಾಗದ, ಹಾಗೂ ಅವರಿಗೆ ಸಾಕಾಗದ, ಒಂದು ಘನ ಜೀವಿತೋದ್ದೇಶವು ಸಮೃದ್ಧಿಕಾಲದ ಜನಕ್ಕೆ ಇರಬೇಕು. ಅಭಾವ ಕಾಲದವರು ರಕ್ಷಣೆಯ ಭರವಸೆಯಿಲ್ಲದೆ ದಾರಿದ್ರ್ಯಭಾರದಿಂದ ನಿರ್ವೀರ್ಯರಾಗಿ, ಕ್ರಮವ್ಯವಸ್ಥೆಗೆ ಆಸ್ಪದಕೊಡದ ಅಲ್ಪೋದ್ಯೋಗದಿಂದ ಪಾಡು ಪಡುವವರು. ಸಮುದ್ಧಿಕಾಲದವರಿಗೆ ಈ ಅನನುಕೂಲಗಳಿಲ್ಲ.

ಸುಖಸಮೃದ್ಧಿಯನ್ನು ಕಂಡ ಮನುಷ್ಯಜೀವನವು ಕೆಲವು ಸಮಸ್ಯೆಗಳನ್ನು ಎದುರಿಸಬೇಕಾಗುತ್ತವೆ. ಬಂಡವಾಳ ಪದ್ಧತಿಯಲ್ಲಿ ಬಾಳುವ ಮಧ್ಯಮತರಗತಿಯ, ಮತ್ತು ಅದಕ್ಕಿಂತ ಮೇಲಣ ತರಗತಿಯ ಜನ ಜೀವನದಿಂದ ಈ ಸಮಸ್ಯೆಯ ಸ್ವರೂಪ ಲಕ್ಷಣವೇನು ಎಂಬುದು ಗೊತ್ತಾಗುತ್ತದೆ. ಸಮತಾವಾದಿ ರಾಷ್ಟ್ರಗಳಲ್ಲೂ ಹೆಚ್ಚುತ್ತಿರುವ ಸುಖ ಸಮೃದ್ಧಿಯನ್ನು ಅನುಭವಿಸುವವರು ಇರುತ್ತಾರೆ. ಸಾಮಾನ್ಯರಿಗಿಲ್ಲದ ವಿಶೇಷ ಸೌಲಭ್ಯಗಳನ್ನು ಅವರೂ ಅನುಭವಿಸುತ್ತಿರುತ್ತಾರೆ. ಇವರಿಗೂ ಸುಖ ಸಮೃದ್ಧಿಕಾಲದ ಸಮಸ್ಯೆಗಳು ಇರುತ್ತವೆ.

ಸುಖ ಸಮೃದ್ಧ ಸಮಾಜವು ಅಸ್ತಿತ್ವಕ್ಕೆ ಬಂದು ನೆಮ್ಮದಿಯಲ್ಲಿರಬೇಕಾದರೆ,– ಸೈನ್ಸ್, ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿಗಳು ಉತ್ಪಾದನ ಪುಷ್ಕಲತೆಯ ಸಮಸ್ಯೆಗಳನ್ನು ಪರಿಹಾರಮಾಡಿ, ಸರಕು ಸೇವೆಗಳ ಹೆಚ್ಚಳಿಕೆಯಿಂದ ಸುಖಪ್ರದವಾದ ಮಟ್ಟಕೇರುವುದಕ್ಕೆ ಅವಕಾಶ ಕೊಟ್ಟಿರಬೇಕು. ಅಂಥಾ ಸಮಾಜದಲ್ಲಿ ವಿತರಣೆಯಿಂದ, –ಎಂದರೆ ಜನದೊಟ್ಟಿಗೆ ನೆಮ್ಮದಿಯಲ್ಲಿ ಪಾಲ್ಗೊಳ್ಳುವಿಕೆಯಲ್ಲಿ ಇರುವ ವಿಶಾಲಾವಕಾಶದಿಂದ, – ಮನುಷ್ಯನು ತನ್ನ ಸಂತಾನದ ಸಂತತಾಭಿವೃದ್ಧಿ ಮಾಡಿಕೊಳ್ಳುವುದಕ್ಕೂ ಪರಸ್ಪರಾವಲಂಬನ ಶೀಲವಾದ ವಿಶಿಷ್ಟರೀತಿಯ ಜನಸಮಷ್ಟಿಯ ಆರ್ಥಿಕ ವ್ಯವಸ್ಥೆಯಲ್ಲಿ ಮೇಲ್ಪಾಡನ್ನು ತಂದುಕೊಳ್ಳುವುದಕ್ಕೂ ಬೇಕಾದ ಸಾಮರ್ಥ್ಯವನ್ನು ಪಡೆದಿದ್ದಾನೆಯೆ ಎಂಬ ನಿರ್ಧಾರಕ್ಕೆ ಪ್ರಶ್ನೆಯೊಂದು ಎದ್ದುಕೊಳ್ಳುತ್ತದೆ.

ವರ್ತಮಾನ ಸಮಾಜವು,—ಅದರಲ್ಲೂ ಮುಖ್ಯವಾಗಿ, ಆ ಸಮಾಜದ ಯಾವ ಭಾಗಗಳು ಸೈನ್ಸ್, ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿಯ ಪ್ರಯೋಗ ದಕ್ಷತೆಯನ್ನೂ ಕೌಶಲಗಳನ್ನೂ ದೊಡ್ಡ ಪ್ರಮಾಣದಲ್ಲಿ ಬಳಸಿಕೊಳ್ಳುತ್ತದೆಯೋ ಆ ಸಮಾಜ ಸಮುದಾಯಗಳು,—ಧನ ಸಂಪತ್ತನ್ನು ಹಂಚಿಕೊಳ್ಳುವುದಕ್ಕೆ ಸಂಬಂಧಿಸಿದ ನಿರ್ಧಾರಕ ಪ್ರಶ್ನೆಗಳನ್ನು ಎದುರಿಸುತ್ತದೆ. ಇಲ್ಲಿಯವರೆಗೆ, ಮುಖ್ಯವಾಗಿ ಬಂಡವಾಳ ತತ್ವವನ್ನು ಅವಲಂಬಿಸಿದ ಸಾಮ್ರಾಜ್ಯಶಾಹಿಗಳಲ್ಲಿ ಸಮಸ್ಯಾ ಪರಿಹಾರ ಪ್ರಯತ್ನಗಳು ಗುರಿತಾಗಿ ಗುರಿತಪ್ಪುವಂಥ ರೀತಿಯಲ್ಲಿ ಅದೃಷ್ಟಾಧೀನವಾಗಿ ಸಾಗಿದುವು; ಮತ್ತು ವಿತ್ತಾರ್ಜನ ಪದ್ಧತಿಯನ್ನೂ ಶೋಷಣ ನೀತಿಯನ್ನೂ ಅನುಸರಿಸಿ, ಅವುಗಳ ಆಚರಣೆಯನ್ನು ಶಾಶ್ವತಪಡಿಸುವ ಉದ್ದೇಶದಿಂದ ತಾತ್ಕಾಲಿಕ ಪರಿಷ್ಕಾರಗಳಿಗೆ ಮನಸ್ಸು ಕೊಡಲಾಯಿತು. ವಸಾಹತು ಜನಸಮುದಾಯ ದಂಗೆಯೇಳುವ ಪ್ರಯತ್ನವನ್ನೂ ಸಾಮ್ರಾಜ್ಯ ವಿರೋಧಿಗಳು ಕೈಕೊಳ್ಳುವ ವಿಧ್ವಂಸಕ ಕೃತ್ಯವನ್ನೂ ಆಗಮಾಡಿಸುವ ಒತ್ತಡಗಳನ್ನು ಕಡಮೆಮಾಡಲು ಉಪಾಯಗಳನ್ನು ಕೈಗೊಳ್ಳಲಾಯಿತು. ಇನ್ನೂ ಅಭಿವೃದ್ಧಿ ದಶೆಯಲ್ಲಿರುವ ಬ್ರಿಟಿಷ್ ಕಾಮನ್ವೆಲ್ತ್ ದೇಶಗಳಿಗೆ ನೆರವು ಕೊಡುವ ಕೊಲಂಬೋ ಯೋಜನೆಯೂ, ಲ್ಯಾಟಿನ್ ಅಮೆರಿಕಕ್ಕೆ ನೆರವುಕೊಡುವ ವಾಷಿಂಗ್‌ಟನ್ ಪ್ರಭುತ್ವದ "ಪ್ರಗತಿಗೋಸ್ಕರ ಮೈತ್ರಿ" (Alliance for Progress) ಯೋಜನೆಯೂ ಸಾಮ್ರಾಜ್ಯವಾದದ ಲಕ್ಷಣಗಳನ್ನು ಶಾಶ್ವತ ಪಡಿಸುವುದು ಉದ್ದೇಶವಾದರೂ ಅದೇ ಸಾಮ್ರಾಜ್ಯ ಶಾಹಿಯನ್ನು ಜನೋಪಕಾರಕವಾಗಿ ತಿದ್ದಿ ಸುಧಾರಿಸುತ್ತಿದ್ದೇವೆಂದು ಹೇಳಿಕೊಳ್ಳುವುದಕ್ಕೆ ಸಾಧನಗಳಾದುವು.

ಗುಣಾಕಾರ ಕ್ರಮದಲ್ಲಿ ವಸ್ತುಗಳನ್ನು ಉತ್ಪಾದಿಸಿ, ಧನ ಸಂಪತ್ತನ್ನು ಹೆಚ್ಚಿಸಿಕೊಳ್ಳುವುದು ಪ್ರತಿಯೊಂದು ಯಂತ್ರೋದ್ಯಮ ಕ್ಷೇತ್ರದಲ್ಲೂ ಕಾಣಬರುವ ನೋಟವಾಗಿದೆ. ಸಂಶೋಧನ ಕ್ಷೇತ್ರ ವಿಸ್ತರಣದಲ್ಲೂ, ಹೊಸ ಹೊಸ ಯಂತ್ರ ಸ್ಥಾಪನೆಯ ಸಡಗರದಲ್ಲೂ ಈ ಧನೋತ್ಪಾದನೆಯ ಪ್ರಗತಿ ಚಿಹ್ನೆಗಳನ್ನು ನೋಡಬಹುದು. ಉತ್ತಮ ಮಾರ್ಗ ಸೌಕರ್ಯಗಳ ಸಾಧನೆಯೂ ವೇಗವಾಗಿ ಬೆಳೆಯುತ್ತಿರುವ ವಾಣಿಜ್ಯ ಹಾಗೂ ಯಂತ್ರೋದ್ಯಮ ಮಗ್ನವಾದ ನಗರಗಳ ಅಭಿವೃದ್ಧಿಯೂ ಸಮಾಜಸೇವಾ ಕಾರ್ಯಗಳ ವಿಸ್ತರಣವೂ ಧನೋತ್ಪಾದನೆಯಲ್ಲಿ ಆಗಿರುವಪ್ರಗತಿಯನ್ನು ಸ್ಪಷ್ಟವಾಗಿ ತೋರಿಸುತ್ತವೆ.

**ಗುಣಾಕಾರ ಕ್ರಮದಲ್ಲಿ ವಸ್ತೂತ್ಪಾದನೆಯಾಗಿ ಬೆಳೆಯುತ್ತಿರುವ ಧನ ಸಂಪತ್ತು ಹಳೆಯ ಸಾಮಾಜಿಕ ವ್ರಣವೊಂದನ್ನು ಕೆದಕಿದೆ. ಜೀವನಾವಶ್ಯಕತೆಯ ಸರಕುಗಳ ಸರಪರಾಜಿಗೂ, ಆರ್ಥಿಕ ವ್ಯವಸ್ಥೆಯ ಗೋಪುರ ಶಿಲ್ಪಾಗ್ರಕ್ಕೆ ಕ್ರಮವಾಗಿ ಏರಿದ ಸ್ವಲ್ಪ**

ಸಂಖ್ಯೆಯ ಜನ ವರ್ಗಕ್ಕೆ ಒದಗುವ ಭೋಗವಸ್ತು ಸೌಕರ್ಯಗಳಿಗೂ ನಡುವೆ ಇರುವ ತೀಕ್ಷ್ಣ ವೈಲಕ್ಷಣ್ಯವನ್ನು ಈ ಧನಸಂಪತ್ತು ಎತ್ತಿ ತೋರಿಸುತ್ತಿದೆ. ಈ ಸುಖ ಶಿಖರದ ತಳಭಾಗದಲ್ಲಿರುವ ಜನರೋ ಅರ್ಧೋದ್ಯೋಗದಲ್ಲಿ-ಭಾಗಶಃ ಉದ್ಯೋಗ ದಲ್ಲಿ –ಇರತಕ್ಕವರು; ಕೊಳಕು ಕೊಂಪೆಗಳಲ್ಲಿ ಬಹುಕಾಲದಿಂದ ವಾಸಮಾಡುತ್ತಿ ರುವವರು; ಬಡತನದ ಜೇಗೆಯಲ್ಲಿ ಬಳಲುತ್ತಿರುವವರು. ಸಾಮ್ರಾಜ್ಯ ಕೇಂದ್ರ ಸ್ಥಾನಗಳಲ್ಲಿ ಸುಖಜೀವನವೂ, ವಸಾಹತುಗಳಲ್ಲಿ ಸೌಸ್ಥ್ಯಾಭಾವದ ಕಷ್ಟ ಕಾರ್ಪಣ್ಯಗಳ ಜೀವನವೂ ಜನಜೀವನದೊಟ್ಟನಲ್ಲಿ ಏರ್ಪಟ್ಟ ಭೀಕರ ವಿಷಮ ಚಿತ್ರಗಳನ್ನು ಎತ್ತಿ ತೋರಿಸುತ್ತವೆ. ಯಂತ್ರೋದ್ಯಮಗಳಲ್ಲಿ ಸ್ವತಶ್ಶಕ್ತಿ ಗಳ ಅಳವಡಿಕೆಯಿಂದ ಈ ವ್ಯತ್ಯಾಸ ಸ್ಥಿತಿ ಇನ್ನಷ್ಟು ಉಗ್ರವಾಗಿದೆ. ಏಷ್ಯಾ, ಆಫ್ರಿಕಾ ಮತ್ತು ಲಾಟಿನ್ ದಕ್ಷಿಣ ಅಮೇರಿಕಾ ಖಂಡಗಳಲ್ಲಿ ಪ್ರಜಾಸಮುದಾಯದ ಸರಾಸರಿಯ ವರ್ಷಾದಾಯ ತಲಾ 50 ಡಾಲರು (ಎಂದರೆ ಸುಮಾರು 350 ರೂ) ಗಳಿಗಿಂತ ಕಡಮೆ. ಈ ಕೆಳಮಟ್ಟದ ವಾರ್ಷಿಕ ವರಮಾನವನ್ನು ಹದಿನಾಲ್ಕು ದೇಶ ಗಳ ಪ್ರಜಾಜನರು ಗಳಿಸುತ್ತಿದ್ದಾರೆ. 100 ಡಾಲರುಗಳಿಗಿಂತ ಕಡಮೆ ವಾರ್ಷಿಕ ವರಮಾನ 37 ದೇಶಗಳಲ್ಲಿ; ಗ್ರೇಟ್ ಬ್ರಿಟನ್ನಿನ ಪ್ರಜಾಜನದ ಸರಾಸರಿಯ ವರಮಾನ 1200 ಡಾಲರುಗಳು; ಮತ್ತು ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಪ್ರಜಾಜನದ ವಾರ್ಷಿಕ ವರಮಾನ ತಲಾ 2500 ಡಾಲರುಗಳು. ಈ ಆರ್ಥಿಕ ಪ್ರಗತಿ ವಿವರಗಳು ಯಾರನ್ನಾದರೂ ಬೆಚ್ಚಿಬೀಳುವಂತೆ ಮಾಡತಕ್ಕವು.

ಮನುಷ್ಯನ ಕಾಯಕಾನುಭವವೂ ಕರ್ಮತಂತ್ರವನ್ನು ಕುರಿತ “ಕಿಂಸ್ವಿದ್ ಜ್ಞಾನ”ವೂ (knowhow) ವಿಸ್ತಾರವಾಗುತ್ತ ಹೋದಂತೆಲ್ಲ ವಸ್ತು ಪುಷ್ಕ ಲತೆಯನ್ನು ಅಧಿಕಾಧಿಕ ಪರಿಮಾಣ ಪರಾಕಾಷ್ಠತೆಗಳಿಗೇರಿಸುವ ಅವಕಾಶ ಲಭ್ಯ ವಾಗಿದೆ; ಮತ್ತು ವ್ಯಕ್ತಿಮನುಷ್ಯನ ಸರಾಸರಿ ವರ್ಷಾದಾಯವು ಇಂದಿನ ಯಂತ್ರೋ ದ್ಯಮ ಶೀಲ ಸಮಾಜದ ಸಮಸ್ತ ಜನಾದಾಯದೊಡನೆ ಅಂಶಾಂಶ ಸರಣಿಯಾಗಿ ಬಿಟ್ಟಿದೆ. ಈ ಆದಾಯಗಳ ಸಂಖ್ಯಾವಿವರಗಳು ಸಾರ್ವಜನಿಕ ಗ್ರಂಥಾಲಯಗಳಲ್ಲಿ, ಸಂಘ ಸಂಸ್ಥೆಗಳಲ್ಲಿ, ವೈಜ್ಞಾನಿಕ ಪ್ರಯೋಗ ಪರೀಕ್ಷಾಮಂದಿರಗಳಲ್ಲಿ ವಿನಿಯೋಗ ವಾಗುತ್ತಿವೆ; ಮತ್ತು ಅವು ಟೆಕ್ನಿಕಲ್ ( ತಾಂತ್ರಿಕ ಪರಿಕರ್ಮ ) ಶಾಲೆಗಳಲ್ಲೂ ವಿಶ್ವ ವಿದ್ಯಾನಿಲಯಗಳಲ್ಲೂ ಅಧ್ಯಯನ ವಿಷಯಗಳಾಗಿವೆ.

ಈ ಅನುಕೂಲಗಳನ್ನು ಸಾಮ್ರಾಜ್ಯಕೇಂದ್ರಗಳಲ್ಲಿ ಸ್ವತಃಸಿದ್ಧ ಸಂಗತಿಗಳೆಂದು ಭಾವಿಸಲಾಗುತ್ತದೆ. ಸಮತಾವಾದಿ ದೇಶಗಳಲ್ಲೂ ಈ ಅನುಕೂಲಗಳು ಎದ್ದು ಕೊಂಡು ಪ್ರಯೋಜನ ಕೊಡುತ್ತಿವೆ. ಆದರೆ ಆರ್ಥಿಕ ಪರಿಸ್ಥಿತಿಯ ಸುಧಿಕಾಲವನ್ನು ಒದರಿ ಹಿಂದೂಡಿ, ಈಚೀಚೆಗೆ ಅಭಿವೃದ್ಧಿ ಪಥದಲ್ಲಿ ಮುನ್ನಡೆಯಲು ಮೊದಲು ಮಾಡಿ ರುವ ದೇಶಗಳಲ್ಲಾದರೋ ಯಂತ್ರೋದ್ಯಮಗಳು ನಡೆಯುತ್ತಿರುವ ಕೇಂದ್ರಗಳಲ್ಲಿ

ಮಾತ್ರ ಈ ಅನುಕೂಲಗಳು ಲಭ್ಯವಾಗುತ್ತವೆ. ಆದದ್ದರಿಂದ, ಪ್ರಪಂಚದ ನಾನಾ ಪ್ರದೇಶಗಳ ಬಹುಸಂಖ್ಯಾಕ ತರುಣರು ಈ ತಲೆಮಾರಿನಲ್ಲಿ ಆರ್ಥಿಕವಾಗಿ ಹಿಂದುಳಿದವರಾಗಿದ್ದು, ಅವರೆಲ್ಲರೂ ಸುಖಜೀವನದ ಗುಟ್ಟೇನೆಂಬುದನ್ನು ತಿಳಿಯಲಾರದ ದೀನಾವಸ್ಥೆ ಯಲ್ಲಿದ್ದಾರೆ.

ಅನುಕೂಲ ಇರುವವರ (haves) ಮತ್ತು ಅದು ಇಲ್ಲದವರ (have-nots) ನಡುವಣ ಈ ವಿಸ್ತಾರವಾದ ಕಮರಿ ಖಾಸಗಿ ಸಂಸ್ಥೆಗಳಲ್ಲೂ ಸರಕಾರಿ ಸಂಸ್ಥೆಗಳಲ್ಲೂ ಈಚೆಗೆ ಅಧ್ಯಯನ ವಿಷಯವಾಗಿದೆ. ಯಂತ್ರೋದ್ಯಮವೂ ಜನಜೀವನದ ಆಧುನಿಕೀಕರಣವೂ (modernization) ಹಿಂದುಳಿದ ದೇಶಗಳ ರಾಜಕೀಯ ಕ್ಷೇತ್ರಗಳಲ್ಲಿ ಮುಖ್ಯ ಚಿಂತೆಯ ಪ್ರಶ್ನೆಗಳಾಗುವವರೆಗೆ ಬಡವರು ಬಲ್ಲಿದರ ನಡುವಣ ಈ ಮಹದಂತರದ ಅಸ್ತಿತ್ವವು ಸಮಾಚಾರ ಸಂಪರ್ಕ ಸಾಧನಗಳ ಮೂಲಕ ಪ್ರಚಾರ ಪಡೆಯುವುದು ಅನಿವಾರ್ಯವಾಯಿತು.

ವಿದ್ಯಾರ್ಥಿಗಳು ಇನ್ನೂ ತಾರುಣ್ಯದಲ್ಲಿರುವವರು ; ಅನನುಭವಿಗಳು. ಆದರೆ ಹಿಂದುಳಿದ ದೇಶಗಳಲ್ಲಿ ವಿದ್ಯಾರ್ಥಿ ಚಳವಳಿಗಳೂ ಅವರ ಪ್ರಾತಿನಿಧಿಕ ಸಂಘ ಸಂಸ್ಥೆಗಳೂ ಈ ದೀನ ಜನ ಜೀವನ ಪರಿಸ್ಥಿತಿಗೆ ಪ್ರತಿಕ್ರಿಯೆಯಾಗಿ ಸಹನೆಯ ಹೊತ್ತು ಮೀರಿತೆಂಬಂತೆ ದಂಗೆಯೇಳುತ್ತಿವೆ. ಏಕೆಂದರೆ ಆಧುನಿಕ ಜಗತ್ತಿನಲ್ಲಿ ಏನೇನು ನಡೆಯುತ್ತಿದೆಯೋ ಅದರ ವಿವರಗಳನ್ನೆಲ್ಲ ವಿದ್ಯಾರ್ಥಿಗಳು ಓದಿ ತಿಳಿದುಕೊಂಡಿದ್ದಾರೆ; ಮತ್ತು ಆಧುನಿಕೀಕರಣದಿಂದ ಲಭ್ಯವಾಗುವ ಅನುಕೂಲಾವಕಾಶಗಳಲ್ಲಿ ತಮಗೂ ಪಾಲಿರಬೇಕೆಂದು ಒತ್ತಾಯ ಮಾಡುತ್ತಿದ್ದಾರೆ.

ಅಭಿವೃದ್ಧಿಯೆಷ್ಟುಮಾತ್ರವೂ ಇಲ್ಲದ, ಮತ್ತು ಸ್ವಲ್ಪಾಭಿವೃದ್ಧಿಯನ್ನು ಪಡೆದು ತೆವಳುತ್ತಿರುವ ದೇಶಗಳ ಯುವ ಸಮಾಜವು ಕೊರಲೆತ್ತಿ ಬೇಡುತ್ತಿರುವ ಈ ಬೇಡಿಕೆಗಳು ಭೂಗ್ರಹದ ಮೇಲೆ ಮನುಷ್ಯನ ಭವಿಷ್ಯಜ್ಜೀವನ ಹೇಗೆಂಬ ಮುಖ್ಯಪ್ರಶ್ನೆಯನ್ನು ಎತ್ತುವಷ್ಟು ಬಿರುಸಾಗಿ, ಸುಧಾರಣೆಯ ದಾರಿಗಳನ್ನು ಹುಡುಕಿಕೊಳ್ಳುವುದನ್ನು ಅನಿವಾರ್ಯಪಡಿಸಿವೆ. ರಾಶಿರಾಶಿಯಾಗಿ ಸೇರಿರುವ ಧನಸಂಪತ್ತು, ಅನುಭವ ಮತ್ತು ಕಿಸ್ಸಿಂದ್ ಜ್ಞಾನ–ಇವು ವಸ್ತೂತ್ಪಾದನೆ ಮಾಡುವ ಆರ್ಥಿಕ ಕ್ಷೇತ್ರಗಳಲ್ಲೂ, ಅಧಿಕಾರ ಚಲಾಯಿಸುವ ರಾಜಕೀಯ ಕ್ಷೇತ್ರಗಳಲ್ಲೂ ಸದ್ಯಕ್ಕೆ ಸೀಮಿತವಾಗಿ ಸಾಂದ್ರವಾಗಿರುತ್ತವೆ. ಈ ಸಂಪದನುಭವ ಜ್ಞಾನಗಳನ್ನು ಪ್ರಪಂಚದ ಮೂಲೆ ಮೂಲೆಗೂ ತಲಪಿಸುವ ಏರ್ಪಾಟನ್ನು ಯೋಚಿಸುವುದಕ್ಕೆ ಇಂದು ಕಾಲವೊದಗಿಬಂದಿದೆ.

ಆಧುನಿಕೀಕರಣವಾದ ಈ ಅರ್ಧಶತಮಾನದಲ್ಲಿ ರಾಶಿರಾಶಿಯಾಗಿ ಬೆಳೆದ ಅನುಭವಜ್ಞಾನಗಳು ಪ್ರತಿಯೊಂದು ದೇಶದ ಪ್ರತಿಯೊಂದು ಜನವರ್ಗದ ಪ್ರತಿಯೊಬ್ಬ

ಯುವಕನಿಗೂ ಲಭ್ಯವಾಗುವಂತೆ ಮಾಡುವುದೇ ಈ ಏರ್ಪಾಟಿನ ಉದ್ದೇಶ. ಈ ಏರ್ಪಾಟು ಮುಖ್ಯವಾಗಿ ವಿದ್ಯಾಶಿಕ್ಷಣದ ಸಾಧನವನ್ನು ಬಳಸಿಕೊಳ್ಳಬೇಕಾಗುತ್ತದೆ. ಅದರ ಗುರಿಯು ಪ್ರಪಂಚವೆಲ್ಲ ಒಂದೇ ಕುಟುಂಬವೆಂಬ ಏಕಜಗದ್ಭಾವನೆಯ ಸಿದ್ಧಿಗಾಗಿ. ಸಹಕಾರ, ಉತ್ಪಾದನೆ, ಸೈನ್ಸ್, ಇಂಜನಿಯರಿಂಗ್ ಮತ್ತು ಟೆಕ್ನಾಲಜಿಗಳು ಗಳಿಸಿ ಕೊಟ್ಟ ಲಾಭಾನುಕೂಲಗಳನ್ನು ಜನ ಸಮಸ್ತವೂ ಹಂಚಿಕೊಳ್ಳುವಿಕೆ—ಇವೇ ಏಕ ಜಗತ್ ಕಲ್ಪನೆಯನ್ನು ನಿಜವಾಗಿಸುವ ಚಟುವಟಿಕೆಗಳು. ಇದಕ್ಕೆ ಸದ್ಯದ ವಿದ್ಯಾಭ್ಯಾಸ ಸಾಧನವು ಸಾಕಾಗುವುದಿಲ್ಲವೆಂಬ ಅರಿವೂ ಆಯಾ ರಾಷ್ಟ್ರನಾಯಕರಲ್ಲಿ ಮೂಡಬೇಕು. ಎಲ್ಲಕ್ಕಿಂತ ದೊಡ್ಡ ಸಾಧನವೆಂದರೆ—ಮನುಷ್ಯನು ತನ್ನನ್ನೂ ತನ್ನ ಪರಿವಾರವನ್ನೂ ಅಂಕೆಯಲ್ಲಿರಿಸಿಕೊಳ್ಳುವ ಭಗೀರಥಪ್ರಯತ್ನ.

## ಸಹಕರಿಸಿ, ಉತ್ಪಾದಿಸಿ, ಹಂಚಿಕೊಳ್ಳುವ ಮೂಲಕ ಏಕ ಜಗತ್‌ಕಲ್ಪನೆ

ಯಾವ ಆರ್ಥಿಕ ಕಾರ್ಯಕ್ರಮವು ಸ್ಪರ್ಧೆ ಹಾಗು ವಿತ್ತಾರ್ಜನೆ ಮಾತ್ರದ ದೃಷ್ಟಿಗಳನ್ನು ಸಹಕಾರ, ಉತ್ಪಾದನೆ ಮತ್ತು ಜನ ಸಮಸ್ತದ ದಾಯಭಾಗಕ್ಕೆ ಅಧೀನವಾಡಬಲ್ಲುದೋ ಆ ಕಾರ್ಯಕ್ರಮವನ್ನವಲಂಬಿಸಿ ಮಾತ್ರ ಮನುಷ್ಯವರ್ಗ ಅಳಿಯದೆ ಉಳಿಯಬಲ್ಲುದೆಂದು ಆಮೂಲಾಗ್ರ ಸುಧಾರಣಾವಾದಿ (ರ್‍ಯಾಡಿಕಲ್) ಆದ ನಾನು ಸಾರಿ ಹೇಳುತ್ತೇನೆ. ವಾಮನದಶೆಯನ್ನು ಬಿಟ್ಟು ತ್ರಿವಿಕ್ರಮನಾಗಿ ಮೂರು ಹೆಜ್ಜೆಗಳನ್ನಿಟ್ಟರೆ ಮಾತ್ರ ಇಂದಿನ ಅಭಿವೃದ್ಧಿ ಘಟ್ಟದಲ್ಲಿರುವ ಮನುಷ್ಯನು ತನ್ನ ಮುಂದಿನ ಚಟುವಟಿಕೆಗಳಿಗೆ ಗುರಿಮುಟ್ಟಿಸುವ ಸಾಧನಗಳನ್ನು ಅಳವಡಿಸಿ ಕೊಳ್ಳಬಲ್ಲನು; ಮತ್ತು ಬುದ್ಧಿ ವಿಚಾರಪೂರ್ವಕವಾಗಿ ಆದಿಮ ಕರ್ತವ್ಯಗಳಾವುವು, ಅನಂತರದ ಕರ್ತವ್ಯಗಳಾವುವು ಎಂದೂ ಅವನು ನಿರ್ಣಯಿಸಿಕೊಳ್ಳಬಲ್ಲನು. ಮುನ್ನಡೆಯಲು ಅವನು ಮೊದಲು ಇಡಬೇಕಾದ ಮೂರು ಹೆಜ್ಜೆಗಳಲ್ಲಿ ಮೊದಲನೆ ಯದು ಶಿಕ್ಷಣ ಕ್ಷೇತ್ರದಲ್ಲಿ; ಎರಡನೆಯದು ಸಂಘಟನೆಯ ಕ್ಷೇತ್ರದಲ್ಲಿ; ಮೂರನೆಯದು ಆಡಳಿತ ಕ್ಷೇತ್ರದಲ್ಲಿ.

ಶಿಕ್ಷಣ ಕ್ಷೇತ್ರದಲ್ಲಿ ಎರಡು ಉಪ-ಕ್ಷೇತ್ರಗಳಿರುತ್ತವೆ. ಒಂದು ಶಾಲೆ ಕಾಲೇಜು ಗಳದು; ಇನ್ನೊಂದು ವೃತ್ತಪತ್ರಿಕಾ ರಂಗದ್ದು, ಹಾಗೆಯೇ ನಾಟಕರಂಗದ್ದು, ರೇಡಿಯೋ, ಟೆಲಿವಿಷನ್, ಸಂಗೀತ ಸಾಹಿತ್ಯರಂಗಗಳದ್ದು. ಈ ಎರಡು ಕ್ಷೇತ್ರಗಳಲ್ಲಿ ದೊಡ್ಡವರು ಯುವಕರಿಗೆ ದೀಕ್ಷೆಕೊಟ್ಟು ಅವರಿಂದ ವ್ಯವಸಾಯ ಮಾಡಿಸಬೇಕು. ತಾತ್ತ್ವಿಕವಾಗಿಯೂ ಪ್ರಾಯೋಗಿಕವಾಗಿಯೂ ಯುವಕರನ್ನು ಪಳಗಿಸಿ, ಆಧುನಿಕ ಪ್ರಪಂಚವನು ಕಾಡುತ್ತಿರುವ ಸಮಸ್ಯೆಗಳ ಪರಿಹಾರಕ್ಕೆ ದಕ್ಷರಾಗುವಂತೆ ಅವರನ್ನು

ತಿದ್ದಿಕೊಳ್ಳಬೇಕು. ಈ ಸಮಸ್ಯೆಗಳಿರುವ ವಿವಿಧ ಮುಖಗಳು ಇವು: ಪ್ರಕೃತಿಗರ್ಭಸ್ಥವಾದ ಸಂಪನ್ಮೂಲಗಳನ್ನು ದಕ್ಷತೆಯಿಂದ ಬಳಸಿಕೊಳ್ಳುವುದು; ಮತ್ತು ಪೋಲಾಗದಂತೆ ಅವನ್ನು ಕಾಪಾಡಿಕೊಳ್ಳುವುದು; ಒಳ್ಳೆಯ ಪರಿಣಾಮಕಾರಿಗಳಾಗುವ ಯೋಜನೆಗಳನ್ನು ಕೈಕೊಳ್ಳುವುದು; ಕಾರ್ಯ ಸಂಘಟನೆ ಮಾಡುವುದು; ಒಳ್ಳೆಯ ಆಡಳಿತ ವ್ಯವಸ್ಥೆಯನ್ನು ತಂದುಕೊಳ್ಳುವುದು; ಈ ಬಗೆಯಲ್ಲಿ ಕಾಯಕಮಾಡಿ ಸಮಾಜವನ್ನು ಅಭಿವೃದ್ಧಿ ಪಥದಲ್ಲಿ ಕರೆದೊಯ್ಯುವುದು. ಇದಕ್ಕೆಲ್ಲ ಮನುಷ್ಯರು ಶಿಸ್ತಿನಿಂದ ವರ್ತಿಸಿ ಕಟ್ಟಳೆಗೊಳಪಡಬೇಕು—ತಮ್ಮಲ್ಲಿ ಅಂತರ್ಗತವಾಗಿರುವ ಸೃಜನಶೀಲತೆಯ ವಿಕಾಸಕ್ಕೋಸ್ಕರ ಅವರು ವಿವೇಕವುಳ್ಳವರೂ, ಸದ್ಯಃಪ್ರಯೋಜನಮಾತ್ರದಲ್ಲಿ ಆಸಕ್ತರಾಗದೆ ದೂರದೃಷ್ಟಿಯುಳ್ಳವರೂ ಆಗಬೇಕು.

ಇದುವರೆಗೆ ನಾವು ಬಳಸಿಕೊಳ್ಳುತ್ತಬಂದ ಶಾಲಾಧ್ಯಯನಾದಿ ಜ್ಞಾನಸಾಧನಗಳಿಂದ ನಮಗೆ ಆದ ಹೆಚ್ಚಿನ ಉಪಕಾರವೆಂದರೆ—ಮನುಷ್ಯಸ್ವಭಾವದ ಒಂದು ಅಂಶವಾದ ಸ್ವಾರ್ಥ ಪ್ರವೃತ್ತಿಯನ್ನು ಎಚ್ಚರಿಸಿ ಕೆರಳಿಸಿದ್ದು: ವಿತ್ತ ಸ್ವತ್ತು ಅಧಿಕಾರಗಳ ಆರ್ಜನೆಯನ್ನೂ ಹಾಗೆಯೇ ಲೋಭಕ್ಕೆ ಪ್ರತಿಫಲ ಸಂದಾಯವನ್ನೂ ನಮ್ಮ ಮುಂದೆ ಆಚರಣೀಯ ಗುಣಗಳೆಂದು ಈ ಸಾಧನ ಕ್ಷೇತ್ರಗಳು ಎದೆಗೆ ನಾಟುವಂತೆ ಸ್ವರಭಾರಹಾಕಿ ತಿಳಿಸಿಕೊಟ್ಟುವು. ಜೀವನ ವ್ಯಾಪಾರಕ್ಕೆ ಸಂಬಂಧಪಟ್ಟ ಸಾಮಾಜಿಕ ಮುಖವು ಉಪೇಕ್ಷೆಗೋ ಅನಾದರಕ್ಕೋ ಈಡಾಯಿತು—ಕಳೆದ ಒಂದು ಶತಮಾನದಲ್ಲಿ ಶಿಕ್ಷಕರು ಪ್ರಕೃತಿಯ ಸಂಪನ್ಮೂಲಗಳನ್ನು ದೂಷಿಸಿಕೊಳ್ಳುವ ಪ್ರಶ್ನೆಗಳಿಗೆ ಮಾತ್ರ ಗಮನ ಕೊಟ್ಟರು. ಶಿಕ್ಷಣ ಕ್ಷೇತ್ರವು ಸಾಮಾಜಿಕ ಪ್ರಶ್ನೆಗಳನ್ನು ಗಂಭೀರ ವಿಚಾರಕ್ಕೆ ಎತ್ತಿಕೊಂಡದ್ದು ಕೇವಲ ಪ್ರಾಸಂಗಿಕವಾಗಿ.

ಹತ್ತಿರದ ಗತಕಾಲದಲ್ಲಿ ಒಂದೊಂದು ರಾಷ್ಟ್ರದಲ್ಲೂ ಅದರದರ ಪ್ರಶ್ನೆಗಳು ಮಾತ್ರ ಮುಖ್ಯವೆಂದು ಸ್ವರಭಾರ ಹಾಕಲಾಯಿತು. ಅಂತರ-ರಾಷ್ಟ್ರೀಯ ಸಮಸ್ಯೆಗಳನ್ನು ಬದಿಗೊತ್ತಲಾಯಿತು, ಇಲ್ಲವೆ ಅವಕ್ಕೆ ಕೊಡಬೇಕಾದದ್ದಕ್ಕಿಂತ ಕಡಮೆಯ ಗಮನವನ್ನು ಕೊಡಲಾಯಿತು. ಈ ನಡುವೆ ವಿಶ್ವ ಪ್ರಪಂಚದಲ್ಲಿ ವಸಾಹತು ದೇಶಗಳೊಡನೆಯೂ ಅಧೀನ ರಾಜ್ಯಗಳೊಡನೆಯೂ ಪರಮಾಧಿಕಾರವುಳ್ಳ ಸಾರ್ವಭೌಮ ರಾಷ್ಟ್ರಗಳಿಗೆ ಇದ್ದ ಸಂಬಂಧವೋ ಸಡಿಲವಾಗುತ್ತಿದ್ದದ್ದು ಮಾತ್ರವಷ್ಟೆ; ಒಂದೊಂದು ವಸಾಹತುದೇಶವೂ ಅಧೀನ ರಾಜ್ಯವೂ ತನ್ನ ತನ್ನ ಸಾಮಾಜಿಕ ಜೀವನ ವಿಧಾನವನ್ನು ರೂಪಿಸಿ ಕೊಳ್ಳುತ್ತ, ತನ್ನತನ್ನ ಹಿತರಕ್ಷಣೆಯ ಕಡೆಗೆ ಗಮನ ಕೊಡುತ್ತ ಬರುತ್ತಿದ್ದದ್ದೂ ತಪ್ಪಿ; ರಾಷ್ಟ್ರರಾಷ್ಟ್ರಗಳು ಪರಸ್ಪರಾವಲಂಬನದಿಂದ ಬಾಳಬೇಕಾದ, ಮತ್ತು ಒಕ್ಕಟ್ಟು ಜೊತೆಬಾಳಿಕೆಗಳ ಮೂಲಕ ಏಕಜಗತ್ತಿನ ಕಲ್ಪನೆಗೆ ಕ್ಷಿಪ್ರವಾಗಿ ಒಡಂಬಡಬೇಕಾದ ಘಟ್ಟವನ್ನು ಸಮೀಪಿಸಿದುವು. ಶಿಕ್ಷಕನ ಕರ್ತವ್ಯ

ಸ್ಥಾನವು ಶಸ್ತ್ರಪ್ರಯೋಗಮಾಡುತ್ತ ಹಗೆಯೊಡನೆ ಸೆಣಸಲು ಕಾಳಗದ ಮುಂಚೂಣಿಯಲ್ಲಿದ್ದರೆ, ರಾಜಕೀಯಸ್ಥರ ಪಾತ್ರಪ್ರೋ ಕರ್ತವ್ಯ ಸಂಯೋಜನೆ ಹಾಗೂ ಆಡಳಿತ ಪರಿಷ್ಕರಣ ರಂಗಗಳಲ್ಲಿರುತ್ತದೆ. ಏಕಜಗತ್ ಕಲ್ಪನೆಯ ಗುರಿಯನ್ನು ತೋರಿಸುತ್ತ ಅಂತರ-ರಾಷ್ಟ್ರೀಯ ಕ್ಷೇತ್ರದಲ್ಲಿ ಕರ್ತವ್ಯಗಳು ಬೆಳೆಬೆಳೆಯುತ್ತ ಹೋದಹಾಗೆಲ್ಲ ಅವ್ಯವಸ್ಥೆಯ ಪರಿಸರವನ್ನು ನಿವಾರಿಸಲು ರಾಜಕೀಯದಲ್ಲಿ ದುಡಿಯುವ ನೀತಿಜ್ಞನು ನೂತನ ಸನ್ನಿವೇಶಕ್ಕುಚಿತವಾದ ಕಾರ್ಯಸೂತ್ರಗಳನ್ನು ಯೋಜಿಸಿ ಬೆಳಸುತ್ತಾನೆ; ನೂತನ ಸಂಸ್ಥೆಗಳನ್ನು ಸ್ಥಾಪಿಸುತ್ತಾನೆ, ಸಾಮಾಜಿಕ ಧರ್ಮಾಚರಣೆಗಳನ್ನು ದಕ್ಷತೆಯಿಂದ ಪ್ರಯೋಗಮಾಡಿ, ವಿಶ್ವವ್ಯಾಪಿಯಾದ ಮನುಷ್ಯಸಮಾಜದ ಯೋಗಕ್ಷೇಮಕ್ಕೆ ಸಾಧಕವಾಗುವಂತೆ ಜಗದ್ವಿಶೀಲವಾದ ಏಕೋದ್ದೇಶದಲ್ಲಿ ಸುಸಂಘಟಿತ ಸಂಸ್ಕೃತಿಯನ್ನು ನೆಲೆಗೊಳಿಸುತ್ತಾನೆ.

ಮನುಷ್ಯಪ್ರಜ್ಞೆಯೂ ಸಾಧುವೃತ್ತಿಯೂ ವಿನಾಶವನ್ನು ಬರಮಾಡುವ ಶಸ್ತ್ರಾಸ್ತ್ರ ಸ್ಪರ್ಧೆಯನ್ನು ಒಪ್ಪಿಕೊಳ್ಳಲು ನಿರಾಕರಿಸುತ್ತವೆ. ವಿಜ್ಞಾನಿಗಳು ಜನವರ್ಗದಿಂದ ವಿಶ್ವವ್ಯಾಪಿಯಾದ ಸಹಕಾರವನ್ನು ಬಯಸುತ್ತಾರೇ ಹೊರತು, ಪರಸ್ಪರ ವಿನಾಶವನ್ನಾಗ ಮಾಡಿಸುವ ಶಸ್ತ್ರಾಸ್ತ್ರ ಸ್ಪರ್ಧೆಯನ್ನಲ್ಲ. ಮಿಲಿಟರಿ ಖಾತೆಯ ಪ್ರಧಾನ ಪ್ರತಿನಿಧಿಗಳು ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲೂ ಇತರ ಹೊರದೇಶಗಳಲ್ಲೂ ವರ್ತಮಾನದಲ್ಲಿ ಕೈಗೊದಗಿರುವ ಶಸ್ತ್ರಾಸ್ತ್ರಗಳ ಪ್ರಯೋಗವನ್ನು ಒತ್ತಾಯಪಡಿಸುತ್ತಾರೆ—ವಿಜಯಕ್ಕೆ ಅಲ್ಲ, ಸಮಾಜ ಸಮಷ್ಟಿಯ ಆತ್ಮಹತ್ಯಕ್ಕಾಗಿ. ಸಾಮಾಜಿಕ ಪ್ರಜ್ಞೆಯುಳ್ಳ ಅದಾವ ಮನುಷ್ಯ ವ್ಯಕ್ತಿಯೂ ಸಾಂಪ್ರತಕಾಲದಲ್ಲಿ ಜಮಾಯಿಸಿ ಪೇರಿಸಿಟ್ಟುಕೊಂಡಿರುವ ಶಸ್ತ್ರಾಸ್ತ್ರಗಳ ಸರ್ವನಾಶಕ ಸಾಧ್ಯತೆಯನ್ನು ಅರಿತೂ ಇದಕ್ಕಿಂತ ಬೇರೆ ನಿರ್ಧಾರಕವಾದ ಅಭಿಪ್ರಾಯಕ್ಕೆ ಬರಲಾರನು.

ದೂರ ದೃಷ್ಟಿಯೂ ವಿವೇಕವೂ ಸಮಾಜವನ್ನು ಧ್ವಂಸಮಾಡುವ ಸಾಧನಗಳ ಮಾತನ್ನು ಒತ್ತಿಹೇಳದೆ, ಮನುಷ್ಯ ಪ್ರತಿಭೆಯ ವ್ಯವಹಾರ ಕುಶಲತೆಗೂ ಬಹುಮುಖ ಸಾಮರ್ಥ್ಯಕ್ಕೂ ಶಾಶ್ವತವಾದ ಸ್ಮೃತಿಸ್ತಂಭವಾಗಿರುವಂತೆ ಸಮಾಜದ ಪುನಾರಚನೆ ಪುರೋಭಿವೃದ್ಧಿಗಳ ಮಾತನ್ನು ಒತ್ತಿ ಹೇಳುತ್ತವೆ.



## ಅಧ್ಯಾಯ ಐದು

# ಮನುಷ್ಯವರ್ಗವನ್ನು ಶುಭಜೀವನಕ್ಕೋಸ್ಕರ ಅಣಿಮಾಡುವುದು ಹೇಗೆ?

ಶುಭಜೀವನವನ್ನು ಕುರಿತು ನಾನು ಬರೆಯುವಾಗ ಪ್ರತಿಯೊಬ್ಬರಿಗೂ ಏಕ ರೂಪದ ಜೀವನ ವಿಧಾನವಿರತಕ್ಕದ್ದು ಎಂಬುದು ನನ್ನ ಉದ್ದೇಶವಲ್ಲ. ಮನುಷ್ಯ ಜೀವನದ ಭಿನ್ನಭಿನ್ನ ಸಂದರ್ಭ ಪರಿಸ್ಥಿತಿಗಳೂ ವ್ಯಕ್ತಿಗಳ ಇಷ್ಟಾನಿಷ್ಟಗಳೂ ಅಪೇಕ್ಷಣೀಯವಾದ ಜೀವನ ವಿಧಾನವನ್ನು ನಿರ್ಣಯಿಸುತ್ತವೆ ಎಂಬುದು ನನಗೆ ತಿಳಿದಿದೆ. ಜೀವನದ ಒಳಿತು ಎಂಬುದು ಕಾಲದೇಶ ಪರಿಸರಗಳನ್ನೂ ವ್ಯಕ್ತಿಮನುಷ್ಯರ ಮತ್ತು ವಿವಿಧ ಸ್ತರದ ಮನುಷ್ಯ ಸಮಾಜಗಳನ್ನೂ ಭಿನ್ನ ಭಿನ್ನ ಮನೋಭಾವಗಳನ್ನೂ ಕ್ರಿಯೆ ಪ್ರತಿಕ್ರಿಯೆಗಳನ್ನೂ ಅವಲಂಬಿಸಿ ಬೇರೆಬೇರೆ ತೆರನಾಗಿರುತ್ತದೆ. ಇಂಥ ಬೇರೆಬೇರೆ ಬಗೆಗಳಿಗೂ ಮಿತಿಗಳಿಗೂ ನನ್ನ ದೃಷ್ಟಿಯನ್ನು ಹೊಂದಿಸಿ, ಆಮೂಲಾಗ್ರ ಸುಧಾರಣಾವಾದಿಯಾದ (ರ್‍ಯಾಡಿಕಲ್) ನಾನು ಶುಭಜೀವನವೆಂಬುದು ಪ್ರತಿಯೊಬ್ಬ ವ್ಯಕ್ತಿ ಮನುಷ್ಯನಿಗೂ ಸಾಧ್ಯವೆಂದು ಸಂಬುತ್ತೇನೆ. ಆದರೆ ಶುಭಜೀವನವನ್ನು ಬಯಸುವ ಮನುಷ್ಯನು ತನ್ನ ವಿಚಾರ ಆಚಾರಗಳಲ್ಲಿ ಮೂಲಭೂತವಾಗಿ ಆಗಬೇಕಾದ ಪರಿವರ್ತನೆಗಳಿಗೆ ಅಣಿಯಾಗಿರುತ್ತಾನೆ; ಮತ್ತು ತನ್ನ ಯೋಚನೆಗಳನ್ನೂ ಮನೋಭಾವಗಳನ್ನೂ ಕೃತಿವ್ಯಾಪಾರಗಳನ್ನೂ ಶುಭಜೀವನದ ವಿವಿಧ ಸ್ತರಗಳಿಗೂ ಮುಖಗಳಿಗೂ ತಕ್ಕವೆನಿಸುವ ವೈಯಕ್ತಿಕ ಗುಣಗಳನ್ನಾಗಿ ತಿದ್ದಿಕೊಂಡು, ಅಂಥ ಶುಭಜೀವನವನ್ನು ಗುರಿಯಾಗಿರಿಸಿಕೊಳ್ಳುತ್ತಾನೆ.

ಈ ಪ್ರಪಂಚದಲ್ಲಿ ಹುಟ್ಟಿದ ಪ್ರತಿಯೊಂದು ಶಿಶುವಿಗೂ ಶುಭಜೀವನ ಮಾಡುವ ಹಕ್ಕುಬಾಧ್ಯತೆಯಿದೆ. ಈ ಹಕ್ಕು ಅದಕ್ಕೆ ಇದೆ ಎಂಬ ಭರವಸೆಯಿರಬೇಕು. ಶುಭಜೀವನ ತತ್ತ್ವಕ್ಕೆ ಅಂಗೀಕಾರವನ್ನು ಕೊಟ್ಟು, ಅದರಂತೆ ಆಚರಿಸುವ ಯಾರನ್ನೂ ಅದು ನಿರ್ಬಂಧಿಸದೆ, ಅವರವರಿಗಿರುವ ಚಿತ್ತಸ್ವಾತಂತ್ರ್ಯಕ್ಕೆ ಅವಕಾಶಕೊಡುತ್ತದೆ. ಹಾಗೆ ಶುಭಜೀವನ ತತ್ತ್ವಕ್ಕೆ ಒಡಂಬಟ್ಟು ಆಚಾರಕ್ಕೆ ತಂದುಕೊಳ್ಳುವ ಪ್ರತಿಯೊಬ್ಬರಲ್ಲಿಯೂ ಅದು ಅವರವರ ಜೀವನಾವಶ್ಯಕತೆಗಳನ್ನು ಬಗೆಬಗೆಯಾಗಿ ಬೆಳೆಸುತ್ತದೆ. ಅವರವರ ಅಭಿರುಚಿಗಳನ್ನೂ ಆಶೋತ್ತರಗಳನ್ನೂ ಭಿನ್ನಭಿನ್ನವಾಗಿರುವಂತೆಯೇ ಪೋಷಿಸುತ್ತದೆ. ಈ ಆಶೋತ್ತರ ವೈವಿಧ್ಯ ಅಭಿರುಚಿ ವೈವಿಧ್ಯಗಳೇನೂ ಶುಭಜೀವನಕ್ಕೆ ಬಾಧಕಗಳಾಗಲಾರವು. ಒಂದು ಮಿತಿಗೊಳಪಟ್ಟ ಈ ಭಿನ್ನತೆಗಳು ಎಷ್ಟೆಷ್ಟು ಹೆಚ್ಚಾಗಿರುತ್ತವೋ ಅಷ್ಟಷ್ಟು ಮಟ್ಟಿಗೆ ಜನ ಸಮುದಾಯಗಳ ಸಾಂಸ್ಕೃತಿಕ ಜೀವನ ಸಮಷ್ಟಿಯಲ್ಲಿ ಒಂದು ಕಾಂತಿ ಸಮೃದ್ಧಿ ಏರುತ್ತದೆ. ಈ ಫಲಸಿದ್ಧಿ ಎಷ್ಟೇ ಸಮಾಧಾನಕರವೆನ್ನಿಸಿದರೂ ಅದು ಇನ್ನೂ ಉತ್ತಮಪಡುವ ಸಾಧ್ಯತೆಯುಂಟೆಂಬ ಮಿತಿಯಲ್ಲಿ ನಾವು ಅನುಭವಿಸಬೇಕಾದ ಸಮಾಧಾನ ಅದು. ಯಾವ ಜೀವನ ಸಂದ

ರ್ಥವೂ ಆತ್ಯಂತಿಕವಲ್ಲ. ಪ್ರತಿಯೊಂದು ಸಾಂಪ್ರತ ಸನ್ನಿವೇಶವೂ ಸದ್ಯಃಸ್ಥಿತಿಗೀತ ಉತ್ತಮಪಡುವುದಕ್ಕೆ ಅವಶ್ಯವಾದ ಮೂಲ ಸೂತ್ರವೊಂದರ ಪ್ರಯೋಗಕ್ಕೆ ಪದೇಪದೇ ಅವಕಾಶಮಾಡಿ, ತತ್ಫಲವಾಗಿ ಶುಭಜೀವನದ ಮಂಗಳ ಸ್ವರೂಪವನ್ನು ಅಷ್ಟಷ್ಟು ಮಟ್ಟಿಗೆ ಹೆಚ್ಚಿಸುತ್ತ ಹೋಗುತ್ತವೆ.

## ಶುಭ ಜೀವನದ ಆಯ್ಕೆಯ ಪ್ರಶ್ನೆ

ಶುಭಜೀವನವೆಂಬುದು ಸಾಧಕನಲ್ಲಿ ಮೂಡಿದ ಪ್ರತಿಜ್ಞಾಬದ್ಧವಾದ ಸಂಕಲ್ಪ ನಿರ್ಧಾರ, ಸಮುದ್ದೇಶ, ಸಂಯೋಜನ ದಕ್ಷತೆ, ದೀಕ್ಷಾಬದ್ಧವಾದ ಕರ್ತವ್ಯಪಾಲನೆ, ಮತ್ತು ಪಟ್ಟುಬಿಡದ ಸಂತತವಾದ ಅಧ್ಯವಸಾಯ–ಈ ಸುಗುಣಗಳ ಪರಿಣಾಮ ಫಲ. ಶುಭಜೀವನವೆಂಬುದು ಮನುಷ್ಯಪ್ರಯತ್ನವಿಲ್ಲದೆಯೆ ತಾನಾಗಿ ಹುಟ್ಟಿ ಜನಾನುಭವಕ್ಕೆ ಬರುವುದಿಲ್ಲ. ಸಾಧಕನು ಅದನ್ನು ಆಯ್ದುಕೊಳ್ಳಬೇಕು, ಅದಕ್ಕೆ ಅಣಿಯಾಗಬೇಕು, ಅದಕ್ಕೆ ಅರ್ಹನಾಗಬೇಕು, ಆದಕ್ಕೋಸ್ಕರ ದುಡಿದು ಗೆದ್ದುಕೊಳ್ಳಬೇಕು.

ಮನುಷ್ಯನಿಗೆ ಇಚ್ಛಾಸ್ವಾತಂತ್ರ್ಯ, ವರಣ ಸ್ವಾತಂತ್ರ್ಯ ಇಲ್ಲ ಎಂದು ಹೇಳುವ ನಿಯತಿವಾದಿಗಳು (determinists) ಸಾಮಾನ್ಯವಾಗಿ ಸಂಪ್ರದಾಯಬದ್ಧರಾಗಿ, ಆಯ್ಕೆಯ ಗೋಜು ತಮಗೇಕೆ ಎಂದು ಅದನ್ನು ನಿರಾಕರಿಸುತ್ತಾರೆ. ಅವರಿಗೆ ಜೀವನ ವಿಧಾನವೆಂಬುದು ಪೂರ್ವದಲ್ಲೇ ನಿರ್ಧರವಾದದ್ದು, ಅನುಸರಣೆಗೋಸ್ಕರ ಸಂಸ್ಥಾಪಿತ ವಾದದ್ದು. ಈ ಕಲ್ಪನೆಯನ್ನು ಆಮೂಲಾಗ್ರ ಸುಧಾರಣಾವಾದಿಗಳು ತಿರಸ್ಕರಿಸು ತ್ತಾರೆ. ಈ ಬಗ್ಗೆ ರ್ಯಾಡಿಕಲ್ ಪಂಥದವರ ಪ್ರತಿವಾದ ಹೀಗೆ:—ಇತರ ಸಂದರ್ಭಾಂಶ ಗಳ ನಡುವೆ ಜೀವನವೆಂಬುದು ಕಾರ್ಯಕಾರಣಗಳನ್ನು ಕೊಂಡಿ ಹಾಕಿಕೊಂಡಿರುವ ಆಯ್ಕೆಗಳ ಸರಪಣಿ. ಜೀವನ ಪ್ರವಾಹದ ಒಂದೊಂದು ಘಟ್ಟದಲ್ಲೂ ಆಕಸ್ಮಿಕವಾಗಿ ಯೋ ಉದ್ದೇಶಪೂರ್ವಕವಾಗಿಯೋ ಅನಿರೀಕ್ಷಿತ ಬಾಹ್ಯಸಂದರ್ಭಗಳು ಎಡರಾಗಿ ಅಡ್ಡ ಬರಬಹುದು. ಆದದ್ದರಿಂದ ಜೀವನವು ಪ್ರಗತಿ ಪರಿವರ್ತನೆಗೆ ಅಧೀನವಾಗಿ ಸಾಗ ತ್ತದೆ. ಹೊಣೆಯರಿತ ಪ್ರತಿಯೊಬ್ಬ ಮನುಷ್ಯ ಪ್ರಾಣಿಯೂ ಬುದ್ಧಿಪೂರ್ವಕವಾಗಿಯೇ ಪ್ರತಿದಿನವೂ ಪ್ರತಿಯೊಂದು ನಿಮಿಷವೂ ಅನಿವಾರ್ಯವೆನ್ನಿಸುವ ಅದೋ–ಇದೋ ಎಂಬ ವರಣ ಪ್ರಶ್ನೆ (ಆಯ್ಕೆ)ಗಳನ್ನು ಎದುರಿಸಿ ತನಗೆ ಒಪ್ಪಿಗೆಯಾಗುವುದನ್ನು ಆಯ್ದುಕೊಳ್ಳುತ್ತಾನೆ.

ಆಯ್ಕೆಗಳೂ, ಅವು ಗಳಿಸಿಕೊಡುವ ಫಲಗಳೂ ನಮ್ಮ ಜೀವನವನ್ನು–ಅದು ಸಾಧು (ಪುಣ್ಯ) ಜೀವನವೋ, ಪಾಪಜೀವನವೋ, ಎರಡು ಅಲ್ಲದೆ ತಟಸ್ಥ ಜೀವನವೋ ಆಗುವಂತೆ,–ರೂಪಿಸುತ್ತವೆ. ನಿಜವಾದ ತಾತ್ಪರ್ಯವೇನೆಂದರೆ, ಈ ಆಯ್ಕೆಗಳೇ ನಮ್ಮ ಜೀವನ. ಬಾಹ್ಯಸಂದರ್ಭಗಳ ಮಧ್ಯ ಪ್ರವೇಶಕ್ಕೋ ಇಲ್ಲವೆ

ನಮ್ಮವೇ ಆದ ಆಲೋಚನೆಯಲ್ಲೂ ಕಾರ್ಯವಿವರಗಳಲ್ಲೂ ನಾವಾಗಿ ಮಾಡಿಕೊಂಡ ಮಾರ್ಪಾಟುಗಳ ಮಧ್ಯಪ್ರವೇಶಕ್ಕೋ ಅಧೀನವಾಗಿ, ನಮ್ಮ ಆಯ್ಕೆಗಳೇ ನಮ ಜೀವನ ನೀತಿ ನಿರ್ಧಾರಕಗಳಾಗಿ, ನಮ್ಮ ಭವಿಷ್ಯ ಜೀವನಕ್ಕೊಂದು ದಿಕ್ಕನ್ನು ಗೊತ್ತು ಮಾಡುತ್ತವೆ. ಆಯ್ಕೆಗಳು ಮಾರ್ಗ ನಿರ್ದೇಶಕಗಳು ಮಾತ್ರವಲ್ಲ, ಬರುವ ಅವಕಾಶ ಗಳನ್ನು ಬಳಸಿಕೊಳ್ಳಲು ನೆರವನ್ನೂ ಕೊಡುತ್ತವೆ. ಆಯ್ಕೆಗಳು ಅವುಗಳ ಮಟ್ಟಿಗೆ ಮಾತ್ರವಲ್ಲ, ಅವು ಗಳಿಸಿಕೊಡುವ ಜೀವನಾನುಭವದ ಜೊತೆಗೆಸೇರಿ, ನಮ್ಮ ಶೀಲಕ್ಕೆ ಹೆಚ್ಚಿನ ಗುಣಗಳನ್ನು ಸೇರಿಸುತ್ತವೆ, ಇಲ್ಲವೆ ಇರುವ ಗುಣಗಳನ್ನು ಕಳೆಯುತ್ತವೆ.

ಸನ್ನಿವೇಶಗಳ ಬೆಲೆಯನ್ನು ಗೊತ್ತುಮಾಡುವುದಕ್ಕೂ, ಬೇರೆಬೇರೆ ಆಯ್ಕೆ ಗಳಲ್ಲೊಂದನ್ನು ಹಿಡಿಯುವುದಕ್ಕೂ ಮನುಷ್ಯನು ಪಡೆಯಬೇಕಾದ ಮಾರ್ಗದರ್ಶನದ ಪ್ರಾಮುಖ್ಯವನ್ನು ರ್ಯಾಡಿಕಲ್ ಪಂಥದವರು ಒತ್ತಿ ಹೇಳುತ್ತಾರೆ. ಈ ಮಾರ್ಗ ದರ್ಶನವನ್ನು ಅವರು 'ಶಿಕ್ಷಣ' ಎಂದು ಕರೆಯುತ್ತಾರೆ. ಈ ಶಿಕ್ಷಣ ಹೆತ್ತ ತಾಯಿ ತಂದೆಗಳಿಂದ ಬರಬಹುದು; ಬುದ್ಧಿವಾದ ತಿಳಿವಳಿಕೆಗಳಲ್ಲಿ ಕೊಡುವ ಉಪಾಧ್ಯಾ ಯರು, ಮಿತ್ರರು ಮತ್ತು ಜೊತೆಯ ಕಾರ್ಯಕರ್ತರುಗಳಿಂದ ಬರಬಹುದು. ಲೋಕ ಸಂದರ್ಭ ವೀಕ್ಷಣೆ ಪರಿಶೀಲನೆಗಳಿಂದಲೋ ಗ್ರಂಥಾಧ್ಯಯನದಿಂದಲೋ ನಮಗೆ ಮಾರ್ಗದರ್ಶನ ಬರಬಹುದು. ಶಾಲೆಗಳ ಆಡಳಿತ ಚೆನ್ನಾಗಿದ್ದರೆ, ಬೋಧಕವರ್ಗಕ್ಕೆತಕ್ಕ ಅರ್ಹತೆಯಿದ್ದು ಅವರು ದೀಕ್ಷಾಬದ್ಧ ಗುರುಗಳಾಗಿದ್ದರೆ, ಶಿಷ್ಯವರ್ಗ ಸಂಪಾದಿಸಿರುವ ಅನುಭವವನ್ನು ಸರಿಯಾಗಿ ವ್ಯಾಖ್ಯಾನ ಮಾಡುತ್ತಾರೆ; ಮತ್ತು ಶಿಷ್ಯರು ವರಣ ಕ್ಲೇಶಕ್ಕೆ—ಆಯ್ಕೆಯ ಗೋಜಿಗೆ—ಸಿಕ್ಕಿದಾಗ, ಗುರುಜನರು ತಮ್ಮ ಶಿಷ್ಯರು ಸರಿಯಾ ದದ್ದನ್ನೇ ಆಯ್ದುಕೊಳ್ಳಲು ನೆರವಾಗುತ್ತಾರೆ.

ರ್ಯಾಡಿಕಲ್ ಪಂಥದ ನಾನು ಪರಿಣಾಮಫಲದ ಗಣನೆಮಾಡದೆ, ಸರ್ವದಾ ಶುಭವನ್ನೇ ಆಯ್ದುಕೊಳ್ಳುವವನು. ಯಾವುದು ಪ್ರಯೋಜನ ಕೊಡುತ್ತದೆಯೋ, ಅಮಿತವಾಗಿ ಅನುಕೂಲ ಮಾಡುತ್ತದೆಯೋ ಅದು ಶುಭ. ಅಶುಭ ಅಥವಾ ಪಾಪ ಮನುಷ್ಯನಿಗೆ ಪ್ರತಿಕೂಲಮಾಡತಕ್ಕದ್ದು, ಕೇಡು ಬಗೆಯತಕ್ಕದ್ದು. ಪ್ರತಿಯೊಂದುಸನ್ನಿ ವೇಶದಲ್ಲೂ, ಎಲ್ಲಸಂದರ್ಭಗಳಲ್ಲೂ ಮನುಷ್ಯನಿಗೆ ಅನುಕೂಲಗಳಿಗಿರುತ್ತವೋ ಪ್ರತಿಕೂಲ ಗಳಿರುತ್ತವೆ. ಆದ್ದರಿಂದ ಶುಭಾಶುಭಗಳ ಆಯ್ಕೆಯಿಂದ-ಶುಭವಾದರೆ ಶುಭಕರ, ಅಶುಭ ವಾದರೆ ಅಶುಭಕರ. ಹೀಗೆ ಪರಿಣಾಮಫಲವೊಂದು ಕಾರ್ಯಕ್ಕೆ ಅನುಗುಣವಾಗಿಸಲ್ಲಲು ಹೊರಡದೆಇರುವುದಿಲ್ಲ. ನಿರ್ಧಾರಗಳನ್ನು ತೂಗುವಾಗಲೂ, ಕರ್ತವ್ಯಗಳನ್ನು ನಿರ್ಣಯಿ ಸುವಾಗಲೂ ನಾನು ತುಲೆಯ—ತಕ್ಕಡಿಯ—ಒಂದು ತಟ್ಟೆಯಲ್ಲಿ ಅನುಕೂಲ ಗಳನ್ನೂ ಇನ್ನೊಂದು ತಟ್ಟೆಯಲ್ಲಿ ಪ್ರತಿಕೂಲಗಳನ್ನೂ ಇರಿಸಿ ನೋಡಿ, ಅನುಕೂಲ ಗಳನ್ನು ಆಯ್ದುಕೊಳ್ಳುತ್ತೇನೆ. ಇದೇ ಮಹತ್ತಮವಾದ ಶುಭ; ಅತ್ಯಂತ ಹೆಚ್ಚಿನ

ಪರಾಕಾಷ್ಠತೆಯ ಶುಭ; ಅಧಿಕ ಸಂಖ್ಯಾಕ ಜನಕ್ಕೆ ಸಲ್ಲಬೇಕಾದ ಶುಭ; ಮತ್ತು ಬಹು ಕನಿಷ್ಠಸಂಖ್ಯಾಕ ಜನಕ್ಕೆ ಮಾತ್ರ ಪ್ರತಿಕೂಲವಾಗಿರತಕ್ಕದ್ದು ಯಾವುದೋ, ಬಹು ಸಂಖ್ಯಾಕಜನಕ್ಕೆ ಅನುಕೂಲವಾಗಿರತಕ್ಕದ್ದು ಯಾವುದೋ ಅದೇ ಶುಭ.

ರಾಡಿಕಲ್ ಪಂಥಿಯಾದ ನಾನು ಸ್ನೇಹಿತರಿಗೂ, ನನ್ನ ಪರಿಚಿತರಿಗೂ, ಅಕಸ್ಮಾತ್ತಾಗಿ ನನ್ನ ಬದುಕಿನ ನಡೆದಾರಿಯಲ್ಲಿ ಸಂಪರ್ಕಕ್ಕೆ ಬಂದ ಆಗುಂತಕರಿಗೂ—"ನೀವು ಯಾವಾಗಲೂ ಶುಭವನ್ನೇ ಆಯ್ದುಕೊಳ್ಳಿರಿ, ಉತ್ತಮೋತ್ತಮವಾದದ್ದನ್ನು ಗಳಿಸಲು ದುಡಿಯಿರಿ" ಎಂದು ಒತ್ತಾಯದಿಂದ ಹೇಳುತ್ತೇನೆ. ಇತಿಹಾಸದಲ್ಲಿ ದಾಖಲೆಗೆ ಬಂದ ರ್‍ಯಾಡಿಕಲ್ ಪಂಥಿಗಳ ಪೈಕಿ ದೊಡ್ಡವರ ಸಾಲಿನಲ್ಲಿ ಬರುವ ಸೊಕ್ರೆಟೀಸ್ ಮಹಾನುಭಾವನು ಹೇಳಿದ್ದೇನು? "ಪ್ರಜ್ಞೆಯಿರುವ ಯಾವ ಮನುಷ್ಯನೇ ಆಗಲಿ ಅವನಲ್ಲಿ ಶುಭಾಶುಭವಿವೇಕವೊಂದು ಇದ್ದರೆ ಸಾಕು, ಅವನು ಶುಭವನ್ನೇ ಆಯ್ದುಕೊಳ್ಳುತ್ತಾನೆ " ಎಂದು ಹೇಳುತ್ತಾನೆ.

## ವರಣ ಪರಿಣಾಮ

ಆಯ್ಕೆಮಾಡಬೇಕಾದ ಹೊತ್ತಿನಲ್ಲಿ ನಿರೋಧಗಳನ್ನು ಪ್ರಯೋಗ ಮಾಡೋಣವೆಂದರೆ, ಅನೇಕವೇಳೆ ಅವು ನಮ್ಮ ನಿರ್ಧಾರಕ ಸಾಮರ್ಥ್ಯಕ್ಕೆ ಪ್ರತಿಕಕ್ಷಿಯಾಗಿ ವರ್ತಿಸುತ್ತವೆ. ಶುಭವನ್ನು ಆಯ್ದುಕೊಳ್ಳುವುದು ಜನಪ್ರಿಯವಾದ ಸಂಗತಿಯಾಗದಿರಬಹುದು. ಗುಲಾಮಗಿರಿಯನ್ನು ರದ್ದುಪಡಿಸಿ, ಅದುವರೆಗೆ ಗುಲಾಮರಾಗಿದ್ದವರನ್ನೆಲ್ಲ ಬಿಡುಗಡೆ ಮಾಡಬೇಕೆಂಬ ಕರ್ತವ್ಯ ಕರ್ಮವನ್ನು ಅಧ್ಯಕ್ಷ ಲಿಂಕನ್ ಇಷ್ಟದಿಂದ ಆಯ್ದುಕೊಂಡನಷ್ಟೆ? 1863ರ ದಾಸ ವಿಮೋಚನ ಶಾಸನವನ್ನು ಆಜ್ಞಾರೂಪದಲ್ಲಿ ಸಾರುವುದಕ್ಕೆ ಮುಂಚೆ ಈ ಆಯ್ಕೆಯನ್ನು ಆತ ಕೈಗೊಂಡನು. ತೊತ್ತುಗಳ ಒಡೆಯರು ಒಡಂಬಡದೆ ಇದ್ದ ಸಾಮಾಜಿಕ ನ್ಯಾಯದ ಏರ್ಪಾಟು ಅದು. ಲಿಂಕನ್ನಿನ ಈ ಮಂಗಳ ಪ್ರದವಾದ "ವರಣ" ಪ್ರಕರಣ ಆತನಿಗೇ ಅಮಂಗಳಕರವಾಗಿ ಸಾಗಿ, ಕೊಲೆಪಟ್ಟು ಆತ ಮರಣ ಹೊಂದಿದನು. ಪುಣ್ಯವು ಕೆಲವೇಳೆ ಪಾಪಕ್ಕೆ ಬಲಿಯಾಗಬೇಕಾಗುತ್ತದೆ. ಅಧ್ಯಕ್ಷ ಕೆನ್ನಡಿ ಕೂಡ ಲಿಂಕನ್ನಿನಂತೆಯೇ ನೀಗ್ರೋ ರಾಷ್ಟ್ರಕ ಜನ ಸಮುದಾಯಕ್ಕೆ ಶ್ವೇತವರ್ಣೀಯರಿಗಿರುವಂತೆಯೇ ಸಮಾನ ಪ್ರಾಪ್ಯಗಳು (ಹಕ್ಕು ಬಾಧ್ಯತೆಗಳು) ಇರಬೇಕೆಂಬ ಸಾಮಾಜಿಕ ನ್ಯಾಯವನ್ನು ಇಚ್ಛಿಸಿದನು. ಆತ ಕಾಮ್ಯುನಿಷ್ಟ್ ಪಂಥದವರೊಡನೆ ಜೊತೆಬಾಳ್ವೆ ನಡಸುವುದು ಅಮೆರಿಕಾದೇಶೀಯರಿಗೆ ವಿಹಿತವೆಂದೂ ಆಯ್ಕೆಮಾಡಿದನು. ಈ ಎರಡು ಆಯ್ಕೆಗಳನ್ನು ಕೈಗೊಂಡ ಆತ ತನ್ನ ಧೋರಣೆಯನ್ನು ಧೈರ್ಯದಿಂದ ಸಮರ್ಥಿಸುತ್ತಿದ್ದಾಗ ಟೆಕ್ಸಾಸ್ ಪ್ರಾಂತದಲ್ಲಿ ಪರಿಸ್ಥಿತಿ ಬಿಗಡಾಯಿಸಿ, ಪಾಪವು ಪುಣ್ಯವನ್ನು ಬಲಿಗೊಂಡು, ಎರಡನೆಯ ಕೊಲೆಯನ್ನು ಆಗ

ಮಾಡಿಸಿತು. ಈ ಎರಡು ಘೋರಗಳು ನಡೆಯುವುದಕ್ಕೆ ಸಾವಿರಾರು ವರ್ಷಗಳಷ್ಟು ಹಿಂದೆ ಗ್ರೀಸಿನಲ್ಲಿ ತಾತ್ತ್ವಿಕ ಸೊಕ್ರೆಟೀಸ್ ಮರಣ ದಂಡನೆಗೆ ಗುರಿಯಾದದ್ದು ಯಾವ ನಿರ್ದಿಷ್ಟ ಅಪರಾಧಗಳಿಗೋಸ್ಕರವೂ ಅಲ್ಲ. ಆದರೆ ಆತ ತನ್ನ ಸ್ನೇಹಿತರನ್ನೂ ಅನುಯಾಯಿಗಳನ್ನೂ "ನಿಮ್ಮ ಬಾಳ್ಕಿಗೆ ಮಂಗಳವನ್ನು ಆಯ್ದುಕೊಳ್ಳಿರಿ, ಅಮಂಗಳವನ್ನು ತೊರೆಯಿರಿ" ಎಂದು ಪ್ರೋತ್ಸಾಹಿಸಿ ಬುದ್ಧಿವಾದ ಹೇಳಿದ್ದಕೋಸ್ಕರ ವಿಷಕುಡಿದು ಸಾವಿಗೆ ತುತ್ತಾಗಬೇಕಾಯಿತು. ಯಾರು ಶುಭವನ್ನು ಇಷ್ಟದಿಂದ ವರಿಸಿ, ಅದರ ಪ್ರಾಪ್ತಿಗೋಸ್ಕರ ಅನ್ವೇಷಣ ಪ್ರಯತ್ನ ನಡಸುವರೋ ಅವರು ಅದೃಷ್ಟದೊಡನೆ ಸೆಣಸುತ್ತ ಆಕಸ್ಮಿಕಗಳನ್ನು ಬರಮಾಡಿಕೊಳ್ಳುತ್ತಾರೆ. ಅದರಲ್ಲೂ ಇವರು ಕೇಡಾಡಿಗಳೆದುರು ಲೇವಡಿಗೆ ಗುರಿಯಾಗುತ್ತಾರೆ. ಇವರ ಆರ್ಜವಕ್ಕೆ ಅನ್ಯಜನರಿಂದ ಗುಮಾನಿ, ಸೇಡು; ಅನೇಕವೇಳೆ ದೈಹಿಕವಾಗಿ ಹಿಂಸೆಯ ಪ್ರಯೋಗಕ್ಕೆ ಇವರು ಬಲಿಯಾಗುತ್ತಾರೆ.

ಶುಭಜೀವನವೆಂಬುದು ಎಂದಿಗೂ ಸ್ಥಿರಸ್ಥಾಯಿಯಲ್ಲ; ಅದಕ್ಕೆ ರಕ್ಷಣೆಯಿಲ್ಲ; ಅದರ ಗತಿಚಲನೆ ಸುಲಭವಲ್ಲ; ಮತ್ತು ಅದು ಎಡೆಬಿಡದೆ, ಎಡರಿಲ್ಲದೆ, ಬಾಳಿ ಮುಗಿಯುವುದಿಲ್ಲ. ಅದು ಮೆಟ್ಟಿಲು ಮೆಟ್ಟಿಲಾಗಿ ಸಾಗುವ ಪಯಣ; ಘಟ್ಟ ಘಟ್ಟವಾಗಿ ನಡೆಯುವ ಯಾತ್ರೆ. ಒಂದು ಮಜಲು ಇನ್ನೊಂದರಿಂದ ಮೂಡಿಬರುತ್ತದೆ. ಹೀಗೆ ಒಂದನ್ನೊಂದು ಕೂಡಿಕೊಂಡು, ಒಳಕೊಂಡು, ಗತವನ್ನು ಸೇರಿಸಿಕೊಂಡು ಬೆಳೆಯುತ್ತದೆ. ಶುಭಾಂಶ ಯಾವುದನ್ನೂ ಕಳೆದು ಕಡಮೆ ಮಾಡುವುದಿಲ್ಲ; ಕಟ್ಟುತ್ತದೆ, ಕೆಡವಿ ಉರುಳಿಸುವುದಿಲ್ಲ; ಸೃಷ್ಟಿಸುತ್ತದೆ, ನಾಶಮಾಡುವುದಿಲ್ಲ.

## ವರಣ::ನಿರಾಕರಣ

ನಮ್ಮ ವರಣ ಜಿಜ್ಞಾಸೆಯಲ್ಲಿ ಭಿನ್ನಪಂಥೀಯರಿಂದ ಆಯ್ಕೆಯೂ ಅದರ ತೊರೆಹವೂ (ಪರಿತ್ಯಾಗವೂ) ಹೀಗೆ ನಡೆಯುತ್ತವೆ ಎಂಬುದನ್ನೀಗ ನಾವು ಗಮನಿಸೋಣ. ರ್‍ಯಾಡಿಕಲ್ ಪಂಥದವರು ಶುಭವನ್ನು ಆಯ್ದು ಅದನ್ನು ಜೀವನವನ್ನಾಗಿ ಮಾಡಿಕೊಂಡು ಬಾಳುತ್ತಾರೆ. ಲಿಬರಲ್ ಪಂಥದವರು ಕಡಮೆ ಕೇಡಾವುದೋ ಅದನ್ನು ಆಯ್ದುಕೊಂಡು, ಶುಭದರ್ಶನಮಾಡಿದಂತೆ ಸಡಗರಪಟ್ಟು ಆ ಕಡಮೆ ಕೇಡಿಗೆ ಒಡವೆಗಳನ್ನು ಸೂಡುತ್ತಾರೆ; ಅಂಥ ಕೇಡನ್ನು ಅಲಂಕರಿಸಿ ಅದನ್ನೇ ಒಳಿತೆಂದು ತೋರಿಸುತ್ತಾರೆ. ಕನ್ಸರ್ವೆಟಿವ್ ಪಂಥದವರು ಕೇಡನ್ನು ಒಪ್ಪಿಕೊಂಡು ಅದರ ಬಗ್ಗೆ ಮುಚ್ಚುಮರೆಯನ್ನು ನಟಿಸದೆ ಅದರ ಜಾಡನ್ನು ನಡಸುತ್ತಾರೆ. ಪ್ರತಿಗಾಮಿ ಪಂಥದವರು (reactionaries) ಎಲ್ಲರ ಮೇಲೂ ಒತ್ತಾಯದಿಂದ ಕೇಡನ್ನು ಹೊರಿಸುತ್ತಾರೆ.

ಲಿಬರಲ್ ಪಂಥದವರು ಮರ್ಮಜ್ಞರು. ಅವರು ಹೇಳುತ್ತಾರೆ : "ಪರಮಾರ್ಥದಲ್ಲಿ ಶುಭವೆಂಬುದಿಲ್ಲ."-ಎಂದು. ಈ ಸೂತ್ರವನ್ನು ಹಿಡಿದು ವಾದ ಮಾಡುತ್ತಾರೆ:

"ಜೀವನವೆಲ್ಲ ಅನುಕೂಲ ಪ್ರತಿಕೂಲಗಳ ಹಾಸುಹೊಕ್ಕು; ಬೆರಕೆ; ಆದದ್ದರಿಂದ ಶುಭಾಶುಭಾಗಳೆರಡನ್ನೂ ಉಭಯಸಮಾನವಾಗಿ ನೋಡುವುದಾದರೆ, ಎಲ್ಲೆಲ್ಲಿ ಮೇಲ್ಪಾಡುಗಳನ್ನು ಆಗಮಾಡಿಸಬಹುದೋ ಅಲ್ಲಲ್ಲಿ ಆಗಮಾಡಿಸೋಣ ಎಂಬ ಪರತ್ತಿನೊಡನೆ ನಾವು ಚಾಲ್ತಿಯಲ್ಲಿರುವ ಪರಿಸ್ಥಿತಿಯನ್ನು ಒಪ್ಪಿಕೊಂಡು, ಸೌಕರ್ಯ ಗಳನ್ನು ಭರವಸೆಯಾಗಿ ರೂಢಿಸಿಕೊಳ್ಳಬಹುದು. ಅನುಕೂಲಗಳಿಗೆ ಪ್ರತಿಕೂಲಗಳು ಎಡೆಮಾಡಬಹುದು." ಎಂದರೆ ಲಿಬರಲ್ ಪಂಥದವರು ಸಂಸ್ಥಾಪಿತವಾದ ವ್ಯವಸ್ಥೆಗೆ ತತ್ತ್ವತಃ ಸಮ್ಮತಿ ಕೊಡುವವರು; ಮತ್ತು ಪ್ರಯೋಗ ವಿವರದಲ್ಲಿ ಅಷ್ಟಿಷ್ಟು ಸುಧಾರಣೆ ಪರಿಷ್ಕರಣೆಗಳನ್ನು ಸಾಧಿಸಬಹುದೆಂಬ ಆಸೆಯನ್ನಿಟ್ಟುಕೊಂಡವರು. ಅವರು ಶುಭದ ಕಡೆಗೆ ವಾಲುತ್ತಾರೆ, ಆದರೆ ಅಶುಭದೊಡನೆ (ಕೇಡಿನೊಡನೆ) ಕೆಲಸದ ಹೊತ್ತಿನ ಅನುಕೂಲಕ್ಕೆ ತಕ್ಕಂಥಾ ನೀತಿಯನ್ನು ಹಿಡಿಯುತ್ತಾರೆ. ಲಾಭವನ್ನು ಗಿಟ್ಟಿಸಿ ಕೊಳ್ಳುವ ಉಪಾಯದಿಂದ ಸಾಂಪ್ರತ ಸಂದರ್ಭವನ್ನವರು ಹಾಯುತ್ತಾರೆ, ಹಾದು ಪಾರಾಗುತ್ತಾರೆ.

ಕನ್ಸರ್ವೆಟಿವ್ ಪಂಥದವರಾದರೋ ತಮ್ಮ ನಿಲುವಿನಲ್ಲಿ ಖಂಡಿತವಾದಿಗಳು. ಅವರು ವಸ್ತುಗಳನ್ನು ಅವು ಇರುವಂತೆ ನೋಡತಕ್ಕವರು. ಪರಿವರ್ತನೆಯ ಅನಿಶ್ಚಯ ದಶೆಯನ್ನೂ, ತತ್ಫಲವಾಗಿ ಸಾಂಪ್ರತ ವಿಶೇಷ ಸೌಲಭ್ಯಗಳಿಗೆ ಇರುವ ನಷ್ಟಸಂಭವ ವನ್ನೂ ಗಣನೆಗಿರಿಸಿಕೊಂಡು, ಎಷ್ಟೇ ಕೆಟ್ಟದಾದರೂ ಸದ್ಯಃಸ್ಥಿತಿಗೆ – ಯಥಾಸ್ಥಿತಿ ರೇಖೆಗೆ–ಅಂಟಿಕೊಳ್ಳುತ್ತಾರೆ. "ಯಾವುದು ಈಗ ನಮ್ಮಪಾಲಿಗೆ ಇದೆಯೋ ಅದು ಸರಿಯಾದದ್ದು."–ಇದು ಕನ್ಸರ್ವೆಟಿವ್ ಪಂಥದವರ ಪಟ್ಟುವಾದ.

ಪ್ರತಿಗಾಮಿಗಳು ಪೂರ್ವಾಚರಣೆಗೆ ಅಂಟಿಕೊಳ್ಳುವವರು. "ಗಣರಾಜ್ಯವನ್ನು ಸ್ಥಾಪಿಸಿದ ನಮ್ಮ ತಾತಪಾದರಿಗೆ (Founding Fathers) ಇದು ಒಳ್ಳೆಯದಾಗಿ ಸಾಕೆನ್ನಿಸಿತ್ತು. ನಿನಗೂ ನನಗೂ ಅದು ಒಳ್ಳೆಯದಾಗಿಯೇ ಇದ್ದು ಅದಷ್ಟು ಸಾಕು ಎನ್ನಿಸಬೇಕಷ್ಟೆ ? " –ಇದು ಪ್ರತಿಗಾಮಿಗಳ ವಾದ.

ಆಮೂಲಾಗ್ರ ಸುಧಾರಣಾವಾದಿಗಳಾದ ರ್‍ಯಾಡಿಕಲ್ ಪಂಥದವರು ಶುಭವನ್ನೇ ಗಟ್ಟಿ ಆಧಾರವಾಗಿ ಪಡೆದ ನಿಲುವುಳ್ಳವರು; ಶುಭವು ತರ–ತಮ ಗುಣಾವಲಂಬಿ ಯಾದದ್ದು. "ಶುಭತರ", "ಶುಭತಮ" ದಶೆಗಳನ್ನು ಬದುಕಿನಲ್ಲಿ ಸರಣಿಯಾಗಿ ಕಾಣುವ ಯೋಗವುಳ್ಳದ್ದು. ತೋರಿಕೆಗಳ ಹಿಂದೆ ಅಡಗಿರುವ ತತ್ತ್ವಗಳನ್ನು ಹುಡುಕುವವರು ಅವರು. ಕಾರ್ಯಸಂವೀಕ್ಷಣೆ ಮಾಡಿ, ಕಾರ್ಯಗತಿ ವಿವರಗಳನ್ನು ನೋಡಿ, ಆ ಕಾರ್ಯವನ್ನು ಆಗಮಾಡಿಸಿದ ಮೂಲ ಕಾರಣವನ್ನು ಶೋಧಿಸುವವರು ರ್‍ಯಾಡಿಕಲ್ ಪಂಥದವರು. ಅವರು ತತ್ತ್ವಗಳನ್ನು ಕಂಡುಕೊಂಡಾಗ ಅವನ್ನು ಘೋಷಿಸಿ, ಜನಪದಕ್ಕೆ ತಿಳಿಸುತ್ತಾರೆ. ಕೆಲವೇಳೆ ಅವರು ತತ್ತ್ವಘೋಷಣೆ ಮಾಡುವಾಗ

ಒತ್ತಾಯದಿಂದ, ಪಟ್ಟು ಹಿಡಿದು, ಸಾರಿ ಹೇಳುತ್ತಾರೆ. ಏತನ್ಮಧ್ಯೆ ಅವರು ಕಂಡು ಕೊಂಡ ತತ್ತ್ವಗಳನ್ನು ಆಚರಣೆಗೆ ತರಲು ಶ್ರದ್ಧೆಯಿಂದ ತಮ್ಮ ಕೈಯಲ್ಲಾದಷ್ಟೂ ಪ್ರಯತ್ನಮಾಡುತ್ತಾರೆ.

**ಶುಭತರ, ಶುಭತಮಗಳ ಬೀಡಿಗೆ ನಡೆಯುತ್ತಾರೆ ರ್‍ಯಾಡಿಕಲ್ ಪಂಥದವರು**

ಕೆಟ್ಟದ್ದನ್ನೂ ಅಷ್ಟು ಒಳ್ಳೆಯದಲ್ಲದ್ದನ್ನೂ ತೊರೆದು ನಿರಾಕರಿಸು ಎಂದು ನನ್ನ ಧರ್ಮೇಂದ್ರಿಯ ನನ್ನನ್ನು ತಿವಿದು ಹೇಳುತ್ತದೆ. ಇನ್ನೊಂದು ಹೆಜ್ಜೆಯಿಟ್ಟು ನಾನು ಮುನ್ನಡೆದ ಹೊರತು ನನ್ನ ಧರ್ಮೇಂದ್ರಿಯಕ್ಕೆ ಸಮಾಧಾನವಿಲ್ಲ. ಒಳ್ಳೆಯದು (ಶುಭ) ಅಷ್ಟು ಮಾತ್ರ ಇದ್ದರೆ ಸಾಕಾಗದು. ಒಳ್ಳೆಯದನ್ನು ದಾಟಿ, ಇನ್ನೂ ಹೆಚ್ಚು ಒಳ್ಳೆಯದಕ್ಕೆ—ಶುಭವನ್ನು ಸಂಕ್ರಮಿಸಿ ಶುಭತರದ ಬೀಡಿಗೆ–ನಾನು ಸಾಗಬೇಕು. ಆಮೇಲೆ ನನ್ನ ಮತ್ತೊಂದು ಹೆಜ್ಜೆಗೆ ಇರತಕ್ಕದ್ದು ಮತ್ತಷ್ಟು ಒಳ್ಳೆಯದಾದ— "ಶುಭ ತಮ"ದ–ಬೀಡು.

ರ್‍ಯಾಡಿಕಲ್ ಪಂಥದವರು ಕ್ರಮವಿಕಸನವಾದವನ್ನೂ (evolution) ಅಳಿಯುವೆ ಉಳಿದು ಬಾಳಬಲ್ಲದಿದ್ದರ ವರಣ (ಆಯ್ಕೆಯ)ವಿಧಿಯನ್ನೂ ನಂಬುತ್ತಾರೆ. ಪ್ರಕೃತಿ ವಿಜ್ಞಾನದ ಸಹಾಯದಿಂದ ನಾವು ಇತರ ಪ್ರಾಣಿ ಜೀವನಾಭಿವೃದ್ಧಿಯನ್ನೂ ಮನುಷ್ಯ ಪ್ರಾಣಿಯ ವಿಕಸನ ಸಂಗತಿಯನ್ನೂ ನಿರೂಪಿಸಬಹುದು. "ಪಳೆಯುಳಿಕೆ" ಗಳಲ್ಲೂ ಅಸ್ಥಿಶೇಷಗಳಲ್ಲೂ ನಮಗೆ ಈ ಪೂರ್ವೇತಿಹಾಸ ಸಿಕ್ಕುತ್ತದೆ. ಈ ಹಳೆಯ ಕತೆ ಯುಗಯುಗಾಂತರಗಳನ್ನು ಹಾದು ನಮ್ಮ ವ್ಯಾಸಂಗಕ್ಕೆ ಒದಗಿ ಬಂದಿದೆ. ಜೀವದಿಂದ ಜೀವೋತ್ಪತ್ತಿಯಾಗಿ, ಯುಗಯುಗಗಳನ್ನು ಹಾದು ವಿವಿಧ ಜೀವರೂಪಗಳೂ ಮನುಷ್ಯನೂ ಅಭಿವೃದ್ಧಿಪಥದಲ್ಲಿ ಕ್ರಮಕ್ರಮವಾಗಿ ಸಾಗಿಬಂದಿದ್ದಾನೆ—ಸರಳ ದಶೆಯಿಂದ ಜಟಿಲದಶೆಗೆ, ಸಸ್ಯಘಟ್ಟದಿಂದ ಪ್ರಾಣಿ ಘಟ್ಟಕ್ಕೆ, ಈ ವಿಕಸನಗತಿವಿವರದ ಮೂಲಕ ಬಣ–ಬುಡಕಟ್ಟುಗಳೂ ಜಾತ್ಯುಪಜಾತಿಗಳೂ ನಿರ್ದಿಷ್ಟವಾದ ವಾತಾವರಣ ಹಾಗೂ ಸಾಮಾಜಿಕ ಪರಿಸರಗಳಲ್ಲಿ ಅಳಿಯುವೆ ಉಳಿಯಬಲ್ಲವನ್ನು ಉಳಿಸಿಕೊಂಡು, ವರಣಪ್ರಯೋಗ ಪರಿಣತಿಯನ್ನು ತೋರಿಸುತ್ತ, ಈವರೆಗೆ ಸಾಗಿಕೊಂಡು ಬಂದಿವೆ. ಉಳಿಯುವಷ್ಟು ತ್ರಾಣವಿಲ್ಲದ ಬಣವೂ ಜಾತಿಯೂ ಈ ವಿಕಸನಮಾಲೆಯಿಂದ ಯಾವ ರಕ್ಷಣೆಯೂ ಇಲ್ಲದೆ ಜಗುಳಿಬಿದ್ದು ಅಳಿದುಹೋಗುತ್ತವೆ.

ಕ್ರಮವಿಕಸನ ಪರಂಪರೆಯಲ್ಲಿ ಅದರ ಭಾಗವಾಗಿ ಮನುಷ್ಯಪ್ರಾಣಿ ಸಾಗಿ ಬಂದಿದ್ದಾನೆ. ಅಂಧಕಾರಯುಗದ ಮೂಲಕ ಸಾಗುವಾಗ ಅವನು ಕ್ರಮ ವಿಕಸನ ಯೋಗ ತನಗಿರುವುದನ್ನು ಮರೆತೋ ಅಸಡ್ಡೆ ಮಾಡಿಯೋ ಸಂಪ್ರದಾಯ ಪದ್ಧತಿ, ಆಸ್ವಾಧಿಕಾರ ಮತ್ತು ಜಗದ್ವಿದ್ಯಮಾನ ಸ್ಥಿತಿಗಳನ್ನು ಅವು ಇದ್ದಂತೆ ಒಪ್ಪಿಕೊಂಡು

ಬಂದನು. ಈ ಹೊತ್ತು ಕ್ರಮವಿಕಸನವನ್ನು ಕುರಿತ ಜ್ಞಾನವನ್ನವನು ಪುನಸ್ಸಂಪಾದಿಸಿ ಕೊಂಡಿದ್ದಾನೆ. ಈ ಬೋಧೆಯನ್ನು ತಾತ್ತ್ವಿಕರೂ ಭೌತವಿಜ್ಞಾನಿಗಳೂ ಪ್ರಕೃತಿ ವಿಜ್ಞಾನಿಗಳೂ ವಾಸ್ತುಶಿಲ್ಪಾದಿ ವಿವಿಧ ಶಿಲ್ಪಶಾಸ್ತ್ರಜ್ಞರೂ, ಪರಿಕರ್ಮತಂತ್ರಜ್ಞರೂ ಸಾಮಾನ್ಯವಾಗಿ ಒಪ್ಪಿಕೊಂಡಿದ್ದಾರೆ.

ಆಧುನಿಕ ಮನುಷ್ಯನು ಗುರುತ್ವಾಕರ್ಷಣ ಶಕ್ತಿಯನ್ನು ಅರ್ಥಮಾಡಿಕೊಂಡು ಅದರ ಪ್ರಯೋಜನವನ್ನು ಪಡೆಯುತ್ತಿರುವಂತೆ, ಜೀವ ಕ್ರಮವಿಕಸನ ತತ್ತ್ವವನ್ನೂ ಅರ್ಥಮಾಡಿಕೊಂಡು ಅದಕ್ಕೆ ಒಪ್ಪಿಕೆ ಕೊಟ್ಟಿದ್ದಾನೆ. ಕ್ರಮವಿಕಸನ ತತ್ತ್ವವನ್ನು ಕಂಡುಕೊಂಡಮೇಲೆ ಅದನ್ನವನು ತನ್ನ ಅನುಕೂಲಕ್ಕಾಗಿ ಪರಿವರ್ತಿಸಿ ಕೊಳ್ಳು ತ್ತಾನೆ. ಈ ಒಂದು ಪರಿವರ್ತನ ಪರಂಪರೆಯನ್ನು "ಬೆಳವಣಿಗೆ" (development) ಅಥವಾ "ಅಭಿವೃದ್ಧಿ" (improvement) ಎಂದು ಕರೆಯುತ್ತಾನೆ. ಯಾವ ಹೆಸರನ್ನಾದರೂ ಅದಕ್ಕಿಡಲಿ, ಇಂದು ಕ್ರಮವಿಕಸನವೆಂಬುದು ಮನುಷ್ಯನ ಜಾಗೃತಪ್ರಜ್ಞೆಯ ಪಾತ್ರದಿಂದ, ಮತ್ತು ಫಲಕಾರಿಯಾದ ಪಾತ್ರದಿಂದ, ಕಾರ್ಯ ಪರಿಣಾಮಗಳನ್ನು ನೀಡುತ್ತ, ಅಭಿವೃದ್ಧಿಯ ಗತಿವೇಗವನ್ನು ಹೆಚ್ಚಿಸಿವೆಯಲ್ಲದೆ, ಮನುಷ್ಯನ ಚಲನವಲನಕ್ಕೆ ಪ್ರಕೃತಿಯ ನಿಧಾನಗತಿಶೀಲದ-ಯಥಾಕ್ರಮದ-ರಾಜ ಮಾರ್ಗವನ್ನು ತಪ್ಪಿಸಿ, ಸೀಳುದಾರಿಯನ್ನು ತೆರೆದು ತೋರಿಸಿವೆ.

ಮನುಷ್ಯನು ಪ್ರಾಣಿಶಾಸ್ತ್ರ ಕ್ಷೇತ್ರವನ್ನು ಸಂಕ್ರಮಿಸಿ ಪರಿಸರ ವಿಜ್ಞಾನ, ಸಮಾಜ ವಿಜ್ಞಾನ ಕ್ಷೇತ್ರಗಳನ್ನು ಪ್ರವೇಶಿಸಿದ್ದಾನೆ. ಪರಿಸರ ವಿಜ್ಞಾನ ಕ್ಷೇತ್ರದಲ್ಲಿ ಮನುಷ್ಯರು ತಮ್ಮ ಜೀವನ ವಿಧಾನವನ್ನು ವಾತಾವರಣ ಸನ್ನಿವೇಶಕ್ಕೆ ಹೊಂದಿಸಿ ಕೊಂಡು ಬಾಳುತ್ತಾರೆ. ಇವರು ಪ್ರಾಣಿವಿಜ್ಞಾನ ಕ್ಷೇತ್ರದಲ್ಲಿ ಸಸ್ಯ ಜೀವನದಲ್ಲೂ ಪ್ರಾಣಿ ಜೀವನದಲ್ಲೂ ಒಳ್ಳೊಳ್ಳೆಯ ತಳಿಗಳನ್ನು ಜನ್ಮಕ್ಕೆತಂದು ಅಭಿವೃದ್ಧಿ ಪಡಿಸು ತ್ತಾರೆ – ಪ್ರಯೋಗ ಪರೀಕ್ಷೆಗಳನ್ನು ನಡಸಿ, ಅಳಿಯದೆ ಉಳಿಯಬಲ್ಲದ್ದನ್ನು ಮಾತ್ರ ಆಯ್ಕೆ ಮಾಡುತ್ತ ರ್‍ಯಾಡಿಕಲ್ ಪಂಥದವರು ಇವೇ ತತ್ತ್ವ ವಿವರಗಳನ್ನು ಇಡಿಯ ಜನ ವರ್ಗಕ್ಕೆ ಅನ್ವಯಿಸಿ, ವಿವಿಧ ಪ್ರಾಣಿಸಂಪತ್ತನ್ನು ಅಭಿವೃದ್ಧಿಪಡಿಸಿ, ಮನುಷ್ಯ ನನ್ನು ಅಧಿ(ಪೂರ್ಣ)ಮಾನವನ್ನಾಗಿ ಮಾಡುವ ಕಾಲವನ್ನು ಪ್ರತೀಕ್ಷಿಸಿಕೊಂಡಿದ್ದಾರೆ.

ಹಾಗೆಯೇ ರ್‍ಯಾಡಿಕಲ್ ಪಂಥದವರು ಪರಿಸರ ವಿಜ್ಞಾನ ಕ್ಷೇತ್ರದಲ್ಲಿ ಕಾರ್ಯ ಮಾಡುತ್ತ, ಪ್ರಕೃತಿದತ್ತ ವಾತಾವರಣ ಪರಿಸರದಲ್ಲಿ ಪರಿವರ್ತನೆಯನ್ನು ತಂದು ಕೊಳ್ಳುತ್ತಾರೆ – ಪ್ರಕೃತಿಯ ಸಂಪನ್ಮೂಲ ವಸ್ತುಗಳನ್ನೂ ಶಕ್ತಿಗಳನ್ನೂ ಬಳಸಿ ಕೊಳ್ಳುತ್ತ, ಮನುಷ್ಯನ ಜಗದ್ವ್ಯಾಪಾರಕ್ಕೆ ಅವಶ್ಯವೂ ಹೊಂದಿಕೆಯಾಗತಕ್ಕದ್ದೂ ಆದ ನೆರೆಹೊರೆಯನ್ನು ಕಟ್ಟಿಕೊಳ್ಳುತ್ತಾರೆ. ಸಮಾಜ ಚರಿತ್ರೆಯೆಂಬುದು ಮನುಷ್ಯನು

ಪ್ರಕೃತಿಯನ್ನು ಕುರಿತ ತನ್ನ ಜ್ಞಾನಕ್ಷೇತ್ರವನ್ನು ವಿಸ್ತರಿಸಿಕೊಳ್ಳುವ, ಮತ್ತು ಕಾಲಕಾಲಕ್ಕೆ ಮಾರ್ಪಾಟು ಹೊಂದುತ್ತಿರುವ ಆವಶ್ಯಕತೆಗಳನ್ನು ಮನುಷ್ಯವರ್ಗಕ್ಕೆ ಪೂರೈಸಿ ಕೊಡುವ ಪ್ರಯತ್ನಗಳ ದಾಖಲೆಯಾಗಿದೆ. ಈ ದಿಕ್ಕಿನಲ್ಲಿ ನಡೆದ ಆದಿ ಪ್ರಯತ್ನಗಳಲ್ಲಿ ಒಂದೆಂದರೆ ನೀರಾವರಿ ಸೌಕರ್ಯ: ಪ್ರಕೃತಿಯಲ್ಲಿ ಅಡಗಿರುವ ಜಲ ಸಂಪತ್ತನ್ನು ಮನುಷ್ಯನ ಆಹಾರ ಪೂರಣಕ್ಕೆ ಅನುಕೂಲಮಾಡುವ ಕಡೆಗೆ ತಿರುಗಿಸು ವುದು ಅವನು ಕೈಕೊಂಡು ಮೊದಲ ಪ್ರಯತ್ನ.

ಇಂಥ ಇನ್ನೂ ಹಲವಾರು ಪ್ರಯತ್ನಗಳನ್ನು ಸಮಾಜ ವಿಜ್ಞಾನಿಗಳು ಕೈಕೊಳ್ಳುತ್ತಾರೆ. ಸಾಮಾಜಿಕ ಪರಿಸರದಲ್ಲಿ ಮಾರ್ಪಾಟನ್ನು ತಂದುಕೊಳ್ಳಲು ಸಂಯೋ ಜನೆಮಾಡಿ, ಪ್ರಯೋಗ ಪರೀಕ್ಷೆಗಳನ್ನು ನಡಸಿ, ಸಮಾಜ ಚರಿತ್ರೆ ಹೀಗೆ ಆರ್ಥಿಕ ಸಾಮಾಜಿಕ ರಾಜಕೀಯ ಆಚರಣೆಗಳನ್ನೂ ಸಂಸ್ಥೆಗಳನ್ನೂ ಸಂಯೋಜಿಸಿ, ಸಂಘಟಿಸಿ ಉತ್ತಮ ಪಡಿಸುತ್ತಿರುವುದು ಮನುಷ್ಯ ಪ್ರಯತ್ನಗಳ ದಾಖಲೆ.

ಪ್ರಕೃತಿ ಪರಿಸರದ ಬಗ್ಗೆ ಪ್ರಯೋಗ ಪರೀಕ್ಷೆ ನಡಸುತ್ತಿರುವುದರ ಪರಿಣಾಮ ವಾಗಿ, ಒಮ್ಮೆ ಬಹಿಷ್ಕರಣಕ್ಕೆ ಪಾತ್ರವಾದದ್ದೆಲ್ಲ ಇಂದು ಸಾರ್ವತ್ರಿಕ ಅಂಗೀಕಾರ ಪಡೆದು ಆಚರಣೆಯಲ್ಲಿವೆ. ವಿಜ್ಞಾನಿಗಳೂ ಯಂತ್ರ-ವಾಸ್ತು-ಶಿಲ್ಪಿಗಳೂ ಆಯಾ ಶಾಸ್ತ್ರಕ್ಕೆ ಸಂಬಂಧಪಟ್ಟ ಪ್ರಶ್ನೆಗಳನ್ನು ಎತ್ತಿಕೊಂಡು ಪರಿಶೀಲನೆ ನಡಸುವುದಕ್ಕೂ, ಈ ವಿವಿಧ ಶಾಸ್ತ್ರಗಳ ಸಹಾಯದಿಂದ ಭಿನ್ನ ಭಿನ್ನ ಕ್ಷೇತ್ರಗಳಾದ ಬೇಸಾಯದ ಹೊಲಗದ್ದೆಗಳಿಗೂ ಯಂತ್ರೋದ್ಯಮಾಗಾರಗಳಿಗೂ ಸರಕು ಸಾಗಣೆಯ ಏರ್ಪಾಟು ಗಳಿಗೂ ತತ್ತ್ವಗಳನ್ನೂ ಅನ್ವಯಿಸಿ ಕಾಯಕ ಪರಿಷ್ಕರಣ ಮಾಡಿಸುವುದಕ್ಕೂ ಈಗೀಗ ಹೆಚ್ಚುಹೆಚ್ಚು ಪ್ರೋತ್ಸಾಹ ಪಡೆಯುತ್ತಿದ್ದಾರೆ. "ಈ ಒಂದು ಕೆಲಸವನ್ನು ಇನ್ನೂ ಚೆನ್ನಾಗಿ ಮಾಡುವುದು ಹೇಗೆ ?"—ಈ ಪ್ರಶ್ನೆ ಮನುಷ್ಯ ಜೀವನವಿಧಾನವನ್ನು ಉತ್ತಮಪಡಿಸಲು ತಕ್ಕದ್ದಾಗಿದೆ. ಉದ್ಯಮ ಹಾಗೂ ತಂತ್ರಜ್ಞಾನ ಕ್ಷೇತ್ರಗಳಲ್ಲಿ ಸಾಧ್ಯ ವಾಗಿರುವ ಕ್ರಾಂತಿಪರಿವರ್ತನೆಗಳ ಫಲವಾಗಿ ಅಭಿವೃದ್ಧಿ ಕಾರ್ಯ ಸಾಧನೆಗೆ ತರ-ತಮ ಸೂತ್ರ ಪ್ರಯೋಗಕ್ಕೂ ಅದನ್ನನುಸರಿಸಿದ ಆಚರಣೆಗೂ ಅವಕಾಶವೀಗ ಹೆಚ್ಚಾಗಿದೆ.

ಖಾಸಗಿ ಉದ್ಯಮಿಗಳು, ವ್ಯಕ್ತಿ ಪ್ರಯತ್ನಗಳಿಗೆ ತಟಸ್ಥ ಭಾವತೋರುವ (Laissez-Faire) ಬಂಡವಾಳ ಶಾಹಿ, ರಾಜ್ಯ ಸಾಮ್ರಾಜ್ಯ ಪೋಷಕರು-ಎಲ್ಲರೂ ಈ ತರ-ತಮ ಸೂತ್ರ ಪ್ರಯೋಗವನ್ನು ಪ್ರಕೃತಿ ವಿಜ್ಞಾನ ವಾಸ್ತು-ಯಂತ್ರಾದಿಶಿಲ್ಪ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲಿ ಅನ್ವಯಿಸುವುದು ಲಾಭಪ್ರದವೆಂದು ಬಗೆಯುತ್ತಾ ರಾದರೂ, ಅದೇ ಅಭಿವೃದ್ಧಿ ಸಾಧಕವಾದ ಸೂತ್ರವನ್ನು ಸಾಮಾಜಿಕ ಕಾರ್ಯಾಚರಣೆ ಗಳಿಗೂ ಮತ್ತು ಸಾಮಾಜಿಕ ಸ್ನೇಹ ಸಂಬಂಧಗಳ ಬಗ್ಗೆ ನಡಸುವ ಪ್ರಯೋಗ

ಪರೀಕ್ಷೆಗಳಿಗೂ ಅನ್ವಯಿಸಿ ಕೊಡುಲಾಗುವ ಸಲಹೆಗಳಿಗೆ ಪ್ರೋತ್ಸಾಹವನ್ನು ಕೊಡದೆ ಎಡರೊಡ್ಡುತ್ತಾರೆ.

ಕನ್ಸರ್ವೆಟಿವ್ ಪಂಥದವರು ಈ ಜಡಸ್ಥಿತಿಗೆ ಬೆಂಬಲ ಕೊಡುತ್ತಾರೆ. ಲಿಬರಲ್ ಪಂಥದವರಾದರೋ ತಾತ್ತ್ವಿಕವಾಗಿ ಪ್ರಗತಿ ಅಭಿವೃದ್ಧಿಗಳಲ್ಲಿ ನಂಬಿಕೆಯಿಟ್ಟವ ರಾದರೂ ಅವರು ತಮ್ಮ ಸ್ವತ್ತುಗಳನ್ನು ಕಾಪಾಡಿಕೊಳ್ಳುವುದರಲ್ಲೂ ಸ್ವಾಧಿಕಾರ ದಲ್ಲಿರುವ ಸೌಲಭ್ಯ ಸೌಕರ್ಯಗಳ ರಕ್ಷಣೆಯ ಭರವಸೆಯಲ್ಲೂ ಆಸಕ್ತರಾಗಿರುತ್ತಾರೆ. ಆದದ್ದರಿಂದ ವಿಷಮಸಂದರ್ಭವೊಂದು ಎದ್ದುಕೊಂಡಾಗ ಅವರು ಶೋಷಕ ಸಂಸ್ಥೆ ಗಳನ್ನೂ ಸಾಮ್ರಾಜ್ಯ ಪ್ರತಿಷ್ಠೆಗಳನ್ನೂ ಶಾಶ್ವತ ಪಡಿಸಲು ನೆರವಾಗುತ್ತ ತಮ್ಮ ಪ್ರಭಾವ ಬಲವನ್ನು ಬೀರುತ್ತಾರೆ.

ರ್ಯಾಡಿಕಲ್ ಪಂಥದವರು ಅಭಿವೃದ್ಧಿ ಸೂತ್ರಗಳನ್ನು ಸರ್ವತ್ರ ಪ್ರಯೋಗಿಸಲು ಒತ್ತಾಯ ಮಾಡುತ್ತಾರೆ: “ನಾವು ಇನ್ನೂ ಚೆನ್ನಾಗಿ ಕಾರ್ಯ ಮಾಡುವುದು ಹೇಗೆ?'' 1776 ರ ಅಮೆರಿಕದ ಕ್ರಾಂತಿ ಮುಗಿದು ಸುಮಾರು ಇನ್ನೂರು ವರ್ಷ ಗಳಾದುವು. 1789 ರ ಫ್ರಾನ್ಸಿನ ಕ್ರಾಂತಿ ರಾಜಕೀಯ ಕ್ಷೇತ್ರದಲ್ಲಿ ಅಭಿವೃದ್ಧಿ ಸೂತ್ರ ಪ್ರಯೋಗಕ್ಕೆ ಮಾರ್ಗದರ್ಶನನೀಡಿತ್ತು. 1910 ರ ಮೆಕ್ಸಿಕೋ ಕ್ರಾಂತಿಯೂ 1911 ರ ಚೀಣಾ ಕ್ರಾಂತಿಯೂ 1917 ರ ರಷ್ಯದ ಕ್ರಾಂತಿಯೂ ಆರ್ಥಿಕ ಕ್ಷೇತ್ರ ದಲ್ಲಿ ಅಭಿವೃದ್ಧಿ ಸೂತ್ರಪ್ರಯೋಗಕ್ಕೆ ಮಾರ್ಗದರ್ಶನ ನೀಡಿದುವು.

ಪ್ರಕೃತಿ ಪರಿಸರ ಕ್ಷೇತ್ರದಲ್ಲಿ ವಿಜ್ಞಾನಿಗಳೂ ಇಂಜಿನಿಯರುಗಳೂ ಪರಿಕರ್ಮ ತಂತ್ರವಿದರೂ ಯಶಸ್ವಿಯಾಗಿ ಸಾಧಿಸಿದ್ದನ್ನೇ ಸಮಾಜ ಪರಿಸರ ಕ್ಷೇತ್ರದಲ್ಲಿ ಈ ಹೊತ್ತು ಮನುಷ್ಯವರ್ಗದ ಮೂರನೆಯ ಒಂದುಭಾಗ ಸಾಧನೆ ಮಾಡಲು ಹೊರಟಿದೆ. ಈ ಪ್ರಯತ್ನವು ಸಂಯೋಜನೆಗೂ ಆರ್ಥಿಕ ವ್ಯವಸ್ಥೆ ಸಮಾಜ ವ್ಯವಸ್ಥೆಗಳಲ್ಲಿ ಪರಿಷ್ಕರಣರಚನೆಗೂ ಸಂಬಂಧಪಟ್ಟಂತೆ ನಡೆದು, ಅದನ್ನು ರ್ಯಾಡಿಕಲ್ ಪಂಥಿಗಳು ಸ್ವಾಗತಿಸಿ, ಮೆಚ್ಚಿಕೆ ಸೂಚಿಸುತ್ತಾರೆ. ಆದರೆ ಲಿಬರಲ್ ಪಂಥಿಗಳು ಈ ಪ್ರಯತ್ನದ ವಿವೇಕವನ್ನು ಪ್ರಶ್ನಿಸಿ ಅದಕ್ಕೆ ವಿಘ್ನವೊಡ್ಡುತ್ತಾರೆ. ಕನ್ಸರ್ವೆಟಿವ್ ಪಂಥಿಗಳೂ ಪ್ರತಿ ಗಾಮಿಗಳೂ ಈ ಪ್ರಯತ್ನಕ್ಕೆ ವಿರುದ್ಧವಾಗಿ ಹೋರಲು ಪಟ್ಟುಹಿಡಿದು ಕಾದಿರುತ್ತಾರೆ.

ಬೆಳವಣಿಗೆಯೆಂದರೆ ಮಾರ್ಪಾಟು; ಮಾರ್ಪಾಟು ಆಗುವಾಗ ಒಂದಷ್ಟು ಶಕ್ತಿ ಯನ್ನು ವೆಚ್ಚಮಾಡಿಸುತ್ತದೆ—ಎಂಬುದು ಸ್ವತಸಿದ್ಧವಾದ ಸಂಗತಿಯೆಂದು ರ್ಯಾಡಿಕಲ್ ಪಂಥದವರಾದ ನಾವು ತಿಳಿದುಕೊಂಡಿದ್ದೇವೆ. ಪ್ರತಿಯೊಂದು ಸಾಮಾಜಿಕ ಪರಿವರ್ತ ನೆಯೂ ಹಳೆಯ ಭಾವನೆಗಳಿಗೆ ಬಾಧಕವಾಗಿರುತ್ತದೆ; ಅನೇಕ ವೇಳೆ ಹಳೆಯ ಭಾವನೆ ಗಳನ್ನೂ ಹಳೆಯ ಆಚರಣೆಗಳನ್ನು ಹಳೆಯ ಸಂಸ್ಥೆಪದ್ಧತಿಗಳನ್ನೂ ಹಿಮ್ಮೆಟ್ಟಿಸುತ್ತದೆ

ಎಂಬುದನ್ನು ನಾವು ಚೆನ್ನಾಗಿ ಬಲ್ಲೆವು. ಹೊಸ ಮಾರ್ಪಾಟನ್ನು ತರುವ ನವೀನ ಕಾರ್ಯತಂತ್ರವು ಯಶಸ್ವಿಯಾಗುವುದಕ್ಕಿಂತ ವಿಫಲವಾಗುವುದೇ ಸಂಭವನೀಯ ಎಂಬುದನ್ನೂ ನಾವು ಅರ್ಥಮಾಡಿಕೊಳ್ಳಬಲ್ಲೆವು. ಒಬ್ಬ ಪ್ರಸಿದ್ಧ ವಸ್ತು ನಿರ್ಮಾತೃವಿನ ಹೇಳಿಕೆಯೊಂದು ಈಗ ನಮಗೆ ಜ್ಞಾಪಕವಾಗುತ್ತದೆ. "ಒಂದು ವಿದ್ಯುದ್ದೀಪದ ಬುರುಡೆಯನ್ನು—ಬಲ್ಬನ್ನು—ವಾಸ್ತವವಾಗಿ ತಯಾರುಮಾಡುವುದಕ್ಕೆ ಮುಂಚೆ ಅಂಥ ಉಜ್ಜ್ವಲ ದೀಪಸಾಧನವನ್ನು ಮಾಡಿಕೊಳ್ಳುವ ಆರುನೂರು ವಿಧಾನಗಳನ್ನು ನಾನು ಕಂಡುಕೊಂಡೆನು." ಒಂದು ಸಿದ್ಧಿಗೆ ಆರುನೂರು ಸಾಧನಮಾರ್ಗಗಳು—ಯಶಸ್ವಿಯಾಗುವ ಈ ಪ್ರಯೋಗ ಪರೀಕ್ಷೆಗಳು—ಅಭಿವೃದ್ಧಿಗೆ ಕೊಟ್ಟ ಬೆಲೆ ಎಂದು ನಾವು ಎಣಿಸುತ್ತೇವೆ. ಈ ಬೆಲೆಯನ್ನು ತೆರಲು ನಾವು ಅಣಿಯಾಗಿದ್ದೇವೆ. ಏಕೆಂದರೆ ಸಾಮಾಜಿಕ ಚರಿತ್ರೆ ಯಾವಾಗಲೂ ನಿರ್ಣಾಯಕ ದಾಖಲೆಗಳನ್ನು ಒದಗಿಸತಕ್ಕದ್ದು. ಪ್ರಯೋಗ ಪರೀಕ್ಷೆಗಳು ದೊರಕಿಸಿದ ಒಂದು ಒಳ್ಳೆಯದರಿಂದ, ಅದಕ್ಕಿಂತ ಹೆಚ್ಚು ಒಳ್ಳೆಯದನ್ನು ಪಡೆಯಲು, ಹುರುಪು ಬರುತ್ತದೆ. ಪ್ರಯೋಗ ಪರೀಕ್ಷೆಗಳ ದಾರಿ ಸವೆಯುವುದೇ ಹೀಗೆ. ಆದದ್ದರಿಂದ ಪ್ರಯೋಗ ಪರೀಕ್ಷೆಗಳೇ ಅಭಿವೃದ್ಧಿಯ ಬಸಿರು; ಪ್ರಯೋಗ ಪರೀಕ್ಷೆಯ ಮೂಲಕವೇ ಮಾನವ ವರ್ಗ 'ಉತ್ತರ' ದಿಂದ 'ಉತ್ತಮ'ಕ್ಕೆ ಮುನ್ನಡೆಯಬಲ್ಲುದು.

## ವೈಯಕ್ತಿಕ ಶುಭಜೀವನ

ರ್‍ಯಾಡಿಕಲ್ ಪಂಥದ ನಾನು ಮನುಷ್ಯ ವರ್ಗವನ್ನು ವ್ಯಕ್ತಿಶಃ (ವೈಯಕ್ತಿಕವಾಗಿ) ಸಮರ್ಥರನ್ನಾಗಿಯೂ ಶುಭಜೀವನವನ್ನು ನಡಸಬಲ್ಲ ದಕ್ಷರನ್ನಾಗಿಯೂ ಮಾಡುವುದು ಸಾಧ್ಯವೆಂದು ನಂಬುತ್ತೇನೆ. ಸದ್ಯಃಕ್ಷಣದಲ್ಲಿ ಮನುಷ್ಯವರ್ಗವು ವೈಯಕ್ತಿಕವಾಗಿ ಒಳ್ಳೆಯ ಜೀವನ ನಡಸಲು ಅಣಿಯಾಗಿಲ್ಲವೆಂಬುದು ನನ್ನ ಭಾವನೆ. ಹೆಚ್ಚು ಕಡಮೆ ಮನುಷ್ಯವರ್ಗ ಒಳ್ಳೆಯ ಜೀವನಕ್ಕೆ ಈಗ ಯೋಗ್ಯರೂ ಅಲ್ಲ, ಸಿದ್ಧರೂ ಅಲ್ಲ, ಎಂಬುದು ನನ್ನ ಖಂಡಿತವಾದ ಭಾವನೆ.

ಆಧುನಿಕ ಮನುಷ್ಯನು ಒಳ್ಳೆಯ ಜೀವನ ನಿರ್ವಾಹಕ್ಕೆ ಅರ್ಹನಾಗಿದ್ದಾನೆ ಎಂದು ಭಾವಿಸಿಕೊಳ್ಳುವ ಯಾರಾದರೂ ಕೆಲವು ಅನಿವಾರ್ಯಗಳಾದ ವಾಸ್ತವಾಂಶಗಳನ್ನು ಎದುರಿಸಬೇಕಾಗುತ್ತದೆ. ಈ ಹಲವು ವಾಸ್ತವಾಂಶಗಳಲ್ಲಿ ಮೊದಲನೆಯದು ಮನುಷ್ಯನು ಸಂಪೂರ್ಣವಾಗಿ ಗತಕಾಲಕ್ಕೆ—ಪರಂಪರೆಗೆ—ಬದ್ಧನಾಗಿಬಿಟ್ಟಿರುವುದು.

ಪಶ್ಚಿಮದ ಉದ್ದ ಅಗಲಗಳನ್ನೂ ಆಳುತ್ತಿರುವ ಸ್ವಲ್ಪಜನಾಧಿಪತ್ಯಗಳು ಗತಕಾಲಕ್ಕೆ ವಿಧೇಯತೆ ಸಲ್ಲಿಸಿ ಬದ್ಧರಾಗಿರುವುದು ಮಾತ್ರವಲ್ಲದೆ, ಸಂಗತಿಗಳು ಈಗ

ಇರುವಂತೆ ಮತ್ತು ಹಿಂದೆ ಇದ್ದಂತೆ ತಮಗೆ ವಿಧಾಯಕ ಮಾಡುವ ಅವಶ್ಯ ಕರ್ತವ್ಯ ಗಳಿಗೆ ದೇಶಾಭಿಮಾನ ಪೂರ್ವಕವಾದ ವಿಧೇಯತೆ ಸಲ್ಲಿಸಿದ್ದೇವೆಂದೂ ಅವು ಹೆಮ್ಮೆ ಪಟ್ಟುಕೊಳ್ಳುತ್ತವೆ. ಇಂಥ ಜನವನ್ನು ಬಣ್ಣಿಸಲು ಒಂದೇ ಒಂದು ಮಾತು ನಮಗೆ ಬೇಕಾದರೆ—ಮೂಲತಃ ಸಂಪ್ರದಾಯಪಾಲಕ, – ಪದ್ಧತಿಪೋಷಕ, – ಕನ್ಸರ್ವೆಟಿವ್ ಎಂಬುದಿಷ್ಟು ಸಾಕು. ರಾಜ್ಯಶಾಸನ, ಕಾನೂನು, ಪದ್ಧತಿ ಮತ್ತು ಅಭ್ಯಾಸ ಮಾಮೂಲುಗಳಿಗೆ, ಸ್ವಂತ ಸ್ವತಂತ್ರ ವಿವೇಚನೆಯನ್ನು ಬಳಸದೆ ಮುಡಿಪುಕಟ್ಟಿ, ಬದ್ಧ ರಾದವರು ಇವರು; ಆದದ್ದರಿಂದ ತಾವಾಗಿ ಆಯ್ದುಕೊಂಡ ಸ್ವತಂತ್ರ ಪ್ರಗತಿದಾಯಕ ಪಥಚಲನೆ ಅವರ ಪಾಲಿಗಿಲ್ಲ. ಸಂಪ್ರದಾಯ ಸ್ಥಾಪಕರಾದ ತಾತ ಮುತ್ತಾತಂದಿರು ಇಟ್ಟ ಹೆಜ್ಜೆಯನ್ನು ಅನುಸರಿಸುವುದು, ಅವರು ಆಚರಿಸಿ ತೋರಿಸಿದ್ದನ್ನು ಸಂರಕ್ಷಿ ಸುವುದು ಇವರಿಗೆ ಸುಲಭ, ಇಷ್ಟ; ಕಾನೂನು ಮತ್ತು ಶಾಂತಿವ್ಯವಸ್ಥೆಯನ್ನು ಕದಡದೆ ಎತ್ತಿಹಿಡಿದು ಸಂರಕ್ಷಿಸುವುದು; ವರ್ತಮಾನದಲ್ಲಿ ಯಾವುದು ರೂಢಿಯಾಗಿ ಇದೆಯೋ, ಎಂದರೆ ಭೂತಕಾಲದಿಂದ ಸಾಗಿ ಬಂದದ್ದು ಯಾವುದೋ ಅದನ್ನು ಉಡುಗಿಸದೆ ಊರ್ಜಿತವಾಗಿ ಕಾಪಾಡುವುದಕ್ಕೆ ವೈಯಕ್ತಿಕವಾಗಿ ಹೊಣೆಯೊಪ್ಪಿಕೊಂಡು ಬಾಗಿ ದವರ ಚಿತ್ತವೃತ್ತಿ ಇದು.

ಈ ಒಂದು ಅವಿಚಾರದ, ಅವಿವೇಕದ ವಿಧೇಯತಾಸಮರ್ಪಣೆ,–ಅನೇಕ ಸಂದರ್ಭ ಗಳಲ್ಲಿ ಗತವನ್ನು ಸಾಕ್ಷಾತ್ತಾಗಿ ಪೂಜಿಸುವುದಾಗುತ್ತದೆಯಾದದ್ದರಿಂದ, ಈ "ಸಮರ್ಪಣ ಭಾವ" ಸ್ವಲ್ಪಜನಾಧಿಪತ್ಯಗಳಿಗೆ ಮಾತ್ರ ಸೀಮಿತವಾಗಿಲ್ಲ. ವಾಸ್ತವ ವಾಗಿ ಆಧುನಿಕ ಜನವರ್ಗಗಳಲ್ಲಿ ಬಹುದೊಡ್ಡ ಭಾಗವಾಗಿರುವ ಕಸಬುದಾರಿ ಜನ,– ವಿವಿಧ ಉದ್ಯಮ ವೃತ್ತಿಗಳಲ್ಲಿ ಜೀವಿಕೆಯನ್ನು ಸಂಪಾದಿಸುವವರು, – ಸಣ್ಣ ಪರಿಮಾಣದಲ್ಲಿ ವಸ್ತುಗಳ ಉತ್ಪಾದಕರು, ಕಚೇರಿಗಳ ಸಿಬ್ಬಂದಿ,–ಅಥವಾ ಸಂಬಳ ಕ್ಕೋಸ್ಕರ (ಮಾಸಾಶನಕ್ಕೋಸ್ಕರ) ಕಾಯಕ ಮಾಡುವವರು, ಕಾರಕೂನ ಸಿಬ್ಬಂದಿ ಇವರೆಲ್ಲರೂ ಸ್ವಲ್ಪಜನಾಧಿಪತ್ಯಗಳಂತೆಯೇ ಸಂಪ್ರದಾಯಬದ್ಧರು, ಮತ್ತು ಅನು ವರ್ತನಶೀಲರು. ಕೆಲವು ದೃಷ್ಟಿಗಳಿಂದ ಮಧ್ಯಮ ತರಗತಿಯ ಜನ ಹೆಚ್ಚು ಸಂಪ್ರದಾಯ ಬದ್ಧರು. ಏಕೆಂದರೆ ಈ ವರ್ಗದ ಜನ ಸ್ವಲ್ಪಜನಾಧಿಪತಿಗಳ ಕೃಪೆಗೆ ಪಾತ್ರರಾಗಿ, ಪರಿಕರ್ಮತಂತ್ರ ಹಾಗೂ ವಿಜ್ಞಾನ ಸಾಮರ್ಥ್ಯಗಳ ಪ್ರಯೋಗದಿಂದ ಸಾಧ್ಯವಾ ಗಿರುವ ಸುಖ ಸಾಧನಗಳಲ್ಲಿ ತಮಗೊಂದಷ್ಟು ಪಾಲನ್ನು ಪಡೆದವರು. ಆದದ್ದರಿಂದ ಸ್ವಲ್ಪಜನಾಧಿಪತಿಗಳು ಇವರನ್ನು ಕೊಂಡು ತಮ್ಮ ಕೆಲಸಕ್ಕೆ ಗೊತ್ತುಮಾಡಿ, ಅವರ ಸೇವೆಗೆ ಪ್ರತಿಫಲವಾಗಿ ಮೇಲ್ಮಟ್ಟದ ಸೌಕರ್ಯ ಸೌಲಭ್ಯಗಳನ್ನು ಇವರ ಬಾಳಿಗೆ ಅಳವಡಿಸಿಕೊಡುತ್ತಾರೆ. ಹೀಗೆ ತಮ್ಮ ನಿತ್ಯದ ಬಳಕೆಗೆ ಬಂದ ಸೌಕರ್ಯಗಳು ನಷ್ಟಪಡುವುದನ್ನು ನೋಡಲು ಮಧ್ಯಮ ತರಗತಿಯ ಜನ ಸಿದ್ಧರಾಗಿಲ್ಲ.

ಸ್ವಲ್ಪಜನಾಧಿಪತಿಗಳೂ ಮಧ್ಯಮ ವರ್ಗದ ಜನರೂ ಇನ್ನೊಂದು ಮುಖ್ಯವಾದ ಅನುಕೂಲವನ್ನು ಅವರವರ ಆರ್ಥಿಕಸ್ತರಸಂರಕ್ಷಣೆಯ ಬಾಬಿನಲ್ಲಿ ಪಾಲ್ಗೊಂಡವರಾಗಿರುತ್ತಾರೆ. ವರ್ತಮಾನದ ಪರಿಸ್ಥಿತಿಯಲ್ಲಿ–ಅನುಕೂಲ ಕಾಲವಾಗಲಿ ಪ್ರತಿಕೂಲ ಕಾಲವಾಗಲಿ–ಲಾಭಗಳ ಹಂಚಿಕೆಯಾಗುತ್ತದೆ, ಸಂಬಳಗಳ ಬಟವಾಡೆಯಾಗುತ್ತದೆ; ಸೊತ್ತುಗಳ ಒಡೆಯರೂ ಸಂಬಳದ ಸಿಬ್ಬಂದಿಯೂ ಆರ್ಥಿಕ ವ್ಯವಸ್ಥೆಯಲ್ಲಿ ಕುಸಿತ ಕಂಡಾಗಲೂ ಮುಖೋಲ್ಲಾಸದಿಂದ ಇರಬಲ್ಲಷ್ಟು ಸೌಕರ್ಯಗಳ ಅನುಭವದಲ್ಲಿರುತ್ತಾರೆ. ದುಷ್ಕಾಲ ಬಂದಾಗ ಕಾರ್ಮಿಕರನ್ನು ಕ್ವಚಿತ್ಕಾಲ–ಹಂಗಾಮಿಯಾಗಿ–ವಜಾ ಮಾಡಬಹುದು. ಭೌತಸೌಕರ್ಯಗಳು, ಸೌಲಭ್ಯಗಳು ಮತ್ತು ಆರ್ಥಿಕ ರಕ್ಷಣೆಗಳು ಇವೆಲ್ಲವನ್ನೂ ಪಡೆದ ಮಧ್ಯಮ ತರಗತಿಯ ಕುಟುಂಬಗಳು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸದ ಮತ್ತು ಇತರ ಸಾಮಾಜಿಕಸುಖಾವಕಾಶಗಳನ್ನು ಒದಗಿಸಿ, ಇನ್ನೂ ಮೇಲ್ಮಟ್ಟದ ಸುಖದ ಕಡೆಗೆ ಸಾಗುವ ಸಾಧ್ಯತೆಯುಳ್ಳವು. ಮಧ್ಯಮತರಗತಿಯವರ ಮಕ್ಕಳಲ್ಲಿ ಮೇಧಾವಿಗಳೂ ಆಶೋತ್ತರಗಳನ್ನು ಕಟ್ಟಿಕೊಂಡವರೂ ಆದವರು ವ್ಯವಸ್ಥಾಪಕ ಶ್ರೇಣಿಗೂ, ನಿಯಂತ್ರಣಾಧಿಕಾರದ ಸ್ತರಕ್ಕೂ, ಒಡೆತನದ ಅತ್ಯುನ್ನತ ಸ್ತರಕ್ಕೂ ಕ್ರಮಕ್ರಮವಾಗಿ ಏರಿ, ಸ್ವಲ್ಪಜನಾಧಿಪತ್ಯ ಕೊಡುವ ಸ್ವರ್ಗಸಮಾನ ಸುಖಕ್ಕೂ ಪಾತ್ರರಾಗಬಹುದು.

ಮಧ್ಯಮ ತರಗತಿಯ ಜನರೂ ಸ್ವಲ್ಪಜನಾಧಿಪತಿಗಳಂತೆಯೇ ಸಂಪ್ರದಾಯ ಪಾಲಕರು ಸೆಳೆದ ಗೆರೆಯನ್ನು ಹಿಡಿದು ನಡೆಯಬೇಕು – ರಕ್ಷಣೆಯ ಭರವಸೆಯನ್ನು ಕಾಣಬೇಕಾದರೆ. ಮಧ್ಯಮ ತರಗತಿಯ ಜನ ಸಂಸ್ಥಿಪದ್ಧತಿಗಳ ಬಗ್ಗೆ ಶಂಕೆಪಡರು. ವಾದಗ್ರಸ್ತ ಸಂಗತಿಗಳ ಬಗ್ಗೆ ಸೊಲ್ಲೆತ್ತರು. ಪ್ರಕಟವಾಗಿ ತಮ್ಮ ಅಭಿಪ್ರಾಯಗಳನ್ನೂ ಆಲೋಚನೆಗಳನ್ನೂ ಹೇಳಲು ಬಾಯಿಬಿಡಲೊಲ್ಲರು. ಅನುವರ್ತನೆಯ ದಾರಿಯನ್ನು ಬಿಟ್ಟ ಜೊತೆಗಾರರ ಸಂಗದಲ್ಲಿ ಇರಲು ಹಿಂಜರಿಯುವವರು. ಸ್ವಲ್ಪಜನಾಧಿಪತಿಗಳಿಗಾದರೂ ನಡೆದಾರಿಯಂಚಿನಲ್ಲಿ ಒಂದಿಷ್ಟು ಅಡ್ಡದಾರಿಯಲ್ಲಿ ಓಡಾಡಿಕೊಂಡಿರುವ ಲಘುಸ್ವಾತಂತ್ರ್ಯವುಂಟು. ಆದರೆ ಸಾಮಾನ್ಯವಾಗಿ ಈ ಸ್ವಾತಂತ್ರ್ಯವು ಮಧ್ಯಮ ಶ್ರೇಣಿಯ ಜನಕ್ಕೆ ಇರುವುದಿಲ್ಲ.

ವೇತನ ಪಡೆಯುವ ಕಾರ್ಮಿಕಗಣದ ಸ್ಥಿತಿ ಬೇರೆ ಬಗೆಯದು. ಒಟ್ಟಿನಮೇಲೆ ಕಾರ್ಮಿಕರು ಅನುಭವಿಸುವ ಸೌಕರ್ಯಾನುಕೂಲವು ಕೆಳಮಟ್ಟದ್ದು. ಅವರ ಕಾರ್ಯಕಾಲಾವಧಿ ಕಡಮೆ ರಕ್ಷಣೆಯುಳ್ಳದ್ದು; ಆದರೆ ಮಧ್ಯಮ ತರಗತಿಯ ಜನಕ್ಕೆ ಇಲ್ಲದ ಸೌಕರ್ಯವು ಕಾರ್ಮಿಕ ವರ್ಗಕ್ಕುಂಟು. ಅವರು ಕಳೆದ ಒಂದು ಶತಮಾನದಿಂದ ತಮ್ಮ ಯೋಗಕ್ಷೇಮಕ್ಕಾಗಿ ಹೋರಾಡಿ ಯಶಸ್ಸಿನಿಂದ ಪಡೆದುಕೊಂಡ ಕಾರ್ಮಿಕ ಸಂಘ

ಸಂಘಟನೆಯ ಫಲವಾಗಿ, ಕಾರ್ಮಿಕ ಸಂಸ್ಥೆಗಳಲ್ಲಿ ಇವರವೇ ಸ್ಥಾನಬಲ, ಪ್ರಭಾವಬಲ. ಈ ಸಂಘಸಂಸ್ಥೆಗಳ ಕಾರ್ಯವು ಸುಗಮವಾಗಿಯೂ ನಿರುಪಾಧಿಕವಾಗಿಯೂ ನಡೆಯ ಬೇಕಾದರೆ ಅವರು ತಮ್ಮ ಹೋರಾಟವನ್ನು ಇನ್ನೂ ಮುಂಬರಿಸಬೇಕಾಗಿದೆ. ಆಡಳಿತ ವರ್ಗದ ಸಿಬ್ಬಂದಿಯೂ, ಮಧ್ಯಮ ತರಗತಿಯ ಸಿಬ್ಬಂದಿಯೂ, ಸ್ವಲ್ಪ ಜನಾಧಿಪತ್ಯವನ್ನು ಅವಲಂಬಿಸಿದ ಕಾರಕೂನ ವರ್ಗವೂ ಈ ಕಾರ್ಮಿಕ ಶ್ರೇಣಿ ಯೊಡನೆ ಸ್ನೇಹ ಸಂಪರ್ಕವನ್ನಿಟ್ಟುಕೊಳ್ಳುವುದಿಲ್ಲ. ಈ ಬೇರೆಬೇರೆ ವರ್ಗಗಳ ಜನರು ಒಂದೇ ಉದ್ಯಮ ಸಂಸ್ಥೆಯ ಸದಸ್ಯರಾಗಿದ್ದರೂ, ಅವರ ಮಕ್ಕಳು ಒಂದೇ ಶಾಲೆಯಲ್ಲಿ ಓದು ಕಲಿಯುತ್ತಿದ್ದರೂ ಈ ವರ್ಗಗಳು ಅವರವರ ಪಾಡಿಗೆ ಪೃಥಗ್ ಜೀವನ ನಡಸುತ್ತಿರತಕ್ಕವರು.

ಅಷ್ಟು ಗಮನಾರ್ಹವಲ್ಲದ ಯಶಸ್ಸಿನ ಕಾರಣದಿಂದ ಮಧ್ಯಮ ತರಗತಿ ಯವರೂ, ಬೇರೆ ವರ್ಗವೆಂಬ ಕಾರಣದಿಂದ ಕಾರ್ಮಿಕ ಶ್ರೇಣಿಯವರೂ ಆರ್ಥಿಕ ಪ್ರಲೋಭಿವೃದ್ಧಿಯ ಅವಕಾಶಗಳು ಲಭ್ಯವಾಗದೆ, ಈ ಉಭಯವರ್ಗಗಳೂ ಶುಭ ಜೀವನ ಯೋಗವಿಲ್ಲದೆ ಇರತಕ್ಕವರು. ಸಮಾಜದಲ್ಲಿ ಇವರು ಅಧೀನಭಾಗವಾಗಿದ್ದಾರೆ, ನೌಕರಿಗಳ ಅಪೇಕ್ಷಕರಾಗಿ ಪ್ರತ್ಯೇಕ ಗಣನೆಗೆ ಸಿಕ್ಕಿದ್ದಾರೆ. ನೌಕರಿಗಳ ಮಾಲಿಕರು ಸಮಾಜದಲ್ಲಿ ಇನ್ನೊಂದು ಭಾಗವಾಗಿ ವಿಂಗಡನೆಗೆ ಬಂದು ಇವರಿಗಿಂತ ಹೆಚ್ಚು ಪ್ರಭಾವಬಲದಿಂದಕೂಡಿ ಸುಪ್ರತಿಷ್ಠಿತರಾಗಿದ್ದಾರೆ. ಹೀಗೆ ಈ ವರ್ಗಗಳವರು ಶುಭ ಜೀವನ ಸಾಧ್ಯತೆಯಿಲ್ಲದೆ ಬಹಿಷ್ಕೃತರಾಗಿದ್ದಾರೆ.

ಪಶ್ಚಿಮದ ಸ್ವಲ್ಪಜನಾಧಿಪತಿಗಳು ನಿರ್ಧಾರಕವೆನ್ನಿಸುವ ಅಧಿಕಾರಾನುಕೂಲ ಗಳಲ್ಲಿ ನಾಲ್ಕು ಸ್ಥಾನಗಳನ್ನು ಪಡೆದಿದ್ದಾರೆ. ಈ ಸ್ಥಾನಗಳನ್ನು ಬಹುಸ್ವಲ್ಪ ಪ್ರಮಾಣ ದಲ್ಲಿಹಂಚಿಕೊಳ್ಳುವವರು ಅವರ ಸಹಚರರಾದ ಮಧ್ಯಮ ವರ್ಗದ ಜನ ಮತ್ತು ಅವರ ಅಧೀನದಲ್ಲಿರುವ ಆಶ್ರಿತವರ್ಗ.

(1) ಇವರು ಪ್ರಕೃತಿ ಸಂಪನ್ಮೂಲಗಳನ್ನೂ ಸಾರ್ವಜನಿಕ ಉಪಯೋಗ ವಸ್ತುಗಳನ್ನೂ ತಮ್ಮ ಒಡೆತನದಲ್ಲಿರಿಸಿಕೊಂಡು, ತಮ್ಮ ಅಧಿಕಾರವನ್ನು ಬಳಸಿ ಅವನ್ನು ಹತೋಟಿಗೆ ತಂದುಕೊಂಡು, ಕಾರ್ಯನಿರ್ವಾಹ ಮಾಡುತ್ತಾರೆ.

(2) ಮಧ್ಯಮ ತರಗತಿಯ ಕಾರಕೂನ ಸಿಬ್ಬಂದಿಯನ್ನೂ ( White Collar Workers ), ಕಾರ್ಮಿಕ ಸಿಬ್ಬಂದಿಯನ್ನೂ ( Blue Collar Workers ) ತಮ್ಮಹತೋಟಿಯಲ್ಲಿಟ್ಟುಕೊಂಡಿರುತ್ತಾರೆ.

(3) ಪ್ರಭುತ್ವಕ್ಕೆ ಈ ಸ್ವಲ್ಪಜನಾಧಿಪತಿಗಳು ಜ್ಯೇಷ್ಠ ಭ್ರಾತೃಗಣ. ಪೊಲೀಸ್

ಮತ್ತು ಮಿಲಿಟರಿ ಖಾತೆಗಳಿಗೂ ಇವರು ಜ್ಯೇಷ್ಠ ಭ್ರಾತರೇ.

(4) ಸಮಾಚಾರ ವಾಹಕಗಳನ್ನೂ ಇತರ ಸುದ್ದಿಸಾಧನಗಳನ್ನೂ ತಮ್ಮ ಅಧೀನದಲ್ಲಿರಿಸಿಕೊಂಡಿರುತ್ತಾರೆ.

ಈ ಸ್ವಲ್ಪಜನಾಧಿಪತಿಗಳನ್ನು ಬೇರೆ ಬಗೆಯಲ್ಲೂ ಬಣ್ಣಿಸಬಹುದು. ಸ್ವಲ್ಪ ಜನದ ಹತೋಟಿಯಲ್ಲಿ ಸರಕಾರವಿದ್ದು, ಈ ಸ್ವಲ್ಪಜನಾಧಿಪತ್ಯದ ದಬ್ಬಾಳಿಕೆಯನ್ನು ಪ್ರಜಾಸಮಸ್ತವೂ ಸಹಿಸಿಕೊಳ್ಳಬೇಕಾಗಿದೆ.

ಪಾಶ್ಚಾತ್ಯ ಸ್ವಲ್ಪಜನಾಧಿಪತಿಗಳು "ಸ್ವತಂತ್ರ ಪ್ರಪಂಚ"ದ ಮೇಲೆ ಜಬರ್ ಮಾಡುವವರು. ಅಲ್ಲದೆ ಅವರು ವಾರಸುದಾರರಾಗಿ ಪಡೆದಿರುವ ಸೊತ್ತು, ವಿಶೇಷಾಧಿಕಾರ ಮತ್ತು ಪ್ರಭಾವ ಬಲಗಳ ದೊಡ್ಡ ಮೊತ್ತ ಅವರನ್ನು ಗತಕಾಲಕ್ಕೆ ಬಂಧಿಸಿ ಬಿಗಿದು ಕಟ್ಟಿರುತ್ತದೆ. ಹಾಗೆಯೇ ಇಂದಿನ ಮಧ್ಯಮ ತರಗತಿಯ ಸಾಮಾನ್ಯಾಭಿಪ್ರಾಯದ ಪ್ರಪಂಚ ಜನಕ್ಕೆ (bourgeois) ಬಳುವಳಿಯಾಗಿ ಸಾಗಿಬಂದ ಆರ್ಥಿಕ ವ್ಯವಸ್ಥೆಗೂ ಈ ಸ್ವಲ್ಪಜನಾಧಿಪತಿಗಳು ಬದ್ಧರಾಗಿರುತ್ತಾರೆ. ಈ ಇವರ ಪ್ರಪಂಚ ಸಾರವೆಲ್ಲ ನಾಲ್ಕು ಶಬ್ದಗಳಲ್ಲಿ ಅಡಗಿದೆ–(1) ಸೊತ್ತು, (2) ಸುಲಿಗೆ, (3) ವಿಶೇಷಾಧಿಕಾರ ಸಂಪನ್ನತೆ, (4) ಪ್ರಭಾವ ಬಲ. ಇಂಥ ಪ್ರಪಂಚವನ್ನು ಇಂದಿನ ವಿಶ್ವವ್ಯಾಪಿಯಾದ, ಕ್ರಾಂತಿಯ ಫಲವಾದ, ಪರಿವರ್ತನೆಯ ಅಪಾಯದಿಂದ ಕಾಪಾಡಿ, ಉಳಿಸಿ ಬಾಳಿಸುವ ಹೋರಾಟದ ಪರಿಣಾಮವೇ "ಶೀತಲ ಸಮರ".

ಪಶ್ಚಿಮದ ಸಾಮ್ರಾಜ್ಯನಿಷ್ಠ ಪ್ರಪಂಚದಲ್ಲಿ ಜನಸಮುದಾಯಗಳು,— ವೈಜ್ಞಾನಿಕ ಹಾಗೂ ತಾಂತ್ರಿಕ ಕ್ಷೇತ್ರಗಳು ಬರಮಾಡಿದ ಕ್ರಾಂತಿಸಂದರ್ಭಗಳ ಅವಶ್ಯವೂ, ಆಜ್ಞಾಪಕವೂ, ಈ ಹೊತ್ತಿಗೆ ಆಗಲೇ ಜಾರಿಗೆ ಬರಬೇಕಾಗಿದ್ದವೂ ಆದ–ಪರಿವರ್ತನೆಗಳನ್ನು ತಡೆಯುವ ಪ್ರವೃತ್ತಿಯುಳ್ಳವರಾಗಿ, ಗತಕಾಲಕ್ಕೆ ಬದ್ಧರಾಗಿರುವಂತೆ ವರ್ತಮಾನಕಾಲಕ್ಕೂ ಬದ್ಧರಾಗಿದ್ದಾರೆ. ಅಲ್ಲದೆ, ಇವರು ಒಟ್ಟಿನಲ್ಲಿ ಅಜ್ಞಾನಿಗಳು, ಮತ್ತು ಸಾಂಪ್ರತಸಂದರ್ಭವು ವಿಶ್ವವ್ಯಾಪಿ ಕ್ರಾಂತಿ ಆಗಲೇಬೇಕೆಂದು ಆಣತಿ ಕೊಟ್ಟಿರುವ ಪರಿವರ್ತನೆಗಳ ಬಗ್ಗೆ ಪೂರ್ವಗ್ರಹಪೀಡಿತರು. ಆಗಲೇಬೇಕಾದ ಮಾರ್ಪಾಟಿಗೂ ಮತ್ತು ಪಾಶ್ಚಾತ್ಯರಲ್ಲಿ ಬಹುಸಂಖ್ಯಾಕರು ಯಾವುದನ್ನು ಅನಿವಾರ್ಯವಾಗಿ ಎದುರಿಸಲೇಬೇಕಾಗಿದೆಯೋ ಆ ಪರಿವರ್ತನ ಸಂಭವಕ್ಕೂ ಭಯ ಪ್ರತಿಕ್ರಿಯೆಯನ್ನು ತೋರಿಸುವವರು. ಈ ಭಯಪ್ರತಿಕ್ರಿಯೆ ಹಾಗೂ ವಿರೋಧಗಳು ಪಶ್ಚಿಮ ಜಗಜ್ಜನದ ಮನೋರಂಗದಲ್ಲೂ ಭಾವರಂಗದಲ್ಲೂ ತೋರಿಕೊಂಡು, ಅವು ಪ್ರಕಟಪಡಿಸುತ್ತಿರುವ ಗೋಜುಗೊಂದಲಗಳೆಷ್ಟೆಂಬುವನ್ನು ನಮಗೆ ಸ್ಪಷ್ಟಪಡಿಸುತ್ತಿವೆ. ಈ ಅಸ್ತವ್ಯಸ್ತತೆಗೆ ಕಾರಣವೇನೆಂಬುದನ್ನು ತಿಳಿಯಲು ನಾವು ವಿಶೇಷ ಪ್ರಯತ್ನ ಮಾಡ

ಬೇಕಾಗುವುದಿಲ್ಲ. ಪಟ್ಟಭದ್ರ ಹಿತಗಳ "ಮೂಲೋತ್ಪಾಟನೆ"ಯನ್ನು ತಡೆಗಟ್ಟಲು ಶೀತಲ ಸಮರ ನಡಸುತ್ತಿರುವ ಚಟುವಟಿಕೆಗಳ ಕಠೋರಪರಿಣಾಮವೇ ಈ ಅಸ್ತವ್ಯಸ್ತತೆ. "ಮೂಲೋತ್ಪಾಟನೆ" ಎಂಬ ಮಾತು "ಪರಿವರ್ತನೆ" ಗೆ ಪರ್ಯಾಯ ಪದವಾಗಿ ಬಳಕೆಗೆ ಬರುತ್ತ, ಸ್ವಾರ್ಥಹಿತಾಸಕ್ತರನ್ನು ಪ್ರತೀಕಾರ ಪ್ರಯತ್ನಗಳಲ್ಲಿ ನಡಸುತ್ತಿದೆ.

ಪರಿವರ್ತನೆಗೆ ವಿರೋಧವಾಗಿ, ಆದರೆ ಅನುವರ್ತನೆಗೆ ಪ್ರೋತ್ಸಾಹಕವಾಗಿ, ಹೂಡಿದ ಶೀತಲಸಮರಕ್ಕೂ ಅದರ ಅಂಗವಾಗಿ ಸಂಘಟಿಸಿದ ಪ್ರಚಾರಯಂತ್ರಕ್ಕೂ ಜವಾಬ್ದಾರರಾದ ಪಶ್ಚಿಮರಾಷ್ಟ್ರಗಳು ಸೃಷ್ಟಿಸಿದ ಪರಿಸರವೆಂಥಾದ್ದು ? ಅಲ್ಲಿ ಸ್ವಾಭಾವಿಕವೆಂದು ತೋರುವ ನಡವಳಿಕೆ ಅಜ್ಞಾನ ಹಾಗೂ ಮಾನಸಿಕ ಅಸ್ತವ್ಯಸ್ತತೆ. ಮಾನಸಿಕ ವ್ಯಾಧಿಯೂ ಶುಭಜಿವನವೂ ಪರಸ್ಪರ ಪ್ರತಿಕಕ್ಷಿಗಳು. ಮಾನಸಿಕ ಅಸ್ತವ್ಯಸ್ತತೆಗೆ ಬಲಿಯಾದ ಮನುಷ್ಯವರ್ಗ ಶುಭಜೀವನ ನಡೆಸಲು ಅನರ್ಹರಾಗಿರುತ್ತಾರೆ. ಪಶ್ಚಿಮದಲ್ಲಿ ಇಂದು ಅಧಿಕೃತ ಪರಿವರ್ತನ ವಿರೋಧದ ವಾತಪ್ರಭಾವಕ್ಕೆ ಸಿಕ್ಕದೆ ಶುಭಜೀವನ ಯೋಗಕ್ಕೆ ಅಧಿಕಾರಿಗಳೂ ಅರ್ಹರೂ ಆಗಿರತಕ್ಕವರು ಅಲ್ಪಸಂಖ್ಯಾಕ ಜನ ಮಾತ್ರ.

ಬಹುಸಂಖ್ಯಾಕ ಜನರೇಕೆ ಹೀಗೆ ಗೋಜುಗೊಂದಲಗಳಲ್ಲಿ ಸಿಕ್ಕುತ್ತಾರೆ ? ಏಕೆಂದರೆ ಪ್ರಚಾರಯಂತ್ರತಂತ್ರಗಳ ಮೂಲಕ ಅವರ ಕಿವಿ ಕೇಳುವುದು ಆಗುಹೋಗಗಳ ಯಥಾರ್ಥ ಸಂಗತಿಗಳನ್ನಲ್ಲ. ತಪ್ಪುಸುದ್ದಿಗಳನ್ನು, ತಪ್ಪುವಿವರಗಳನ್ನು. ಈ ಅಪಪ್ರಚಾರದ ಯಂತ್ರತಂತ್ರಗಳು ಸ್ಥಳೀಯ ದರ್ಪಿಷ್ಠ ಸ್ವಲ್ಪಜನಾಧಿಪತ್ಯಗಳ ನಿರ್ದೇಶನದಲ್ಲಿ ನಡೆಯತಕ್ಕವು; ಈ ಯಂತ್ರತಂತ್ರಗಳ ಚಾಲಕರು ಈ ಸ್ವಲ್ಪಜನಾಧಿಪತ್ಯಕ್ಕೆ ಮೋಸ ಹೋದವರು; ಅದು ಒಡ್ಡಿದ ವಿತ್ತ ಪ್ರಲೋಭನಕ್ಕೆ ಬಾಗಿದ ಹಂಗಿಗರು.

ಈ ಪ್ರಚಾರ ಯಂತ್ರ ಜಾಲವು ಅಂತರ ರಾಷ್ಟ್ರೀಯ ಸಾಮ್ರಾಜ್ಯಶಾಹಿ ಪದ್ಧತಿಯೊಡನೆ ನಿಕಟಸಂಪರ್ಕವನ್ನು ಹೊಂದಿರುತ್ತದೆ. ಈ ಸಾಮ್ರಾಜ್ಯ ಪದ್ಧತಿಯ ಉದ್ದೇಶವಾದರೋ ಪ್ರಜೆಗೆ ಸಲ್ಲಬೇಕಾದ ಕ್ರಾಂತಿಯ ಸುದ್ದಿಗಳು ತಿರುಗುಮುರುಗಾಗಿ, ತಿರುಚುಮುರುಚಾಗಿ, ಅಪವ್ಯಾಖ್ಯಾನ ರಂಜಿತವಾಗಿ ಇರಬೇಕು; ಮುಖ್ಯ ಸಂಗತಿಗಳನ್ನು ಜನರಿಂದ ಮುಚ್ಚಿಡಬೇಕು. ಜನವರ್ಗದಲ್ಲೆಲ್ಲ ಕ್ರಾಂತಿ ಹರಡುತ್ತಿದ್ದರೂ ಅದರ ದಿಟವನ್ನು ಪ್ರಜೆ ಅರಿತುಕೊಳ್ಳಬಾರದ ಹದನಲ್ಲಿ ಪ್ರಚಾರಕಾರ್ಯವಾಗಬೇಕು. ಸಾರ್ವಜನಿಕ ನೀತಿಗೆ ಆಧಾರವಾಗಿರುವಂತೆ ಹೊರದೇಶಗಳಲ್ಲಿ ಅಧಿಕಾರಸ್ಥರು ಬಲಾತ್ಕಾರವಾಗಿ ಪ್ರಜೆಯ ಅಂತರಂಗಕ್ಕಿಳಿಸಲು ಗಿಡಿದ ಅಜ್ಞಾನವೂ ಪೂರ್ವಗ್ರಹವೂ ಬುದ್ಧಿಮಾರ್ಜನೆ" (ಮಿದುಳು ತೊಳೆಯುವುದು, **brain washing**) ಎಂಬ ನಾಮಧೇಯಕ್ಕೆ ಪಾತ್ರವಾಗುತ್ತವೆ. ಆದರೆ ತವರು ನಾಡುಗಳಲ್ಲಿ ಅದೇ ನಡವಳಿಕೆ ವಿಧಿಗೆ

ವಿಧೇಯತೆಯ ಸಲ್ಲಿಕೆ – ನಿಯಮಾಧೀನತೆ (conditioning) ಎನ್ನಿಸಿಕೊಳ್ಳುತ್ತದೆ. ಯಾರು 1917ರನಂತರ ಸೋವಿಯತ್ ಯೂನಿಯನ್ನಿನ ಬಗ್ಗೆ ಭಯದ್ವೇಷಗಳನ್ನೂ ಪೂರ್ವಗ್ರಹದೋಷವನ್ನೂ ಪ್ರಜಾಗಣದಲ್ಲಿ ಬಿತ್ತಲು, ವಾಸ್ತವಿಕ ಸಂಗತಿಗಳಿಗೆ ಕತ್ತಲ ಮುಸುಕಿಟ್ಟು ಮುಚ್ಚುಮರೆಮಾಡದೆ ಸುಳ್ಳುಸುದ್ದಿಗಳನ್ನು ಹರಡಿದರೋ ಅವರು 1950ರ ನಂತರ ಚೀಣದ ಬಗ್ಗೂ, 1959ರ ನಂತರ ಕ್ಯೂಬಾದೇಶದ ಬಗ್ಗೂ ಅದೇ ಕಪಟ ತಂತ್ರವಿಧಾನವನ್ನು ಬಳಸಿದರು. ಇಟಲಿಯ ಜನತೆ ಹೀಗೆ ಅಲ್ಲಿಯ ಫ್ಯಾಸಿಸ್ಟ್ ಸರ್ವಾಧಿಕಾರಿಗಳಿಂದ ತಪ್ಪುದಾರಿಗೆ ಸೆಳೆಯಲ್ಪಟ್ಟರು. ಜರ್ಮನಿಯಜನತೆ ನಾಜಿ ಸರ್ವಾಧಿಕಾರಿಗಳಿಂದ ತಪ್ಪುದಾರಿಗೆ ಸೆಳೆಯಲ್ಪಟ್ಟರು. ಇಂದು ಅಮೆರಿಕದ ಜನತೆಯ ಪಾಡೋ ಇದೇ ಆಗಿದೆ. ಯಂತ್ರೋದ್ಯಮಿಗಳೂ, ಸೇನಾಧಿಪತಿಗಳೂ, ಕೂಡಿ ಮಾಡಿಕೊಂಡ ಸ್ವಲ್ಪಜನಾಧಿಪತ್ಯಗಳು ಆರ್ಥಿಕವ್ಯವಸ್ಥೆಯನ್ನೂ ರಾಷ್ಟ್ರಪ್ರಭುತ್ವವನ್ನೂ ಸ್ವಾಧೀನ ಪಡಿಸಿಕೊಂಡು, ಸಾರ್ವಜನಿಕ ಸಮಾಚಾರ ಸಾಧನಗಳನ್ನು ತಮ್ಮ ಅಪಪ್ರಚಾರಕ್ಕೆ ಹೂಡಿ, ಪ್ರಜಾಗಣವನ್ನು ತಪ್ಪು ದಾರಿಗೆ ಸೆಳೆಯುತ್ತಿದ್ದಾರೆ.

ಪ್ರಚಾರಕ್ಕೆ ಅಣಿಮಾಡಿಕೊಂಡ ವೇದಿಕೆ ಎಂಥಾದ್ದೇ ಆದರೂ ಅಲ್ಲಿ ಮಾಡುವ ಪ್ರಚಾರಕ್ಕೆ ಇರಬೇಕಾದ ಪ್ರಥಮ ಧ್ಯೇಯವೆಂದರೆ – ಶುಭಜೀವನವು ಅಪೇಕ್ಷಿಸುವ ಅನುಕೂಲ ಸಂದರ್ಭಗಳೇನೆಂಬುದನ್ನು ಜನಕ್ಕೆ ತಿಳಿಯ ಹೇಳುವುದು. ಸ್ಥಳೀಯವಾಗಿಯೂ ಪ್ರಾದೇಶಿಕವಾಗಿಯೂ ರಾಷ್ಟ್ರೀಯವಾಗಿಯೂ ಅಂತರರಾಷ್ಟ್ರೀಯವಾಗಿಯೂ ಪ್ರಪಂಚವಾರ್ತೆಗಳಿಗೆ ಸಂಬಂಧಪಟ್ಟಂತೆ ಸಾಕಾದಷ್ಟು ನಂಬಿಕೆಗೆ ಅರ್ಹವಾದ, ಸತ್ಯಾಧಾರವುಳ್ಳ, ಸಾಂಪ್ರತಕ್ಷಣದ ವರೆಗಣ ( ಎಂದರೆ ತಹಲ್‌ವರೆಗಣ ) ಸಮಾಚಾರವನ್ನು ಪ್ರಜೆಗೆ ಕೊಡುವುದರಿಂದ ಮಾತ್ರ ಶುಭಜೀವನ ಸೌಧವನ್ನು ಕಟ್ಟಲು ಗಟ್ಟಿ ತಳಪಾಯವನ್ನು ಹಾಕಿಕೊಂಡಂತೆ ಆಗುತ್ತದೆ. ಹೀಗೆ ಸಮಾಚಾರವನ್ನು ತಿಳಿದು ವಿಚಾರಪರರಾದ ಪ್ರಜಾಗಣವು "ಆರೋಗ್ಯವಾಗಿದ್ದು", ಶುಭಜೀವನದ ಕಟ್ಟಡಕ್ಕೆ ಆಧಾರ ಸ್ತಂಭಗಳಾಗಿ ಅವನ್ನು ದೃಢಪಡಿಸಿಕೊಳ್ಳುತ್ತಾರೆ. ಈ ಜನ-ಮನಸ್ಸಿನ ಆರೋಗ್ಯವೇ ಶುಭಜೀವನದ ದ್ವಿತೀಯ ಧ್ಯೇಯ.

ಒಬ್ಬ ಮನುಷ್ಯನು ಆರೋಗ್ಯವಾಗಿದ್ದಾನೆ ಎಂಬ ಸ್ಥಿತಿಯನ್ನು ವಿವರಿಸುವ ಲಕ್ಷಣವಾಕ್ಯಗಳಲ್ಲಿ ಪ್ರಿಯವಾದದ್ದು ಇದು. ಶರೀರಾಂಗಗಳು ಸಾಮಾನ್ಯವಾಗಿ ಯಥಾಕ್ರಮದ ವ್ಯಾಪಾರ ಪಟುತೆ ಅಥವಾ. ಸಾಮರ್ಥ್ಯದಿಂದ ಕೆಲಸ ಮಾಡುತ್ತಿದ್ದರೆ ಅದು ಮನುಷ್ಯನು ಆರೋಗ್ಯವಾಗಿರುವುದನ್ನು ಸೂಚಿಸುತ್ತದೆ. ಈ ಲಕ್ಷಣವಾಕ್ಯದ ಪ್ರಕಾರ ಯಾವ ಮನುಷ್ಯನ ಶರೀರದಲ್ಲಿಯ ಬೇರೆ ಬೇರೆ ಅಂಗಗಳಲ್ಲಿ ಒಂದೋ ಎರಡೋ ಕನಿಷ್ಠಮಿತಿಯಷ್ಟು ಮಾತ್ರದ ಯಾತನೆ ಅನನುಕೂಲಗಳನ್ನು ಅನುಭವಿಸುತ್ತ ವ್ಯಾಪಾರದಲ್ಲಿರುತ್ತದೆಯೋ ಆಗ ಆ ಮನುಷ್ಯನು ಆರೋಗ್ಯಶಾಲಿ.

7033



ಇನ್ನೊಂದು ಲಕ್ಷಣವಾಕ್ಯ ಇದು: ಸಮತೂಕದ (ಸಮಕಟ್ಟಿನ) ಬಾಳ್ವೆಯೇ ಆರೋಗ್ಯ.

ಮನುಷ್ಯಜೀವಿ ಎಂದರೆ ವ್ಯಷ್ಟಿ, ಶರೀರಾಂಗಗಳ ಸಮಷ್ಟಿ ಜೀವದಶೆ. ಸಾಕಾರ ದೇಹಾದವಯವಗಳ ಹಾಗೂ ನಿರಾಕಾರ ಭಾವರಸಗಳ ಶಕ್ತಿಗಳು, ಮಾನಸಿಕ ಹಾಗೂ ಆಧ್ಯಾತ್ಮಿಕ ಶಕ್ತಿಗಳು, ಶರೀರದ ವಿವಿಧಾವಯಗಳ ನಡುವೆ ಇರುವ ಪರಸ್ಪರ ಸಂಬಂಧ —ಇವೆಲ್ಲ ಸೇರಿದ ಜೀವದೊಟ್ಟು. ಆದದ್ದರಿಂದ ಒಳ್ಳೆಯ ಆರೋಗ್ಯ ಎಂದಾಗ ಅದ ರಲ್ಲಿ ಸಾಕಾರ ದೇಹಾಂಗಗಳ ವ್ಯಾಪಾರದೊಡನೆ ನಿರಾಕಾರ ಭಾವರಸ ವ್ಯಾಪಾರ ಗಳು, ಮಾನಸಿಕ ಹಾಗೂ ಆಧ್ಯಾತ್ಮಿಕ ಸಮಭಾವ, ಪರಸ್ಪರ ಗತಿ ದಶೆಗಳ ನಿಯಂತ್ರಕ ಶಕ್ತಿ ಮತ್ತು ಸಮಸ್ತರದ ವ್ಯಾಪಾರ-ಈ ಎಲ್ಲ ಸೇರಿರುತ್ತದೆ. ಮನುಷ್ಯ ಜೀವಿಯ ಈ ನಾಲ್ಕು ಮುಖಗಳು ಸಹಜಸ್ಥಿತಿಯಲ್ಲಿ, ಯಥೋಚಿತ ಕ್ರಮದಲ್ಲಿ, ಪರಸ್ಪರಾಂಗ ಸಂಬಂಧಗಳನ್ನು ನಿರ್ವಾಹಮಾಡುತ್ತ ಸಮಕಟ್ಟಿನಲ್ಲಿ ನಡೆದು, ಪರಿಣಾಮ ಫಲವಾಗಿ ವಿವೇಕದಿಂದ ಆಯ್ದ ಸುಸಂಬದ್ಧವಾದ ಪೂರ್ವೋತ್ತರ ಕಾರ್ಯಕಲಾಪಗಳಲ್ಲಿ ಮನುಷ್ಯನು ಮಗ್ನನಾಗಿರುವುದನ್ನು ತೋರಿಸುತ್ತವೆ. ಮನುಷ್ಯ ವ್ಯಾಪಾರ ಹೀಗೆ ಸಾಗಿದಾಗ, ಅವನು ಒಳ್ಳೆಯ ಆರೋಗ್ಯದಲ್ಲಿರುತ್ತಾನೆ; ಸಮರ್ಪಕವಾಗಿ, ಲಾಭಪ್ರದ ವಾಗಿ ಪರಿಣತವಾಗುತ್ತ ಸಾರ್ಥಕಪಡುವ ಬದುಕನ್ನು ಬಾಳುತ್ತಾನೆ.

ದೈಹಿಕ ಆರೋಗ್ಯಕ್ಕೆ ಮುಖ್ಯವಾಗಿ ಬೇಕಾದವು—ಬಿಸಿಲು, ನಿರ್ಮಲವಾಗಿ ಬೀಸುವ ಹೊಸಗಾಳಿ, ಚೊಕ್ಕಟವಾದ ನೀರು, ಮತ್ತು ನಂಜು ಬೆರೆಯದೆಯೂ, ಸಂಸ್ಕರಣ ವಿಧಾನದಿಂದ ಭವಿಷ್ಯೋಪಯೋಗಕ್ಕೆ ಸಿದ್ಧಮಾಡಿ ಇರಿಸದೆ ಇರತಕ್ಕದ್ದೂ, ಜೀವತಳೆದ ಬೇಸಾಯದ ಮಣ್ಣಲ್ಲಿ ಬೆಳೆದದ್ದೂ ಆಗಿ, ಶರೀರಕ್ಕೆ ಪುಷ್ಟಿಕೊಡುವ ಸಮ ತೂಕದ ಆಹಾರಸೇವನೆ. ಪಾಶ್ಚಾತ್ಯ ಪಟ್ಟಣಗಳಲ್ಲಿ, ಅದರಲ್ಲೂ ಸಂಯುಕ್ತ ಅಮೆರಿಕದ ಪಟ್ಟಣಗಳಲ್ಲಿ, ಇಂಥ ಆಹಾರವು ವಾಸ್ತವವಾಗಿ ದುರ್ಲಭವಾದದ್ದರಿಂದ, ಯಾರು ಒಳ್ಳೆಯ ಜೀವನದ ಬಗ್ಗೆ ಸಲಹೆ ಸೂಚನೆಗಳನ್ನು ಮಾಡುವರೋ ಅವರು ಸಾಕಾ ದಷ್ಟು ಪುಷ್ಟಿಕೊಡುವ ಆಹಾರವಸ್ತುಗಳ ಸರಪರಾಜಿಗೋಸ್ಕರ ತಕ್ಕ ಸ್ವಂತದ ಏರ್ಪಾ ಟನ್ನು ಮಾಡಿಕೊಳ್ಳಬೇಕು; ಇಲ್ಲದೆಹೋದರೆ ಅವರೂ ಸೋದರಜನ ಸಮುದಾಯ ಗಳಂತೆ ಮಾನಸಿಕವಾಗಿಯೋ ದೈಹಿಕವಾಗಿಯೋ ರೋಗಕ್ಕೆ ವಶರಾಗಿ, ತತ್ಫಲವಾಗಿ ವೈಯಕ್ತಿಕ ಶುಭಜೀವನಯೋಗವಿಲ್ಲದೆ ಪಾಡುಪಡುತ್ತಾರೆ.

ರಾಗ-ರಸ-ಭಾವಾತ್ಮಕ ಆರೋಗ್ಯಕ್ಕೆ ಮುಖ್ಯವಾಗಿ ಆಗಬೇಕಾದದ್ದು- ಮನೋವಿಕಾರಗಳ ಅಭಿವ್ಯಕ್ತಿಗೆ ಯಥೋಚಿತವಾದ ಸಹಜ ಬಹಿರ್ದ್ವಾರಗಳನ್ನು ನಿಭಾಯಿಸಬೇಕು. ಅಸ್ತ್ಯರ್ಥಕ ಎಂದರೆ ರಚನಾತ್ಮಕ ಸಂತೋಷಪ್ರದಗಳಾದ ಭಾವ

ರಾಗ ಪ್ರವೃತ್ತಿಗಳು ಆದಿತಃ ಪ್ರಕಾಶನಯೋಗ್ಯಗಳೆಂದೂ ಸಾಸ್ತ್ಯರ್ಥಕ ಎಂದರೆ ಕಿಲುಬಿನಂತೆ ಕ್ರಮೇಣ ನಾಶಕಾರಿಗಳೂ ದುಃಖಪ್ರದಗಳೂ ಆದ ಪ್ರವೃತ್ತಿಗಳು ಪ್ರಕಾಶನ ಯೋಗ್ಯಗಳಲ್ಲವೆಂದೂ ಮನುಷ್ಯರು ವಿವೇಕದಿಂದ ನಿರ್ಣಯಕ್ಕೆ ಬರಬಲ್ಲವರಾಗಬೇಕು.

ಆಧ್ಯಾತ್ಮಿಕ ಆರೋಗ್ಯಕ್ಕೆ ಮುಖ್ಯವಾಗಿ ಆಗಬೇಕಾದದ್ದು— ಪ್ರತಿಭಾವಿಕಾಸ ಪ್ರಕಾಶನಗಳಿಗೆ, ಆಶೋತ್ತರಗಳ ಸಿದ್ಧಿಗೆ, ಪರಮಪ್ರೇಮ ಸಾಕ್ಷಾತ್ಕಾರಕ್ಕೆ, ಮನುಷ್ಯ ಸಾಮರ್ಥ್ಯಗಳನ್ನು ಸೃಜನಶೀಲವಾಗಿ ನಡಸುವುದಕ್ಕೆ, ತಕ್ಕ ಅವಶ್ಯವಾದ ಅವಕಾಶ. ಈ ಅವಕಾಶಗಳನ್ನು ಹಿಡಿದು ಮನುಷನು ವ್ಯಕ್ತಿಸಂಬಂಧವಾದ ಹಾಗೂ ಸಮಾಜ ಸಮಷ್ಟಿ ಸಂಬಂಧವಾದ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕುವುದೂ ಈ ಅವಕಾಶ ದಲ್ಲಿ ಸೇರಿರುತ್ತದೆ.

## ಒಳ್ಳೆಯ ವೈಯಕ್ತಿಕ ಜೀವನ

ಒಳ್ಳೆಯ ವೈಯಕ್ತಿಕ ಜೀವನವು ಸಹಜವ್ಯಾಪಾರ ನಡಸುವ ಶಾರೀರಿಕ, ಭಾವ-ರಾಗ-ರಸಾತ್ಮಕ, ಮಾನಸಿಕ, ಆಧ್ಯಾತ್ಮಿಕ ಶಕ್ತಿಗಳನ್ನು ಅವಲಂಬಿಸುತ್ತವೆ. ಜೊತೆ ಮನುಷ್ಯರ ಹಾಗೂ ಸಾಮಾಜಿಕ ಜೀವನಗಳ ನಡೆ ಪಾಡುಗಳಲ್ಲಿ ಪ್ರತ್ಯಕ್ಷವಾಗಿ ಸಹಭಾಗಿತೆಯ ಪಾತ್ರವನ್ನು ಅದು ಅಪೇಕ್ಷಿಸುತ್ತದೆ.

ಶರೀರಾಂಗಾಂಗ ವ್ಯಾಪಾರವೂ ಮತ್ತು ಸಹಭಾಗಿತೆಯ ಪಾತ್ರವೂ ತರ-ತಮ ವಿವೇಕ ನಿಷ್ಠವಾದ ಜೀವನ ಸೂತ್ರದ ಅವಲಂಬನೆಯಿಂದ ಪ್ರಯೋಗ ಪರೀಕ್ಷೆಗಳನ್ನು ಹಾದು ಉತ್ತಮಪಡಬೇಕಾಗುತ್ತದೆ. ಜೀವನವು ಸದಾ ಜಡವಾಗಿ ನಿಲ್ಲುವುದಿಲ್ಲ. ಚಟು ವಟಿಕೆ ಅದರ ಲಕ್ಷಣ. ಅದು ಬೆಳೆಯುತ್ತದೆ, ಬಲಿಯುತ್ತದೆ, ಅರಳುತ್ತದೆ, ಆಶೆಯನ್ನು ಕಟ್ಟಿಕೊಂಡು, ತನ್ನ ಇರುವುದರ ಅಂದಂದಿನ ಘಟ್ಟವನ್ನು ದಾಟಿ ಮುಂದೆ ಆಗುತ್ತದೆ, ಬಾಳುತ್ತದೆ. ಇಲ್ಲವೆ, ಒಡೆಯುತ್ತದೆ, ಅಳಿಯುತ್ತಹೋಗುತ್ತದೆ.

ಒಳ್ಳೆಯ ವೈಯಕ್ತಿಕ ಜೀವನದ ನಾಲ್ಕು ಮುಖ್ಯಘಟಕಗಳು ಹಾಗು ಮುಖಗಳು ಇವು; ಕಲಿಯುವುದು, ಕಟ್ಟುವುದು, ಹುಟ್ಟಿಸುವುದು, ಕಲೆಯುವುದು. ವ್ಯಕ್ತಿಮನುಷ್ಯನಲ್ಲಿ ಯಾವನು ಅನುಕೂಲಾವಕಾಶಗಳನ್ನು ಪಡೆದವನೋ ಮತ್ತು ಪ್ರತಿಕೂಲ ಕಾರಣಗಳಿದ್ದರೂ ಅವನ್ನು ಭೇದಿಸಿ,-ಕಲಿತು, ಕಟ್ಟಿ, ಹುಟ್ಟಿಸಿ, ಕಲೆಯ ಬಲ್ಲನೋ ಅವನು ತನ್ನ ಶೀಲವನ್ನು ಸಂವೃದ್ಧಿ ಮಾಡಿಕೊಳ್ಳುತ್ತಾನೆ. ಅಲ್ಲದೆ, ಅದೇ ಕಾಲಕ್ಕೆ ಸಮಾಜವು ಮುಂದಿನ ತಲೆಮಾರಿಗೆ ನೀಡಿ ಹರಡುವ ಅವಕಾಶಗಳನ್ನು ಅವನು ಸ್ವಪ್ರಯತ್ನದಿಂದ ಮತ್ತಷ್ಟು ವಿಸ್ತರಿಸುತ್ತಾನೆ; ಮತ್ತು ಅವನ ಒಳ್ಳೆಯ ಅಧ್ಯವಸಾಯ

ದಿಂದ, ನೈಸರ್ಗಿಕ ಪರಿಸರ ಉತ್ತಮಪಡುತ್ತದೆ. ನಿತ್ಯವರ್ಧನಾಯಮಾನವಾದ ವಿಶ್ವ ಪ್ರಪಂಚದ ಅಭಿವೃದ್ಧಿಗೂ ಪ್ರಗತಿಗೂ ಅವನಿಂದ ದೃಢವಾದ ದೊಡ್ಡ ಸಹಾಯ ಸಲ್ಲುತ್ತದೆ. ಹೀಗೆ ಜಿಜ್ಞಾಸ್ಯ ಸಂದರ್ಭದ ಸೂಕ್ಷ್ಮ ವಿಶ್ಲೇಷಣೆಯನ್ನು ಎಷ್ಟೇ ದೀರ್ಘವಾಗಿ, ಆಳವಾಗಿ, ಮಾಡಿದರೂ ಒಟ್ಟಿನಲ್ಲಿ, ಉಪಕಾರಕವಾದ ಲೋಕಸೇವೆಯೇ -ಲೋಕಸಂಗ್ರಹವೇ-ಮನುಷ್ಯನ ಒಳ್ಳೆಯ ವೈಯಕ್ತಿಕ ಜೀವನಕ್ಕಿರುವ ಒರೆಗಲ್ಲು.

## ಒಳ್ಳೆಯ ಸಾಮಾಜಿಕ ಜೀವನ

ವ್ಯಕ್ತಿಜೀವನ ಸಿದ್ಧಿಯಷ್ಟುಮಾತ್ರದಿಂದ ರ್‍ಯಾಡಿಕಲ್ ಪಂಥಿಯ ಧರ್ಮೇಂದ್ರಿಯಕ್ಕೆ ತೃಪ್ತಿಯಿಲ್ಲ. ಒಳ್ಳೆಯ ವ್ಯಕ್ತಿಜೀವನವು ಸರ್ವತೋಮುಖವಾದ ಶುಭಜೀವನದ ಒಂದು ಮುಖಮಾತ್ರ. ಅದಕ್ಕೆ ಇನ್ನೊಂದು ಪ್ರಭಾವಕಾರಿಯಾದ ಮುಖವುಂಟು. ಮನುಷ್ಯನ ಬಿಡಿಬಾಳಿಗಿಂತ ದೊಡ್ಡದೆನ್ನಿಸುವುದು, ಅವನ ಪರಿಣಾಮಕಾರಿ ದಕ್ಷ ಸಾಮಾಜಿಕ ಜೀವನ, ಅಥವಾ ವಿವಿಧ ಮನುಷ್ಯ ವ್ಯಕ್ತಿ ಸಮುದಾಯಗಳ ಜೀವನ ದೊಂದಿಗೆ ತನ್ನ ಜೀವನವನ್ನೂ ಹೊಂದಿಸಿ ನಡಸುವ ಸಮಷ್ಟಿ (ಒಟ್ಟು) ಜೀವನ. ರ್‍ಯಾಡಿಕಲ್ ಪಂಥದ ನಾವು ದಕ್ಷತೆ ಸಾಮರ್ಥ್ಯಗಳುಳ್ಳ ಸಾಮಾಜಿಕ ಜೀವನಕ್ಕೆ ನಮ್ಮನ್ನು ಅಣಿಮಾಡಿಕೊಂಡು, ರಾಷ್ಟ್ರಕ ಪ್ರಜೆಗಳಾಗಿ ಸಮಾಜದ ಸದಸ್ಯರಾದ ನಾವು ಬಾಳಲು ಒಂದು ಚೌಕಟ್ಟನ್ನು ನಮ್ಮ ಜೀವನ ವ್ಯಾಪಾರಕ್ಕೆ ಅಳವಡಿಸಿಕೊಂಡು ನಾವು ಒಬ್ಬೊಬ್ಬರೂ ಬದುಕುವ ಒಳ್ಳೆಯ ಬಿಡಿಬಾಳುಗಳಿಗೆ ನೆರವನ್ನೂ ಹುರುಪನ್ನೂ ತಂದುಕೊಳ್ಳುತ್ತೇವೆ.

ಮನುಷ್ಯನು ಗುಂಪಿನಲ್ಲಿ ಬಾಳುವ ಸಾಮಾಜಿಕ ಪ್ರಾಣಿ. ಅವನು ತನ್ನ ಬದುಕಿನಲ್ಲಿ ಒಂದು ಭಾಗವನ್ನು ತನ್ನ ಪಾಡಿಗೆ ತನಗೋಸ್ಕರ, ಸ್ವಾರ್ಥಕ್ಕೆ, ಬಾಳುತ್ತಾನೆ. ತನ್ನ ಬದುಕಿನಲ್ಲಿ ಬಹುಭಾಗವನ್ನು ಹೆರವರಿಗೋಸ್ಕರ, ಪರಾರ್ಥಕ್ಕೆ,-ಸ್ವಕುಟುಂಬ ದಿಂದ ಹಿಡಿದು ಜಗಜ್ಜನಸಮುದಾಯದ ವರೆಗೆ ಹರಡಿಕೊಂಡಿರುವ ಒಂದೋ ಹಲವೋ ಗುಂಪುಗಳಲ್ಲಿರುವ ಹೆರವರಿಗೋಸ್ಕರ ಪರಾರ್ಥವಾಗಿ ಬಾಳುತ್ತಾನೆ. ಚಿಕ್ಕಂದಿನ ವರ್ಷಗಳನ್ನು ತನ್ನ ಬಾಳಿಗೆ ಸಮಾಜವು ಅಳವಡಿಸುವ ಪರಿಸರದಲ್ಲಿ ಕಳೆದು ಬೆಳೆದವನು ವ್ಯಕ್ತಿಮನುಷ್ಯ. ಅವನಾಡುವ ನುಡಿ; ಅವನು ಗಳಿಸುವ ಕೈನಯ ಕಾರ್ಯಕೌಶಲಗಳು; ಒಂದೆಡೆಯಿಂದ ಇನ್ನೊಂದೆಡೆಗೆ ಅವನ ಚಲನವಲನಗಳು; ಭೌತ ಕಷ್ಟಕಾರ್ಪಣ್ಯಗಳನ್ನೂ ಸಾಮಾಜಿಕ ವಿಷಮಸನ್ನಿವೇಶಗಳನ್ನೂ, ಎದುರಿಸಿ ನಿಭಾಯಿಸಲು ಅವನು ಕಟ್ಟಿಕೊಳ್ಳುವ ರಕ್ಷಣೆ; ತನ್ನ ನಲಿವಿಗೆ ಅವನು ಏರ್ಪಡಿಸಿಕೊಳ್ಳುವ ಶಿಕ್ಷಣ; ವಿನೋದ ಕ್ರೀಡೆ ವ್ಯಾಯಾಮಗಳಿಂದ ಗಳಿಸುವ ಆರೋಗ್ಯ; ಸಂಪಾದಿಸುವ ಸ್ನೇಹ ಸಂಬಂಧ ಬಾಂಧವ್ಯಗಳು,-ಇವನ್ನೆಲ್ಲ ಬಿಡಿಬಿಡಿಯಾಗಿಯೋ ಇಡಿಯಿಡಿಯಾಗಿಯೋ ಅವನು

ಪಡೆಯುವುದು ತನ್ನ ವೈಯಕ್ತಿಕ ಪ್ರಯತ್ನಗಳ ಫಲವಾಗಿ ಅಲ್ಲ; ಇವೆಲ್ಲ ಅವನಿಗೆ ಬರುವುದು ಅವನು ಬಾಳುವ ಸಮಾಜದಲ್ಲಿ ಶೇಖರವಾದ ಸಂಸ್ಕೃತಿ ಭಂಡಾರದಿಂದ; ಸಾಂಪ್ರತ ಸಮಾಜದ ಸಾಮುದಾಯಿಕ ವರಮಾನದಿಂದ; ಮತ್ತು ಸಮುದಾಯದಲ್ಲಿ ಬಾಳುವ ಜೊತೆ ಮನುಷ್ಯರಲ್ಲಿ ತಾನೂ ಒಬ್ಬನೆಂದು ತಿಳಿದುಕೊಳ್ಳುವ ಅವನಿಗೆ ಅವರು ತಮ್ಮ ಸಾನ್ನಿಧ್ಯ ಸಹವಾಸಗಳಿಂದ ಕೊಡುವ ಪಾಲಾಗಿ ಇವೆಲ್ಲ ಸಮಾಜದಿಂದ ವ್ಯಕ್ತಿ ಮನುಷ್ಯನಿಗೆ ಸಲ್ಲುತ್ತವೆ. ಮನುಷ್ಯವ್ಯಕ್ತಿ ಸಾಮಾಜಿಕ ಸಮುದಾಯಗಳ ಒಂದು ಭಾಗವಾಗಿ ಬಾಳುವಾಗ ಪಡೆಯುವ ಅನುಕೂಲಗಳಲ್ಲಿ ಅವನು ಲೋಭಿಯಾಗಿ, ತನಗಾಗಿ, ತನ್ನೊಬ್ಬನ ಲೇಸನ್ನೇ ಚಿಂತಿಸುತ್ತ ಬಾಳುವ ಪ್ರವೃತ್ತಿಯುಳ್ಳವನಾದರೆ ಅವನಿಗೆ ಆ ಅನುಕೂಲಗಳಲ್ಲಿ ಶತಾಂಶವೂ ಲಭ್ಯವಾಗುವುದಿಲ್ಲ. ಒಂಟಿಜೀವನದಲ್ಲಿ ಸ್ವಪ್ರಯತ್ನದಿಂದ ಪಡೆಯಲಾರದ್ದನ್ನು ಕೂಟಜೀವನದಲ್ಲಿ (ಕೂಡುಬಾಳಿನಲ್ಲಿ) ಸಹಕರಿಸಿ ಬಾಳುವುದರಿಂದ ಅವನು ಪಡೆಯುತ್ತಾನೆ.

ಹೆರವರೊಡನೆ ಕಾಯಕದಲ್ಲಿ ಪಾಲ್ಗೊಳ್ಳುವಿಕೆಯ ಸಾರ್ಥಕತೆ, ಜೊತೆಮನುಷ್ಯ ರೊಡನೆ ವಿಶೇಷ ವಿಷಯ ಜ್ಞಾನಾರ್ಜನೆಯಿಂದ ಪಡೆಯುವ ಸಂತೋಷ, ಸಹಕಾರ ಸಂಯೋಜನೆಗಳಿಂದ ಸಮಸ್ತರಿಗೂ ಒದಗಿಬರುವ ಲಾಭ–ಇವಕ್ಕೆ ನಿದರ್ಶನಗಳನ್ನು ಸಮಾಜವೇ ನಮಗೆ ನಂಬಿಕೆ ಬರುವಂತೆ, ಒತ್ತಾಯದಿಂದ ಒದಗಿಸುತ್ತದೆ. ಆಧುನಿಕ ಉದ್ಯಮ ಶೀಲ ಜನಸಮುದಾಯದ ಸದಸ್ಯನಾಗಿ ವ್ಯಕ್ತಿಮನುಷ್ಯನು ತನ್ನ ಭಾಗಕ್ಕೆ ಪಡೆಯುವ ವರಮಾನ ಎಲ್ಲಿಂದ ಬರುತ್ತದೆ? ಸಮಾಜದೊಟ್ಟಿನ ಸ್ವತ್ತಾದ ವರಮಾನ ದಿಂದ; ಮತ್ತು ಬಹುರೂಪಗಳಲ್ಲಿ ಅವನಿಗೆ ಪಾಲು ಸಲ್ಲುತ್ತದೆ ಎಂಬುದೇ ಅವನ ಗಮನಕ್ಕೆ ಬರುವ ವಿಶ್ವಸನೀಯ ನಿದರ್ಶನ.

ಸಮಾಜದೊಟ್ಟಿನ ವರಮಾನಕ್ಕೆ ಬಹುರೂಪಗಳಿರುತ್ತವೆ. ಕುಟುಂಬ ಜೀವನದ ಸೌಕರ್ಯಗಳು, ಇತರ ಅನುಕೂಲ ಸೌಲಭ್ಯಗಳು, ಪ್ರಯೋಜನಾವಕಾಶಗಳು; ನೆರೆಹೊರೆಯ ನಂಟುಗಳು, ಪಟ್ಟಣ ನಗರ ಜಿಲ್ಲೆ ರಾಷ್ಟ್ರಗಳು ಕ್ರಮವಾಗಿ ಒದಗಿಸುವ ಜೀವನೋಪಯುಕ್ತ ಸಾಮಗ್ರಿಗಳು ಮತ್ತು ಸೇವೆಗಳು; ಶಿಕ್ಷಣ, ಆರೋಗ್ಯ; ಮಾರ್ಗ ಸೌಕರ್ಯ ಸಮಾಚಾರ ಸಾಧನ ಸಂಪತ್ತುಗಳು; ಗ್ರಂಥಾಲಯದಲ್ಲಿ ವ್ಯಾಸಂಗಾನು ಕೂಲಗಳು, ಪತ್ರಿಕಾರಂಗ ಕೊಡುವ ಬಹುಮುಖದ ಪ್ರಯೋಜನಗಳು. ಈ ಸಾಮಾಜಿಕ ಸೌಕರ್ಯಗಳು ಯುಗಾಂತರಗಳಿಂದ ಬೆಳೆಬೆಳೆದು ಸಾಗಿ ಬಂದವು; ಸಾಮಾಜಿಕ ಪರಿಸರವನ್ನು ವ್ಯಕ್ತಿಮನುಷ್ಯನ ನೆಮ್ಮದಿ ಬಾಳಿಗೋಸ್ಕರ ಕಟ್ಟಿಕೊಟ್ಟವು. ಇವನ್ನೆಲ್ಲ ಬಳಸಿಕೊಂಡು ಸಮಾಜ ಸದಸ್ಯರ ಬಗೆಬಗೆಯ ಅಗತ್ಯಗಳು, ಅಪೇಕ್ಷೆಗಳು, ಬಗೆಬಗೆಯ ಖಯಾಲಿಗಳು ಮನಃಕಲ್ಪನೆಗಳು ತಲೆಮೊರೆಯಿಂದ ತಲೆಮೊರೆಗೆ ಆಗಿ ಸಾಗುತ್ತ ಹೋಗುತ್ತಿರುತ್ತವೆ; ಈ ಸೌಕರ್ಯಗಳು ಪ್ರತಿಭಾವಿಕಾಸಕ್ಕೆ ಸಹಾಯ

ಚೋದನೆ ಕೊಟ್ಟು ಪೀಳಿಗೆಯಿಂದ ಪೀಳಿಗೆಯ ಪ್ರತಿಯೊಬ್ಬ ಮನುಷ್ಯ ವ್ಯಕ್ತಿಯಿಂದಲೂ ಭಕ್ತಿ ನಿಷ್ಠೆಗಳನ್ನು ಗೆದ್ದುಕೊಳ್ಳುತ್ತವೆ.

ಸಾಮಾಜಿಕ ಜೀವನದಲ್ಲಿ ಸೇರುವ ಇತರ ಅನುಕೂಲ ವಿವರಗಳು ಇವು: ಭೌಗೋಲಿಕ ಪ್ರದೇಶ ಸಂಬಂಧ, ಭಾಷೆ, ಭೋಜನ, ವಸನ, ವಸತಿ, ದಾಂಪತ್ಯ ಜೀವನಕ್ಕೆ ಹೆಣ್ಣು ಗಂಡುಗಳ ಅನ್ವೇಷಣೆ ವರಣಗಳು-ಇವೇ ಮುಂತಾದ ವಿಸ್ತಾರ ವೈವಿಧ್ಯಗಳಿಂದ ಕೂಡಿದ ಸಂಸ್ಕೃತಿ ಸಂಬಂಧಗಳು ತಲೆಮಾರಿಗೆ ತಲೆಮಾರನ್ನು ಪೋಣಿಸುವ ಸಂಟು ನೂಲುಗಳು, ಬಾಂಧವ್ಯದ ಸೂತ್ರಗಳು.

ಆಧುನಿಕ ಯಂತ್ರೋದ್ಯಮನಿಷ್ಠ ಸಮುದಾಯದಲ್ಲಿ ಜೀವನ ವ್ಯಾಪಾರ ಮುಖ್ಯವಾಗಿ ಸಾಮಾಜಿಕಸ್ವರೂಪದ್ದು, ಪ್ರಾಸಂಗಿಕವಾಗಿ ಮಾತ್ರ ವೈಯಕ್ತಿಕ ಸ್ವರೂಪದ್ದು. ಈ ಸಂಗತಿ ಎಳೆಯ ಮಕ್ಕಳು ಬಾಲಕರು ತರುಣರು ಪ್ರೌಢವಯಸ್ಕರು ಮತ್ತು ವೃದ್ಧರ ವಿಷಯದಲ್ಲಿ ವಾಸ್ತವವಾಗಿರುತ್ತವೆ. ವ್ಯಕ್ತಿಮನುಷ್ಯನು ಸ್ವಪ್ರಯತ್ನದಿಂದ ಆಗಿ ನಿಲ್ಲತಕ್ಕವನಲ್ಲ. ಸಾಮಾಜಿಕ ಪದ್ಧತಿಗಳು, ಸಾಮಾಜಿಕ ಚಟುವಟಿಕೆಗಳು, ಸಾಮಾಜಿಕ ಮನೋಧರ್ಮಗಳು ಅವನ ಸುತ್ತ ಕಾರ್ಯಮಾಡಿ, ಅವನ ವ್ಯಕ್ತಿವೈಶಿಷ್ಟ್ಯಕ್ಕೆ ಕಾರಣವಾಗುತ್ತವೆ. ಅವನ ವಿಚಾರಗತಿಯನ್ನು ನಿಯಂತ್ರಿಸಿ, ಅವನ ಆಚಾರವನ್ನು ನಿರ್ಣಯಿಸತಕ್ಕವು ಇವು.

ಇದೆಲ್ಲವನ್ನೂ ಹೇಳಿ ನಾನು ವ್ಯಕ್ತಿಮನುಷ್ಯನ ಮಟ್ಟವನ್ನು—ಸ್ಥಾನ ಮಹಿಮೆಯನ್ನು—ಇಳಿಸುತ್ತಿದ್ದೇನೆಂದು ಅಪಾರ್ಥವಾಗಬಾರದು. ತನ್ನ ಸ್ವಂತ ಜೀವನವನ್ನು ರೂಪಿಸಿಕೊಳ್ಳುವುದರಲ್ಲಿ ಅವನಿಗಿರುವ ವೈಯಕ್ತಿಕ ಪಾತ್ರ ವಿಶೇಷವನ್ನೂ ನಾನು ಕೀಳೆನ್ನುವುದಿಲ್ಲ. ಇಲ್ಲವೆ ಸಮಾಜದೊಟ್ಟಿನ ನೆಮ್ಮದಿಗೆ ಅವನಿಂದ ಸಲ್ಲುವ ಸಾಧ್ಯವಾದಷ್ಟುಮಟ್ಟಿನ ಕಾಣಿಕೆಯನ್ನು ತೃಣೀಕರಿಸುವುದೂ ನನ್ನ ಉದ್ದೇಶವಲ್ಲ. ನಾನು ಆಧುನಿಕ ವ್ಯಕ್ತಿಮನುಷ್ಯನನ್ನೂ ಆಧುನಿಕ ಜನಸಮುದಾಯವನ್ನೂ ಪರಸ್ಪರ ಸಂಬಂಧ ದೃಷ್ಟಿಯಿಂದ, (Perspective) ದೃಗ್‌ದೃಶ್ಯ ಸಂಬಂಧ ಕೋನದಿಂದ ನೋಡಿ ಅವರವರ ಸ್ಥಾನೌಚಿತ್ಯವನ್ನೂ ಸ್ಥಾನಮರ್ಯಾದೆಯನ್ನೂ ತಿಳಿದುಕೊಳ್ಳಲು ಪ್ರಯತ್ನಿಸುತ್ತಿದ್ದೇನೆ. ಸಮಾಜ ಸಮಷ್ಟಿಗೆ ತನ್ನ ಸದಸ್ಯರಾಗಿರುವ ವ್ಯಕ್ತಿಮನುಷ್ಯರ ಜೀವನವನ್ನು ರೂಪಿಸಿ, ನಿರ್ಣಯಿಸಿ ನಿರ್ದೇಶನ ನೀಡಲು ಇರುವ ಅತ್ಯಂತ ಮಹತ್ತ್ವದ ಪಾತ್ರವನ್ನು ಒತ್ತಿಹೇಳುವುದು ನನ್ನ ಉದ್ದೇಶ.

ನಮ್ಮ ಸಮಾಜ (ಎಂದರೆ ಪಾಶ್ಚಾತ್ಯ ನಾಗರಿಕತೆ) ಈಗ ಕ್ರಾಂತಿಕಾರಕ ಪರಿವರ್ತನ ಸರಣಿಯನ್ನು ಹಾಯುತ್ತಿದೆ. ಪ್ರಾಚೀನ ಸಂಸ್ಥೆಗಳೂ ಪದ್ಧತಿಗಳೂ ಮಾರ್ಪಾಟಿಗೊಳಪಡುತ್ತಿವೆ. ರೂಢಮೂಲವಾದ ಪದ್ಧತಿಯೆಂಬ "ಹೋಳಿಗೆ"

ಅಥವಾ "ರೊಟ್ಟಿ" ಇಂದು ಅನಾಮತ್ತಾಗಿ ಕೈಗೆ ಬರದೆ ಒಡೆದು ಚೂರುಪಾರಾಗಿ, ಬಳಕೆಗೆ ಒದಗುತ್ತಿದೆ. ಇಂದಿನ ಅಭಿರುಚಿಗೆ, ವಿಚಾರಕ್ಕೆ ಒಗ್ಗದ ಆ ಹಳೆಯ ಪದ್ಧತಿಯನ್ನು ತೊರೆದು, ಸ್ವೀಕಾರಕ್ಕೆ ಯೋಗ್ಯವಾದ ಆಲೋಚನೆ ಆಚರಣೆಗಳಿಗೆ ಅನ್ವಯಿಧಾನಗಳನ್ನು ಅನುಸರಿಸಲಾಗುತ್ತಿದೆ.

ಈ ಪರಿವರ್ತನೆಗಳು ನಮ್ಮ ಆರ್ಥಿಕ ವ್ಯವಸ್ಥೆಯಲ್ಲೂ, ನಮ್ಮ ರಾಜಕೀಯ ಸ್ನೇಹಸಂಬಂಧಗಳಲ್ಲೂ, ನಮ್ಮ ಪರಂಪರಾಗತ ಸಂಸ್ಕೃತಿ ಸಂಪತ್ತಿನಲ್ಲೂ ಆಗುತ್ತಿವೆ. ನಮ್ಮ ಸಮಾಜ ವ್ಯವಹಾರದಲ್ಲಿ ಸ್ವತಶ್ಚಲಿ ಯಂತ್ರಗಳು ಪ್ರಯೋಗವಾಗುತ್ತಿರುವು ದರಿಂದಲೂ; ನಮ್ಮ ರಾಜಕೀಯ ರಂಗಕ್ಕೆ ಸಂಯುಕ್ತರಾಷ್ಟ್ರಸಂಸ್ಥೆ (United Nations) ಪ್ರವೇಶಿಸಿರುವುದರಿಂದಲೂ; ಮೋಟರು, ಜನತಾಬಜಾರು, ಟೆಲಿವಿಷನ್ ಏರ್ಪಾಟುಗಳು ನಮ್ಮ ಸಂಸ್ಕತಿ – ನಾಗರಿಕ ಜೀವನಕ್ಕೆ ಸೇರಿಕೊಂಡಿರುವುದರಿಂದಲೂ ಈ ಮಾರ್ಪಾಟುಗಳು ಇಂದು ನಮ್ಮ ಅದ್ಯತನ ಜೀವನದ ಪ್ರತೀಕಗಳಾಗಿವೆ. 1940 ರಿಂದ ಈಚೆಗೆ ಹುಟ್ಟಿದ ತಲೆಮಾರು, – ಹಳೆಯ ಜೀವನವಿಧಾನಗಳನ್ನು ತಿದ್ದಿ ಕೊಂಡೋ ರದ್ದುಪಡಿಸಿಯೋ ಹೊಸವನ್ನು ಅಳವಡಿಸಿದ–ಈ ಹೊಸ ದೊಡ್ಡ ಮಾರ್ಪಾಟುಗಳನ್ನು ಕಂಡಿದೆ; ಅದರ ನಡೆಯಲ್ಲಿ ಪಾಲ್ಗೊಂಡಿವೆ.

ಕ್ರಾಂತಿಕಾರಕ ಪರಿವರ್ತನೆಗಳನ್ನು ಆಗಮಾಡಿಸುವ ಸನ್ನಿವೇಶಗಳಲ್ಲಿ ವ್ಯಕ್ತಿ ಮನುಷ್ಯರಿಗೆ ಒದಗುವ ಆಯ್ಕೆಗಳು – ವರಣ ಪ್ರಸಕ್ತಿಗಳು ಸಂಖ್ಯೆಯಲ್ಲಿ ಹೆಚ್ಚುತ್ತಿವೆ. ಹಳೆಯ ಸಮಾಜದ ಅಳಿದುಳಿದ ಉಳಿಕೆಗಳನ್ನು ಗುಡಿಸಿಹಾಕಿ, ನೂತನಾವಶ್ಯಕತೆ ಅಪೇಕ್ಷೆಗಳಿಗೆ ಹೊಂದುವ ಹೊಸಸಮಾಜದ ಜೀವನ ವಿಧಾನಗಳನ್ನು ಸಮಾರಂಭಗೊಳಿ ಸುವುದು ಈ ಆಯ್ಕೆಯಿಂದ ಆಗಬೇಕಾಗಿದೆ.

ಆಮೂಲಾಗ್ರ ಸುಧಾರಣಾವಾದಿ (ರ್‍ಯಾಡಿಕಲ್) ಆಗಿ ನಾನು ನಿಮ್ಮೆಲ್ಲರಿಗೆ ನೆರವಾಗಬಹುದಾದ ಸೂತ್ರವೊಂದನ್ನು ಸೂಚಿಸಲು ಬಯಸುತ್ತೇನೆ. ಈ ಸೂತ್ರವನ್ನು ಮೂರು ಭಾಗಗಳಲ್ಲಿ ವಿಂಗಡಿಸಿ ವಿಶದಪಡಿಸಬಹುದು.

ಹಳೆಯ ಸಂಸ್ಕೃತಿ ರೂಪಗಳನ್ನು ವಿಂಗಡಿಸಿ, ಸ್ವೀಕಾರಾರ್ಹವಾದದ್ದನ್ನು ಸ್ವೀಕರಿಸಿ, ಸದ್ಯಃಸ್ಥಿತಿಯಲ್ಲಿ – ಪ್ರಪಂಚದಲ್ಲಿ ಎಲ್ಲೆಲ್ಲಿ ಯಂತ್ರೋದ್ಯಮ ಸಂಧಾನವು ಪರಾಕಾಷ್ಠದಶೆಯಲ್ಲಿ ನಡೆಯುತ್ತಿದೆಯೋ ಅಲ್ಲಿಗೆಲ್ಲ ಹೊಂದುವ ಒಳ್ಳೆಯ ಸಾಮಾಜಿಕ ಜೀವನಕ್ರಮವನ್ನು ನಾವು ಸ್ಥಾಪಿಸಿಕೊಳ್ಳಬೇಕು.

## ಹಿತಾಹಿತಗಣನೆ

### ಭಾಗ ೧

ಎಲ್ಲ ಸಾಮಾಜಿಕ ಭಾವನೆಗಳು ಆಚರಣೆಗಳು ಮತ್ತು ಪದ್ಧತಿ ಸಂಸ್ಥೆಗಳ ಸಮೀಚೀನತೆಯ ಬಗ್ಗೆ ಒಂದು ನಿರ್ಧಾರಕ್ಕೆ ಬರುವುದಕ್ಕೆ ಮುಂಚೆ, ಅವುಗಳ ಸಂಪರ್ಕದಲ್ಲಿರುವ ಮನುಷ್ಯವರ್ಗಕ್ಕೆ ಅವುಗಳಿಂದ ಒದಗುವ ಅನುಕೂಲ ಅನನುಕೂಲಗಳೇನು, ಆಗುವ ಸುಖ ದುಃಖ ಗಳೇನು ಎಂಬುದು ಪರ್ಯಾಲೋಚನೆಗೆ ಬರಬೇಕು.

ಮನುಷ್ಯ ಸಮಾಜವು ಅದರ ಎಲ್ಲ ಗತಿದಶೆಗಳಲ್ಲೂ ಮನುಷ್ಯನಿಂದ ಮನುಷ್ಯನಿ ಗೋಸ್ಕರ ಆದದ್ದು. ಸಾಮಾಜಿಕ ರಂಗದಲ್ಲಿ ಕಾಣಬರುವ ಪರಿವರ್ತನೆಗಳು ನೂತನ ಸನ್ನಿವೇಶಗಳನ್ನು ಬೆಳಸಿ, ನೂತನಾವಶ್ಯಕತೆಗಳಿಗೆ ಜನ್ಮಕೊಡುತ್ತವೆ. ಸಮಾಜ ವಿರುವುದು ಕಷ್ಟ ಕಾರ್ಪಣ್ಯಗಳನ್ನು ಕಡಮೆ ಮಾಡುವುದಕ್ಕೆ, ಮತ್ತು ತನ್ನ ಸದಸ್ಯರಿಗೆ ಉತ್ಥಾನಾವಕಾಶಗಳನ್ನು ಕಲ್ಪಿಸುವುದಕ್ಕೆ. ಈ ಸನ್ನಿವೇಶಗಳನ್ನೂ ಆವಶ್ಯಕತೆ ಗಳನ್ನೂ ಸಾಮಾಜಿಕ ಪರಿವರ್ತನೆಗಳು ಮಾರ್ಪಡಿಸುತ್ತಿರುತ್ತವೆ. ಈ ಮಾರ್ಪಾಟಿಗೆ ತಕ್ಕಂತೆ ನಮ್ಮ ಭಾವನೆಗಳೂ ಆಚರಣೆಗಳೂ ಪದ್ಧತಿ ಸಂಸ್ಥೆಗಳೂ ಬದಲಾಯಿಸಲ್ಪಡ ಬೇಕು.

### ಭಾಗ ೨

ಜನವರ್ಗದಲ್ಲಿ ಬಹುಸಂಖ್ಯಾಕರಿಗೆ ಪರಮಾವಧಿಯ ಶುಭವನ್ನೂ ಅನುಕೂಲವನ್ನೂ ನೀಡಿ, ಅಲ್ಪಸಂಖ್ಯಾಕರಿಗೆ ಅನಿವಾರ್ಯವೆನ್ನಿಸುವ ಬಹುಸ್ವಲ್ಪ ಕೇಡನ್ನು (ಪ್ರತಿಕೂಲವನ್ನು) ಮಾಡುವ ರೀತಿಯಲ್ಲಿ ಸಮಾಜವನ್ನು ಸಂಘಟಿಸಿ ಆಡಳಿತ ನಡಸಬೇಕು.

ಕ್ರಾಂತಿಕಾಲದ ಸಂಕ್ಷೋಭೆ ಅವ್ಯವಸ್ಥೆಗಳ ಸಮಕ್ಷದಲ್ಲಿ, ಹಳೆಯ ಸಾಮಾಜಿಕ ವಿಧಾನವು ಸಂಕ್ರಮಣಕಾಲದಲ್ಲಿ ಮಾರ್ಪಡುತ್ತಿರುವಾಗ, ಒಂದಷ್ಟು ಲಾಭ ಬರು ವುದೂ ಒಂದಷ್ಟು ನಷ್ಟವಾಗಿ ಹೋಗುವುದೂ ಅನಿವಾರ್ಯ. ಹಾಗೆಯೇ ಖಾಸಗಿ ಸೊತ್ತುಗಳು ಒಡೆದು ಹಂಚಿ ಹೋಗುತ್ತವೆ; ಭೂಸ್ವಾಮಿಗಳಾದ ಶ್ರೀಮಂತರ ಜೀವನ ದಲ್ಲಿ ಬುಡಮೇಲಾಗುವ ಪಾಡು ನಡೆಯುತ್ತದೆ. ಆದರೆ ಅದೇ ಕಾಲದಲ್ಲಿ ಭೂಹೀನರ ಸ್ಥಿತಿಗತಿಗಳಲ್ಲಿ ಮೇಲ್ಪಾಡು ತಲೆದೋರುತ್ತದೆ. ಇಂಥ ಸಂದರ್ಭ – ಸನ್ನಿವೇಶಗಳಲ್ಲಿ ನಷ್ಟ ಸಂಭವವನ್ನು–ಅದರಲ್ಲೂ ಸೊತ್ತಿಗೆ ಆಗಬಹುದಾದ ನಷ್ಟವನ್ನು ತಪ್ಪಿಸಬೇಕು. ಏಕೆಂದರೆ ಸೊತ್ತೇ,–ಬೇಸಾಯದ ಭೂಮಿಯೇ,–ಅದರೊಡನೆ ಇರುವ ಕೃಷಿಯ

ಉಪಕರಣಗಳೇ, ಮುಂದೆಯೂ ಉಪಯೋಗಕ್ಕೆ ಬರುತ್ತವೆ. ಭೂ ಸುಧಾರಣೆಯ ಏರ್ಪಾಟು ಮುಗಿದಮೇಲೆ – ಹಿಂದೆ ಭೂವ್ಯವಸಾಯಕ್ಕೋಸ್ಕರ ರೂಢಿಗೆ ತಂದು ಕೊಂಡಿದ್ದ ಪದ್ಧತಿಯಲ್ಲಿ ಉಪಯೋಗವಾಗುತ್ತಿದ್ದದ್ದಕ್ಕಿಂತ ಹೆಚ್ಚು ಪರಿಮಾಣ ದಲ್ಲಿ ಇವು – ಭೂಮ್ಯುಪಕರಣಗಳು–ಉಪಯೋಗಕ್ಕೆ ಬರುತ್ತವೆ.

ಇದೇ ತತ್ತ್ವವು ವ್ಯಕ್ತಿಮನುಷ್ಯರ ಬಗ್ಗೂ ಅನ್ವಯಿಸುತ್ತದೆ. ಹಳೆಯ ಸಮಾಜ ದಲ್ಲಿ ವಿಶೇಷ ಸೌಕರ್ಯಗಳನ್ನು ಅನುಭವಿಸುತ್ತಿದ್ದ ಸ್ತ್ರೀಪುರುಷರು ನೂತನ ಸಮಾಜ ಸ್ಥಾಪನೆಯಾದಮೇಲೆ ಜನವರ್ಗಕ್ಕೆ ಇನ್ನೂ ವಿಶೇಷವಾಗಿ ಸೇವೆ ಸಲ್ಲಿಸುವಂತೆ ಮಾಡಲು ಅವಕಾಶಗಳನ್ನು ಕಲ್ಪಿಸುವ ಸಾಧ್ಯತೆಯುಂಟು. ಅವರ ಸಾಮರ್ಥ್ಯಗಳೂ ಕೌಶಲಗಳೂ ಯಾವ ಪದ್ಧತಿ ರೂಢಿಯಲ್ಲಿದ್ದರೂ ಆಸ್ತಿಯಂತೆ ಪರಿಗಣನೆಗೆ ಬರ ಬೇಕಾದವು; ಮತ್ತು ನೂತನ ಸಮಾಜಕ್ಕೆ ಅವುಗಳ ಪ್ರಯೋಜನ ಸಲ್ಲುತ್ತದೆ.

## ಭಾಗ ೩

> ಯಾವ ಪ್ರಭುತ್ವವು ಕಡಮೆಯಾಗಿ ಆಳಿಕೆ ನಡಸುತ್ತದೆಯೋ ಅದೇ ಉತ್ತಮ ಪ್ರಭುತ್ವ. ಈ ಬಗೆಯ ಅಧಿಕಾರ ಸಿದ್ಧಿಗೆ ಅದು ಪಾತ್ರ ವೆನ್ನಿಸಬೇಕಾದರೆ, ಸಾಮಾನ್ಯ ಜನವರ್ಗದ ಕಲ್ಯಾಣಕ್ಕೆ ಸಾಧಕವಾಗು ವಂತೆ ಅದು ಪರ್ಯಾಪ್ತ ಪ್ರಮಾಣದಲ್ಲಿ ಆಳಿಕೆ ನಡಸಬೇಕು.

ಒಂದಷ್ಟು ಅವಧಿಯ ಅನಿಶ್ಚಯತೆ, ಅಭದ್ರತೆ ಎಂಬಿವು ಪ್ರತಿಯೊಂದು ಸಾಮಾಜಿಕ ಕ್ರಾಂತಿ ಪರಿವರ್ತನೆಯನ್ನೂ ಹಿಂಬಾಲಿಸಿಕೊಂಡು ಬರುತ್ತವೆ. ಆಗ ಸ್ವಲ್ಪ ಕಾಲಾವಧಿಯವರೆಗಾದರೂ ಸಾಮಾಜಿಕವಾಗಿ ಕೆಲಮಟ್ಟಿನ ನಿಯಂತ್ರಣ ಗಳನ್ನು ಜಾರಿಗೆ ತರಬೇಕಾಗುತ್ತದೆ. ಈ ನಿಯಂತ್ರಣಗಳು ಅವುಗಳ ಮಟ್ಟಿಗೆ ದುರ್ಭರವಾದವು ನಿಜ; ಮತ್ತು ಆ ಕಾರಣದಿಂದ ಅವು ಜನರಲ್ಲಿ ತೀವ್ರಕೋಪವನ್ನು ಕೆರಳಿಸುತ್ತವೆ. ಆದರೆ, ತೀವ್ರಪರಿಸ್ಥಿತಿಯ ಕಾಲದಲ್ಲಿ ನಿಯಂತ್ರಣಗಳು ಪ್ರಾಣ ಹಾಗೂ ಶರೀರಾಂಗ ಸಂರಕ್ಷಣೆಗೂ, ವ್ಯಕ್ತಿಮನುಷ್ಯನ ಹಾಗೂ ಸಾಮಾಜಿಕ ವಿತ್ತ ಸೊತ್ತುಗಳ ಸಂರಕ್ಷಣೆಗೂ ತೀವ್ರ ಪರಿಸ್ಥಿತಿಯಿರುವಷ್ಟು ಅವಧಿಗೆ ಮಾತ್ರ ಅದನ್ನು ಪ್ರಯೋಗದಲ್ಲಿಡಬೇಕು. ಯಾವಾಗ ಸಮಾಜದಲ್ಲಿ ಮಾಮೂಲು ಸ್ಥಿತಿ ಹಿಂತಿರುಗುತ್ತ ದೆಯೋ ಆಗ ಸಾಮಾಜಿಕ ನಿಯಂತ್ರಣಗಳ ಬಿಗುಪನ್ನು ಸಡಲಿಸಬಹುದು. ಅವಕ್ಕೆ ಕಾರಣವಾಗಿದ್ದ ತೀವ್ರ ಪರಿಸ್ಥಿತಿ ಹಿಂಜರಿದಮೇಲೆ ಅವಕ್ಕಿನ್ನು ಕೆಲಸವಿಲ್ಲ. ಆಗ ಅವು ರದ್ದಾಗಬೇಕು. ಕ್ರಾಂತಿ ಪರಿವರ್ತನೆ ನಡೆಯುವ ಸಂಕ್ರಮಣ ಕಾಲದಲ್ಲಿ ಸಾಮಾಜಿಕರಲ್ಲಿ ಕಟ್ಟುನಿಟ್ಟಾದ ಶಿಸ್ತಿರುತ್ತದೆ. ವೈಯಕ್ತಿಕ ಸ್ವಾತಂತ್ರ್ಯ ಮೊಟಕಾಗಿ, ಸಾಮಾಜಿಕ ಪ್ರಜ್ಞೆ ಎಚ್ಚತ್ತು, ಹೊಣೆಯರಿತು ಮೂಡಿ ಬೆಳಗುತ್ತದೆ. ಶಿಸ್ತು

ಸಂಯಮಗಳಿಂದ ಸಂಕ್ರಮಣ (ಸಂಧಿ) ಕಾಲವನ್ನು ಬೇಗ ಹಾದು, ಸಮಾಜ ಮಾಮೂಲು ಸ್ಥಿತಿಗೆ ಮರಳುತ್ತದೆ.

ಸಾಮಾಜಿಕ ಸಂಬಂಧಗಳು ಎಲ್ಲ ಮನುಷ್ಯವರ್ಗಗಳಲ್ಲಿಯೂ ಪ್ರಮುಖ ಪಾತ್ರವಹಿಸುತ್ತವೆ. ಸಮಾಜದ ಸ್ಥಿತಿಗಳಲ್ಲಿ ಮಾರ್ಪಾಟು ಆಗುವಾಗ ಈ ಸಂಬಂಧ ಗಳನ್ನು ತಕ್ಕಂತೆ ಪರಿಷ್ಕರಿಸಿಕೊಂಡು ಪುನರ್ವ್ಯವಸ್ಥೆಗೆ ತಂದುಕೊಳ್ಳಬೇಕಾಗುತ್ತದೆ. ಸಮಾಜ ಜೀವನದ ಯಾವುದೇ ಮುಖವನ್ನು ಒಪ್ಪಿಕೊಳ್ಳಬೇಕಾದರೆ, ಇಲ್ಲವೆ ತಳ್ಳಿ ಹಾಕಬೇಕಾದರೆ ಅದಕ್ಕೊಂದು ಸಾರ್ವತ್ರಿಕ ಆಧಾರವಿರುತ್ತದೆ. ಸಮಾಜ ಕಲ್ಪನೆ ಆಗಿರುವುದು ಮನುಷ್ಯನಿಗೋಸ್ಕರ: ಸಮಾಜಕ್ಕೋಸ್ಕರ ಆದವನು ಮನುಷ್ಯನಲ್ಲ. ಸಮುದಾಯ ಜೀವನಕ್ಕೆ ಯಶಸ್ಸು ಲಭಿಸಬೇಕಾದರೆ ಜನಪೊಟ್ಟಿನ ಕಲ್ಯಾಣ ಪ್ರಯತ್ನವು ಊರ್ಜಿತವಾಗಿದ್ದು ಅದನ್ನು ಬಲಪಡಿಸುತ್ತಿರುವುದು ಆವಶ್ಯಕ.

## ಪ್ರಪಂಚ ಕ್ಷೇಮದೃಷ್ಟಿಯ ವಿಶ್ವಪ್ರಜಾಗಣದ ಸಾರ್ವತ್ರಿಕ ಶುಭಜೀವನ

ವೈಯಕ್ತಿಕ ಶುಭಜೀವನಕ್ಕೆ ಸಮಾಂತರದಲ್ಲಿ ಇರತಕ್ಕದ್ದು ಸಾರ್ವಲೌಕಿಕ ಶುಭಜೀವನ—ವಿಶ್ವ ಪ್ರಪಂಚದ ಕ್ಷೇಮ ದೃಷ್ಟಿಯ ಸಾರ್ವತ್ರಿಕ ಜೀವನ. ಮನುಷ್ಯ ಸೊಬ್ಬನು ಮಾತ್ರ ಭೂಗ್ರಹದಲ್ಲಿರತಕ್ಕ ವಸ್ತುವಲ್ಲ. ಭೂಗ್ರಹವೊಂದು ಮಾತ್ರ ಸೌರವ್ಯೂಹವೆನ್ನಿಸುವುದಿಲ್ಲ. ನಮ್ಮ ಪ್ರಪಂಚ ದ್ವೀಪವೊಂದು ಮಾತ್ರ ಇಡಿಯ ವಿಶ್ವಸೃಷ್ಟಿ ಎಂದುಕೊಳ್ಳುವಂತಿಲ್ಲ. ಆದದ್ದರಿಂದ ಮನುಷ್ಯನು ಸ್ವಂತ ಜೀವನದೊಡನೆ ಪ್ರಪಂಚದಲ್ಲಿರುವ ತನ್ನ ಜೊತೆಯ ಇತರ ಪ್ರಾಣಿಸಮುದಾಯದೊಡನೆ ಬದುಕ ಬೇಕು.

ರ್ಯಾಡಿಕಲ್ ಪಂಥದವನಾಗಿ ನಾನು ಜೀವನವನ್ನು ಕುರಿತು ಎರಡು ಭಾವನೆ ಗಳ ಆಧಾರದಿಂದ ವಿಚಾರ ಮಾಡುತ್ತೇನೆ. ಮೊದಲನೆಯದು, ಜೀವನವು ಸಾರ್ವತ್ರಿಕ ವಾದದ್ದು ಎಂಬ ಭಾವನೆ. ಎರಡನೆಯದು ಮನುಷ್ಯನು ನ್ಯಾಸನಿಧಿ ಪಾಲಕನಂತೆ (ಟ್ರಸ್ಟಿ – Trustee), ಧರ್ಮದರ್ಶಿಯಂತೆ ಪೃಥ್ವೀಸಂಪತ್ತನ್ನು ನೋಡಿಕೊಳ್ಳ ಬೇಕಾದವನು ಎಂಬ ಭಾವನೆ. ತಾನು ಬದುಕಿ ಬಾಳುವ ವಿಶ್ವಜಗತ್ತಿನಲ್ಲಿ ಇತರ ಪ್ರಾಣಿ ಸಮೂಹಗಳೂ ಇವೆ. ಜಗತ್ತಿನ ಮೂಲೆಮೂಲೆಯಲ್ಲೂ ಇರುವ ಈ ವಿವಿಧ ಜಾತಿಯ ಪ್ರಾಣಿಗಳ ಯೋಗಕ್ಷೇಮ ಅವನ ಪಾಲಿಗೆ ಬಂದ ಹೊಣೆ.

ಜೀವನದ ಸಾರ್ವತ್ರಿಕತೆಯನ್ನು ಕುರಿತ ನನ್ನ ಪೂರ್ವಭಾವನೆ ಭೂಗ್ರಹ ದಲ್ಲಿರುವ ಜಲ ಸಾರ್ವತ್ರಿಕತೆಗೂ ಅದಕ್ಕೆ ಸಮಾಂತರದಲ್ಲಿರುವ ವಿದ್ಯುತ್ ಸಾರ್ವತ್ರಿ

ಕತೆಗೂ ಅನ್ವಯಿಸತಕ್ಕದ್ದು. ಜಲವು ಪೃಥ್ವಿಯಲ್ಲಿದೆ, ಹಬೆಯಲ್ಲಿದೆ, ಕಣಗಳಲ್ಲಿವೆ, ನದಿಗಳಲ್ಲಿವೆ, ಚಿಲುಮೆಗಳಲ್ಲಿದೆ, ವಿಧವಿಧವಾದ ಪ್ರವಾಹಗಳಲ್ಲಿದೆ, ಕೊಳ ಕಾಸಾರ ಸರೋವರ ಸಮುದ್ರಗಳಲ್ಲಿವೆ. ಜಲದಲ್ಲಿ ಸೇರಿರುವ ರಾಸಾಯನಿಕ ಘಟಕ ಸಾಮಗ್ರಿಗಳಲ್ಲಿ ಭಿನ್ನಭಿನ್ನ ಗುಣಗಳಿದ್ದರೂ ನೀರಿಗೆಲ್ಲ ಸಮಾನವಾದ ಒಂದು ಗುಣವಿದೆ. ನೀರಿನ ಒಂದೊಂದು ಭಾಗವೂ ಬೇರೆಕಡೆ ಇರುವ ಇನ್ನೊಂದು ಭಾಗದೊಡನೆ ಬೆರೆತು ಎಲ್ಲ ನೀರೇ ಆಗುತ್ತದೆ. ಹಾಗೆಯೇ ವಿದ್ಯುಚ್ಛಕ್ತಿಯೂ ಅನೇಕಮುಖವಾಗಿ ವ್ಯಾಪಾರ ಮಾಡುತ್ತದೆ. ಸಸ್ಯಗಳಲ್ಲೂ ಪ್ರಾಣಿಗಳಲ್ಲೂ ಹರಿಯುವ ಹರಿವುಗಳಲ್ಲೂ ಅದು ಇರುವಂತೆಯೆ ಗುಡುಗು ಬಿರುಗಾಳಿಗಳಲ್ಲಿ ಸಾಂದ್ರವಾಗಿ ಅದು ಇರುತ್ತದೆ. ವಿದ್ಯುತ್ತನ್ನು ಕುರಿತ ನನ್ನ ಪೂರ್ವಭಾವನೆಯ ಆಧಾರದಂತೆ ಎಲ್ಲ ವಿದ್ಯುಚ್ಛಕ್ತಿಯೂ ಅದರ ವಿವಿಧ ರೂಪಗಳಲ್ಲಿ ಒಂದು ಸಮಾನವಾದ ಕೊಳಕ್ಕೋ ಒಡಲಿಗೋ ಹರಿದು ಸೇರುತ್ತದೆ–ಭೂಮಿಯ ಮೇಲಣ ಎಲ್ಲ ನೀರೂ ಕಡಲಿಗೆ ಹರಿದು ಒಂದಾಗಿ ಬೆರೆಯುವಂತೆ.

ಹೀಗೆ ನೀರು ಅದರ ವಿವಿಧರೂಪಗಳಲ್ಲಿ ಸಾರ್ವತ್ರಿಕ ಮತ್ತು ವಿದ್ಯುಚ್ಛಕ್ತಿ ಅದರ ವಿವಿಧ ರೂಪಗಳಲ್ಲಿ ಸಾರ್ವತ್ರಿಕ. ಹಾಗೆಯೇ ಜೀವನವು–ಪ್ರಾಣವು–ಇನ್ನೊಂದು ಮಟ್ಟದಲ್ಲಿ ಪ್ರಕಟವಾಗುತ್ತ, ಸಾರ್ವತ್ರಿಕ ಜೀವ ಸಂಪನ್ಮೂಲದಿಂದ ಮೂಡಿ, ಅನೇಕ ರೂಪಗಳಲ್ಲಿ ಪ್ರಕಾಶಕ್ಕೆ ಬಂದು, ಸಮಾನವಾದ ಸಮಷ್ಟಿಯಲ್ಲಿಯ ಒಂದು ಭಾಗ ಮಾತ್ರವಾದ ವ್ಯಷ್ಟಿಯಲ್ಲಿ ಕಾಣಬರುತ್ತದೆ. ಈ ಒಂದು ವ್ಯಷ್ಟಿಯೊಳಗಣ ಜೀವನವೂ ಸಾರ್ವತ್ರಿಕವೆನ್ನಿಸುತ್ತದೆ.

ಪ್ರಾಣದ ವಿವಿಧ ರೂಪಗಳಿಗೆ ಭೂಗ್ರಹ ಆಶ್ರಯ ಕೊಟ್ಟಿದೆ. ನೀರಿನಲ್ಲಿ, ನೆಲದ ಮೇಲೆ, ನೆಲದ ಪದರದೊಳಗಡೆ, ಗಾಳಿಯಲ್ಲಿ ಕೂಡ ವಿವಿಧ ಜೀವರಾಶಿಗಳು ಬಾಳುತ್ತ ಇವೆ. ಕುಟುಂಬಗಳು, ಬಣಗಳು, ಮತ್ತು ವಿವಿಧ ಮತ್ಸ್ಯಜಾತಿಗಳು, ಕ್ರಿಮಿಜಾತಿಗಳು; ಪಕ್ಷಿಸಂಕುಲಗಳು—ಲಕ್ಷೋಪಲಕ್ಷ ಸಂಖ್ಯೆಯಲ್ಲಿ ವಿಹಂಗಮಗಳಾಗಿ ಗಾಳಿಯ ಆಸರೆ ಪಡೆದಿವೆ. ನೆಲದ ಮೇಲೆ ತಂಗಿ ಬಾನ್ಗೇರಿ ಹಾರುವ ಜೊತೆಪ್ರಾಣಿಗಳಾದ ಇವುಗಳಲ್ಲದೆ, ಭೂಗ್ರಹ ಜೀವನವನ್ನು ಕಟ್ಟುತ್ತ ಕಾಪಾಡುತ್ತ ಕೆಡವುತ್ತ ಹಾಳು ಮಾಡುತ್ತ ಇರುವ ಸೂಕ್ಷ್ಮಾತಿಸೂಕ್ಷ್ಮ ಅಣುರೇಣುರೂಪದ ಜೀವರಾಶಿಗಳು ಅಪಾರ ಸಂಖ್ಯೆಯಲ್ಲಿ ಮನುಷ್ಯನೊಡನೆ ಜೊತೆ ಬಾಳ್ವೆ ನಡಸುತ್ತಿವೆ.

ನಾವು ಕುಟುಂಬಗಳಲ್ಲಿ ಪಳಗಿದ ಪ್ರಾಣಿಗಳನ್ನು ನಿತ್ಯ ನೋಡುತ್ತೇವೆ. ಪಳಗದೆ ಸ್ವೇಚ್ಛೆಯಿಂದಿರುವ ಕಾಡು ಮೃಗಗಳನ್ನೂ ಆಗಾಗ ನೋಡುತ್ತೇವೆ–ಅದೂ ನಮ್ಮ ವಾತಾವರಣ ಪರಿಸರದಲ್ಲಿ ಬಾಳುತ್ತಿರುವ ವನ್ಯಮೃಗಗಳನ್ನು ಮಾತ್ರ. ನಮ್ಮ ಜೊತೆಗಿರುವ ಅನೇಕ ಪ್ರಾಣಿಗಳು ನಮ್ಮ ನಿಕಟ ಸಂಪರ್ಕಕ್ಕೆ ಬರುವುದೇ ಇಲ್ಲ; ಬಂದರೂ

ಬಹು ಅಪರೂಪವಾಗಿ ಬರುತ್ತವೆ. ನಾವು ಈ ಬಗ್ಗೆ ವಿಶೇಷ ಜ್ಞಾನಾರ್ಥಿಗಳಾಗಿ, ಕುತೂಹಲಿಸಿದ ವಿದ್ಯಾರ್ಥಿಗಳಾಗಿ, ಪ್ರವಾಸ ಹೊರಟಲ್ಲದೆ, ಇಂಥ ಪ್ರಾಣಿಗಳ ಅಸ್ತಿತ್ವವೇ ನಮ್ಮ ಗಮನಕ್ಕೆ ಬರುವುದಿಲ್ಲ.

ಕಸಬುದಾರಿ ಅಥವಾ ಹವ್ಯಾಸೀ ಸಸ್ಯವಿಜ್ಞಾನಿಗಳ ಗಮನಕ್ಕೂ ಪ್ರಾಣಿ ವಿಜ್ಞಾನಿಗಳ ಗಮನಕ್ಕೂ ಬಂದಿರುವ ಸಸ್ಯ-ಪ್ರಾಣಿವರ್ಗದ ಜೀವರೂಪಗಳನ್ನು ಬಿಟ್ಟರೆ, ನಮ್ಮ ಪರಿಚಯಕ್ಕೆ ಇನ್ನೂ ಬಾರದ ಪ್ರಾಣಿವಿಶೇಷಗಳು ಸಸ್ಯಪ್ರಪಂಚ ದಲ್ಲಿ ಬೇಕಾದಷ್ಟು ಇರುತ್ತವೆ: ನೀರಿನಲ್ಲಿ ಬೆಳೆಯುವ ಸಸ್ಯಜಾತಿಗಳು, ನೆಲದ ಮೇಲೆ ಬೆಳೆಯುವವು, ಅಪರೂಪವಾಗಿ ಗಾಳಿಯಲ್ಲಿದ್ದುಕೊಂಡೇ ಬೆಳೆಯುತ್ತಿರುವವು. ಕೋಶ ಮಯವಾದ ಜೀವಕಣಗಳಿಂದ ಹಿಡಿದು ಬಗೆಬಗೆಯ ತೃಣಗಳವರೆಗೆ ಊರುಗಳಲ್ಲಿ ಬಗೆ ಬಗೆಯ ಮೂಲಿಕೆಪೊದೆಗಳಾಗಿ ಬೆಳೆದೋ, ಕಾಡುಗಳಲ್ಲಿ ಬಗೆಬಗೆಯ ದೈತ್ಯದಾರು ಗಳಾಗಿ ಬೆಳೆದೋ ಸಸ್ಯಪ್ರಪಂಚವು ವಿಸ್ತಾರವಾಗಿರುತ್ತದೆ.

ಈ ಪ್ರಾಣರೂಪಗಳಲ್ಲಿ ಒಂದೊಂದಕ್ಕೂ ನೆಲೆಯುಂಟು; ಅದದಕ್ಕೆ ಜಗದ್ವ್ಯಾಪಾ ರದಲ್ಲಿ ಪಾತ್ರವುಂಟು. ಈ ಪಾತ್ರ ನಿರ್ವಹಣದಿಂದ ಜಗಜ್ಜೀವನವೆಂಬ ಮಹಾ ಸಾಂಗ ತ್ಯದ ಸುಸ್ವರಮೈತ್ರಿಯುಳ್ಳ ಉತ್ಸವ ಸಂಗೀತ ಕೇಳಬರುತ್ತದೆ. ಪೃಥ್ವೀಗೋಲದ ಲ್ಲಿರುವ ಅನೇಕ ನಿವಾಸಿಗಳು,-ಮೊತ್ತಮೊದಲಿಗೆ ಮನುಷ್ಯನು ಅವನ ಇಂದಿನ ಸ್ಥಾನ ಮಾನಗಳಲ್ಲಿ ಕಾಣಿಸಿಕೊಳ್ಳುವುದಕ್ಕೆ ಮುಂಚಿನಿಂದ,-ಇದ್ದವು, ಇನ್ನೂ ಇದ್ದು ಕೊಂಡಿವೆ. ಪ್ರಾಯಶಃ ನೆಲದ ಮೇಲಿಂದ ಮನುಷ್ಯ ಪ್ರಾಣಿ ಮೈದೆಗೆದು ಕಣ್ಮರೆಯಾದ ಮೇಲೂ ಈ ಪ್ರಾಣಿಜಾತಿಗಳು ಇದ್ದುಕೊಂಡಿರುತ್ತವೆ. ಮನುಷ್ಯನಿಗೆ ಅವನ ಭೂ ವಸತಿಯ ಅವಧಿಯಲ್ಲಿ ಹೊಣೆಯಾಗಿ ಬಂದ ನ್ಯಾಸವಸ್ತುಸಂರಕ್ಷಣ ಕರ್ತವ್ಯ (Trusteeship) ತನ್ನ ಸಂಪರ್ಕಕ್ಕೆ ತಂದು ಕೊಳ್ಳಲು ಅವನು ಬಯಸುವ, ತನ್ನಂತೆ ಅನೇಕ ಭೂನಿವಾಸಿಗಳಾದ, ವಿವಿಧ ಪ್ರಾಣಿಜಾತಿಗಳ ಯೋಗಕ್ಷೇಮವನ್ನು ಕುರಿತು ಇರುತ್ತದೆ.

ಪಾಪಭೀರುವೂ ನ್ಯಾಯನಿಷ್ಠನೂ ಆದ ನ್ಯಾಸನಿಧಿಪಾಲಕನು -ಧರ್ಮದರ್ಶಿ- (Trustee) ಆಗಿ ತನ್ನ ರಕ್ಷಣೆಗೆ ಬಂದ ವಿವಿಧ ಜೀವನವನ್ನು ಸಮೃದ್ಧಗೊಳಿಸುವ, ಸುಂದರಗೊಳಿಸುವ, ಘನತೆಗೆತ್ತುವ ಕಾರ್ಯದಲ್ಲಿ ತನ್ನೆಲ್ಲ ಸಾಮರ್ಥ್ಯವನ್ನೂ ಬಳಸ ಬೇಕಾದವನು ಮನುಷ್ಯ. ಉದ್ದೇಶಪೂರ್ವಕವಾದ ಜೀವನಾಶವೆಂಬುದು ಯಾವ ರೂಪ ದಲ್ಲೇ ನಡೆದರೂ ಅದು ಜಗತ್ತಿನ ಸಂಪದ್ವಿನಾಶವಾಗುತ್ತದೆ. ಪಾಪಕಾರ್ಯವಾಗುತ್ತದೆ. ಪ್ರಾಣರಕ್ಷಣೆ, ಪ್ರಾಣಾಭಿವೃದ್ಧಿ ಪ್ರಯತ್ನ, ಪ್ರಾಣವನ್ನು ಉದಾತ್ತೀಕರಿಸುವ ಕಾಯಕ—ಇವು ಹೊಣೆಯರಿತ ಧರ್ಮದರ್ಶಿಗಳಿಗೆ ಇರುವ ಕರ್ತವ್ಯಕರ್ಮ.

ಆಹಾರಕ್ಕೋಸ್ಕರ ಪ್ರಾಣಿಹತ್ಯೆಮಾಡುವುದು ತುಂಬ ನೋವುತರುವ ಸಂದರ್ಭ. ಎಲ್ಲಿ ಬಹು ಜಟಿಲವಾದ ಪ್ರಾಣಿವಿಶೇಷಗಳು ತಮ್ಮ ಬದುಕಿಗಾಗಿ ಪುಷ್ಟಿಯನ್ನು ಕೊಡುವ ಜೀವಸಾಮಗ್ರಿಗಳಲ್ಲಿ ಭಾಗಾಂಶವನ್ನಾದರೂ – ಪದ್ಧತಿಯಂತೆ ಸರಳ ರೂಪದ ಪ್ರಾಣಿಗಳ ಭಕ್ಷಣದಿಂದ ಪಡೆಯುತ್ತವೆಯೋ ಅಲ್ಲಿ ಪ್ರಾಣಿಹತ್ಯೆಗೆ ಅಪ್ಪಣೆ ಕೊಡಬಹುದು. ಆದರೆ ಅಧಿಕಾರ ಪ್ರದರ್ಶನಕ್ಕಾಗಿ ಕೊಲ್ಲುವುದು ಹೇಗೆ ಅಂಗೀಕಾರಕ್ಕೆ ಅರ್ಹವಲ್ಲವೋ ಹಾಗೆಯೇ ವಿನೋದಕ್ಕಾಗಿ, ಕ್ರೀಡೆಗಾಗಿ, ಕೊಲ್ಲುವುದೂ ಅಂಗೀಕಾರಕ್ಕೆ ಅರ್ಹವಲ್ಲ. ಇತರ ಕಡೆಗಳಲ್ಲಿ ಅನ್ವಯಿಸುವಂತೆ ನೀತಿಧರ್ಮದ ಉಪದೇಶ ವಿಧಿ ಇಲ್ಲೂ ಪರಿಪಾಲನೀಯವಾದ ಆಜ್ಞೆಯಾಗಿರುತ್ತವೆ. ವಿವಿಧ ಜೀವ ಶ್ರೇಣಿಗಳಲ್ಲಿ ಹೆಚ್ಚು ಹೊಣೆಯರಿತ ಮಟ್ಟಗಳಲ್ಲಿರುವ ಅತ್ಯಂತ ಹೆಚ್ಚಿನ ಜನ ಸಮುದಾಯಕ್ಕೆ ಅತ್ಯಂತ ಹೆಚ್ಚಿನ ಶುಭಸಂದಾಯಕ್ಕೂ, ಹೊಣೆಯನ್ನು ಅಷ್ಟಾಗಿ ಅರಿಯದ ಕೆಳಮಟ್ಟಗಳಲ್ಲಿರುವ ಜನ ಸಮುದಾಯದಲ್ಲಿ ಬಹು ಕಡಮೆಯ ಜನಕ್ಕೆ ಬಹುಕಡಮೆಯ ಕೇಡಾಗುವ ಸಂಭವಕ್ಕೂ ಅವಕಾಶ ಮಾಡುವ, ನೀತಿಧರ್ಮಾಧಾರವಿರುವ ವ್ಯವಸ್ಥೆಯನ್ನು ಕುರಿತದ್ದು ಈಗ ಧರ್ಮದರ್ಶಿಗಳು ವಿಚಾರಮಾಡಬೇಕಾದ ಕರ್ತವ್ಯ ಸಂದರ್ಭ. ಧರ್ಮೇಂದ್ರಿಯ ಚೋದಿತರಾದ ನ್ಯಾಸನಿಧಿಪಾಲಕರ ಕರ್ತವ್ಯ ಪಾಲನೆಗೆ ಈ ನೀತಿಧರ್ಮವನ್ನು ಬಿಟ್ಟು ಅನ್ಯಧರ್ಮಾಧಾರವಿಲ್ಲ. ನಿಷೇಧರೂಪದಲ್ಲಿ (nagatively) ಧರ್ಮದರ್ಶಿತ್ವವೆಂದಾಗ, ಜೀವಸಮುದಾಯವನ್ನು ನಷ್ಟಪಡಿಸದೆ ಊರ್ಜಿತವಾಗಿರಿಸಿ ಸಂರಕ್ಷಿಸುವುದು ಕರ್ತವ್ಯವಾಗುತ್ತದೆ. ವಿಧಿರೂಪದಲ್ಲಿ (positively) ಧರ್ಮದರ್ಶಿತ್ವವೆಂದಾಗ, ಜೀವ ಸಮುದಾಯದ ಸದ್ಯಃ ಸ್ಥಿತಿಯನ್ನು ಇನ್ನೂ ಮೇಲ್ಮಟ್ಟಕ್ಕೆತ್ತಿ ವಿಸ್ತಾರವಾಗಿ ಹರಡುವುದು ಕರ್ತವ್ಯವಾಗುತ್ತದೆ.

ಜೀವ ಪ್ರವಾಹದೊಟ್ಟನ್ನು ಆಗಮಾಡಿಸುವ ಉಪನದಿ ಪ್ರಾಯವಾದ ಬೇರೆ ಬೇರೆ ಜೀವ ಪ್ರವಾಹಗಳಲ್ಲಿ ಮನುಷ್ಯ ಜೀವವೊಂದು ಬಿಡಿಪ್ರವಾಹ ಮಾತ್ರ. ಪ್ರತಿಯೊಂದು ಜೀವಪ್ರೇರಣೆಗೂ (ಪ್ರವೃತ್ತಿಗೂ) ಅದರದರ ಪಾತ್ರವಿರುತ್ತದೆ. ಹೆಚ್ಚೋ ಕಡಮೆಯೋ ಆದ ಪರಿಮಾಣದಲ್ಲಿ ಅದು ತನಗೆ ಬಂದ ಕರ್ತವ್ಯಪಾತ್ರವನ್ನು ನಿರ್ವಾಹಮಾಡುತ್ತದೆ. ಧರ್ಮದರ್ಶಿಯಾಗಿ ಇತರ ಜೀವರೂಪಗಳ ಸಂರಕ್ಷಣೆಯ ಕರ್ತವ್ಯಭಾರ ಹೊತ್ತಿರುವ ಮಾನವತೆ ಈ ಕರ್ತವ್ಯವನ್ನು ನಿರ್ವಾಹಮಾಡುವ ಹೊಣೆಯನ್ನೂ ಹೊತ್ತಿರುತ್ತದೆ. ಇದು ಮಾನವತೆ ಸ್ವಾತ್ಮಕ್ಕೆ ತೀರಿಸಬೇಕಾದ ಋಣ; ಮತ್ತು ತನ್ನ ಸಂಪರ್ಕಕ್ಕೆ ಬರುವ ಇತರ ಜೀವರೂಪಗಳ ಚೇತನಕ್ಕೂ ತೀರಿಸಬೇಕಾದ ಋಣ. ತನ್ನ ಅನುಭವ ವ್ಯಾಪ್ತಿಯಲ್ಲಿ, ತನ್ನಲ್ಲಿ ರಾಶಿಗೂಡಿದ ಅನುಭವ ವಿವೇಕಗಳ ವ್ಯಾಪ್ತಿಯಲ್ಲಿ, ಮನುಷ್ಯನು ಭೂಗ್ರಹದಲ್ಲಿ ತನ್ನೊಡನೆ ಸಹವಾಸದಲ್ಲಿರುವ ಇತರ ಜೀವಪ್ರವಾಹಗಳ ಯೋಗಕ್ಷೇಮಕ್ಕೆ ಹೊಣೆ ಹೊತ್ತಿದ್ದಾನೆ.

ಜೀವ ಪ್ರಸಕ್ತಿ ಹೀಗಾದರೆ, ಪೃಥ್ವೀ ಸಂಪತ್ತಿನ ಬಗ್ಗೆ ಮನುಷ್ಯನ ಹೊಣೆಯೇನು? ಆಕಾಶಕಾಯಗಳಲ್ಲಿ ಒಂದೆನ್ನಿಸಿ, ಮಹಾನಕ್ಷತ್ರವೊಂದರಿಂದ ಸಿಡಿದ ಧೂಳ ಕಣಮಾತ್ರವೆನಿಸಿದ ಈ ಭೂಗ್ರಹದಲ್ಲಿ ಕುಳಿತು ಆಕಾಶದಲ್ಲಿ ಜೀವನಯಾತ್ರೆ ನಡಸುವ ಮನುಷ್ಯನಿಗೆ ತನ್ನ ತವರಾದ ಭೂಮಿಯನ್ನು ಕುರಿತು ಕರ್ತವ್ಯಭಾರವುಂಟೇ? ಖಂಡಿತವಾಗಿ ಉಂಟು. "ಯಾನಮಾಡುತ್ತಿರುವ ಪಯಣಿಗರಲ್ಲಿ ಒಬ್ಬೊಬ್ಬರ ಆತಂಕಕ್ಕೂ ವಿಷಯವಾದ ನೌಕೆಗೆ ಅಪಘಾತದ ಭೀತಿಯಿಲ್ಲ" ಎಂಬುದೊಂದು ಲೋಕೋಕ್ತಿ. ಪದಾರ್ಥನಿಧಿಭರಿತವೂ ಪರಸ್ಪರ ಸಂಬಂಧವುಳ್ಳ ಅನೇಕ ಶಕ್ತಿಗಳಿಗೆ ಆಗರವೂ ಆದ ಒಳ್ಳೆಯ ನೌಕೆಯಾದ ಪೃಥ್ವಿಯನ್ನು ಊರ್ಜಿತವಾಗಿರಿಸಿ ಸಂರಕ್ಷಿಸುವುದನ್ನು ತನಗೆ ವೃದ್ಧಿಕ್ರಮದಲ್ಲಿ ಬಂದ ಹೊಣೆ. ಮನುಷ್ಯನು ಅದನ್ನು ಒಪ್ಪಿ ಹೊತ್ತುಕೊಂಡಿದ್ದಾನೆ. ಈ ಹೊಣೆಯ ಅರಿವನ್ನವನಲ್ಲಿ ಬಲಿಯಿಸಿದವು ವಿಸ್ತಾರವಾಗುತ್ತಹೋಗುವ ಅವನ ಪ್ರಜ್ಞೆ; ಮತ್ತು ಪರಿಣತವಾಗುತ್ತ ಅವನಿಗೊದಗುತ್ತಿರುವ ವಿವಿಧ ಸಾಮರ್ಥ್ಯಗಳು. ಪೃಥ್ವಿಯ ಆಚೆಗೆ ಮನುಷ್ಯನು ತನ್ನ ಪ್ರಯೋಗ ಪರೀಕ್ಷಾತ್ಮಕ ಜಾಗರೂಕತೆಯಿಂದ ಚಲಿಸಿ, ಮುಗಿವು ಕಾಣದೆಂಬಂತೆ ತೋರುವ ಬಾಹ್ಯಾಕಾಶದಲ್ಲಿ ಸಂಚರಿಸಬೇಕು. ಆದರೆ ತನ್ನ ಚಲನಶಕ್ತಿ ಹೆಚ್ಚದಂತೆ ತಡೆದು ಅವನು ಚಲಿಸಬೇಕು; ಚಲನೆಯೊಡನೆ ಪದಾರ್ಥವಿನಿಮಯ ಪಡೆವ ಪದಾರ್ಥಗಳ ಸದುಪಯೋಗ, ಊರ್ಜಿತಾವಸ್ಥೆಯಲ್ಲಿ ಪದಾರ್ಥಗಳನ್ನು ಪೋಲುಮಾಡದೆ ಉಳಿಸಿ ಅವುಗಳ ಸಂರಕ್ಷಣೆ ಮತ್ತು ಅವುಗಳ ಅಭಿವೃದ್ಧಿ ಕಾರ್ಯ – ಇವೆಲ್ಲ ಹೊಣೆಗಳೂ ಸೇರಿ ಅವನ ಹೆಗಲನ್ನೇರುತ್ತವೆ.

## ತತ್ವಾನುಷ್ಠಾನಗಳ ಐಕಮತ್ಯ

ಸಮಗೋಸ್ಕರ ಕಲ್ಪನೆಗಳನ್ನು ನಿರೂಪಿಸಿಕೊಳ್ಳುವುದು ಸುಲಭ. ಆದರೆ ಆ ಕಲ್ಪನೆಗೆ ಹೆರವರು ಒಪ್ಪಿಕೆ ಕೊಡುವಂತೆ ಮಾಡುವುದು ಅಷ್ಟು ಸುಲಭವಲ್ಲ. ನೂತನ ಕಲ್ಪನೆಯಂತೆ ಕ್ರಾಂತಿ ಸಂದರ್ಭವೊಂದು ಉದ್ಭವಿಸಿ ತರುವ ಶುಭಪರಿವರ್ತನೆಯ ವೇಗಮಾತ್ರ ಆ ಕಲ್ಪನೆಗೆ ಜನಾನುಮೋದನೆಯನ್ನು ಸಂಪಾದಿಸಿಕೊಡಬಲ್ಲುದು. ಕಲ್ಪನಾನುಸಾರವಾದ ನೂತನ ಸಮಾಜೋದಯಕ್ಕೆ ಜನಾನುಮೋದನೆ ಪಡೆದಮೇಲೆ, ನಿರೂಪವಾಗಿರುವ ಆ ನೂತನ ಕಲ್ಪನೆಗಳು ಪದ್ಧತಿರೂಪವನ್ನು ಅಥವಾ ಸಂಸ್ಥಾರೂಪವನ್ನು ಪಡೆದು ಸಮಾಜಕ್ಕೆ ಒಂದು ಶಕ್ತಿಯಾಗಿ ಉಳಿದುಕೊಳ್ಳುತ್ತವೆ.

ಈ ತತ್ತ್ವಕ್ಕೆ ನಿದರ್ಶನವನ್ನು ಕಳೆದೆರಡು ಶತಮಾನಗಳ ಅವಧಿಯಲ್ಲಿ ನಡೆದ ವಿಶ್ವಪ್ರಪಂಚದ ಘಟನೆಗಳಿಂದ ಎತ್ತಿಕೊಳ್ಳಬಹುದು. ಈ ಎರಡು ಶತಮಾನಗಳಲ್ಲಿ ಶುಭಜೀವನವನ್ನು ಕುರಿತು ದೊಡ್ಡ ಜಿಜ್ಞಾಸೆ ನಡೆಯಿತು. ವೈಯಕ್ತಿಕ ಆದಿ ಪರಿಶೋಧಕರೂ (Pioneers) ಸಣ್ಣ ಜನಸಮುದಾಯಗಳೂ ಜೀವನ ವಿಧಾನವನ್ನು

ಉತ್ತಮಪಡಿಸಲು ಪ್ರಯತ್ನಿಸಿದರು. ಇಂಥಾ ವ್ಯಕ್ತಿಜನವನ್ನು ಕುರಿತು ಸಂಪ್ರದಾಯ ಶರಣರು ಗುಮಾನಿಯಿಂದ ವರ್ತಿಸಿ, ಅವರನ್ನು ಕಿರುಕುಳ ಹಿಂಸೆಗಳಿಗೆ ಗುರಿಮಾಡಿದರು. ಕೆಲವೇಳೆ ಅವರನ್ನು ಕೊಲೆಮಾಡಿದರು. ಆದರೆ ಉದ್ದೇಶ ಪೂರ್ವಕವಾಗಿಯೇ ಗುಂಪು ಕಟ್ಟಿಕೊಂಡು, ಜನ ಸಮುದಾಯಗಳು ಸ್ವಲ್ಪಾವಧಿಯ ವರೆಗೆ ಕಾರ್ಯಮಾಡಿ, ರೂಢ ಮೂಲವಾಗಿದ್ದ ಸಮಾಜವು ಅಭ್ಯಾಸದಲ್ಲಿರಿಸಿಕೊಂಡಿದ್ದ ಆಚರಣೆಗಳನ್ನು ನಿವಾರಿಸುವ ಜೀವನವಿಧಾನವೊಂದನ್ನು ಜಾರಿಗೆ ತಂದುಕೊಳ್ಳಲು ಜನಕ್ಕೆ ಹುರುಪುಕೊಟ್ಟವು. ಕ್ರಾಂತಿ ಪರಿಸ್ಥಿತಿಗಳು ಯೂರೋಪಿನಲ್ಲಿ ತಲೆಯೆತ್ತಿ ರಾಜಸತ್ತೆಯೂ ಜಮೀನ್ದಾರೀ ಶಾಹಿಯೂ ಬಿಗಿದಿದ್ದ ಸಂಕೋಲೆಗಳನ್ನು ಒಡೆದುಹಾಕಿ, ವಸಾಹತುಗಳಲ್ಲಿ ಸಾಮ್ರಾಜ್ಯ ವಾದಿಗಳು ಚರಾಸ್ತಿಪ್ರಾಯವಾಗಿ ಜಾರಿಗೆ ತಂದಿದ್ದ ಜುಲುಮೆಯ ಗುಲಾಮಗಿರಿಯ (Chattel Slavery)ಸಂಕೋಲೆಗಳನ್ನು ಜನರುಧೀರರಾಗಿ ಕಳಚಿ ಎಸೆದರು. ಆಮೇಲೆ ರಾಜಕೀಯ ಕ್ರಾಂತಿಗಳು ಒಂದಾದಮೇಲೆ ಒಂದರಂತೆ ಸರಣಿಯಲ್ಲಿ ನಡೆದುವು. ಈ ಕ್ರಾಂತಿ ಮಾಲೆಯ ಫಲವಾಗಿ, ಸಹಕಾರಾತ್ಮಕವೂ ಸೃಜನಶೀಲವೂ ಆದ ಸಮಾಜ ವಾದಿ ಪುನಾರಚನೆಯ ಪ್ರಯತ್ನಗಳಿಗೆ ದಾರಿತೆರೆದುವು. ಏತನ್ಮಧ್ಯೆ, ಆ ಎರಡು ಶತಮಾನಗಳ ಅವಧಿಯಲ್ಲಿ ಸೈನ್ಸ್, ಇಂಜಿನಿಯರಿಂಗ್ ಮತ್ತು ಟೆಕ್ನಾಲಜಿ ಜ್ಞಾನ ಕ್ಷೇತ್ರಗಳಲ್ಲಿ ಕ್ರಾಂತಿ ಸಂಕ್ರಮಣಗಳು ನಡೆದು, ಶಾಂತಿ ಸಮೃದ್ಧಿಗಳನ್ನು ನೆಲೆಗೊಳಿಸುವ ಚಟುವಟಿಕೆಗಳಿಗೆ ಶಂಕು ಸ್ಥಾಪನೆಯಾಯಿತು.

ಈ ಅಧ್ಯಾಯದಲ್ಲಿ ಇದುವರೆಗೆ ನಾನು ಶುಭಜೀವನ ತತ್ತ್ವದ ಮುಖವನ್ನು ಸಮಾಲೋಚಿಸಿದ್ದೇನೆ. ಈಗ ತತ್ತ್ವದಿಂದ ಹೊರಟು ಅನುಷ್ಠಾನ ಮುಖವಾಗಿ ಸಮಾಲೋಚನೆಯನ್ನು ಮುಂಬರಿಸುತ್ತೇನೆ. ವಾಸ್ತವವಾಗಿ ತತ್ತ್ವವನ್ನು ಅನುಷ್ಠಾನ ದಿಂದ ಬೇರೆ ಮಾಡುವುದು ಅಸಾಧ್ಯ. ತತ್ತ್ವವು ಮನುಷ್ಯ ಜೀವನದ ಒಂದು ಇಲಾಖೆ ಯನ್ನು ತುಂಬುತ್ತದೆ; ಅನುಷ್ಠಾನವು ಇನ್ನೊಂದು ಇಲಾಖೆಯನ್ನು ತುಂಬುತ್ತದೆ. ಇನ್ನೊಂದರ ನೆರವಿಲ್ಲದೆ ಒಂದರ ಸಾಧನಕ್ಷೇತ್ರವು ಶೂನ್ಯವೆನಿಸುತ್ತದೆ, ಇಲ್ಲವೆ ಒಂದರ ಪಾಡು ಬರಡು, ಬಂಜೆತನದ್ದು ಎನ್ನಲೂಬಹುದು ಈ ತತ್ತ್ವಾನುಷ್ಠಾನಗಳೆರಡೂ ಒಂದರ ಪಕ್ಕದಲ್ಲೊಂದು ಅಭಿವೃದ್ಧಿಗೆ ಏರಬಲ್ಲವಾದಾಗ ಅವುಗಳ ಪ್ರಭಾವದಿಂದ ಮನುಷ್ಯ ಜೀವನವು ಹೆಚ್ಚಿನ ಸಮಾಧಾನ ಕೊಡುತ್ತದೆ.

ತಾತ್ತ್ವಿಕವಾಗಿ ಜೀವನ ವಿಧಾನವು ನಿಷ್ಪ್ರಮಾಣವೂ ನಿರಂಕುಶವೂ ಆದ ವಿಷಯವಲ್ಲ; ಅಥವಾ ಅದು ಸಾರ್ವತ್ರಿಕವಾಗಿ ಪ್ರಯೋಗಾರ್ಹವೂ ಅಲ್ಲ. ಕೆಲವರು ತತ್ತ್ವಕ್ಕೆ ಓಲುತ್ತಾರೆ. ಇತರರು ಅನುಷ್ಠಾನದಲ್ಲಿ ಹೆಚ್ಚು ಒಲವು ತೋರುತ್ತಾರೆ. ರ್‍ಯಾಡಿಕಲ್ ಪಂಥದ ನಾನು ಯಾವ ವ್ಯಕ್ತಿ ಮನುಷ್ಯನು ಆಚರಣೆಯಲ್ಲಿ ಎರಡನ್ನೂ ಕೂಡಿಸುತ್ತಾನೋ ಅವನದು ಹೆಚ್ಚು ಸಾರ್ಥಕವೂ ಸಫಲವೂ ಆದ ಜೀವನವಾಗುತ್ತದೆ

ಎಂದು ನಂಬುತ್ತೇನೆ. ತತ್ತ್ವತಃ ಬಾಳುವುದು ಮನುಷ್ಯನಿಗೆ ಬಹಳಮುಖ್ಯ. ಇಂಥ ಜನದ ಜೀವನವು ನಿದರ್ಶನಪ್ರಾಯವಾಗಿ, ಜೊತೆ ಜನದ ಜೀವನದ ಮೇಲೆ ಮಹತ್ತರ ಪ್ರಭಾವವನ್ನು ಬೀರುತ್ತ, ಮನುಷ್ಯ ಸಂಸ್ಕೃತಿ ವಾಹಿನಿಯ ಪಾತ್ರವನ್ನು ವಿಸ್ತರಿಸುತ್ತದೆ, ಅದರ ಆಳವನ್ನೂ ಹೆಚ್ಚಿಸುತ್ತದೆ. ಈ ಅನುಷ್ಠಾನ ಸೂತ್ರ ವ್ಯಕ್ತಿ ಮನುಷ್ಯನಿಗೆ ಹೇಗೋ ಹಾಗೆ ಸಮಾಜ ಸಮುದಾಯಗಳಿಗೂ ಅನ್ವಯಿಸುತ್ತದೆ. ಸಾಮಾಜಿಕ ಸಮುದಾಯಗಳ ಮೂಲಕ ಕಾರ್ಯಮಾಡುವ ವ್ಯಕ್ತಿಮನುಷ್ಯರಿಗೂ ಅನ್ವಯಿಸುತ್ತದೆ.

ತತ್ತ್ವಾನುಷ್ಠಾನಗಳ ಮೇಳನ ಸಾಧ್ಯತೆ ಆಯಾಪ್ರದೇಶ ಜೀವನ ಸಂದರ್ಭಕ್ಕೆ ಹಾಗೆಯೇ ಪ್ರದೇಶ ಪರಿಸರಕ್ಕೆ ತಕ್ಕಂತೆ ಮಾರ್ಪಡುತ್ತ ಹೋಗುತ್ತದೆ. ಈ ಜೀವನ ಸಂದರ್ಭ – ಪ್ರದೇಶ ಪರಿಸರ ಸಂಬಂಧದ ವ್ಯಾಪ್ತಿಯಲ್ಲಿ – ತಾರತಮ್ಯದಿಂದ ನಡೆಯುವ ಸಾಧ್ಯತೆಯ ಶ್ರೇಣಿಯಲ್ಲಿ,–ವ್ಯಕ್ತಿಮನುಷ್ಯರೂ ಸಮಾಜ ಸಮುದಾಯಗಳೂ ಹೆಚ್ಚು ಕಡಮೆ ಪೂರ್ತಿಯಾಗಿ ಶುಭಜೀವನ ನಿರ್ವಾಹದ ಪ್ರಯೋಗ ಪರೀಕ್ಷೆಗಳನ್ನು ನಡಸುತ್ತಾರೆ. ಇತರ ಸನ್ನಿವೇಶಗಳು ಸರಿಸಮವಾಗಿ ಅನುಕೂಲವಾಗಿದ್ದಾಗ, ಶುಭ ಜೀವನದ ಬಗ್ಗೆ ಪ್ರಯೋಗ ಪರೀಕ್ಷೆಗಳನ್ನು ನಡಸುವ ಪ್ರಯತ್ನವು ವ್ಯಕ್ತಿ ಮನುಷ್ಯರಿಗೆ ಅಷ್ಟು ಕಷ್ಟವೆನ್ನಿಸದು. ಆದರೆ ಬಹುದೊಡ್ಡ ಗಾತ್ರದಲ್ಲಿರುವ ಜನಸಮುದಾಯಗಳಿಗೆ ಈ ಪ್ರಯೋಗ ಪರೀಕ್ಷೆ ದುರ್ಭರವೆನ್ನಿಸೀತು.

ಪೃಥ್ವೀಗೋಲ ಯಾವ ವಿಶ್ವಪ್ರಪಂಚದ ಒಂದು ಭಾಗವಾಗಿದೆಯೋ ಅದನ್ನು ಕುರಿತ ತಿಳಿವಳಿಕೆ ಮನುಷ್ಯನಿಗೆ ಸಾಕಾದಷ್ಟು ಇಲ್ಲ. ಮನುಷ್ಯ ಸಂಪರ್ಕಕ್ಕೂ ಶೋಧನೆಗೂ ಅವನಿಂದ ಆಗಬೇಕಾದ ಲೋಕಸೇವೆಗೂ ಪರಮಾವಕಾಶವನ್ನೊದಗಿಸುತ್ತ ವಿಶ್ವಪ್ರಪಂಚವು ಸೃಷ್ಟಿ ಮೊದಲಾದಂದಿನಿಂದ ಇದ್ದುಕೊಂಡಿದೆ. ಗ್ರಹಗಳೂ ತಾರೆಗಳೂ ಇತರ ವಿಶ್ವಪ್ರಪಂಚದ ದ್ವೀಪಗಳೂ ಆಕಾಶದಲ್ಲಿ ತಿರುತಿರುಗುತ್ತ ಅವವಕ್ಕೆ ನಿಯತವಾದ ಕರ್ತವ್ಯಗಳನ್ನು ನಿರ್ವಹಿಸುತ್ತಲಿವೆ. ಅವು ತಮ್ಮ ಉದ್ದೇಶಗಳಲ್ಲಿ ಗೆಲ್ಲಬಹುದು, ಇಲ್ಲವೆ ಸೋಲಬಹುದು. ವಿಜ್ಞಾನಿಗಳ ಭಾವನೆಯಂತೆ ವಿಶ್ವಪ್ರಪಂಚವು ವರ್ತಮಾನದಲ್ಲಿ ವಿಸ್ತಾರವಾಗುತ್ತ ಹೋಗುವ ಗತಿ ಚಲನೆಯಲ್ಲಿರುವುದಾದರೆ, ನಾವು ಮನುಷ್ಯಪ್ರಾಣಿಗಳು ಈ ಪ್ರಚಂಡ ಪ್ರಪಂಚ ಗತಿಯನ್ನೂ ಅದರ ಶಕ್ತಿಗಳ ಮೊತ್ತವನ್ನೂ ಹೆಚ್ಚಿಸಲು ನಮ್ಮ ಕಾಣಿಕೆಯನ್ನು ಸಲ್ಲಿಸುತ್ತ ಹೋಗಬೇಕು. ಈ ವಿಷಯದಲ್ಲಿ ನಾವು ಮನುಷ್ಯರು, ನಮ್ಮ ಕರ್ತವ್ಯ ಕ್ಷೇತ್ರದ ಮಿತಿಯಲ್ಲಿ, ಧರ್ಮದರ್ಶಿಗಳಂತೆ ವರ್ತಿಸಬೇಕಾದವರು. ನಿತ್ಯ ವಿಸ್ತಾರವಾಗುತ್ತಿರುವ ಈ ವಿಶ್ವಪ್ರಪಂಚದ ಚರಿತೆಯಲ್ಲಿ ನಮಗೆ —ನಮ್ಮ ವಿವೇಕ, ಅನುಭವ ಮತ್ತು ಶಕ್ತಿಗಳ ವ್ಯಾಪ್ತಿಯೆಷ್ಟೋ ಅಷ್ಟಕ್ಕೆ ಅನುಗುಣವಾಗಿ—ಹೊಣೆಯರಿತ ಪಾತ್ರ ವಿಧಿಯುಂಟು. ಅಲ್ಲದೆ, ಈ ಕ್ಷೇತ್ರದಲ್ಲಿ ನಾವು ಜಗ

ವ್ವಸ್ತುಗಳನ್ನು ಬಳಸಿಕೊಳ್ಳಬೇಕು; ಬಳಸಿಕೊಳ್ಳುತ್ತಿರುವಾಗ ಅವನ್ನು ಪೋಲು ಮಾಡವೆ ಉಳಿಸಿ ಕಾಪಾಡಿಕೊಳ್ಳಬೇಕು, ಅವುಗಳ ನೆರವಿನಿಂದ ಜಗತ್ತನ್ನು ಕಟ್ಟಬೇಕು, ಜಗದ್ವ್ಯಾಪಾರವು ಸುಕರವಾಗುವಂತೆ ವಸ್ತುಗಳನ್ನು ಉತ್ಪಾದಿಸಬೇಕು. ಒಂದು ನದೀ ಪ್ರವಾಹವನ್ನು ಆಗಮಾಡಿಸಲು ಲೆಕ್ಕವಿಲ್ಲದಷ್ಟು ನೀರ ಹನಿಗಳು ಸೇರಿರಬೇಕಲ್ಲವೆ? ಅಂಥ ನದಿಗಳು ಹರಿದು ಹರಿದು ಸಮುದ್ರವಾಗಿ ಕಲೆತು ವಿಸ್ತಾರ ಜಲಧಿಯಾಗಬೇಕಾದರೆ ಕೂಡಿಕೊಳ್ಳುವ ನದಿಗಳ ಸಂಖ್ಯೆ ಇನ್ನೂ ಅನೇಕಾನೇಕವಾಗಿರಬೇಕಾಗುತ್ತದೆ. ಈ ಜಲಧಿ ಪೂರಣ ಕಾರ್ಯದಲ್ಲಿ ಪ್ರತಿಯೊಂದು ಜಲಕಣಕ್ಕೂ ಪಾತ್ರವುಂಟು; ನದಿಗಳ ಪ್ರವಾಹವನ್ನು ಸತತವಾಗಿ ಉಬ್ಬಿಸುತ್ತ ಹೋಗುವ ಪಾತ್ರ ಅದು. ನಿತ್ಯ ವಿಸ್ತೃತವಾಗುತ್ತಿರುವ ವಿಸ್ಮಯಕರವಾದ ವಿಶ್ವಜಗತ್ತಿನ ನಾಟಕದಲ್ಲಿ ಅದರ ಒಂದೊಂದು ಭಾಗವೂ ಭಯಭಕ್ತಿಗಳಿಂದ ಪಾತ್ರವಹಿಸಿ ಸಹಕರಿಸಬೇಕು.

## ದೊಡ್ಡ ಕಣಸು

ಸಾರ್ವತ್ರಿಕ ಶುಭಜೀವನವು ಕವಿಗಳಿಗೆ ಕಾವ್ಯವಸ್ತುವಾಗಿದೆ; ದಾರ್ಶನಿಕರಿಗೆ ಜಿಜ್ಞಾಸ್ಯವಸ್ತುವಾಗಿದೆ. ಇಂದು ಅದು ಅನೇಕ ಮುಖವಾದ ವೈಜ್ಞಾನಿಕ ಶೋಧನೆಗೂ ತಾತ್ಕಾಲಿಕ ಪ್ರಯೋಗ ಪರೀಕ್ಷೆಗಳಿಗೂ ವಿಷಯವಾಗಿದೆ. ಪರಿಕರ್ಮ ತಂತ್ರಜ್ಞಾನಗಳ (ಟೆಕ್ನಿಕಲ್) ಕ್ಷೇತ್ರದಲ್ಲಿ ಆಗುತ್ತಿರುವ ಅಭಿವೃದ್ಧಿ ಕಾರ್ಯಗಳು ದೂರದೂರದಲ್ಲಿರುವ ಮನುಷ್ಯವರ್ಗವನ್ನು ತೀರ ಹತ್ತಿರ ಹತ್ತಿರಕ್ಕೆ ತರುತ್ತಿವೆ. ಆದದ್ದರಿಂದ ಮನುಷ್ಯನ ಹೆಗಲಿಗೇರಿದ ಧರ್ಮದರ್ಶಿತ್ವದ ಕರ್ತವ್ಯಕ್ಕೆ ಭೂಗ್ರಹದ ಮಿತಿಯನ್ನು ದಾಟಿ ಗ್ರಹೋಪಗ್ರಹಸಂಬಂಧವಾಗಿಯೂ, ಸೌರವ್ಯೂಹಗಳ ಸಂಬಂಧವಾಗಿಯೂ, ಇಡಿಯ ಅಖಿಲಾಂಡಕೋಟಿ ಬ್ರಹ್ಮಾಂಡ ಸಂಬಂಧವಾಗಿಯೂ, ಅಪಾರ ದೂರ ವ್ಯಾಪಕತೆಯಿರುವುದನ್ನು ಸಾಂಪ್ರತ ಕಾಲದ ಮನುಷ್ಯನು ಲಕ್ಷ್ಯದಲ್ಲಿರಿಸಿಕೊಳ್ಳಬೇಕಾಗಿದೆ. ಈ ಬೆಳವಣಿಗೆಗಳು ಒಂದು ಕ್ರಮದಲ್ಲಿ ಸಾಗದೆ, ದಡದಡನೆ ಓಡೋಡಿ, ಒಬ್ಬರ ಮೇಲೊಬ್ಬರು ಉರುಳಿಬೀಳುತ್ತ ನೂಕುನುಗ್ಗಲ ಪಾಳಿಯಲ್ಲಿ ಧಾವಂತಿಸಿ ಸಾಗುವ ಸಂಭವವುಂಟು. ಇಂಥ ವಿಚಿತ್ರ ಧಾವಂತದ ಸನ್ನಿವೇಶದಲ್ಲಿ ಸಾರ್ವತ್ರಿಕ ಶುಭಜೀವನ ಕ್ಷೇತ್ರವು ತಲೆಮೊರೆಯಿಂದ ತಲೆಮೊರೆಗೆ ಅಧ್ಯವಸಾಯಕ್ಕೂ ಅಭಿವೃದ್ಧಿ ಸಾಧನೆಗೂ ಯಥೇಚ್ಛಾವಕಾಶವನ್ನು ಕಲ್ಪಿಸುತ್ತದೆ.



ಅಧ್ಯಾಯ ಆರು

# ಭೂಗ್ರಹವನ್ನು ವಸತಿಯೋಗ್ಯವನ್ನಾಗಿ ಅಣಿಮಾಡುವ ಪ್ರಯತ್ನ

ವೃಕ್ಷಗಳನ್ನು ಅವು ಬೆಳೆದಿರುವ ಕ್ಷೇತ್ರದಿಂದ ಪ್ರತ್ಯೇಕಿಸುವುದು ಹೇಗೆ ಅಸಾಧ್ಯವೋ, ಕೈಗಳಲ್ಲಿ ಅವಿಭಾಜ್ಯಾಂಗಗಳಾಗಿ ಸೇರಿಕೊಂಡು ಕೆಸಲಮಾಡುವ ಬೆರಳುಗಳನ್ನು ಹೇಗೆ ಕೈಗಳಿಂದ ಪ್ರತ್ಯೇಕಿಸುವುದು ಅಸಾಧ್ಯವೋ ಹಾಗೆಯೇ ಮಾನವತೆಯನ್ನು ಅದು ಬೆಳೆದು ಬಾಳುತ್ತಿರುವ ಪರಿಸರ ಸನ್ನಿವೇಶದಿಂದ ಪ್ರತ್ಯೇಕಿಸುವುದಕ್ಕೆ ಆಗುವುದಿಲ್ಲ. ಮನುಷ್ಯನೂ ಅವನ ಪರಿಸರವೂ ಪರಿಗಣನೆಗಿರುವ ಒಟ್ಟಿನ ಎರಡು ಬಿಡಿಗಳು. ಚರ್ಚೆಯ ಸೌಕರ್ಯಕೋಸ್ಕರ ನಾನು ಒಂದು ಅಧ್ಯಾಯದಲ್ಲಿ ಮನುಷ್ಯನ ವಿಷಯವನ್ನೂ, ಇನ್ನೊಂದು ಅಧ್ಯಾಯದಲ್ಲಿ ಅವನ ಪರಿಸರವನ್ನೂ ಬೇರೆ ಬೇರೆಯಾಗಿ ಎತ್ತಿಕೊಂಡು, ಪೃಥಕ್ ಪೃಥಕ್ಕಾಗಿಯೇ ವಿಚಾರಮಾಡಿದ್ದೇನಷ್ಟೆ. ವಾಸ್ತವವಾಗಿ ಎರಡೂ ಪ್ರತ್ಯೇಕಿಸಲಾಗದಷ್ಟು ಅವಿಭಾಜ್ಯಗಳು, ಅವಿನಾಸಂಬಂಧಿಗಳು. ಆದರೂ ನಾವು ಮನುಷ್ಯನನ್ನು ಅವನ ನೆರೆಹೊರೆಯಿಂದ ಬಿಡಿಸಿ, ಚರ್ಚೆಯ ಉದ್ದೇಶವನ್ನು ಮುಂಬರಿಸಬಹುದು – ವಿಜ್ಞಾನಿಗಳು ವಸ್ತು ಪರೀಕ್ಷಣಕಾಲದಲ್ಲಿ ವಸ್ತುಗಳನ್ನು ಪ್ರತ್ಯೇಕಿಸಿ, ಪುನಃಪ್ರತ್ಯೇಕಿಸಿ, ವಿವರ ವಿವರವಾಗಿ ಪರೀಕ್ಷಿಸಿ, ವಿಷಯಸ್ವರೂಪವನ್ನು ಮುಂದಟ್ಟುಮಾಡಿಕೊಂಡು ಸಮೀಚೀನವಾಗಿ ನಿರೂಪಿಸುವಂತೆ.

ಮನುಷ್ಯನನ್ನು ಅವನ ನೆರೆಹೊರೆಯಿಂದ ಪ್ರತ್ಯೇಕಿಸಿ, ಅನಂತರ ಆ ನೆರೆಹೊರೆಯನ್ನು ಎರಡು ಹೋಳಾಗಿ ವಿಂಗಡಿಸಿ ನೋಡಬಹುದು. ಮನುಷ್ಯನ ಪರಿಸರದಲ್ಲಿ ಸೇರಿರುವ ಎರಡು ಭಾಗಗಳು ಇವು, ಒಂದು ಪ್ರಕೃತಿ ಪರಿಸರ, ಇನ್ನೊಂದು ಸಮಾಜ ಪರಿಸರ.

ಮನುಷ್ಯನು ಭೂಮಿಯ ಮೇಲೆ ಕಾಣಿಸಿಕೊಳ್ಳುವುದಕ್ಕೆ ಮುಂಚಿನಿಂದ ಪ್ರಕೃತಿ ಪರಿಸರ ಇದ್ದದ್ದೇ. ಅದರ ಸ್ವರೂಪವಿದು: ನೆಲ, ಗಾಳಿ, ನೀರು; ಜೊತೆಯ ಗ್ರಹಗಳು ಇತರ ಆಕಾಶಕಾಯಗಳು; ಬೆಳಕು; ಗುರುತ್ವಾಕರ್ಷಣಶಕ್ತಿ; ವಿದ್ಯುಚ್ಛಕ್ತಿ; ಕಾಂತ ಪ್ರವಾಹಗಳು; ಅಣುವಿಕಿರಣ ಮತ್ತು ಅಗ್ನಿಶಾಖ. ಇವೆಲ್ಲ ಸೇರಿ ಪ್ರಕೃತಿ ಪರಿಸರವಾಗಿ ಇರುತ್ತದೆ.

ಸಮಾಜ ಪರಿಸರವೆಂದಾಗ ಅದರಲ್ಲಿ ಸೇರತಕ್ಕವು ಇವು: ಅನೂಚಾನವಾಗಿ ಸಾಗಿಬಂದ ಸಂಪ್ರದಾಯ, ಆಗಾಗ ರೂಢಿಗೆ ಬಂದ ಪದ್ಧತಿ, ಜನಪದ ಕಥಾಸಾಹಿತ್ಯ ಅಭ್ಯಾಸಗಳು, ವ್ಯವಹಾರ ಕಲ್ಪನೆಗಳು, ಲೆಕ್ಕಾಚಾರಗಳು, ಲಿಖಿತ ದಾಖಲೆಗಳು, ಕುಶಲ ಕಲೆಗಳು, ಸಂಘಸಂಸ್ಥೆಗಳು, ಮತ್ತು ಸಮಾಜಸಂಬಂಧಗಳು; ಆಶಯಕಲ್ಪನೆ

ಗಳು, ಕೃತಿರಚನೆಗಳು, ಮಾನಸಿಕ ಪ್ರತಿಮೆಗಳು ಶೋಧನೆಗಳು, ನೂತನ ವಸ್ತುಗಳ ಅನಾವರಣ ನಿರ್ಮಾಣಗಳು. ಈ ಭಾವನೆಗಳಲ್ಲಿ ಕೆಲವಕ್ಕೆ ಮನುಷ್ಯಕುಲವೇ ಆದಿ ಕಾರಣವಾಗಿದ್ದಿರಬಹುದು, ಇಲ್ಲದೆಯೂ ಇರಬಹುದು. ಸಮಾಜ ಪರಿಸರ ಒಟ್ಟಿನಲ್ಲಿ ಮನುಷ್ಯ ಚಿತ್ತವೂ ಹಸ್ತವೂ ಸಮೆದು ಕಟ್ಟಿ ನಿಲ್ಲಿಸಿರತಕ್ಕದ್ದು. ಮನುಷ್ಯವರ್ಗದಲ್ಲಿ ನಡೆಯುತ್ತ ಬರುತ್ತಿರುವ ಪರಸ್ಪರ ಸಹಾಯ ಸಹಕಾರ ಅವಲಂಬನ ಪ್ರಯತ್ನಗಳ ಫಲವೇ ಇಂದಿನ ಸಮಾಜ ಪರಿಸರದ ಸ್ವರೂಪ. ಮಾನವ ಸಮಾಜ,–ಅದರ ಅನೇಕಾನೇಕ ಜಟಿಲತೆಗಳು, ಅಂತರ್ಜಾತೀಯ ಸಂಬಂಧಗಳು, ಹೊಂದಾಣಿಕೆ ಮೇಲ್ಪಾಡುಗಳು – ಇವುಗಳೊಡನೆ ಮನುಷ್ಯನಿರ್ಮಿತವಾದ, ಮುಖ್ಯವಾಗಿ ಮನುಷ್ಯನಿಗೋಸ್ಕರವೇ ನಿರ್ಮಿತವಾದ, ಸಮಾಜ. ಪ್ರಾಸಂಗಿಕವಾಗಿ ಇಲ್ಲಿ ಹೇಳಬೇಕಾದ ಒಂದು ಮಾತಿದೆ. ಈ ಸಮಾಜ ಪರಿಸರವು ಮನುಷ್ಯ ಸಮಾಜಕ್ಕೆ ಮುಖ್ಯವಾಗಿರುವುದರ ಜೊತೆಗೆ ಬಹು ಸಂಖ್ಯಾಕಗಳಾದ ಇತರ ಪ್ರಾಣಿ ಸಮಾಜಗಳಿಗೆ ಕೂಡ ಮುಖ್ಯವಾಗಿದೆ. ಸಸ್ಯಗಳು, ಜಂತುಗಳು, ಹಕ್ಕಿಗಳು, ಹಾವುಹುಪ್ಪಟೆಗಳು, ಮೀನುಗಳು – ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಮನುಷ್ಯನ ಆಲೋಚನೆಗಳೊಂದಿಗೂ ಅವನ ಕಾರ್ಯಕಲಾಪಗಳೊಂದಿಗೂ ಅವನು ರಾಶಿರಾಶಿಯಾಗಿ ಬೆಳಸಿರುವ ನಾಗರಿಕತೆ ಸಂಸ್ಕೃತಿಗಳೊಂದಿಗೂ ಸಹಚರಗಳಾಗಿ ಬಾಳುತ್ತಿವೆ.

ಇರುವೆ ದುಂಬಿಗಳ ಸಮಾಜಗಳು ಕಟ್ಟಿಕೊಂಡ ಸಂಘಸಂಸ್ಥೆಗಳು ಅಂತಿಮವಾಗಿ ಪೂರ್ಣತೆಯನ್ನು ಪಡೆದಿರುವಂತೆ, ಆ ಅರ್ಥದಲ್ಲಿ ಮನುಷ್ಯ ಸಮಾಜವು ಪೂರ್ಣತಾ ದಶೆ ಪಡೆದು ಅವನ ಆತ್ಯಂತಿಕ ಪ್ರಗತಿಗೆ ಇನ್ನೂ ಸಾಧನವೆನ್ನಿಸಿಲ್ಲ. ಅದಕ್ಕೆ ಬದಲಾಗಿ ಮನುಷ್ಯ ಸಮಾಜವು ಇನ್ನೂ ಅಪಕ್ವ, ಅಪೂರ್ಣದಶೆಯಲ್ಲೇ ಇದ್ದು, ಅಂತರ್ಬೋಧ ಬಾಧೆಗಳಿಂದಲೂ ಒಳತೋಟಿ ಉಮ್ಮಳಗಳಿಂದಲೂ ಹರಿಹರಿದು, ಮುನ್ನಡೆಯಲ್ಲಿರುವ ನಾಗರಿಕ ಪ್ರದೇಶಗಳನ್ನೆಲ್ಲ ಕಾಲಕಾಲಕ್ಕೆ ಹಾಳುಮಾಡಿ, ಬೀಳುಗೆಡಹಿ, ಇತರ ಪ್ರದೇಶಗಳನ್ನು ಕೆಳಮಟ್ಟದ ನಾಗರಿಕತೆಗಿಳಿಸಿರುವುದೂ ಉಂಟು.

ಮನುಷ್ಯ ಸಂತಾನ ಹೆಚ್ಚಿದಂತೆ ಮನುಷ್ಯ ಸಮಾಜವು ಗಾತ್ರದಲ್ಲೂ ಜಟಿಲತೆಯಲ್ಲೂ ಬೆಳೆದು, ಹೆಚ್ಚು ವ್ಯಾಪಕವಾಗಿ ಹರಡಿ, ಪರಸ್ಪರ ಸೇರಿ – ಸಂಘ ಸಂಘಟನೆ, ಸಾಹಚರ್ಯ ಸಂಯೋಜನೆ, ಸಹಾಯ ಸಂಪಾದನೆಗಳಿಗೋಸ್ಕರ ಮನಸ್ಸು ಕೊಟ್ಟಿತು; ಹಾಗೆಯೇ ಮನುಷ್ಯೇತರ ಪ್ರಾಣಿಗಳೊಡನೆಯೂ ಸಾಹಚರ್ಯವನ್ನು ಸಾಧಿಸುವಂತೆ ಆಗಿ, ಕಡೆಗೆ ಮನುಷ್ಯನ ಧರ್ಮದರ್ಶಿತ್ವದ ಆಶ್ರಯದಲ್ಲಿ ವ್ಯವಹಾರ ಸಂಬಂಧಕ್ಕೆ ಜೊತೆಮನುಷ್ಯರನ್ನೂ ಇತರ ಪ್ರಾಣಿವರ್ಗಗಳನ್ನೂ ಒಳಪಡಿಸಿಕೊಳ್ಳುವುದು ಮುಖ್ಯವೆಂಬ ಗಣನೆಗೆ ಸಮಾಜ ಇಂಬುಗೊಟ್ಟಿತು. ಸಮಾಜವು (ಇಲ್ಲಿ ಸಾಮಾಜಿಕ ಪರಿಸರವು) ಮನುಷ್ಯ ವ್ಯಾಪಾರಕ್ಕೊಂದು ಚೌಕಟ್ಟನ್ನು ಒದಗಿಸಿದೆ; ಅದರೊಳಗಡೆಯೂ

ಆದರ ಮೂಲಕವೂ ಮನುಷ್ಯನು ಜನಸಂಪರ್ಕಗಳನ್ನು ಬೆಳಸುತ್ತಿದ್ದಾನೆ; ಅನ್ಯೋನ್ಯ ಸಹಕಾರದೊಡನೆ ಜಂಟಿಉದ್ಯಮಗಳನ್ನು ಕಟ್ಟಿ ನಡಸುತ್ತಿದ್ದಾನೆ; ಅನೇಕ ಪಳಗಿದ ಪ್ರಾಣಿಗಳನ್ನು ನೆರವಾಗಿರುವಂತೆ ತಮ್ಮ ವ್ಯಾಪಾರಕ್ಕೆ ಹೂಡಿಕೊಳ್ಳುತ್ತ ಮನುಷ್ಯ ವರ್ಗದ ಬೇರೆ ಬೇರೆ ಮಟ್ಟಗಳ ಏಳಿಗೆಗೆ ಅವಕಾಶಮಾಡಿಕೊಳ್ಳುತ್ತಿದ್ದಾನೆ.

ಸಮಾಜವು ಮನುಷ್ಯನ ಕೈಕೂಸು. ಅದನ್ನವನು ಲಾಲಿಸಿ ಹೊರೆಯಬೇಕು. ಪೋಷಣೆ ಕೊಟ್ಟು ತನ್ನ ಸ್ವಕೀಯಾಭಿವೃದ್ಧಿಗೆ ತಾನೇ ಪರಿಶ್ರಮಿಸುವಂತೆ ಅದಕ್ಕೆ ಅವಶ್ಯವಾದ ಅವಕಾಶಗಳನ್ನು ಕಲ್ಪಿಸಬೇಕು. ಇದು ಸಮಾಜಕ್ಷೇತ್ರದಲ್ಲಿ ಸಮಾಜ ದೃಷ್ಟಿಯಿಂದ ಮನುಷ್ಯನು ಸಲ್ಲಿಸಬೇಕಾದ ಸೇವೆ. ಇದನ್ನು "ಸಮಾಜವು ಸಮಾಜವನ್ನು ಉದ್ಧಾರ ಮಾಡುವ ಬಗೆ" ಎಂದು ಲೆಸ್ಟರ್ ಎಫ್. ವಾರ್ಡ್ ಎಂಬಾತ ಕರೆಯುತ್ತಾನೆ.

## ಮನುಷ್ಯನ ಜೀವಿಕಾ ಸಂಪಾದನೆಯ ಬೇರೆಬೇರೆ ಮಟ್ಟಗಳ ಭರವಸೆ

ಇಳೆಯನ್ನು ಅದರ ಮೂನ್ನೂರು ಕೋಟಿ ಮನುಷ್ಯ ನಿವಾಸಿಗಳಿಗೂ ಅವನ ಸಹಚರಗಳಾದ ಪಳಗಿದ ಪ್ರಾಣಿಗಳಿಗೂ ಉತ್ತಮ ವಾಸಸ್ಥಲವನ್ನಾಗಿ ಮಾಡಲು ಅನೇಕ ಪ್ರಯತ್ನಗಳು ನಡೆದಿವೆ. ವಿಶ್ವವಾಪಿಯಾದ ಅಭಿವೃದ್ಧಿ ಯೋಜನೆಯೊಂದನ್ನು ಮಂಡಿಸಲು ಇದು ತಕ್ಕ ಸ್ಥಲವಲ್ಲವಾದರೂ, ರ್‍ಯಾಡಿಕಲ್ ಪಂಥದ ಜನದ ಧರ್ಮೇಂದ್ರಿಯಗಳ ಮೇಲೆ ಬರುತ್ತಿರುವ ಒತ್ತಡಗಳನ್ನು ಉಪಶಮನ ಮಾಡಲು ಇಲ್ಲಿ ಕೆಲವು ಪರಿಹಾರ ಕಾರ್ಯಕ್ರಮಗಳನ್ನು ಸೂಚಿಸಲು ಬಯಸುತ್ತೇನೆ. ವರ್ತಮಾನದಲ್ಲಿ ಅಸಂಖ್ಯಾತ ಮನುಷ್ಯರು ದೈಹಿಕ ಕಷ್ಟಕಾರ್ಪಣ್ಯಗಳಿಗೆ ಸಿಕ್ಕಿ ನಿರಾಶೆಯಿಂದ ಉಮ್ಮಳಿಸುತ್ತಿರುವ ಸಂಗತಿಯನ್ನು ಮೊದಲು ಎತ್ತಿಕೊಳ್ಳುತ್ತೇನೆ.

ದೈಹಿಕವಾದ ಕಷ್ಟಕಾರ್ಪಣ್ಯಗಳಲ್ಲಿ ಒಂದು—ಜನವರ್ಗದಲ್ಲಿ ಅಶನಾಭಾವದಿಂದ ಹರಡುವ ಹಸಿವು; ಮತ್ತು ಹಸಿದವರಿಗೆ ಬೇಕಾದಷ್ಟು ಉಣಿಸು ಸಿಕ್ಕದೆ ಬಳಲುವುದು; ಹಾಗೆಯೇ ಉಪವಾಸ ಕ್ಲೇಶಗಳಿಗೆ ತುತ್ತಾಗಿರುವುದಲ್ಲದೆ ಅವರು ನ್ಯೂನ ಪೋಷಣೆಯಿಂದ ಸೊರಗಿ ಕಂಗಾಲಾಗಿರುವುದು. ಜೋಸುವೆ ದೆ ಕ್ಯಾಸ್ಟ್ರೀ ಎಂಬಾತ ತನ್ನ ಮಹಾಕೃತಿಯಾದ **"ಭೌಗೋಲಿಕ ಕ್ಷುತ್ ಮೀಮಾಂಸೆ"**ಯಲ್ಲಿ (Geography of Hunger) ‡ ಎರಡು ಬಗೆಯ ಹಸಿವುಗಳನ್ನು ಗುರುತಿಸಿದ್ದಾನೆ.

‡ ಬೋಸ್ಟನ್, ಲಿಟ್ಲ್ ಬ್ರೌನ್ ಪ್ರಕಾಶನ, 1962

ದೇಹಕ್ಕೆ ಸಂಬಂಧಿಸಿದ ಕ್ಷುದ್ಬಾಧೆ ಒಂದು: ಇದಕ್ಕೆ ಕಾರಣ ಅನ್ನ ಪ್ರಾಪ್ತಿಯ ಕೊರತೆ. ಇನ್ನೊಂದು ಸಮತೂಕವಲ್ಲದ ಆಹಾರ ಸೇವನೆಯಿಂದ ಆದ ಕ್ಷುದ್ಬಾಧೆ. ಮೊದಲನೆಯ ಹಸಿವಿಗಿಂತ ಎರಡನೆಯದು ಪ್ರಪಂಚದಲ್ಲಿ ಸರ್ವತ್ರ ವ್ಯಾಪಕವಾಗಿದೆಯೆಂದು ಕ್ಯಾಸ್ಟ್ರೋ ಹೇಳುತ್ತಾನೆ.

ಮನುಷ್ಯನು ಅಂದಂದಿನ ಉದರ ಪೋಷಣೆಯ ಕ್ಲೇಶಕ್ಕೆ ಸಿಕ್ಕಿ ಬದುಕು ಸಾಗಿಸ ಬೇಕಾದ ವಾಸ್ತವ ಸಂಗತಿ ಇತಿಹಾಸದ ಉದ್ದಕ್ಕೂ ನಡೆದುಬರುತ್ತ ಇದ್ದುಕೊಂಡಿದ್ದೇ ಜಗತ್ತಿನ ಜನಸಂಖ್ಯೆಯಲ್ಲಿ ಮೂರರಲ್ಲೆರಡು ಪಾಲು ಜನಸಮೂಹ ಶಾಶ್ವತವಾದ ಕ್ಷುದ್ಬಾಧೆಯಿಂದ ಸೊರಗುತ್ತಿದೆ "ಇದು ಮನುಷ್ಯ ಸಮಾಜವನ್ನು ಕಾಡುವ ಅತ್ಯಂತ ಭಯಂಕರವಾದ ಸಂಕಟ" ಎಂದು ಕ್ಯಾಸ್ಟ್ರೋ ಬಣ್ಣಿಸಿದ್ದಾನೆ ಆತನು ತನ್ನ ಕ್ಷುತ್ ಮೀಮಾಂಸೆಯನ್ನು ಕುರಿತ ಕೃತಿಯಲ್ಲಿ, ಪ್ರಪಂಚದ ಒಂದೊಂದು ಭೂಖಂಡಕ್ಕೆ ಸಂಬಂಧಪಟ್ಟಂತೆ ವಿಸ್ತಾರವೂ ಸ್ಪಷ್ಟವೂ ಆದ ಸಾಕ್ಷ್ಯಸಾಮಗ್ರಿಯನ್ನು ಕ್ರೋಢೀ ಕರಿಸಿ ಕೊಟ್ಟಿದ್ದಾನೆ. ಈ ಸಾಕ್ಷ್ಯರಾಶಿ ಆತನ ಹೇಳಿಕೆಯನ್ನು ಸಮರ್ಥಿಸುತ್ತದೆ.

ಹಸಿವನ್ನು ಕುರಿತ ಇನ್ನೊಂದು ಮಹಾಗ್ರಂಥ ವೈದ್ಯವೃತ್ತಿಯಲ್ಲಿ ನುರಿತವರೂ ವೈದ್ಯ ವಿಜ್ಞಾನ ಹಾಗು ಇತಿಹಾಸ ಪ್ರಾಧ್ಯಾಪಕರೂ ಆದ ಡಾ|| ಹೆನ್ರಿ ಇ. ಸಿಜರಿಸ್ಟ್ ಎಂಬಾತ ಬರೆದಿರುವುದು. ಈತ ದೀರ್ಘಕಾಲಿಕ ದೈಹಿಕ ಕ್ಷುದ್ಬಾಧೆಯನ್ನು (ಉಪ ವಾಸ ಕ್ಲೇಶವನ್ನು) ಒಂದು ವ್ಯಾಧಿ ಎಂದು ನಿರ್ಣಯಿಸುತ್ತಾನೆ." ಮನುಷ್ಯಸಮಾಜ ಇಂದು ಸಾಮಾನ್ಯವಾಗಿ ಹೊಟ್ಟೆಗಿಲ್ಲದ ಕಂಗಾಲತೆಯಿಂದಲೂ ಉಣಿಸಿನ ಬೇರೆ ಯಾವುದೋ ತಪ್ಪು ಹೊಂದಾಣಿಕೆಗೆಗಿಂತಲೂ ಹೆಚ್ಚಾಗಿ ನ್ಯೂನ ಪೋಷಣೆ ಯಿಂದಲೂ ಬೇನೆ ಬಿದ್ದು ಪಾಡುಪಡುತ್ತಿದೆ," ಎಂದು ಡಾ|| ಸಿಜರಿಸ್ಟ್ ಬರೆಯು ತ್ತಾರೆ. ಆತನು ಬಂದಿರುವ ನಿರ್ಧಾರದಂತೆ – "ನ್ಯೂನಪೋಷಣೆ ವಿಶ್ವವ್ಯಾಪಿಯಾಗಿರುವ ವಿದ್ಯಮಾನ. ಅದು ನಾಗರಿಕತೆ ಮನುಷ್ಯನಿಗೆ ತಂದಿರುವ ವ್ಯಾಧಿ." ಈ ವ್ಯಾಧಿ ಕಡಮೆ ವರಮಾನವುಳ್ಳ ಜನವರ್ಗದಲ್ಲಿ ಹೆಚ್ಚಾಗಿ ಹರಡಿರುವುದರಿಂದ, ನ್ಯೂನಪೋಷಣೆಯೂ ವ್ಯಾಧಿಯೂ ಕಾರ್ಯ ಕಾರಣ ಸರಣಿಯಲ್ಲಿ ಸಾಗುತ್ತವೆ. ನ್ಯೂನ ಪೋಷಣೆ ಮೂಲ ಕಾರಣವಾಗಿದ್ದರೆ ಬೇನೆ (ವ್ಯಾಧಿ) ತತ್ಫಲವಾದ ಅನುಭವ – ಎಂಬುದು ಈ ಲೇಖಕನ ವಿಚಾರಸಿದ್ಧವಾದ ಹೇಳಿಕೆ. ಬಡವರು ತಮ್ಮ ಅಲ್ಪಾದಾಯದಲ್ಲಿ ಬಹುಪಾಲನ್ನು ಅನ್ನ ಕ್ಕೋಸ್ಕರ ವೆಚ್ಚಮಾಡಿಬಿಡುವ ಒತ್ತಾಯಕ್ಕೆ ಸಿಕ್ಕಿದವರು. ಅಲ್ಲದೆ ಕೆಟ್ಟ ವಸತಿ ಯಿಂದಲೂ ಮೈಮುಚ್ಚದ ವಸನ ನ್ಯೂನತೆಯಿಂದಲೂ ಬೀಳಿನಲ್ಲಿದ್ದಾರೆ. ಈ ನ್ಯೂನಪೋ ಷಣೆ ನ್ಯೂನವಸತಿ, ನ್ಯೂನವಸನ ಸ್ಥಿತಿ ಸಾಮಾಜಿಕ ಮುಖವಾಗಿ ಪರಿವರ್ತನೆಯ ಅಭಿ

ವೃದ್ಧಿ ಪ್ರಯತ್ನಗಳಲ್ಲಿ ತೊಡಗಿದವರಿಗೆ ತತ್‌ಕ್ಷಣದ, ಹಾಗೆಯೇ ನೇರವಾದ, ಸವಾಲಾಗಿ ಎದ್ದು ಕೊಂಡಿರುವ ಮಹಾಸಮಸ್ಯೆ. [1]

1964 ರ ಅಧ್ಯಕ್ಷ ಚುನಾವಣೆಯ ಪ್ರಚಾರದ ಪೂರ್ವೋತ್ತರಾವಧಿಗಳಲ್ಲಿ, ಪ್ರಪಂಚದಲ್ಲೆಲ್ಲ ಅತ್ಯಂತ ಧನಿಕರಾಷ್ಟ್ರವೊಂದರಲ್ಲಿ ( ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ) ಬಡತನ ಮನೆಮಾಡಿಕೊಂಡಿದೆಯೆಂಬ ಸಂಗತಿ, ರಾಜಕೀಯ ಚರ್ಚೆಯಲ್ಲಿ ತಕರಾರೆಬ್ಬಿಸಿದ ವಿಷಯವಾಗಿತ್ತು. ಮೈಕೆಲ್ ಹ್ಯಾರಿಂಗ್ಟನ್ ಎಂಬಾತ ತನ್ನ "ಅಮೆರಿಕದ ಇನ್ನೊಂದು ಮುಖ" ವೆಂಬ ಕೃತಿಯಲ್ಲಿ ( The Other America) [2] ವಾಸ್ತವಾಂಶಗಳನ್ನು ಕೊಟ್ಟಿದ್ದಾನೆ. ಸೆನೆಟರ್ ಹ್ಯೂಬರ್ಟ್ ಹಂಫ್ರಿ ಎಂಬಾತ "ಬಡತನದ ಮೇಲೆ ಯುದ್ಧ" (War on Poverty) [3] ಎಂಬ ತನ್ನ ಕೃತಿಯಲ್ಲಿ ಚರ್ಚೆಯನ್ನು ಮುಂಬರಿಸಿದ್ದಾನೆ. ಅಧ್ಯಕ್ಷ ಜಾನ್ಸನ್ ಈ ಸಮಸ್ಯೆಯನ್ನು ಕಾಂಗ್ರೆಸ್ಸಿಗೆ (ಅಮೆರಿಕದ ಶಾಸನಸಭೆಗೆ) ಒಪ್ಪಿಸಿದನು. "ಅಮೆರಿಕದ ಸಲುವಾಗಿ ನನ್ನ ಆಶೆ" (My Hope for America) [4] ಎಂಬ ಕೃತಿಯಲ್ಲಿ ಅಧ್ಯಕ್ಷ ಮಹನೀಯ ತಮ್ಮ ಸಮಾಲೋಚನೆಯನ್ನು ಉಪಸಂಹರಿಸಿದನು. ಈ ಖಾಸಗಿ ಅಧ್ಯಯನ ಚರ್ಚೆಗಳಲ್ಲಿ ಆಹಾರ ಪೋಷಣೆಯ ಬಗ್ಗೆ ಪ್ರಪಂಚಾರೋಗ್ಯ ಸಂಸ್ಥೆಯೂ (W H O), ಆಹಾರ ಮತ್ತು ಭೂವ್ಯವಸಾಯ ವಿಚಾರಗಳ ಪ್ರಪಂಚ ಸಂಸ್ಥೆಯೂ (F A O) ಸಂಕಲಿಸಿದ್ದ ವಿಪುಲವೂ ವಿಸ್ತಾರವೂ ಆದ ಅಂಕಿಸಂಖ್ಯಾ ವಿವರಗಳನ್ನು ಇವರೆಲ್ಲ ಬಳಸಿಕೊಂಡಿದ್ದರು.

ಪ್ರಪಂಚದಲ್ಲೆಲ್ಲ ಹರಡಿರುವ ಬಡತನದ ಜೊತೆಗೆ ವಿಶ್ವಜನತೆಯಲ್ಲಿ ಬಹುಸಂಖ್ಯಾಕರನ್ನು ಪೀಡಿಸುತ್ತಿರುವ ಇತರ ಮೂರು ವಾಸ್ತವ ಸಂಗತಿಗಳನ್ನು ಇಲ್ಲಿ ಎತ್ತಿಕೊಳ್ಳಬೇಕು. **ಮೊದಲನೆಯದು** ಕಡಮೆ ಬಳಕೆಯಲ್ಲಿರುವ ಇಲ್ಲವೆ ಬಳಕೆಗೇ ಬಾರದ ವಿಸ್ತಾರವಾದ ವ್ಯವಸಾಯದ ಕ್ಷೇತ್ರಸಂಪತ್ತು. **ಎರಡನೆಯದು** ಪ್ರಪಂಚದ ಭೂವ್ಯವಸಾಯದ ಕ್ಷೇತ್ರದಲ್ಲಿ ಬಹು ಪಾಲಿಗೆ ಯಂತ್ರವಿಜ್ಞಾನಾಭಿವೃದ್ಧಿಯ ಸೌಕರ್ಯಗಳು ಲಭಿಸದೆ, ಅದು ಇನ್ನೂ ಮಾನವಶಕ್ತಿಯನ್ನೂ, ಮನುಷ್ಯಕಾಯಕದ ಜೊತೆಗೆ ಪಳಗಿದ ಪ್ರಾಣಿಶಕ್ತಿಯನ್ನೂ ಹೂಡಿ ಆವಲಂಬಿಸಿಕೊಂಡಿರುವುದು. **ಮೂರನೆಯದು**

---

1 ನಾಗರಿಕತೆ ಮತ್ತು ವ್ಯಾಧಿ (Civilization and Disease) Ithaca, N.y. Cornell University Press, 1943

2 N. Y. Macmillan, 1963

3 N. Y. Mc Graw Hill, 1964

4 N. Y. Random House, 1964

ರಾಷ್ಟ್ರದ ಸೈನ್ಯದ ಇಲಾಖೆ ವರ್ತಮಾನದಲ್ಲಿ ಯುದ್ಧ ಸಿದ್ಧತೆಯ ಉದ್ದೇಶಕ್ಕಾಗಿ ವೆಚ್ಚಕ್ಕೆ ತೆಗೆದಿರಿಸಿಕೊಳ್ಳುತ್ತಿರುವ ವಾರ್ಷಿಕ ಬಜೆಟ್ಟಿನಲ್ಲಿ (ಈ ಬಾಬಿನ ಒಟ್ಟು ವೆಚ್ಚದ ಮೊಬಲಗು 1200 ಕೋಟಿ ಡಾಲರುಗಳು, ಅಥವಾ 8500 ಕೋಟಿ ರೂಪಾಯಿಗಳು) ಅರ್ಧ ಪಾಲನ್ನಾದರೂ ಯುದ್ಧಸಿದ್ಧತೆಗೆ ತಪ್ಪಿಸಿ, ದಾರಿದ್ರ್ಯ ಪರಿಹಾರ ನಿಧಿಯಾಗಿ ಪರಿವರ್ತಿಸಿ, ಅದನ್ನು ಮುಂದೆ ಒಂದು ದಶಕಾವಧಿಯಲ್ಲಿ ವೆಚ್ಚಮಾಡುವ ಏರ್ಪಾಟಾದರೆ, ಮನುಷ್ಯ ವರ್ಗದಲ್ಲಿ ನ್ಯೂನಪುಷ್ಟಿಯ ದೋಷದಿಂದ ನರಳುತ್ತಿರುವ ಬಹು ಸಂಖ್ಯಾಕರಿಗೆ ಅವಶ್ಯವಾದ ದೇಹ ಪೋಷಕ ಆಹಾರ ಸಾಮಗ್ರಿಗಳನ್ನು ಒದಗಿಸಲು ಅನುಕೂಲವಾಗುತ್ತದೆ.

ಯಾರು ಈ ಭೂಮಂಡಲವನ್ನು ಸಮರ್ಪಕವಾದ ವಸತಿಯೋಗ್ಯವಾದ ನೆಲೆಯನ್ನಾಗಿ ಮಾಡಿಕೊಳ್ಳ ಬಯಸುವರೋ ಅವರು ಮೊದಲು ಆರ್ತರಿಗೆ ದೇಹ ಪೋಷಣೆ ಕೊಡಬೇಕು. ಹಸಿದವರಿಗೆ ಅನ್ನದ ಏರ್ಪಾಟುಮಾಡಬೇಕು; ಬತ್ತಲಿಗರಿಗೆ ಬಟ್ಟೆಯುಡಿಸಬೇಕು; ವಸತಿಹೀನರಿಗೆ ಮನೆಗಳನ್ನು ಕಟ್ಟಿಸಿಕೊಡಬೇಕು. ಪ್ರಪಂಚದ ಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ಜನಸಮೂಹವು ಭೌತಕ್ಲೇಶಗಳ ನಿತ್ಯಾನುಭವದಲ್ಲಿರುತ್ತಾರೆ. ಅವರ ಮುಖವೂ ದೇಹವೂ ಒಳಬೇಗುದಿಯ ಗುರುತನ್ನು ಪಡೆದೆತ್ತಿ ತೋರಿಸುತ್ತವೆ. ಅವರ ಮನಸ್ಸಿನಲ್ಲೂ ಅದರ ಮಚ್ಚೆಗಳು ಕಾಣಿಸಿಕೊಳ್ಳುತ್ತವೆ. ಸಾಮಾಜಿಕವಾಗಿ ಮೇಲ್ಪಾಡುಗಳನ್ನು ತರಬೇಕೆಂದು ಹೆಣಗುವವರು ಮೊದಲು ಜನದ ದೈಹಿಕಾವಶ್ಯಕತೆಗಳನ್ನು ಪೂರೈಸುವ ಪ್ರಶ್ನೆಗೆ ಗಮನಕೊಡಬೇಕು. ಈ ಕಾಲದ ವಸ್ತೂತ್ಪಾದನೆಯನ್ನು ಗಮನದಲ್ಲಿರಿಸಿಕೊಂಡು, ಪ್ರಚಲಿತ ಇತಿಹಾಸದ ಪುಟಗಳನ್ನು ಹೊಲಸುಮಾಡಿರುವ ಈ ಕಠೋರಕಳಂಕವನ್ನು ನಿವಾರಿಸಿದ ಹೊರತು ಸುಹೃದರು ಎನ್ನಿಸಿಕೊಳ್ಳಬಲ್ಲ ಯಾವ ಗಂಡಸಾಗಲಿ ಹೆಂಗಸಾಗಲಿ ತನ್ನ ಅರಸಾದ ಧರ್ಮೇಂದ್ರಿಯದ ತಿವಿತವನ್ನು ತಪ್ಪಿಸಿಕೊಂಡು ಬಾಳುವುದು ಶಕ್ಯವಿಲ್ಲ.

## ಸಾಮಾಜಿಕ ನ್ಯಾಯಕ್ಕೆ ಉಚಿತವಾದ ಕರ್ತವ್ಯಕಾರ್ಯತಂತ್ರ

ಬಡತನದ ಬಗ್ಗೆ ಕೂಡಲೆ ನಡೆಯಬೇಕಾದದ್ದು ತುರ್ತುಕಾರ್ಯಕ್ರಮ; ಎಂದರೆ ಅತ್ಯವಶ್ಯವಾದದ್ದು ಕ್ಷಿಪ್ರಪರಿಹಾರ ಪ್ರಯತ್ನ. ಈ ಪರಿಹಾರವೇನಿದ್ದರೂ ತಾತ್ಕಾಲಿಕವಾದ ಪ್ರಯೋಜನ ಮಾತ್ರದ್ದು, ಉಪಶಮನ ಮಾತ್ರದ್ದು; ಮತ್ತು ಹೆಚ್ಚೆಂದರೆ, ಜನದಲ್ಲಿ ಸ್ವಾವಲಂಬನೆಯ ನೀತಿ ದಾರ್ಢ್ಯವನ್ನು ಉಡುಗಿಸುವ ಅಪಾಯಾಂಶವೂ ಈ ತಾತ್ಕಾಲಿಕ ಪರಿಹಾರೋಪಾಯದಲ್ಲಿ ಸೇರಿಕೊಳ್ಳುವ ಸಾಧ್ಯತೆಯುಂಟು. ಪರಿಹಾರಕ ಸಹಾಯವನ್ನು ವಿತರಣ ಮಾಡುವಾಗ್ಗೆ, ವಿತರಣೆಯ ಅವಧಿಯಲ್ಲಿ, ಪರಿಹಾರ ನೀಡುವ ಸಂಸ್ಥೆಯ ಕಾರ್ಯಕರ್ತರೂ ಪರಿಹಾರ ಪಡೆಯುವ ಆರ್ತರೂ ಅರಿತುಕೊಳ್ಳಬೇಕಾದ

ವಿಷಯ ಇದು: ಜೀವನಾವಶ್ಯಕ ಪದಾರ್ಥಗಳು ಸಕಾಲದಲ್ಲಿ ಸಾಕಾದಷ್ಟು ಜನಕ್ಕೆ ಒದಗದೆ ಇರುವುದೇ ಅಭಾವ ದಾರಿದ್ರ್ಯಗಳಿಗೆ ಕಾರಣ. ಈಗ ಆಗುತ್ತಿರುವ ತಪ್ಪು ವಿತರಣೆಯ ಏರ್ಪಾಟನ್ನು ತಿದ್ದುವುದಕ್ಕೆ ನಾವು ಕೈಕೊಳ್ಳಬೇಕಾದ ಪರಿಣಾಮಕಾರಿ ಸಾಧನವೆಂದರೆ–ಸಾಮಾಜಿಕ ನ್ಯಾಯಕ್ಕೆ ತತ್ತ್ವದೃಷ್ಟಿ ಯಾವುದು, ಪ್ರಯೋಗವಿಧಾನ ಯಾವುದು ಎಂಬ ವ್ಯಾವಹಾರಿಕ ನೀತಿ ಸಂಹಿತೆಯನ್ನು ರಚಿಸಿಕೊಂಡು, ಅದನ್ನು ಪಟ್ಟಾಗಿ ಶ್ರದ್ಧೆಯಿಂದ ಕಾರ್ಯರಂಗದಲ್ಲಿ ಅನುಷ್ಠಾನಕ್ಕೆ ತರುವುದು.

ಕಳೆದೆರಡು ಶತಮಾನಗಳಲ್ಲಿ ರಾಜಕೀಯ ಸಾಮಾಜಿಕ ಸುಧಾರಣೆಗಳ ಕಾಲದಲ್ಲೂ ಕ್ರಾಂತ್ಯುತ್ತರ ಕಾಲದಲ್ಲೂ ನೀತಿ ಸಂಹಿತೆಯನ್ನು ಕುರಿತ ಈ ಮಾತನ್ನು ಪದೇಪದೇ ಕಾರ್ಯಕರ್ತ ಜನಕ್ಕೆ ಹೇಳುತ್ತ ಬರಲಾಯಿತು. ಸಮಾಜ ಸೇವಾಕಾರ್ಯಮಾಡಲು ಹೊರಡುವ ಯಾರು—ಕುಟುಂಬ ನೆರೆಹೊರೆ ಗ್ರಾಮ ಮತ್ತು ನಾನಾ ಗ್ರಾಮಕೂಟ ಸಂಸ್ಥೆಗಳಿಂದ ಹಿಡಿದು ವಿಶ್ವಜನ ಸಮುದಾಯಗಳವರೆಗೆ, ಯೋಜನೆ ಸಂಘಟನೆ ಆಡಳಿತ ವಿವರಗಳನ್ನು ಪರ್ಯಾಲೋಚಿಸುವರೋ ಅವರೆಲ್ಲ ಕಾರ್ಯಕಾಲದಲ್ಲಿ ನೀತಿ ಧರ್ಮವನ್ನು ಮರೆಯದೆ ಅನುಷ್ಠಾನ ಯೋಗ್ಯವಾದ ಸ್ವತಃಸಿದ್ಧ ವಿಧಿ ಇದು ಎಂದು ತಿಳಿದು ಕಾಯಕ ಮಾಡುವ ವರೆಗೆ, ನೀತಿಯ ಮಾತನ್ನು ನಮ್ಮ ಬಾಯಿ ಆಡುತ್ತಲೇ ಇರಬೇಕಾಗಿದೆ.

"ನ್ಯಾಯ ?" ಎಂದರೇನು ? ಈ ಪ್ರಶ್ನೆಗೆ ಉತ್ತರ ಕೊಡುವಾಗ ವೆಬ್‌ಸ್ಟರ್ ನಿಘಂಟುಕಾರನು ತನ್ನ ನ್ಯೂ ವರ್ಲ್ಡ್ ಡಿಕ್ಷನರಿ (New World Dictionary) ಎಂಬ ಶಬ್ದಕೋಶದಲ್ಲಿ ನ್ಯಾಯಕ್ಕೆ ಇರುವ ಷಣ್ಮುಖಗಳನ್ನು ತೋರಿಸಿದ್ದಾನೆ. (1) ಧರ್ಮಾಚರಣೆಯ ಗುಣ; (2) ನಿಷ್ಪಕ್ಷಪಾತ ವೃತ್ತಿ,– ನ್ಯಾಯ ಬೇಡುವವನಿಗೆ ಔಚಿತ್ಯ ದೃಷ್ಟಿಯಿಂದ ಒಪ್ಪಿಕೆಯಾಗುವಂತೆ ತೋರುವ ಗುಣವು ನ್ಯಾಯ ಸಲ್ಲಿಸುವವ ನಲ್ಲೂ ಇದ್ದು ಪ್ರಕಟವಾಗುವಿಕೆ; (3) ಸರಿಯಾದ, ಋಜುವೆನ್ನಿಸುವ ನಡತೆಯಲ್ಲಿ ಬೆಳ ಗುವ ಗುಣ. (4) ದೃಢವಾಗಿ, ಧರ್ಮವಾಗಿ, ಸಾಧುವಾಗಿ ಇರತಕ್ಕ ನಡತೆ; (5) ತಪ್ಪು ಮಾಡುವವನಿಗೆ ಶಿಕ್ಷೆ, ತಪ್ಪುಮಾಡದೆ ಇರುವವನಿಗೆ ಪ್ರಶಂಸೆ, ಮನ್ನಣೆ – ಅವನವನಿಗೆ ಉಚಿತವಾಗಿ, ಸಮಾಧಾನಕರವಾಗಿ; (6) ಯಾವುದು ಸರಿಯೋ ನ್ಯಾಯವೋ ಶಾಸನ ಸಮ್ಮತವೋ ಅದನ್ನೆತ್ತಿ ಹಿಡಿಯಲು ಅಧಿಕಾರ ಪದವಿಗಳನ್ನು ಬಳಸಿಕೊಳ್ಳುವಿಕೆ.

"ಸಾಮಾಜಿಕ ನ್ಯಾಯ" ಎಂದರೆ ನ್ಯಾಯವನ್ನು ಬೇಡುವ ಎಲ್ಲರಿಗೂ ಯಾವುದು ಸರಿಯೋ ನಿಷ್ಪಕ್ಷಪಾತವೋ ಉಚಿತವೋ ಅದರ ಸಲ್ಲಿಕೆ – ಇಡಿಯ ಮಾನವ ಕುಟುಂಬಕ್ಕೆ ಅನ್ವಯಿಸಿ, ಆಮೂಲಾಗ್ರವಾಗಿ ಪ್ರಯೋಗಕ್ಕೆ ಬಂದು, ವಿತ ರಣೆಯಾಗತಕ್ಕ ತತ್ತ್ವವೇ ನ್ಯಾಯ. ದೇವತಾ ಶಾಸ್ತ್ರದಲ್ಲಿ ಪುಣ್ಯ ಪಾಪ ಫಲರೂಪ ವಾದ ಈಶ್ವರ ನಿಯಾಮಕವೇ ನ್ಯಾಯ ಕಲ್ಪನೆಗೆ ಆಧಾರವಾಯಿತು. ಜನತೆಯನ್ನು

ಜ್ಞಾನಾನಂದಗಳ ವಿತರಣೆ ಮೂಲಕ ನೆಮ್ಮದಿಯಲ್ಲಿರಿಸಲು ಕಳೆದ ಎರಡು ಶತಮಾನಗಳ ಕಾಲ ಮನುಷ್ಯನು ನಡಸಿದ ಹೋರಾಟದ ಫಲವಾಗಿ ಸಾಮಾಜಿಕ ನ್ಯಾಯತತ್ತ್ವವು ಜಗತ್ತಿನ ನಾನಾ ರಾಷ್ಟ್ರ ಪ್ರಭುತ್ವಗಳಿಗಿರುವ ವಿವಿಧ ಅಧಿಕಾರಗಳಲ್ಲಿ ಒಂದಾಗಿ ಸೇರಿತು. ಈಗ ನಮ್ಮ ಜಿಜ್ಞಾಸೆಯಲ್ಲಿರುವ ಜನಸಾಮಾನ್ಯದ ಕಲ್ಯಾಣ ಸಾಧನೆಯನ್ನು ಕುರಿತು ಯಾವ ಸಾಮಾಜಿಕ ಪ್ರಯತ್ನಗಳು ನಡೆಯುತ್ತವೆಯೋ ಅವು ನ್ಯಾಯ ಸಮ್ಮತವೆಂಬ ಭಾವನೆಗೆ ಇಂಬು ದೊರೆಯಿತು.

ಸಾಮಾಜಿಕ ನ್ಯಾಯವನ್ನು ಅದಕ್ಕೆ ವಿಸದೃಶಗಳಾಗಿರುವ ಪ್ರತಿಕಕ್ಷಿಗಳ ಅಥವಾ ಪ್ರತಿಸ್ಪರ್ಧಿಗಳ ಅನುಕೂಲ ದೃಷ್ಟಿಯಿಂದ ನೋಡಿ ವಿಚಾರ ಮಾಡಬಹುದು. ಸಾಮಾಜಿಕ ನ್ಯಾಯಕ್ಕೆದುರು ಪಟ್ಟಭದ್ರಾಧಿಕಾರ ಪ್ರಬಾವ; ಸಾಮಾಜಿಕ ನ್ಯಾಯಕ್ಕೆದುರು ಸಂಪ್ರದಾಯ, ಪರಂಪರೆ, ಪದ್ಧತಿಗಳ ಪ್ರಭಾವ; ಸಾಮಾಜಿಕ ನಾಯಕ್ಕೆದುರು ಸಮಾಜದಲ್ಲಿ ನೆಲೆಯೂರಿದ, ಸುಪ್ರತಿಷ್ಠಿತ ಸ್ವಾರ್ಥಹಿತಗಳು, ಸಾಮಾಜಿಕ ನ್ಯಾಯಕ್ಕೆದುರು ವಾಡಿಕೆಯ ಒತ್ತಾಯಗಳು; ಅಜ್ಞಾನ, ಆಲಸ್ಯ, ಪೂರ್ವಗ್ರಹ, ಭಯ, ದ್ವೇಷಗಳು.

ಭಾವನೆಯ ದೃಷ್ಟಿಯಿಂದ ಸಾಮಾಜಿಕ ಹಿತವೂ ವ್ಯಕ್ತಿ ಸ್ವಾತಂತ್ರ್ಯವೂ ಪರಸ್ಪರ ವಿರೋಧಿಗಳು. ಸ್ವಾತಂತ್ರ್ಯವೆಂದರೆ ಅದರಲ್ಲಿ ವ್ಯಕ್ತಿ ಹಿತೈಕ ದೃಷ್ಟಿ, ಸ್ಥಳೀಯ ಅಥವಾ ಪ್ರಾದೇಶಿಕ ಹಿತೈಕ ದೃಷ್ಟಿ; ವ್ಯಕ್ತಿ ಪ್ರಯತ್ನದಲ್ಲಿ ತಲೆ ಹಾಕದ ಸರಕಾರದ ತಾಟಸ್ಥ್ಯನೀತಿ (Laissez faire;) ಆಚಾರ ಸ್ವಾತಂತ್ರ್ಯಕ್ಕೆ ಅನಿರ್ಬಂಧದ ಅನುಮತಿ ಇವೆಲ್ಲ ಅಂತರ್ಗತವಾಗಿರುತ್ತವೆ. ಸಾಮಾಜಿಕ ನ್ಯಾಯದಲ್ಲಿ ಜನಸಮಷ್ಟಿ ಚಿತ್ತ (Will), ನಿರ್ಣಯ ವಿವೇಚನೆಗಳು (Judgement), ಜನಸಮುದಾಯ ತನಗೋಸ್ಕರ ಮಾಡಿಕೊಂಡ ಆರ್ಥಿಕ, ಸಾಮಾಜಿಕ, ರಾಜಕೀಯ ಯೋಜನೆ—ಎಂದರೆ ಜನಪದ ಸಾರ್ವಭೌಮಾಧಿಕಾರ—ಇವೆಲ್ಲ ಅಂತರ್ಗತವಾಗಿರುತ್ತವೆ.

ಸಾಮಾಜಿಕ ನ್ಯಾಯವು ನೀತಿಧರ್ಮದ ಆಚರಣೀಯ ತತ್ತ್ವಗಳನ್ನು ಸಮಾಜ ಸಂಬಂಧಗಳ ಕ್ಷೇತ್ರದಲ್ಲಿ ಪ್ರಯೋಗ ಮಾಡುತ್ತದೆ. ನೀತಿ ಧರ್ಮವು ನೇರ್ಮೆಯ ಇಲ್ಲವೆ ಋಜುತೆಯ, ಆರ್ಜವದ, ತತ್ತ್ವಮುಖ ಮತ್ತು ಪ್ರಯೋಗ ಮುಖಗಳೆರಡನ್ನೂ ಒಳಗೊಂಡಿರುತ್ತದೆ. ಸಮಾಜ ಸಂಬಂಧಗಳಲ್ಲಿ ಋಜುತೆಯೆಂದರೆ - ಸಾಮಾಜಿಕ ಚಟುವಟಿಕೆಗಳಿಂದಲೂ ಅಭ್ಯಾಸಗಳಿಂದಲೂ ಜನಸಮುದಾಯದಲ್ಲಿ ಪರಮಾವಧಿಯ ಸಂಖ್ಯೆಗೆ ಪರಮಾವಧಿಯ ಸುಖವನ್ನೂ ಕನಿಷ್ಠಾವಧಿಯ ಸಂಖ್ಯೆಗೆ ಸಹ್ಯವಾಗುವಷ್ಟು ಕಡಮೆಯ ಹಾನಿ ಸಂಭವವನ್ನೂ ನಿರೀಕ್ಷಿಸುತ್ತದೆ.

ಈ ಹೇಳಿಕೆಗಳು ಬರಿಯ ಭಾವನಮಾತ್ರದವು ಎಂದು ತೋರಿಯಾವು. ಹೌದು, ಅವು ಭಾವಮಾತ್ರವಾಗಿ ಮನಸ್ಸಿನ ಗ್ರಹಣಕ್ಕೆ ಬರಬೇಕಾದವೇ. ಯಾವ ಕಟ್ಟಡದ ಯೋಜನೆಯೇ ಆದರೂ ಅದರ ಆದಿಘಟ್ಟಗಳಲ್ಲಿ ನಮ್ಮ ಪಟ್ಟುಹಿಡಿತಕ್ಕೆ ಸಿಕ್ಕದ ಕಲ್ಪನೆ

ಅಥವಾ ಭಾವನೆಯಾಗಿ ಅದು ಇರುತ್ತದೆ. ಉದಾಹರಣೆಗೆ ನಮ್ಮ ನಡಿಗೆ ಅಡ್ಡ ಹರಿಯುವ ನದಿಯೊಂದರ ಸಂಗತಿಯನ್ನು ತೆಗೆದುಕೊಳ್ಳೋಣ. ನಾವು ಅದನ್ನು ದಾಟಬೇಕು. ಬೇಸಿಗೆಯಲ್ಲಿ ಸ್ವಲ್ಪ ಶ್ರಮಪಟ್ಟು ನದೀಪಾತ್ರವನ್ನು ಹಾಯಬಹುದು. ಆದರೆ ಮಳೆಗಾಲದಲ್ಲಿ ಪ್ರವಾಹ ಬಿರುಸೇರಿ ಹರಿಯುತ್ತಿರುವಾಗ ಅದನ್ನು ಹಾಯುವುದು ತುಂಬ ಪ್ರಯಾಸಕರ; ಹಾಯುವವರ ಜೀವಕ್ಕೆ ಅಪಾಯವೂ ಹಾನಿಯೂ ಸಂಭವನೀಯವೇ. ಈ ಸಮಸ್ಯೆಯನ್ನು ಎದುರಿಸಿದ ಮೊದಮೊದಲಿಗರು ತಾತ್ಕಾಲಿಕವಾಗಿಯೋ ದೀರ್ಘಕಾಲದ ವ್ಯವಸ್ಥೆಯಾಗಿಯೋ ತೆಪ್ಪದ ಇಲ್ಲವೆ ದೋಣಿಯ ಸೇವೆಯನ್ನು ಕಂಡುಕೊಂಡರು. ಕಡೆಗೆ ಸೇತುವೆಯೊಂದು ನದಿಯ ಎರಡು ದಂಡೆಗಳನ್ನೂ ಶಾಶ್ವತವಾಗಿ ಸಂಧಿಸಿರುವಂತೆ ಕೂಡಿಸಿ, ದಾರಿಗೆಡೆಮಾಡುವುದನ್ನು ಕಂಡುಕೊಂಡರು. ದೋಣಿಯ ಸೇವೆ ಕಷ್ಟಗಳನ್ನೂ ಅಪಾಯಗಳನ್ನೂ ಕಡಮೆಮಾಡುತ್ತದೆ. ಸೇತುವೆಯ ಸೇವೆಯಾದರೋ ಈ ಕಷ್ಟಗಳನ್ನು ಅಪಾಯಗಳನ್ನು ಬರಗೊಡದೆ ಉಪಮಾರ್ಗವಾಗಿ ನೆರವುಕೊಡುತ್ತದೆ.

ಸೇತುವೆಗಳನ್ನು ನಿರ್ಮಾಣ ಮಾಡಿಕೊಳ್ಳುವುದು ಪ್ರಾಚೀನಕಾಲದ ಜನಕ್ಕೆ ಒಂದು ಹೊಂಗನಸೋ, ಕಾರ್ಯಸಾಧ್ಯವಾದ ಭಾವನೆಯೊಂದನ್ನು ಕಲ್ಪಿಸಿಕೊಂಡ ಧ್ಯೇಯಾದರ್ಶವೋ, ಕಣಸುಗಾರರ ಹಾಗೂ ಕಾರ್ಯಪ್ರಾರಂಭ ಕರ್ತರ ಮನಸ್ಸುಗಳಲ್ಲಿ ಸ್ಫೂರ್ತಿಯಿಂದ ಮೂಡಿ ತವಕಿಸುವ ಅಮೂರ್ತ ಕಲ್ಪನೆಯೋ ಆಗಿತ್ತು. ಬರುಬರುತ್ತ ಅವರು ಮನಸಾ ಅನುಭವಿಸಿದ ಭಾವನೆಗೆ ಕೃತಿಸ್ವರೂಪವನ್ನು ಕೊಟ್ಟು ಸಾಕ್ಷಾದನುಭವವಾಗಿ ಮಾಡಿಕೊಂಡರು. ಆದಿಭಾವನೆಯೊಂದು ಕೃತಿಯಾಗಿ ಪರಿಣಮಿಸಿದ ಪರಿ ಇದು: ಶಿಲ್ಪಶಾಸ್ತ್ರಜ್ಞರು (ಆರ್ಕಿಟೆಕ್ಟ್) ಕಟ್ಟಿ ಆದಮೇಲೆ ಸೇತುವೆಗಳು ಹೇಗೆ ಕಾಣಬರುತ್ತವೆ ಎಂದು ರಟ್ಟುಕಾಗದಗಳ ಮೇಲೆ ಮೊದಲು ರೇಖಾಚಿತ್ರಗಳನ್ನು ಬರೆಯುತ್ತಾರೆ. ಸಿವಿಲ್ ಇಂಜಿನಿಯರುಗಳು ರೇಖಾಚಿತ್ರ ಮುಂಗಂಡ ಸೇತುವಿನ ನಿರ್ಮಾಣ ಕಾರ್ಯವನ್ನು ಕೈಗೊಂಡು, ರೇಖಾಚಿತ್ರಕ್ಕೆ ಸಾಕ್ಷಾದ್ವಸ್ತು ಸ್ವರೂಪವನ್ನು ಕೊಡುತ್ತಾರೆ. ಲೇಖನಗಳನ್ನೂ ಗ್ರಂಥಗಳನ್ನೂ ಬರೆದು ಸೇತುನಿರ್ಮಾಣಕ್ಕೆ ಸಂಬಂಧಿಸಿದ ಜ್ಞಾನಾನುಭವಗಳನ್ನು ಶಾಸ್ತ್ರರೀತಿಯಲ್ಲಿ ವಿವರ ವಿವರವಾಗಿ ಬೆಳಸುತ್ತಾರೆ. ಹೀಗೆ ಸೇತುನಿರ್ಮಾಣದ ಬಗ್ಗೆ ಮನುಷ್ಯನ ಪ್ರಯೋಗಾನುಭವ ಕ್ರಮೇಣ ಹೆಚ್ಚಿ, ಸೇತುವೆಗೆ ಸಂಬಂಧಪಟ್ಟ ಶಾಸ್ತ್ರಜ್ಞಾನವು ಪ್ರಯೋಗ ಪರಂಪರೆಯಲ್ಲಿ ಯಶಸ್ವಿಯಾಗಿ ಮುಗಿದು, ಎಲ್ಲೆಲ್ಲಿ ಸೇತುವೆಗಳ ಆವಶ್ಯಕತೆಯುಂಟೋ ಅಲ್ಲಲ್ಲಿಯ ಪ್ರದೇಶ ಪರಿಸರ ಸನ್ನಿವೇಶಗಳಿಗೆ ತಕ್ಕಂತೆ ಪರಿಷ್ಕಾರವಾಗಿ ಯೋಜನೆಗಳನ್ನು ಕೈಕೊಂಡು, ಆ ಒಂದೊಂದು ಕಡೆಯೂ ಸೇತುವೆಗಳ ನಿರ್ಮಾಣವಾಗಿ ಜನಕ್ಕೆ ಉಪಕಾರವಾಯಿತು.

ಸಿವಿಲ್ ಹಕ್ಕುಬಾಧ್ಯತೆಗಳು ಅಥವಾ ಮಾನವ ಪ್ರಾಪ್ತವ್ಯಗಳು ದಾರ್ಶನಿಕರ ಮನಸ್ಸಿನಲ್ಲಿ ಕೇವಲ ಭಾವನಾಮಾತ್ರದವಾಗಿದ್ದುವು. ಮನುಷ್ಯ ಜೀವನಕ್ಕೆ ಆ

ಭಾವನೆಯನ್ನು ಅನ್ವಯಿಸಿಕೊಳ್ಳಲು ವಿಚಾರ ಪುನರ್ವಿಚಾರಗಳನ್ನು ಮಾಡಿಕೊಂಡ ಮೇಲೆ, ತಲೆಮಾರುಗಳ ಹೋರಾಟ ನಡೆದ ಮೇಲೆ, ಭಿನ್ನಾಭಿಪ್ರಾಯಗಳನ್ನು ಶೋಧಿಸಿ ಒಮ್ಮತಗಳಿಗೂ ರಾಜಿಕಬೂಲಿನ ನಿರ್ಣಯಗಳಿಗೂ ಬಂದು ಪ್ರಾಪ್ತವ್ಯ ಭಾವನೆಗಳನ್ನು ಆಚರಣೆಗೆ ತಂದುಕೊಳ್ಳುವ ಘಟ್ಟವನ್ನು ಬರಮಾಡಿಕೊಂಡದ್ದಾದ ಮೇಲೆ, ಜನಹಿತೈಷಿಗಳು ಭಾವಮಾತ್ರದವಾಗಿದ್ದ ಹಕ್ಕು ಬಾಧ್ಯತೆಗಳಿಗೆ ಪ್ರಾಪ್ತವ್ಯ ಘೋಷಣೆಗಳ ಅಥವಾ ಪ್ರಾಪ್ತವ್ಯ ಶಾಸನಗಳ ಸ್ವರೂಪವನ್ನು ಕೊಟ್ಟರು. ಈ ಪ್ರಾಪ್ತವ್ಯಗಳಿಗನುಸಾರವಾಗಿ "ಸಾಮಾಜಿಕ ನ್ಯಾಯ" ಎಂಬ ಶೀರ್ಷಿಕೆಯ ಕೆಳಗೆ ಬರುವ ಹಲವು ಅಮೂರ್ತ, ಭಾವಮಾತ್ರದ, ಜನ ಹಿತಾಭಿಲಾಷೆಗಳು ಅರ್ಥ ಶಾಸ್ತ್ರದಲ್ಲೂ ರಾಜ್ಯಶಾಸ್ತ್ರದಲ್ಲೂ ಸಮಾಜಸಮುದಾಯ ಸಂಬಂಧಗಳ ಕ್ಷೇತ್ರದಲ್ಲೂ ಖಚಿತವಾದ ರೂಪಪಡೆಯುತ್ತಿವೆ.

ವಿವಿಧ ಜೀವನ ಸಮಸ್ಯೆಗಳಲ್ಲಿ ಒಂದೊಂದು ಸಮಸ್ಯೆಯನ್ನೂ ಪರಿಹಾರ ಮಾಡಿಕೊಳ್ಳಲು ಪ್ರಯತ್ನ ನಡಸುವಾಗ, ಈ ಪ್ರಾಪ್ತವ್ಯ ತತ್ತ್ವವನ್ನು ಪ್ರಯೋಗ ಮಾಡುತ್ತ ಹೋದ ಹಾಗೆಲ್ಲ–ತತ್ತ್ವವು ವಿಕಸನ ಕ್ರಮದಲ್ಲಿ ಪಕ್ವವಾಗಿ ವಿಶದಪಡುತ್ತ, ಪ್ರಯೋಗಾವಸರದಲ್ಲಿ ಪದೇಪದೇ ಪರೀಕ್ಷಣಕ್ಕೊಳಪಟ್ಟು, ಸಾಮಾಜಿಕ ನ್ಯಾಯವು ಒಂದು ಪ್ರಮಾಣಬದ್ಧವಾದ ಕಾರ್ಯವಿಧಾನವಾಗಿ ಜನಾಂಗೀಕಾರ ಪಡೆಯುತ್ತದೆ. ದಕ್ಷರೂ ಅನುಭವಿಗಳೂ ಆದ ಸಮಾಜಶಾಸ್ತ್ರಜ್ಞರ ನಿರ್ದೇಶನದಲ್ಲಿ ಸಾಮಾಜಿಕ ನ್ಯಾಯ ತತ್ತ್ವಗಳನ್ನು ಅಂಗೀಕಾರಮಾಡಿ, ಜೀವನಯಾತ್ರಾ ಕಾಲದಲ್ಲಿ ಎದುರಿಸಬೇಕಾದ ಸಮಸ್ಯೆಗಳ ಪರಿಹಾರಕ್ಕೆ,–ನದೀಪಾತ್ರತರಣಕ್ಕೆ ನಿರ್ಮಿಸಿಕೊಂಡ ಸೇತುವೆಗಳನ್ನು ಹೇಗೋ ಹಾಗೆ,–ಜನರು ಬಳಸಿಕೊಳ್ಳುತ್ತಾರೆ.

## ಸರ್ವಜನ ಸುಖವೇ ಗುರಿ

ಭೂಮಂಡಲವನ್ನು ತಕ್ಕ ಜನವಸತಿ ಪ್ರದೇಶವಾಗಿ ಅಣಿಮಾಡುವಾಗ, ಮೊಟ್ಟ ಮೊದಲಿಗೆ ನಾವು ಭೌತ ಸಹಾಯವನ್ನು ರೂಢಿಸಿಕೊಳ್ಳಬೇಕು. ಸಾಮಾಜಿಕ ನ್ಯಾಯವು ವಿಧಾಯಕ ಮಾಡುವ ಆವಶ್ಯಕತೆಗಳಿಗನುಸಾರವಾಗಿ ಆ ಭೌತ ಸಹಾಯವನ್ನು ಗೊತ್ತುಮಾಡಿಕೊಂಡು, ಸಿದ್ಧತೆಯ ಮಿಕ್ಕ ವಿವರಗಳನ್ನು ನಿರ್ಧರಿಸಿಕೊಳ್ಳಬೇಕು. ಜನ ಸಮುದಾಯದಲ್ಲಿ ಪರಮಾವಧಿಯ ಸಂಖ್ಯೆಯವರಿಗೆ ಪರಮಾವಧಿಯ ಸುಖ ಸಲ್ಲುವ, ಮತ್ತು ಕನಿಷ್ಠಾವಧಿಯ ಸಂಖ್ಯೆಯವರಿಗೆ ಕನಿಷ್ಠ ಹಾನಿ ತಟ್ಟುವ ಸಂಭವವುಳ್ಳ ವ್ಯವಸ್ಥೆಯೇ ಶುಭಜೀವನದ ಕಡೆಗೆ ಮನುಷ್ಯ ಸಮಾಜವನ್ನು ನಡಸುವ ಮಾರ್ಗ. ಇದೇ ಮನುಷ್ಯನು ತನ್ನ ಮುಂದೆ, ತನ್ನ ಯೋಜನೆಯ ಸಾಫಲ್ಯಕ್ಕೆ ಇರಿಸಿಕೊಳ್ಳಬೇಕಾದ ಗುರಿ.

ಶುಭಜೀವನವನ್ನು ಆಗಮಾಡಿಸಿಕೊಳ್ಳುವ ಮನುಷ್ಯ ಪ್ರಯತ್ನಗಳು ನಾಲ್ಕು ಮಟ್ಟಗಳಲ್ಲಿ ನಡೆಯಬಹುದು. **ಮೊದಲನೆಯದು,** ಸಂಪ್ರದಾಯ ಪದ್ಧತಿಗಳಿಗೆ ಅನುವರ್ತನೆ ಸಲ್ಲಿಸದೆ ಅವಿಧೇಯವಾಗುವ ಸಾಹಸಕ್ಕೂ ಆದಿ ಪ್ರಯತ್ನಗಳಲ್ಲಿ ಆನುಷಂಗಿಕವಾಗಿ ಸೇರಿ ಅಣಿಯಾಗಿ, ಪ್ರಾಪ್ತವಾಗುವ ಕಷ್ಟ ಕೋಟಲೆಗಳ ಅನುಭವಕ್ಕೂ ಸಂಸಿದ್ಧರಾದ ವ್ಯಕ್ತಿ ಮನುಷ್ಯರು ಶುಭಜೀವನ ವಿಧಾನವನ್ನು ಇಂದೇ ಪ್ರಾರಂಭಿಸಬಹುದು. ಪ್ರಪಂಚದ ಉದ್ದ ಅಗಲಗಳಲ್ಲೂ ವರ್ತಮಾನದ ಸಾಮಾಜಿಕ ವ್ಯವಸ್ಥೆಯೊಡನೆ ಮನಸ್ಸಿನ ಸಂಬಂಧಗಳನ್ನು ತೊರೆದ ವ್ಯಕ್ತಿ ಮನುಷ್ಯರು ಇರುತ್ತಾರೆ. ಇಂಥವರಿಗೆ ಶುಭಜೀವನವೆಂಬುದು ಹಿಂದುಗಡೆ ಕಣ್ಮರೆಯಾಗಿ ಎಲ್ಲೂ ಇಲ್ಲ. ಅವರು ಮುನ್ನೋಟವಿಟ್ಟರೆ ಸಾಕು, ಶುಭಜೀವನ ಅವರಿಗೆ ಅಭಿಮುಖವಾಗಿಯೇ ಇರುತ್ತದೆ. ಇಂಥವರು ಮಾತ್ರ ದುಡಿದು ಶುಭಜೀವನವನ್ನು ತಂದುಕೊಳ್ಳಬಲ್ಲರು. ಆದದ್ದರಿಂದ ಸಾಂಪ್ರತ ಜೀವನ ಪರಿಸ್ಥಿತಿಯನ್ನು ಅದರ ಮಟ್ಟದಿಂದ ಮೇಲಕ್ಕೆ ಎತ್ತಲು ತವಕಿಸಿ,–ಶುಭಜೀವನ ಸ್ವರೂಪವೆಂಥಾದ್ದು, ಅದರ ಸಿದ್ಧಿಗೆ ಅವಶ್ಯವಾದ ಪ್ರಯತ್ನಗಳಾವುವು?–ಎಂದು ಅವರು ತಮ್ಮನ್ನು ತಾವೇ ಪ್ರಶ್ನಿಸಿಕೊಳ್ಳುತ್ತಿದ್ದಾರೆ.

**ಎರಡನೆಯದು,** ಸಮುದಾಯ ಪ್ರಯತ್ನ. ವ್ಯಕ್ತಿ ಪ್ರಯತ್ನವೆಂದಿಗೂ ಸಮುದಾಯ ಪ್ರಯತ್ನದ ಸ್ಥಾನದಲ್ಲಿ, ಅದಕ್ಕೆ ಬದಲಾಗಿ ಪ್ರಯೋಗವಾಗಬಹುದಾದ, ಪ್ರತಿವಿಧಾನವಾಗಲಾರದು. ಸಾಂಪ್ರತ ಸಾಮಾಜಿಕ ಪದ್ಧತಿಯೊಡನೆ ಮಾನಸಿಕವಾಗಿ ಸಂಬಂಧಗಳನ್ನು ತ್ಯಾಗಮಾಡಿದ ಮನುಷ್ಯರು ತಾನಿರುವ ಪ್ರವೇಶವನ್ನು ತ್ಯಾಗಮಾಡಬೇಕು, ಇಲ್ಲವೆ ನೆಲೆಗೊಂಡಿರುವ ಸಾಮಾನ್ಯ ಪರಿಸರದಲ್ಲಿ ಹಾಗೂ ಗತಕಾಲದಿಂದ ಸಾಗಿಬಂದ ಸಂಸ್ಥಾ ಪದ್ಧತಿಗಳೊಡನೆಯೂ ಆಚರಣೆಗಳೊಡನೆಯೂ ಹೇಗೋ ಬಾಳಿಕೊಂಡಿರಬೇಕು. ಆದರೆ ಯಾರ ಮನಸ್ಸು ಸೂಕ್ಷ್ಮ ಸಂವೇದಿಯೋ, ಯಾರಿಗೆ ವಾಸ್ತವಿಕ ಸಂದರ್ಭಗಳ ಗ್ರಹಣ ಸಾಮರ್ಥ್ಯವುಂಟೋ ಅವರು ಪದ್ಧತಿಯ ಗೋಜಿನಿಂದಲೂ ಆಚರಣೆಗಳ ಸಹವಾಸದಿಂದಲೂ ತಮ್ಮ ಮನೋವೃತ್ತಿಯನ್ನು ಬಿಡಿಸಿಕೊಂಡು, ಶುಭಜೀವನದ ಆಯ್ಕೆ ಮಾಡಿಕೊಂಡು ಮುನ್ನಡೆಯಬಲ್ಲರು.

ಕಾರ್ಯ ಕಾರಣ ಸರಣಿಯ ದೃಷ್ಟಿಯಿಂದ ನೋಡಿದಾಗ, ಮತ್ತು ಸಾಮಾನ್ಯವಾದ ಹೊಂದಾಣಿಕೆಯ ದೃಷ್ಟಿಯಿಂದ ನೋಡಿದಾಗ ಕೂಡ, ಶುಭಜೀವನಕಾಂಕ್ಷಿಗಳಾದ ವ್ಯಕ್ತಿಮನುಷ್ಯರು ಗುರಿಮುಟ್ಟುವ ಪ್ರಯತ್ನಕ್ಕೆ ಸಮಾನಧರ್ಮಿಗಳಾದ ಜೊತೆ ಮನುಷ್ಯರ ಸಹಕಾರವನ್ನು ಬಯಸಿ, ಅವರನ್ನು ಕೂಡಿಕೊಂಡು, ತಮ್ಮ ಭಾವನೆ ಅನುಭವಗಳನ್ನು ಅವರಿಗೆ ಹೇಳಿ, ಅವರ ಭಾವನೆ ಅನುಭವಗಳನ್ನು ತಾವು ಕೇಳಿ, ಧ್ಯೇಯೋದ್ದೇಶ ಸಾಧನೆಗೋಸ್ಕರ ಸಂಘ ಸಂಘಟನೆಮಾಡಿಕೊಂಡು ಸಾಮೂಹಿಕ ಸಹವರ್ತನೆಯನ್ನು ಮುಂಬರಿಸುತ್ತಾರೆ. ಪತ್ರವ್ಯವಹಾರದ ಮೂಲಕ ಸರಳ ಸಂಪರ್ಕ

ಸಂಬಂಧಗಳನ್ನು ಬೆಳಸುತ್ತಾರೆ. ಆಮೇಲೆ ತಾವು ಸಮಾನಧರ್ಮಿಗಳಿಗೆ ಸಂದರ್ಶನ ಕೊಡುತ್ತಾರೆ, ಅವರನ್ನು ಸಂದರ್ಶಕರಾಗಿ ಬರಮಾಡಿಕೊಳ್ಳುತ್ತಾರೆ. ಹೀಗೆಶಾಶ್ವತ ಜನಸಂಪರ್ಕವನ್ನು ಗಳಿಸಿ, ನಿಯತ ಕಾಲಿಕ ಪ್ರಕಟನೆಗಳನ್ನು ಹೊರಡಿಸಿ, ಸಂಘ ಸಭೆ ಗಳನ್ನು ಸೇರಿಸಿ ಸಾಮಾಜಿಕ ಜೀವನ ಕ್ಷೇತ್ರದಲ್ಲಿಯ ವೃತ್ತಿಹಿತಗಳನ್ನೂ ಹವ್ಯಾಸ ಗಳನ್ನೂ ಸಾಮಾನ್ಯ ರಾಜಕೀಯ ಸಾಮಾಜಿಕ ಹಿತಗಳನ್ನೂ ಚರ್ಚಿಗೆತ್ತಿಕೊಳ್ಳು ತ್ತಾರೆ.

ಈ ಘಟ್ಟದಲ್ಲಿ ಹೆಚ್ಚು ಸಮರ್ಥರೂ ಪ್ರಭಾವಶಾಲಿಗಳೂ ಸಮಾಲೋಚನೆ ಮಾಡಿ, ತತ್ ಕ್ಷಣವೇ ಜನಸಮುದಾಯಕ್ಕೊಂದು ವ್ಯವಹಾರ ಸುಲಭವಾದ ಯೋಜನೆಯನ್ನು ರಚಿಸುತ್ತಾರೆ. ಶುಭಜೀವನಾರಂಭಕ್ಕೆ ಅವಕಾಶಕೊಡುವ ಅಂತಿಮೋದ್ದೇಶನಿಷ್ಠರಾದ ಇಂಥ ಜನಸಮುದಾಯಗಳು ಅಲ್ಲಲ್ಲಿ ಸಂಘಟಿತರಾಗಿ ಸಮಾಜ ಚರಿತ್ರೆಯ ವಿಷಮ ಸಂದರ್ಭಗಳಲ್ಲಿ ಕಾರ್ಯಮಾಡಿದ ದಾಖಲೆಗಳು ಪ್ರಕಾಶಕ್ಕೆ ಬರುತ್ತವೆ. ಅನೇಕವೇಳೆ ಈ ಸಮುದಾಯಗಳು ಒಬ್ಬಾನೊಬ್ಬ ಅತ್ಯಂತ ಪ್ರಮುಖ ಮನುಷ್ಯನ ಅನುಯಾಯಿಗಳಾಗಿರುತ್ತಾರೆ. ಇಂಥಾ ಮನುಷ್ಯನು ತನ್ನ ವ್ಯಕ್ತಿಗುಣ ವಿಶೇಷದಿಂದ ಪವಿತ್ರ ದೀಕ್ಷಾಬದ್ಧನಾಗಿ, ಇಲ್ಲವೆ ದೇವತಾಮನುಷ್ಯನೆನ್ನಿಸಿ ಅನುಯಾಯಿಗಳ ವಿಶ್ವಾಸಕ್ಕೆ ಪಾತ್ರನಾಗುತ್ತಾನೆ. ಈತ ದಿವ್ಯ ಸ್ಫೂರ್ತಿಯಿಂದ ಕೂಡಿದವನಾಗಿ, ಧರ್ಮಯುದ್ಧಕ್ಕೋ ನೂತನ ಮತಧರ್ಮದ ಚಳವಳಿಗೋ ತನ್ನ ಅನುಯಾಯಿಗಳನ್ನು ಚೋದಿಸಿ ನಡಸಬಲ್ಲ ನೇತಾರನಾಗುತ್ತಾನೆ.

ಅಂತಿಮೋದ್ದೇಶ ನಿಷ್ಠ ಜನಸಮುದಾಯಗಳು ಮೂರು ವಿಘ್ನಗಳನ್ನು ಎದುರಿಸ ಬೇಕಾಗುತ್ತದೆ; (1) ಸ್ವಸಂಘಸದಸ್ಯರಲ್ಲಿ ಭಾವನಾತ್ಮಕವಾದ ಭಿನ್ನಾಭಿಪ್ರಾಯಗಳು (2) ಪದ್ಧತಿಗೆ ಅನುವರ್ತನೆಯನ್ನು ತೊರೆದ, ಅಥವಾ ಸಂಪ್ರದಾಯ ಚ್ಯುತಿಗೆ ಅವ ಕಾಶಮಾಡಿಕೊಂಡವರ ಮೇಲೆ ಸುಪ್ರತಿಷ್ಠಿತವಾದ ಸಮಾಜ ವ್ಯವಸ್ಥೆಯ ನಿರ್ದೇಶನ ದಲ್ಲಿ ರಹಸ್ಯವಾಗಿಯೂ ಪ್ರಕಟವಾಗಿಯೂ ಬರುವ ಬಲಾತ್ಕಾರ ನಿರ್ಬಂಧಗಳು, ಮತ್ತು (3) ಸಮುದಾಯವು ತನಗೆ ನೀತಿಯಾಗಿ ಕಲ್ಪಿಸಿಕೊಂಡ ಅಂತಿಮೋದ್ದೇಶಕ್ಕೆ ನಿಷ್ಠೆ ಸಲ್ಲಿಸಲಾರದ ಹೊಸ ಪೀಳಿಗೆಯವರ ಅಸಾಮರ್ಥ್ಯ. ವಾಸ್ತವವಾಗಿ ಹಳೆಯ ಸಮಾಜದಲ್ಲಿಯ ಸಂಪ್ರದಾಯ ನಿಷ್ಠರಾದ ಪ್ರಭಾವಶಾಲಿಗಳು ಯುವಕರ ಮುಂದೆ, –"ಸ್ವಾತಂತ್ರ್ಯ", ಉದ್ಯೋಗ ಮತ್ತು ಇತರ ಭೌತ ಸಂಭಾವನೆ ಅನುಗ್ರಹಗಳನ್ನು ಪ್ರಲೋಭನ ಜಾಲರೂಪದಲ್ಲಿ ಹರಡಿ, ನೂತನ ಯೋಜನೆಗೆ ಯುವಕರ ನಿಷ್ಠೆ ಸಹಕಾರ ಗಳನ್ನು ತಪ್ಪಿಸಲು ಹೆಣಗುತ್ತಾರೆ.

ಅಂತಿಮೋದ್ದೇಶ ನಿಷ್ಠ ಜನಸಮುದಾಯಗಳಲ್ಲಿ ಅತ್ಯಂತ ಯಶಸ್ವಿಯಾಗತಕ್ಕವು ಇವು; ಯಾವ ಸಮುದಾಯದ ಸದಸ್ಯರಲ್ಲಿ ಮತಧರ್ಮ ಸಂಬಂಧಗಳು ದೃಢವೋ;

ಯಾರು ಶಿಷ್ಟ (ಶಿಸ್ತು) ಸಂಯಮ ಸಂಪತ್ತಿನಲ್ಲಿ ತಪಸ್ಸದೃಶವಾಗಿ ತೀವ್ರ ನಿಷ್ಠರೋ; ಮತ್ತು ಯಾವ ಸಮುದಾಯದ ಸದಸ್ಯರು ಪೂರ್ವಮತ ಸಂಪ್ರದಾಯ ನಿಷ್ಠೆಯುಳ್ಳವರ ಸಾಂಪ್ರತಕಾಲೀನ ಸಂತತಿಯಾಗಿ ಇರದೆ ಪ್ರತಿಷ್ಠಿತ ಪ್ರಾಚೀನ ಪದ್ಧತಿಯಲ್ಲಿ ನಂಬಿಕೆ ಕದಲಿದವರಾಗಿ, ಸಮಾನ ಧರ್ಮಿಗಳನ್ನು ಹುಡುಕುತ್ತ, ಹೆಚ್ಚು ತೃಪ್ತಿಕರವಾದ ಸಾಮಾಜಿಕ ಸ್ನೇಹ ಸಂಬಂಧಗಳನ್ನು ಬೆಳಸಲು ಕಾತರರೋ ಅಂಥವರನ್ನೊಳಗೊಂಡ ಸಮುದಾಯಗಳು ನವೀನೋದ್ದೇಶ ಸಾಧನೆಯಲ್ಲಿ ಯಶಸ್ವಿಯಾಗುತ್ತಾರೆ.

ಶುಭಜೀವನಾರಂಭಕ್ಕೆ ಇರುವ **ಮೂರನೆಯ** ಸಾಮಾಜಿಕಸ್ತರ ಇದು: ಒಂದು ರಾಷ್ಟ್ರದಲ್ಲಿ ಅಥವಾ ಜನಪದದಲ್ಲಿ ದೊರೆತ ಕಠೋರವಾದ ಅನುಭವಗಳಿಂದ ಯಾರು ನಿರಾಶರಾಗಿರುವರೋ (ಎಂದರೆ, ದೀರ್ಘಕಾಲದ ವಿನಾಶಕ ಸಮರ ಪರಿಸ್ಥಿತಿಗಳ ಕಷ್ಟವನ್ನು ಹಾದು ಯಾರು ಹತಾಶರಾಗಿರುವರೋ) ಅವರು, ಮತ್ತು ಯಾರಲ್ಲಿ ಐಕ್ಯಮತ್ಯ ಬಲ ಇನ್ನೂ ಊರ್ಜಿತವಾಗಿದೆಯೋ ಅವರು, ಮತ್ತು ಯಾರು ಹೊಸ ನಾಯಕತ್ವವನ್ನು ಅನುಸರಿಸಲು ಸಿದ್ಧರಾಗಿ ಹೊಸ ಅಧಿಕಾರ ಮಂಡಲಿಯ ನಿರ್ದೇಶನಕ್ಕೆ ಒಡಂಬಡುವರೋ ಅವರು ಈ ಮೂರನೆಯ ಸ್ತರದಲ್ಲಿ ಶುಭಜೀವನ ಸಮಾರಂಭಕ್ಕೆ ಅರ್ಹರು. 1914 ರ ಮತ್ತು 1939 ರ ಯುದ್ಧಗಳು ತಂದಿಟ್ಟ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಸಾಮ್ರಾಜ್ಯಗಳ ವಸಾಹತು ಪ್ರದೇಶಗಳಲ್ಲಿ ಅಧೀನರಾಗಿ ಬೆಳೆದುಬಂದದ್ದು ಈ ಮೂರನೆಯ ಸ್ತರದ ಜನಸಮುದಾಯ. ಶೋಷಣೆ, ದಬ್ಬಾಳಿಕೆ, ಸರ್ವವಸ್ತುನಾಶ, ಪ್ರಾಣನಾಶ ಗಳಂಥ ವಿಷಮ ಸಂದರ್ಭಗಳಲ್ಲಿ ಸಿಕ್ಕಿದ ಈ ಜನರು 19 ನೆಯ ಶತಮಾನದಲ್ಲಿ ಸ್ವಾತಂತ್ರ್ಯ ಚಳವಳಿಗಳನ್ನು ನಡಸಿ ಸಾಮ್ರಾಜ್ಯವಾದವನ್ನು ಧಿಕ್ಕರಿಸಿ ತಿರಸ್ಕರಿಸಲು ಹೊತ್ತನ್ನು ಎದುರು ನೋಡುತ್ತಿದ್ದರು. ಈ ಜನಸಮುದಾಯ ಸ್ವಾತಂತ್ರ್ಯವನ್ನು ಗೆದ್ದುಕೊಂಡು ಸಮಾಜ ಸಾಮ್ಯತತ್ತ್ವಕ್ಕೆ ಒಲಿದು, ಸಮೀಚೀನವಾದ ಆರ್ಥಿಕ ಯೋಜನೆ, ಸಮಾಜನಿರ್ದೇಶನದಲ್ಲಿ ವಸ್ತುಗಳ ಉತ್ಪಾದನೆ, ವಸ್ತುವಿತರಣೆ ಮತ್ತು ಮುಖ್ಯ ಸಾಮಾಜಿಕ ಸೇವೆಗಳನ್ನು ಭರವಸೆಪಡಿಸುವ ಆಡಳಿತ ವ್ಯವಸ್ಥೆ-ಇವ ಕೋಸ್ಕರ ಹಂಬಲಿಸುತ್ತಿದ್ದವರು.

ಶುಭಜೀವನಾರಂಭಕ್ಕೆ ಇರುವ **ನಾಲ್ಕನೆಯ** ಸಮಾಜಸ್ತರ ಇದು: ಪ್ರಾದೇಶಿಕ ವಾಗಿಯೂ ಜಗದ್ವ್ಯಾಪಿಯಾಗಿಯೂ ನಾನಾ ರಾಷ್ಟ್ರಸಹಕಾರದಿಂದ ಪ್ರಯತ್ನಗಳನ್ನು ಕೈಕೊಂಡು, ಏಳಿಗೆಯ ಕೆಳಮಟ್ಟದಲ್ಲಿರುವ ಜನರನ್ನು ಏಳಿಗೆಯ ಮೇಲ್ಮಟ್ಟದಲ್ಲಿರುವ ಜನಕ್ಕೆ ಸಮಸ್ಕಂಧವಾಗಿ ಎತ್ತಲು ಅವಕಾಶವಿರುವ ಸಮುದಾಗಳೊನ್ನೊಳಗೊಂಡದ್ದು ಈ ಅಂತರರಾಷ್ಟ್ರೀಯಸ್ತರ.

ಈ ನಾಲ್ಕು ಸ್ತರಗಳಲ್ಲೂ-ಮನುಷ್ಯ ವ್ಯಕ್ತಿಯ ಅಂತಿಮಧ್ಯೇಯನಿಷ್ಠ ಜನ ಸಮುದಾಯದ ಬಿಡಿರಾಷ್ಟ್ರಗಳ ಸಂಬಂಧ ಹಾಗೂ ಅಂತರರಾಷ್ಟ್ರೀಯ ಸಂಬಂಧಗಳ

ಸ್ತರಗಳಲ್ಲಿ – ಗಂಭೀರಸಮಾಲೋಚನೆ ಮತ್ತು ದೂರಪರಿಣಾಮಕಾರಿ ಕರ್ತವ್ಯ ಕಾರ್ಯಗಳ ನಿರ್ವಹಣೆ ನಡೆಯುತ್ತವೆ. ಈ ಸರ್ವತ್ರ ಸಾಮೂಹಿಕ ಪ್ರಯತ್ನಗಳಿಂದ ಕ್ಷಿಪ್ರವಾಗಿ, ಸಾಂಪ್ರತ ಕಾಲದಲ್ಲೇ ಶುಭಜೀವನ ಸಮಾರಂಭವನ್ನು ಕಾಣುವ ತವಕ ವ್ಯಕ್ತಪಡುತ್ತಿದೆ.

"ನಮ್ಮಕಾಲದಲ್ಲೇ ಶುಭಜೀವನ ಸಮಾರಂಭ" ಎಂಬುದು ಈ ಒಳ್ಳೆಯ ಬಾಳಿನ ಚಳವಳಿಗೆ ಹುರುಪುಕೊಡುವ ಘೋಷಣೆಯಾಗುತ್ತದೆ. ಈ ಚಳವಳಿಯಲ್ಲಿ ವ್ಯಕ್ತಿಮನುಷ್ಯರೂ ಸಂಘಸಮುದಾಯಗಳೂ, ಅಂತರಸಂಘ ಸಮುದಾಯಗಳೂ ಸೇರಿರುತ್ತಾರೆ. ಅವರವರ ಕ್ಷೇತ್ರದಲ್ಲಿ ಚಳವಳಿಯನ್ನು ಬಲಪಡಿಸುತ್ತಾರೆ. ಪ್ರಪಂಚದ ನಾನಾ ಪ್ರದೇಶಗಳಲ್ಲಿ ವ್ಯಕ್ತಿಗಳಾಗಿ ಸಮುದಾಯಗಳಾಗಿ ಚೆದುರಿರುವ ಇವರೆಲ್ಲ ಏಕೋದ್ದೇಶಕ್ಕೂ ಏಕಹಿತಕ್ಕೂ ಪ್ರತಿನಿಧಿಗಳಾಗಿ, ಸರ್ವತ್ರ ಸಂಘಟಿತ ಕಾರ್ಯಕ್ಕೆ ಸಂಸಿದ್ಧರಾಗಿದ್ದಾರೆ.

ಈ ಘೋಷಣೆಯನ್ನು ಅರ್ಥೋದ್ದೇಶಗಳಲ್ಲಿಯೂ ಉದ್ಯಮ ಯೋಜನೆಗಳಲ್ಲಿಯೂ ವಿಸ್ತರಿಸಿ, ಅದನ್ನು ಎಲ್ಲ ಭೂಖಂಡಗಳಲ್ಲಿಯ ಎಲ್ಲ ದೇಶಗಳ ಮುಂದಿನ ತಲೆಮಾರಿನ ಜನಕ್ಕೂ ಅನ್ವಯಿಸಬಹುದು. ವಾಸ್ತವವಾಗಿ ಈ ಘೋಷಣೆ ವಿಶ್ವಜನ ವರ್ಗದ ಬಹುಸಂಖ್ಯಾಕರ ಆಶೆ ಆಶೋತ್ತರಗಳನ್ನು ಗರ್ಭೀಕರಿಸಿಕೊಂಡು ಫಲಸಿದ್ಧಿಯನ್ನು ಚೋದಿಸುತ್ತದೆ.

ಜನತೆಯ ಕಷ್ಟ ಕಾರ್ಪಣ್ಯಗಳ ನಿವಾರಣೆಗೆ ಸಾಕಾಗುವಷ್ಟು ಪರಿಹಾರ ವ್ಯವಸ್ಥೆಯನ್ನು ಮಾಡಲು ಅಸಮರ್ಥವಾದದ್ದು ಪಾಶ್ಚಾತ್ಯನಾಗರಿಕತೆ; ಮತ್ತು ಸಂಪದಭಿವೃದ್ಧಿಗಾಗಿ ಸಮೀಚೀನವಾದ ಆರ್ಥಿಕ ಯೋಜನೆಯೊಂದನ್ನು ರೂಪಿಸಿ ಸಾಮಾಜಿಕ ನ್ಯಾಯವನ್ನು ಭರವಸೆಯಾಗಿ ಜನಕ್ಕೆ ಒದಗಿಸುವುದೂ ಪಶ್ಚಿಮ ನಾಗರಿಕತೆಗೆ ಆಗದ ಕೆಲಸ. ಅದರ ನೇತೃತ್ವದಲ್ಲಿ ಸುಪ್ರತಿಷ್ಠಿತವಾದ ಸಂಸ್ಥೆ ಪದ್ಧತಿಗಳು ಉತ್ಪಾದಿಸಿದ ಭಾರಿ ಸಂಪತ್ತನ್ನು ಜನತೆ ಹಂಚಿಕೊಳ್ಳುವಂತೆ ಮಾಡಲಾರದವು. ಇದಕ್ಕೆ ಬದಲಾಗಿ ಅಭಾವ ಪರಿಸ್ಥಿತಿಗೆ ಪ್ರೋತ್ಸಾಹ ಕೊಡುವ ಈ ಪದ್ಧತಿ ಸಂಸ್ಥೆಗಳ ಆಶ್ರಯದಲ್ಲಿ ಅಲ್ಪಸಂಖ್ಯಾಕಜನ ಸ್ವತ್ತುಗಾರರೂ ವಿಶೇಷ ಸೌಕರ್ಯಭೋಗಿಗಳೂ ಪ್ರಭಾವಶಾಲಿಗಳೂ ಆಗಿ, ತಮ್ಮ ಈಗಣ ಅಧಿಕಾರ ಪ್ರತಿಷ್ಠೆಗಳ ಗಾತ್ರದಲ್ಲಿ ಕೊಬ್ಬಿಹೋಗಿದ್ದಾರೆ. ಪ್ರಪಂಚದ ಬಹುಸಂಖ್ಯಾಕ ಜನವರ್ಗವನ್ನು ಹಸಿವು ನ್ಯೂನಪೋಷಣೆ, ಕಾಲಕಾಲದ ಕ್ಷಾಮಡಾಮರಗಳು ಮತ್ತು ಅಸಮರ್ಪಕ ವಸತಿಗಳು, ಅನಾರೋಗ್ಯ ಅಜ್ಞಾನ ಮೂಢನಂಬಿಕೆಯ, ಮತ್ತು ನಿರಾಶೆಯಷ್ಟು ಮಾತ್ರದ ಕಾವಳದ ಬಾಳಿಗೆ ತಳ್ಳಿ, ಅವರೆಲ್ಲರನ್ನೂ ಬವಣೆಯಲ್ಲಿ ತೊಳಲುತ್ತ ತೆವಳುವಂತೆ ಮಾಡಿದ್ದಾರೆ.

ಹಲವರನ್ನು ಸುಲಿದು ಕೆಲವರ ಲೇಸನ್ನು ನೆರವೇರಿಸುತ್ತ ಸಾವಿರ ವರ್ಷಗಳಷ್ಟು ಅವಧಿಯ "ಸೇವೆ" ಯನ್ನು ಸಲ್ಲಿಸಿದ ಈ ಒಂದು ಸಾಮಾಜಿಕ ಕಾರ್ಯವಿಧಾನವ ನ್ನೀಗ ಪುನಃ ಪರಿಷ್ಕರಿಸಿ, ವಸ್ತುವಿತ್ತ ಪುಷ್ಕಲತೆಯನ್ನು ಅದು ಜನತೆಯಲ್ಲಿ ನ್ಯಾಯ ವಾಗಿ ಹಂಚಬಲ್ಲ ಸಾಧನವಾಗುವಂತೆ ಮಾಡಿ ಮತ್ತೆ ಕಟ್ಟಿ ನಿಲ್ಲಿಸಬೇಕು. ಈ ಪರಿಷ್ಕರಣ ಕಾರ್ಯವನ್ನು ಮಾಡಿ ಮುಗಿಸುವವರೆಗೆ ಈ ಹಳತಾಗಿ ಪ್ರಯೋಜನಾರ್ಹತೆಯನ್ನು ಕಳೆದುಕೊಂಡ ಸಮಾಜ ವಿಧಾನವು ನಮ್ಮ ನೂತನೋದ್ದೇಶದಲ್ಲಿರುವ ಸಮಾಜೋನ್ನ ತಿಯ ಪ್ರಯತ್ನಗಳ ದಾರಿಗೆ ಎಡರಾಗಿ ಅಡ್ಡ ಬರುತ್ತಲೇ ಇರುತ್ತದೆ.

ಪಾಶ್ಚಾತ್ಯ ನಾಗರಿಕತೆಯನ್ನು ಕುರಿತ ನಮ್ಮ ಖಂಡನೆ ಹೇಗೆ ಸಕಾರಣವೆಂಬು ದನ್ನು ಇಲ್ಲಿ ವಿವರವಾಗಿ ಪ್ರಸ್ತಾಪಿಸಬೇಕು. ಪಾಶ್ಚಾತ್ಯನಾಗರಿಕತೆ ಪ್ರಕೃತ ಜೀವನ ಸಂದರ್ಭಗಳಿಗೆ ಹೇಗೆ ನಿರುಪಯುಕ್ತವೆಂದರೆ—ಈ ಹೊತ್ತು ಸೈನ್ಸ್ ಮತ್ತು ಟೆಕ್ನಾ ಲಜಿ ಮುನ್ನಡೆದು ವಿತ್ತ ವಸ್ತು ಪುಷ್ಕಲತೆಗೆ ಅವಕಾಶಮಾಡಿದೆ. ಪಾಶ್ಚಾತ್ಯ ನಾಗರಿ ಕತೆಯಲ್ಲಿ ಸತ್ತ್ವಸಾಮರ್ಥ್ಯಗಳು ಇದ್ದಿದ್ದರೆ, ಈ ನೂತನಾಭಿವೃದ್ಧಿಯನ್ನು ಬರ ಮಾಡಿಕೊಂಡು, ಅರಗಿಸಿಕೊಂಡು, ಅದು ಕೊಡುವ ನೂತನ ಪೋಷಣೆಯನ್ನು ಹೀರಿ, ಈ ಅಭಿವೃದ್ಧಿಯಲ್ಲಿ ಜನತೆಗೆ ಪಾಲನ್ನು ಹಂಚುವ ಅಳವು ತನಗೆ ಇದೆ ಎಂಬುದನ್ನು ತೋರಿಸಲು—ತನ್ನ ಸಾವಿರ ವರ್ಷಗಳ ಅನುಭವ ಸಾಕೆಂದು ಅದು ಕಾರ್ಯಮಾಡಿ ತೋರಿಸಿಕೊಡಬೇಕಾಗಿತ್ತು. ಮನುಷ್ಯ ನಿರೀಕ್ಷಣೆಗೆ ಸಿಕ್ಕದೆ ನಡೆಯುವ ಅವಘಡ ಗಳಿಗೆ ವಿನಾಯಿತಿಕೊಡೋಣ. ಆದರೆ ಪಾಶ್ಚಾತ್ಯನಾಗರಿಕತೆ ಗಳಿಸಿದ ಈ ಒಂದು ಸಾವಿರ ವರ್ಷಗಳ ಅನುಭವ ರಾಶಿಯನ್ನು ಪರೀಕ್ಷೆಮಾಡಿ ನಿರ್ಣಯ ಹೇಳುವ ಪ್ರಾಮಾ ಣಿಕವಾದ ಒರೆಗಲ್ಲು, ಮಾನದಂಡ, ಯಾವುದೇ ಆದರೂ, ಪಾಶ್ಚಾತ್ಯನಾಗರಿಕತೆಯ ಬಗ್ಗೆ ಹೊರಡುವ ನ್ಯಾಯನಿರ್ಣಯವನ್ನು ಹೀಗೆ ವ್ಯಾಖ್ಯಾನಿಸಬೇಕಾಗುತ್ತದೆ. ಪಾಶ್ಚಾತ್ಯ ನಾಗರಿಕತೆಯ ಮನೋಭಾವಗಳು, ಚಟುವಟಿಕೆ ಚಲನವಲನಗಳು ಪದ್ಧತಿ ಸಂಸ್ಥೆಗಳು ಇವು ಯಾವುವೂ ಜನತೆಯಲ್ಲಿ ಪುಷ್ಕಲತೆಯನ್ನು ಹಂಚುವುದಕ್ಕಾಗಲಿ, ಸಾಮಾಜಿಕ ನ್ಯಾಯವನ್ನು ಸಾಧಿಸುವುದಕ್ಕಾಗಲಿ ಅಳವು ಸಾಕಾಗದೆ ಅದು ಅಳಿಪಾಡಿಗೆ ಇಳಿದಿದೆ.

ಜನತೆಗೆ ಕನಿಷ್ಠ ಮಿತಿಯ ಜೀವನದ ಮಟ್ಟವನ್ನು ಭದ್ರಪಡಿಸುವುದರಲ್ಲಾಗಲಿ, ಸಾಮಾಜಿಕ ನ್ಯಾಯವನ್ನು ಸಾಧಿಸುವುದರಲ್ಲಾಗಲಿ ಪಶ್ಚಿಮ ನಾಗರಿಕತೆ ವಿಫಲವಾಗಿದೆ ಯೆಂದು ಸಾರಲು ಈ ಮುಂದಿನ ಆರು ಕಾರಣಗಳು ಸಾಕಾಗಿವೆ. ಆ ಕಾರಣಗಳು ಯಾವುವೆಂದರೆ—

1) ಅಲ್ಪಸಂಖ್ಯಾಕರಾದ ಶ್ರೀಮಂತ ವಣಿಜರು ಜನವರ್ಗದಲ್ಲಿ ಕೇವಲ ಅಲ್ಪ ಸಂಖ್ಯಾಕ ಜನರ ಹಿತಪೋಷಣೆ ಹಾಗೂ ರಕ್ಷಣೆಯ ಕಾರ್ಯವನ್ನು ಹಲವು ತಲೆಮೊರೆ

ಗಳಿಂದ ನಡಸಿಕೊಂಡು ಬರುತ್ತಿದ್ದಾರೆ. ಸಾರ್ವಜನಿಕ ಹಿತದೃಷ್ಟಿ ಅಲ್ಪಸ್ವಲ್ಪವಾಗಿ ರುತ್ತ ಅಪರ ಆಸಕ್ತಿಕಾತರಗಳು ಅಲ್ಪಸಂಖ್ಯಾಕರ ಹಿತವನ್ನು ಕುರಿತೇ ಇರುತ್ತ ಬಂದವು. ಸ್ವಹಿತ ದೃಷ್ಟಿಯಿಂದ ಇವರು ಸಮುದಾಯ ಹಿತವನ್ನು ಅಷ್ಟಿಷ್ಟು ನಡಸು ವುದು ಹೇಗೆಂದು ಕಲಿತಿದ್ದರು. ತತ್ಫಲವಾಗಿ ಪಾಶ್ಚಾತ್ಯ ನಾಗರಿಕತೆಯ ಮುಖ್ಯ ಕೇಂದ್ರಗಳಲ್ಲಿ (ಎಂದರೆ ವಾಣಿಜ್ಯಮುಖವಾಗಿಯೂ ಯಂತ್ರೋದ್ಯಮ ಮುಖ ವಾಗಿಯೂ ಮುನ್ನಡೆ ಕಂಡ ನಗರಗಳಲ್ಲಿ) ದಾರಿದ್ರ್ಯವೂ ಸಂಪದಭಿವೃದ್ಧಿಯೂ ಅಕ್ಕ ಪಕ್ಕದಲ್ಲೇ—ಒಂದೇ ಆರ್ಥಿಕವ್ಯವಸ್ಥೆಯ ಎರಡು ಭಾಗಗಳಾಗಿ, ಇದ್ದುಕೊಂಡು ಬಂದಿವೆ. ಸ್ವಲ್ಪಜನಾಧಿಪತಿಗಳು (Oligarchs) ತಮ್ಮ ಉದ್ಯಮಕ್ಕೆ ಬೇಕಾದ ಅಗ್ಗವಾದ, ಸುಲಿಗೆಗೆ ಸುಲಭವಾಗಿ ದಕ್ಕಬಹುದಾದ, ಕಾರ್ಮಿಕಗಣವನ್ನು—ಬಡವರ ಬೀಡುಗಳಿಂದೆತ್ತಿ, ಅವರನ್ನು ದುಡಿಮೆಗೆ ಹೂಡಿ, ತಮಗೆ ಅಭ್ಯುದಯವನ್ನು ಸಾಧಿಸಿ ಕೊಡುವ ಸಾಧನಗಳನ್ನಾಗಿ ಮಾಡಿಕೊಂಡು, ತಮ್ಮ ಉದ್ಯಮಯಜ್ಞದಲ್ಲಿ ಒದಗಿಸಿದ ಪಶುಬಲಿಗಳೆಂಬಂತೆ ನಡಸಿ ಕಾರ್ಮಿಕರನ್ನು ಬಳಸಿಕೊಳ್ಳುತ್ತ ಬಂದರು.

ನಾಗರಿಕ ರಾಷ್ಟ್ರಗಳ ಗ್ರಾಮಾಂತರ ಪ್ರದೇಶಗಳಲ್ಲಿ ಆಡಳಿತವು ಭೂಸ್ವಾಮಿಗಳ ಜಮೀನ್ದಾರರ–ವಶಕ್ಕೆ ಬಂತು. ಇವರು ಸ್ವಾರ್ಥದಿಂದ ಮಜೂರಿ ಕೊಡದೆ ಬಲಾ ತ್ಕಾರದ ಜೀತವನ್ನೋ "ಕೊಡುವುದೊಂದು ಕಾಸು, ಕೋಣೆತುಂಬ ಹಾಸು" ಎಂಬಂತೆ ಸ್ವಲ್ಪ ಕೂಲಿಸಲ್ಲಿಕೆಗೆ ಭಾರಿ ಊಳಿಗವನ್ನೋ ಪಡೆಯಬಲ್ಲವರಾದರು. ಗ್ರಾಮ ಪ್ರದೇಶಗಳಲ್ಲಿ ಅದರಲ್ಲೂ ವಿಶೇಷವಾಗಿ, ಹೆಚ್ಚು ಫಲವತ್ತಾದ ವ್ಯವಸಾಯ ಕ್ಷೇತ್ರ ಗಳಲ್ಲಿ, ದಾರಿದ್ರ್ಯ ಎಷ್ಟು ವ್ಯಾಪಕವಾಗಿತ್ತೆಂದರೆ,—ಶೋಷಣೆ ಎಷ್ಟು ರೂಕ್ಷವಾಗಿ ತ್ತೆಂದರೆ,—ಕಾರ್ಮಿಕರು ಹಳ್ಳಿಗಳನ್ನು ಹಿಂದೆ ಬಿಟ್ಟು ತಮ್ಮ ಪಾಡನ್ನು ಉತ್ತಮ ಪಡಿಸಿಕೊಳ್ಳಲು ನಗರಗಳಿಗೆ ವಲಸೆಹೋಗಿ, ಸರಿಯಾದ ವಸತಿ ಲಭ್ಯವಾಗದೆ, ಹೊಲಸು ಕೇರಿಗಳಲ್ಲಿ ತಂಗಿದರು. ಗ್ರಾಮಾಂತರಗಳಲ್ಲಿ ತಮಗೆ ಲಭ್ಯನಾಗಿದ್ದ ಉದ್ಯೋಗದ ಕೊರತೆಯಿಂದಲೂ, ಹಳ್ಳಿ ಬದುಕಿನಲ್ಲಿ ನೆಮ್ಮದಿಯಿಲ್ಲದೆ ಗೋಳುಹೆಚ್ಚಿದ್ದದ್ದರಿಂದಲೂ ಈ ಬವಣೆಯಿಂದ ಬಿಡುಗಡೆಪಡೆಯಲು ಅವರು ದೊಡ್ಡ ಪಟ್ಟಣಗಳಿಗೆ ವಲಸೆ ಹೋಗುವುದು ಅನಿವಾರ್ಯವಾಯಿತು.

(2) ನಾಗರಿಕ ಸ್ವಲ್ಪಜನಾಧಿಪತ್ಯಗಳು ತಮ್ಮ ಇತಿಹಾಸದ ಉದ್ದಕ್ಕೂ ಐರೋಪ್ಯರಾಷ್ಟ್ರಗಳ ನೀತಿನಿರ್ದೇಶಕರಾಗಿ ನಿರ್ಣಯಮಾಡುವ ಅಧಿಕಾರ ಪಡೆದವಾಗಿ ದ್ದುವು. ತಮ್ಮ ಶಕ್ತಿಯನ್ನೆಲ್ಲ ಬಳಸಿ ತಮ್ಮ ಕೈಯಲ್ಲೇ ವಿತ್ತಾಧಿಕಾರಗಳು ಸಾಂದ್ರ ವಾಗುವುದಕ್ಕೂ ಆ ವಿತ್ತಾಧಿಕಾರಗಳಿಗೆ ತಾವೇ ಗುತ್ತಿಗೆದಾರರಾಗುವುದಕ್ಕೂ ಅವಕಾಶ ಮಾಡಿಕೊಂಡರು. ಅವರಿಗಿದ್ದ ವಿತ್ತಸಂಪಾದನೆಯ ಮೂಲವು ಗ್ರಾಮಪ್ರದೇಶಗಳಲ್ಲಿಯ ಜಮೀನು ಹಾಗೂ ಧನ ಬಂಡವಾಳಗಳು; ಇವು ಅವರಿಗೆ ಸ್ವತ್ತನ್ನು ಕಟ್ಟಿಕೊಡು

ತ್ತಿದ್ದವು. ಸೊತ್ತಿನ ಒಡೆತನವೆಂಬುದು ಪಾಶ್ಚಾತ್ಯನಾಗರಿಕತೆಯ ಆಧಾರ ಸ್ತಂಭಗಳ ಲ್ಲೊಂದಾಗಿ, ಒಡೆಯರು ದುಡಿಯದೆ ಬದುಕು ಸಾಗಿಸುವ ಅವಕಾಶ ಪಡೆದವರಲ್ಲದೆ, ಬಡತನದ ಬವಣೆಯಲ್ಲಿರುವ ಜನದ ಕಾರ್ಮಿಕ ಬಲವನ್ನು ಸುಲಿಗೆಮಾಡಿ, ಗೇಣಿ, ಬಾಡಿಗೆ ಹಾಗೂ ಲಾಭವನ್ನು ಗಳಿಸುವ ಅವಕಾಶವನ್ನು ಗ್ರಾಮಾಂತರ ನಗರ ಪ್ರದೇಶ ಗಳೆರಡರಲ್ಲೂ ಹೆಚ್ಚಿಸಿಕೊಂಡರು.

(3) ಪಾಶ್ಚಾತ್ಯ ನಾಗರಿಕತೆಯ ಕಳೆದ ನಾಲ್ಕು ಶತಮಾನಗಳ ಅವಧಿಯಲ್ಲಿ ಯುರೋಪಿನ ಅತ್ಯಂತ ಧನಿಕ ಹಾಗು ಅತ್ಯಂತ ಅಧಿಕಾರಾರೂಢ ರಾಷ್ಟ್ರಗಳಲ್ಲಿಯ ಸ್ವಲ್ಪಜನಾಧಿಪತ್ಯಗಳು ದಕ್ಷಿಣೋತ್ತರ ಅಮೆರಿಕಾಖಂಡಗಳಲ್ಲಿ, ಏಷ್ಯಾ ಆಫ್ರಿಕಾ ಖಂಡಗಳಲ್ಲಿ ವಸಾಹತು ಸಾಮ್ರಾಜ್ಯಗಳನ್ನು ಕಟ್ಟಿಕೊಂಡರು. ಅವರು ಈ ಸಾಧನೆಗೆ ಬಳಸಿದ ಚಟುವಟಿಕೆಗಳಿವು: – ಮುತ್ತಿಗೆ ಹಾಕೋಣ, ನೆಲವನ್ನು ಆಕ್ರಮಿಸಿ ಕೊಳ್ಳೋಣ; ಕೆಲವು ವೇಳೆ ಗೆದ್ದ ಪ್ರದೇಶಗಳಲ್ಲಿ ನೆಲಸಿ ಅವುಗಳ ಸಿರಿಯನ್ನು ಸೂರೆಗೊ ಳ್ಳೋಣ, ಗುಲಾಮ – ಕೂಲಿಜನರನ್ನು ನೇಮಿಸಿಕೊಳ್ಳೋಣ. ಹೀಗೆ ಮಾಡಿ ತಳ ವೂರಿದ ಮೇಲೆ ಐರೋಪ್ಯ ಸಾಮ್ರಾಜ್ಯವಾದಿಗಳು ಕೂಲಿಗಾರರನ್ನು ಹೀನಾಯವಾಗಿ ಸುಲಿಗೆಮಾಡಿದ ರೀತಿ ಇದು; ಕೂಲಿಕಾರರು ತಮ್ಮ ಪರಿಶ್ರಮದ ಫಲವಾಗಿ ಅಗ್ಗದ ಬೆಲೆಗೆ ಆಹಾರ ವಸ್ತುಗಳನ್ನೂ ಯಂತ್ರೋದ್ಯಮಕ್ಕೆ ಸರಬರಾಜಾಗಬೇಕಾದ ಕಚ್ಚಾ ಮಾಲುಗಳನ್ನೂ ಸಾಮ್ರಾಜ್ಯವಾದಿಗಳಿಗೆ ಒದಗಿಸಬೇಕಾಯಿತು. ವಸಾಹತುಗಳನ್ನು ಸಾಮ್ರಾಜ್ಯವಾದಿಗಳಿಗೆ ಪೇಟೆಯಾಗಿ ಬಿಟ್ಟುಕೊಡಬೇಕಾಯಿತು; ಮತ್ತು ಬಂಡವಾಳ ಹೂಡಿ ಅವರು ಉದ್ಯಮಗಳನ್ನು ನಡಸಲು ವಸಾಹತು ಜನ ಅವಕಾಶಗಳನ್ನು ಕಲ್ಪಿಸ ಬೇಕಾಯಿಉತು. ಆದರೆ ಈ ವಸಾಹತು ಜನದ ಜೀವನದ ಮಟ್ಟವೋ ಐರೋಪ್ಯದೇಶಗಳ ಬಡವರ ದಾರಿದ್ರ್ಯದ ಸ್ತರಕ್ಕಿಂತ ಕೆಳಮಟ್ಟದಲ್ಲಿತ್ತು. ವೀಕ್ಷಕರನ್ನು ಚಕಿತಗೊಳಿಸುವ ಈ ವಿದ್ಯಮಾನಗಳು ವಸಾಹತುಗಳಲ್ಲಿ ಸುಲಿಗೆಗೀಡಾದ ಸ್ಥಳೀಯ ಜನತೆಯ ತಾಳ್ಮೆಗೆ ಮುಗಿವುತಂದು, ಅಲ್ಲಲ್ಲಿ ಸ್ಥಳೀಯ ಜನತೆ ಎಚ್ಚತ್ತು ಸ್ವಾತಂತ್ರ್ಯ ಚಳವಳಿಗಳನ್ನು ನಡಸುತ್ತ ದಂಗೆಯೆದ್ದು, ಸಾಮ್ರಾಜ್ಯ–ವಸಾಹತು ಸಂಬಂಧಕ್ಕೂ ಮುಗಿವು ತರುವವರೆಗೆ ಸಾಗಿದುವು.

(4) ಪಶ್ಚಿಮ ಯೂರೋಪಿನ ಸ್ವಲ್ಪಜನಾಧಿಪತಿಗಳ ಮನಸ್ಸೆಲ್ಲ ಮಗ್ನ ವಾಗಿದ್ದದ್ದು ರಾಜಕೀಯ ರಂಗದಲ್ಲಿ–ಯುದ್ಧಕ್ಕೆ ಸಿದ್ಧತೆ ಮಾಡಿಕೊಳ್ಳೋಣ, ಬೇಗ ಯುದ್ಧಹೂಡೋಣ ಎಂದು. ಈ ಸಮರ ಯೋಚನೆ ಯೋಜನೆಗಳು ಸ್ವಲ್ಪ ಜನಾಧಿ ಪತಿಗಳವು; ಸಂಗ್ರಾಮ ಕ್ಷೇತ್ರಗಳಲ್ಲಿ ಕಾದಾಡಿದ್ದು ತುಂಬ ಆರೋಗ್ಯವಂತರೂ ತುಂಬು ದೃಢಕಾಯರೂ ಆದ ಜನತೆಯ ತರುಣ ಮಕ್ಕಳು. ಸ್ವಲ್ಪಜನಾಧಿಪತಿಗಳು ಹಂಚಿಕೆ ಹಾಕಿದರು, ಸೈನಿಕ ಕಾರ್ಯಾಚರಣೆಗಳಿಗೆ ಅಧಿಕಾರಿಗಳನ್ನೊದಗಿಸಿದರು. ಈಚೀಚಿನ ಶತಮಾನಗಳಲ್ಲಿ ವ್ಯಾಪಾರಿಗಳು ಯುದ್ಧಕ್ಕೆ ಧನ ಆಹಾರಾದಿ ಸರಕು

ಸಾಮಾನು ಮತ್ತು ಶಸ್ತ್ರಗಳನ್ನು ಸರಪರಾಜುಮಾಡಿ, ದೊಡ್ಡ ಪರಿಮಾಣಗಳಲ್ಲಿ ಆಸ್ತಿಮಾಡಿಕೊಂಡರು. ಕಳೆದ ಐದು ಶತಮಾನಗಳಲ್ಲಿ ಸ್ಪರ್ಧಾಮುಖವಾದ ಸ್ವತಂತ್ರೋದ್ಯಮ ನಿಷ್ಠ ಸಾಮ್ರಾಜ್ಯ ಪ್ರತಿಷ್ಠಾಪನೆಗೂ ಅಭಿವೃದ್ಧಿಗೂ ಪರಿಶ್ರಮಿಸಿದ ಪಶ್ಚಿಮವು ಈ ಪಾಪಪೂರಿತ ಹಾಗೂ ಪೋಲುವೆಚ್ಚದ ಸಾಹಸೋದ್ಯಮಗಳಿಗೋಸ್ಕರ ತನ್ನ ಧನ ಜನ ಬಲವನ್ನು ಧಾರಾಳವಾಗಿ ವಿನಿಯೋಗಮಾಡಿತು.

(5) ಪಶ್ಚಿಮದ ಆರ್ಥಿಕ ರಾಜಕೀಯ ಸಾಮಾಜಿಕ ಸಂಸ್ಥೆಗಳು ಬೆಳೆದದ್ದು ಆರ್ಥಿಕ ಅಭಾವಕಾಲದಲ್ಲಿ; ಬಲಿತದ್ದು ಯುದ್ಧಕಾಲದ ಪೋಲು ವೆಚ್ಚಗಳ ಮತ್ತು ಆಡಂಬರದ ಭೋಗಜೀವನದ ಪರಿಸರದಲ್ಲಿ. ಭಾವನೆಗಳು ಆಚರಣೆಗಳು ಸಂಸ್ಥೆಗಳು ಅಭಾವಕಾಲದ ದುರುಪಯೋಗದಿಂದ ಜನ್ಮತಳೆದುವಾದದ್ದರಿಂದ, ಅವುಗಳ ಪ್ರಯೋಜನವು, ಯಂತ್ರೀಕೃತವೂ ಸ್ವತಶ್ಶಕ್ತಿಗಳಿಂದ ಸಂವರ್ಧಿತವೂ ಆದ ಆಧುನಿಕ ಉದ್ಯಮ ವಿಧಾನಗಳಿಂದ ಲಭ್ಯವಾದ ವಿತ್ತ ಪುಷ್ಕಲತೆಯ ಕಾಲಕ್ಕೆ, ಎಷ್ಟುಮಾತ್ರವೂ ಇಲ್ಲ.

(6) 1910 ರ ಅನಂತರದ ಅರ್ಧಶತಮಾನದ ಅವಧಿಯಲ್ಲಿ ಪಾಶ್ಚಾತ್ಯ ನಾಗರಿಕತೆ ಪ್ರಳಯ ಸದೃಶವಾದ ವಿಪತ್ತೊಂದನ್ನು ಅನುಭವಿಸಿತು. ಎರಡು ಮಹಾ ಯುದ್ಧಗಳು, ಹಣದ ಹೆಚ್ಚಳಿಕೆ–ಉಬ್ಬರ,–ದಿವಾಳಿತನ ಮತ್ತು ಆರ್ಥಿಕ ಮುಗ್ಗಟ್ಟುಗಳು ಸೇರಿ ಈ ಮಹಾವಿಪತ್ತನ್ನು ಬರಮಾಡಿದುವು. ಅಲ್ಲದೆ ವಿಶ್ವವ್ಯಾಪಿಯಾಗಿ ವಸಾಹತುಗಳಲ್ಲಿ ಸ್ವಾತಂತ್ರ್ಯ ಚಳವಳಿಗಳು ನಡೆದುವು; ಬಳಿಕ 1917 ರ ನಂತರ ಪ್ರಪಂಚದಲ್ಲಿ ಈಗ ಮೂರನೆಯ ಒಂದುಭಾಗವೆಂಬಷ್ಟು ವಿಸ್ತಾರದಲ್ಲಿ ಬೆಳೆದ ಸಮಾಜವಾದಿಧ್ಯೇಯನಿಷ್ಠವಾದ ಕಾರ್ಯಾರಂಗವೊಂದು ಉದಯವಾಯಿತು.

ಹೀಗೆ ಪಶ್ಚಿಮ ನಾಗರಿಕತೆಯು ಕೀರ್ತಿಗೆ ಕಲಂಕ ಹಚ್ಚುವ ಇಷ್ಟೊಂದು ಸಾಕ್ಷ್ಯಮಾಲೆ ರಾಶಿರಾಶಿಯಾಗಿ ಒದಗುತ್ತ ಬಂದು, ಪ್ರಪಂಚದ ಅನೇಕ ಕಡೆ ಸಾಮ್ರಾಜ್ಯ ವಿರೋಧಿ ಹಾಗೂ ಅದಕ್ಕಿಂತ ಮುಖ್ಯವಾಗಿ ಪಶ್ಚಿಮ ವಿರೋಧಿ ಚಳುವಳಿ ತಲೆಯೆತ್ತಲು ಆಸ್ಪದ ಕೊಟ್ಟಿತು. ಈ ಚಳವಳಿಗಳ ಪ್ರಭಾವ ಪಾತ್ರವೇನೆಂಬುದು 1960 ರಿಂದೀಚಿನ ದಶಕದಲ್ಲಿ ಅಂತರರಾಷ್ಟ್ರೀಯ ಸಂಬಂಧಗಳ ವಿಷಯದಲ್ಲಿ ಸ್ಪಷ್ಟ ಪಡುತ್ತದೆ. ಈ ಪ್ರತಿಕೂಲ ಸಾಕ್ಷ್ಯಗಳ ಸಮಕ್ಷದಲ್ಲಿ ಪಾಶ್ಚಾತ್ಯ ನಾಗರಿಕತೆ ಪ್ರಕೃತ ಕಾಲಕ್ಕೆ ಎಷ್ಟು ಮಾತ್ರವೂ ಪ್ರಯೋಜನವಾಗದೆ–ಅದು ಅಪರ್ಯಾಪ್ತವಷ್ಟೇ ಅಲ್ಲ, ಸಮಾಜಹಿತಕ್ಕೆ ವಿರೋಧಿ, ಮತ್ತು ಉಪಯೋಗಾರ್ಹತೆಯನ್ನು ನೀಗಿ ಕೊಂಡ ಹಳತು ಹಳಸಲು ಎಂಬ ವಾಗ್ದಂಡದ ಖಂಡನೆಗೆ ಗುರಿಯಾಗುತ್ತದೆ.

ಪಶ್ಚಿಮ ನಾಗರಿಕತೆಯ ನಾಯಕರು ಸಾಂಪ್ರತ ಕಾಲೋಪಯೋಗಿತೆಯನ್ನು ಕಳೆದುಕೊಂಡ ತಮ್ಮ ಸಾಮಾಜಿಕ ಸೇವಾ ಸಾಧನವನ್ನು ಇಂದಿನ ಬಳಕೆಯಲ್ಲಿರುವ

ಯಾಂತ್ರಿಕ ಸಾಧನ ಒದಗಿಸುವ ಉತ್ಪಾದನೆಯ ಕಾರ್ಯಸಂದರ್ಭಕ್ಕೆ ತಕ್ಕಂತೆ ಪರಿಷ್ಕರಿಸುವ ಉದ್ದೇಶವನ್ನಿರಿಸಿಕೊಂಡಿಲ್ಲ. ಇಂದಿನ ವಸ್ತುವಿತ್ತ ಪುಷ್ಕಲತೆಯನ್ನು ಭೂಗ್ರಹ ವ್ಯಾಪಿಯಾಗಿ ಜನಕ್ಕೆ ಅವರವರ ಆವಶ್ಯಕತೆಗೆ ತಕ್ಕಂತೆ ಹಂಚುವ ಉದ್ದೇಶ ವನ್ನಂತೂ ಈ ನಾಯಕರು ಯೋಚಿಸುತ್ತಲೇ ಇಲ್ಲ. ಇದಕ್ಕೆ ಪ್ರತಿಯಾಗಿ, 1946 ರಿಂದೀಚೆಗೆ ತಮ್ಮ ವಿಸ್ತಾರವಾದ ಯಂತ್ರೋಪಯಂತ್ರಗಳು ಹೊರಹಾಕುತ್ತಿರುವ ಹೇರಳವಾದ ಸರಕಿನಲ್ಲಿ ಹಂಚಿಕೆಯಾದಮೇಲೆ ಉಳಿದ ಆಯಾಧಿಕ್ಯಗಳನ್ನು (surplus) ಹೇಗೆ ಬಳಸುತ್ತಿದ್ದಾರೆ ?

ಜನತೆಯನ್ನು ಸಮುದಾಯ ಸಮುದಾಯವಾಗಿ ನಿರ್ನಾಮಮಾಡುವ ಮಾರಕಾ ಸ್ತ್ರಗಳನ್ನು ವಿಸ್ತಾರ ರಾಕ್ಷಸೋಚಿತವಾದ ಪ್ರಮಾಣದಲ್ಲಿ ಉತ್ಪಾದಿಸಿ ಉಗ್ರಾಣಗಳಲ್ಲಿ ಸೇರಿಸಿ ಸೇರಿಸಿ ದಾಸ್ತಾನು ಮಾಡುತ್ತಿದ್ದಾರೆ. ಈ ಮಾರಕಾಸ್ತ್ರಪ್ರಯೋಗದಿಂದ ಭೂಗ್ರ ಹದ ಮೇಲಣ ಇಡಿಯ ಮನುಷ್ಯ ಕುಲದ ಅಸ್ತಿತ್ವಕ್ಕೇ ಸಂಚಕಾರ ಬರುವ ಘೋರ ವಾದ ಅಪಾಯ ಸಂಪ್ರಾಪ್ತವಾಗಿದೆ.

ಹೊಸ ಬಂಡವಾಳ ನೀತಿಯ ವಕೀಲರು ಅಥವಾ "ಜನತೆಯ ಬಂಡವಾಳ ನೀತಿ"ಯ ಪ್ರೋತ್ಸಾಹಕರು ಈ ನೂತನ ವಾದವನ್ನೆತ್ತಿದ್ದಾರೆ. ಈ ನೀತಿಗೆ ನಿದರ್ಶನ ಗಳನ್ನು ಬ್ರಿಟನ್ ಮತ್ತು ಫ್ರಾನ್ಸ್ ದೇಶಗಳು ಒದಗಿಸುತ್ತವೆ. ಈ ದೇಶಗಳಲ್ಲಿ ದೊಡ್ಡ ಕಾರ್ಖಾನೆಗಳು ಸರಕಾರಿ ಕ್ಷೇತ್ರದಲ್ಲಿ ಹುಟ್ಟಿಕೊಳ್ಳಲು ಅವಕಾಶವಾಗಿದೆ. ಅವನ್ನು ನಡಸುವ ಆರ್ಥಿಕ ವ್ಯವಸ್ಥೆಯೂ, ಜೊತೆಗೆ ವಿಸ್ತಾರವಾಗಿ ಹರಡುತ್ತಿರುವ ಜನೋಪ ಕಾರಕ ಕಾರ್ಯಕ್ರಮವೂ ಈ ಉದ್ಯಮ ನೀತಿಗೆ ಹೊಂದಿಕೊಂಡಿವೆ. ಅಲ್ಲದೆ, ಯುರೋಪಿನ ಈ ಎರಡು ದೇಶಗಳ ಜೊತೆಗೆ ಅಮೆರಿಕವೂ ಪುಷ್ಕಲವಾಗಿ ವಸ್ತುಗಳನ್ನು ಉತ್ಪಾದಿಸುವ ದೊಡ್ಡ ತವರ್ಮನೆಯಾಗಿದೆ. ರಾಷ್ಟ್ರೋತ್ಪನ್ನಗಳಿಗೆ ಕಾರಣವಾದ "ಷೇರು" ಗಳ ಒಡೆತನವನ್ನು ಅಲ್ಪಸಂಖ್ಯಾಕರಾದ ಸಿರಿವಂತರ ಸ್ವಾಧೀನದಲ್ಲಿರಿಸಿ, ಅದು ನಡಸುತ್ತಿ ರುವ ದೈತ್ಯ ಯಂತ್ರೋದ್ಯಮಗಳಲ್ಲೂ ಸರಕು ಬೆಲೆಗಳನ್ನು ಮೇಲ್ಮಟ್ಟದಲ್ಲೇ ಇರಿಸುವ ಕಾರ್ಮಿಕಗಣ-ಶೋಷಕ ಕಾರ್ಟೆಲ್ ಸಂಸ್ಥೆಗಳಲ್ಲೂ ಈ ಹೊಸ ಬಂಡವಾಳ ನೀತಿ ಬಳಕೆಗೆ ಬಂದಿದೆ. ಈ ನೀತಿಯ ಪರವಾಗಿ ವಕಾಲತ್ತು ವಹಿಸಿ ವಾದಮಾಡುವ ವಕೀಲರು ಹೇಳುತ್ತಾರೆ: ಪಶ್ಚಿಮ ನಾಗರಿಕತೆ ಮರಳಿ ಆರ್ಥಿಕ ರಂಗವನ್ನು ಪ್ರವೇಶಮಾಡಿದೆ; ಇಂದಿನ ಯಂತ್ರ ತಂತ್ರ ಸಂಧಾನಗಳಿಂದ ಪುಷ್ಕಲವಸ್ತುಗಳ ನಿರ್ಮಾಣಮಾಡುವ ಸಂದರ್ಭಕ್ಕೆ ಹೊಂದಿಕೊಂಡು ಮಹೋದ್ಯಮಗಳನ್ನು ನಡಸಬಲ್ಲ ತಾಕತ್ತನ್ನು ಪಡೆದಿದೆ ಎಂಬುದು ವಕೀಲರ ವಾದಸರಣಿ. ಆದರೆ ವಾಸ್ತವಾಂಶಗಳು ಇವರ ವಾದಕ್ಕೆ ಸಮರ್ಥನೆ ಕೊಡುವಂಥವಲ್ಲ. "ಅಟ್ಲಾಂಟಿಕ್ ಅಲಯನ್ಸ್" (ಅಟ್ಲಾಂಟಿಕ್ ಸಾಗರ ಪ್ರದೇಶ ಗಳ ಮೈತ್ರಿ) ಎಂದು ಒಪ್ಪಂದ ಮಾಡಿಕೊಂಡ ವಿತ್ತಭೂಯಿಷ್ಠ ರಾಷ್ಟ್ರಗಳಲ್ಲಿ

ದಾರಿದ್ರ್ಯವು ಹರಡುತ್ತ ಇನ್ನೂ ಹೆಚ್ಚಾಗಿ ಹರಡುವ ಪರಿಸ್ಥಿತಿಯಿದೆ. ಇಷ್ಟೇ ಅಲ್ಲ; ಸೋಷಲಿಸ್ಟ್-ಕಮ್ಯುನಿಸ್ಟ್ ಪಂಥಗಳ (ಸಮತಾವಾದ-ಸಮಾಜವಾದಗಳ) ವಿರುದ್ಧ 1946 ರಿಂದ ಜಾರಿಗೆ ತಂದುಕೊಳ್ಳಲಾದ ಶೀತಲ ಸಮರ ತಂತ್ರವು ದೇಶಾದಾಯ ವನ್ನು ಪ್ರಜಾಗಣದ ಆವಶ್ಯಕತೆಗಳಿಗೆ ತಕ್ಕಂತೆ ವಿತರಣಮಾಡಬೇಕು ಎಂಬ ಒಳ್ಳೆಯ ಜನಜೀವನ ಸೂತ್ರಕ್ಕೆ ತೀರ ವಿರೋಧವಾಗಿದೆ.

ಇಂದಿನವರೆಗೆ ಬೆಳೆದು ಬಂದಿರುವ ಸಾಕ್ಷ್ಯ ಸಾಮಗ್ರಿಯ ಬಲವೂ ಗಾತ್ರವೂ ಸೇರಿಕೊಂಡು ಮುನ್ಸೂಚನೆ ಕೊಡುವ ಸಂಗತಿ ಇದು. ಇಂದು ಇನ್ನೂ ಉಳಿದು ಕೊಂಡಿರುವ ಸಾಮ್ರಾಜ್ಯಗಳೂ ಮಾಜೀ ಸಾಮ್ರಾಜ್ಯಗಳೂ ವಾಷಿಂಗ್‌ಟನ್ ಪ್ರಭು ತ್ವದ ನಾಯಕತ್ವದಲ್ಲಿ ಇನ್ನೊಂದು ಮಹಾಯುದ್ಧದಲ್ಲಿ ತೊಡಗುವ ಸಂಭವ ಹೆಚ್ಚಾಗಿ ದೆಯೇ ಹೊರತು, ಉತ್ಪಾದನೆಯಾಗುತ್ತಿರುವ ವಸ್ತುಗಳ ವಿತರಣೆಗೆ ಸಾಮಾಜಿಕ ಸಾಧನಗಳನ್ನು ಅಳವಡಿಸಿಕೊಳ್ಳುವ ಸಮಾಜ ಹಿತೈಕ ನೀತಿಯನ್ನು ಕೈಕೊಂಡಾರೆಂಬ ಸಂಭವಕ್ಕೆ ಅವಕಾಶವಿಲ್ಲ. ಶೋಷಣ ನೀತಿಯನ್ನು, ದುಡಿಯದೆ ಸಿರಿಗಳಿಸುವುದಕ್ಕೆ ಅವಕಾಶ ಇರುವ ಆರ್ಥಿಕ ವ್ಯವಸ್ಥೆಯನ್ನು ರದ್ದುಮಾಡುವ ಸಂಭವ ಇಲ್ಲವೇ ಇಲ್ಲ. ಪುಷ್ಕಲತೆಯನೂ ಸುಖವನ್ನೂ ಜನತೆಗೆ ಅವರವರ ಆವಶ್ಯಕತೆಗೆ ತಕ್ಕಂತೆ ಹಂಚುವ ಸಂಭವವಂತೂ ಇನ್ನೂ ಕನಸಿನ ಮಾತೇ ಆಗಿದೆ.

ಶೀತಲ ಸಮರದಲ್ಲಿ ಈಚೆಗೆ, ಅದರ ನಿರ್ದೇಶನ ವಿವರದಲ್ಲೂ ಪ್ರಚಾರ ಕಾರ್ಯ ವ್ಯಾಪ್ತಿಯಲ್ಲೂ ಬೆಳೆದಿರುವ ಬೆಳವಣಿಗೆಗಳು ನಮ್ಮನ್ನು ಒಂದೇ ಒಂದು ನಿರ್ಣಯಕ್ಕೆ ಬರುವಂತೆ ಮಾಡಿವೆ. ಪಶ್ಚಿಮನಾಗರಿಕತೆ ಪ್ರಕೃತಕಾಲಕ್ಕೆ ತೀರಾಅನುಪಯುಕ್ತವಾಗಿದೆ. ವಿತ್ತ ಪುಷ್ಕಲತೆಯನ್ನು ಜನತೆ ಹಂಚಿಕೊಳ್ಳಬೇಕೆಂಬ ತತ್ತ್ವಕ್ಕೆ ಪ್ರತೀಕವಾಗಿ ಇಂದು ಜನವರ್ಗದಲ್ಲಿ ಭಾವ ಪ್ರವಣತೆಯಾಗಿ ಹರಡುತ್ತಿರುವ ಸಾಮಾಜಿಕ ನ್ಯಾಯಕ್ಕೆ ಸಲ್ಲ ಬೇಕಾದ ನಿಷ್ಠೆಯನ್ನು ಪಶ್ಚಿಮನಾಗರಿಕತೆ ಸಲ್ಲಿಸುವುದಿಲ್ಲ. ಸ್ವಕ್ಷೇತ್ರದಲ್ಲಿಯ ಪರಸ್ಪರ ವಿರೋಧ ಭಾವನೆಗಳಿಗೂ ಒಳತೋಟಿಗಳಿಗೂ ವಿರೋಧಾಭಾಸದ ಆಚರಣೆಗಳಿಗೂ ಪಶ್ಚಿಮ ನಾಗರಿಕತೆ ಬಲಿಯಾಗುತ್ತಿದೆ. ಈ ವಿದ್ಯಮಾನಗಳು ಪಶ್ಚಿಮನಾಗರಿಕತೆ ಯನ್ನು ಆತ್ಮವಿನಾಶದ ದಾರಿಯಲ್ಲಿ ನಡೆಸುತ್ತ, ಅದಕ್ಕಿರುವ ದುರಂತ ಪರ್ಯಾವಸಾನ ಸಂಭವವನ್ನು ಸ್ಪಷ್ಟವಾಗಿ ಸೂಚಿಸುತ್ತದೆ.

## ಮನುಷ್ಯವರ್ಗಕ್ಕೆ ಧರ್ಮದರ್ಶಿ ಯೋಚಿಸುವ ಸಮಗ್ರ ಹಿತಸಾಧಕ ಯೋಜನೆ

ನಮ್ಮ ಭೂಗ್ರಹದ ಸಾಂಪ್ರತ ವಿದ್ಯಮಾನಗಳನ್ನು ಸಮೀಕ್ಷಿಸಿ, ಭವಿಷ್ಯತ್ ಶುಭೋದಯದ ಪ್ರತೀಕ್ಷೆಯಲ್ಲಿರುವ ಮಾನವ ಧರ್ಮದರ್ಶಿಗಳಾದ ನಾವು ವಾದಕ್ಕೆ

ಅತೀತವೂ ಭಯಾವಹವೂ ಆದ ಮೂರು ವಾಸ್ತವಾಂಶಗಳನ್ನು ಎದುರಿಸಲು ಎಚ್ಚೆತ್ತುಕೊಳ್ಳಬೇಕು. (1) ಇಂದಿನ ವಸ್ತುಗಳ ಉತ್ಪತ್ತಿ ವಿಧಾನದಲ್ಲಿ ಅನೇಕ ಪ್ರಕೃತಿ ಸಂಪನ್ಮೂಲಗಳು – ಉದಾಹರಣೆಗಾಗಿ, ಫಲವತ್ತಾದ ಭೂ ವ್ಯವಸಾಯ ಕ್ಷೇತ್ರ, ಅರಣ್ಯಗಳು, ಇಂಧನಗಳು, ಲೋಹಗಳು – ಇವೆಲ್ಲ ದುಂದಿನಲ್ಲಿ ಪೋಲಾಗುವ ವೇಗದಲ್ಲಿ ಬಳಸಲ್ಪಡುತ್ತಿರುವ ವಾಸ್ತವ ಕಠೋರ ಸಂದರ್ಭ (2) ಇಂದು ಸಾಂದ್ರ ಪರಿಮಾಣದಲ್ಲಿ ತಯಾರಾಗುತ್ತಿರುವ ಜೀವಾಣ್ವಸ್ತ್ರಗಳು, ರಸಾಯನ ಶಸ್ತ್ರಗಳು, ಅಣು ಪರಮಾಣ್ವಸ್ತ್ರಗಳು ಭೂಗ್ರಹವನ್ನು ವಿವಿಧ ಜೀವಭೂತಗಳ ನಿವಾಸಕ್ಕೆ ಅನರ್ಹವಾಗಿ ಮಾಡುವ ವಾಸ್ತವ ಭಯಾನಕ ಸಂದರ್ಭ (3) ಭೂಗ್ರಹದ ಅಂತರರಾಷ್ಟ್ರೀಯ ವಿಚಾರಗಳಲ್ಲಿ ಮನುಷ್ಯನು ಗೊತ್ತಾದ ಯೋಜನೆಯನ್ನು ಕಲ್ಪಿಸಿ, ನಿಯಮನ ಕ್ರಮದ್ವಾರಾ ಜನವರ್ಗವನ್ನು ಸಂಘಟಿಸಲು ಆಗದಂತೆ ಸೋಲಿಸಿರುವ ಮೂರನೆಯ ವಾಸ್ತವ ಭೀತಿಜನಕ ಸಂದರ್ಭ.

ಈ ಭೀತಿಕಾರಕಗಳಾದ ವಾಸ್ತವಾಂಶಗಳು ಈಚಿನ ದಶಮಾನಗಳಲ್ಲಿ ಆತಂಕ ತುಂಬಿದ ಟೀಕೆಗಳಿಗೆ ವಿಷಯವಾಗಿವೆ. ಈ ಸಂಗತಿಯನ್ನು ಸಾರ್ವಜನಿಕರಿಗೆ ವಿವರವಾಗಿ ತಿಳಿಸಿ ಎಚ್ಚರಿಕೆ ನೀಡುವುದಕ್ಕೂ, ಸಂಪನ್ಮೂಲಗಳು ಪೋಲಾಗುವುದನ್ನು ತಪ್ಪಿಸಲು ಪರಿಣಾಮಕಾರಿಯಾಗಬಲ್ಲ ಯೋಜನೆಗಳನ್ನು ಕೈಕೊಂಡು, ಯೋಗ್ಯ ಸಂಘಟನೆ ಹಾಗೂ ಆಡಳಿತ ವ್ಯವಸ್ಥೆಗಳನ್ನು ಮಾಡುವುದಕ್ಕೂ, ಪ್ರಪಂಚ ಹಾಗೂ ಅದರೊಳಗಣ ವಿವಿಧಜೀವಭೂತಗಳನ್ನು ಕಳವಳ ಅಳಿವುಗಳ ಅಂಜಿಕೆಯಲ್ಲಿ ನಡಸುತ್ತಿರುವ ಯುದ್ಧಸಂಭವ ವಿನಾಶ ಸಂಭವಗಳನ್ನು ತಡೆಯುವುದಕ್ಕೂ ಇದು ಸಕಾಲವಾಗಿದೆ. ಕಾತರ ಭಯಗಳನ್ನು ಹೆಚ್ಚಿಸುವ ಈ ಮೂರು ಕಾರಣ ಸಂದರ್ಭಗಳ ಬಗ್ಗೆ ಉಪೇಕ್ಷೆಯೇ ಮುಂಬರಿದರೆ, ಇಲ್ಲವೆ, ಒಂದುವೇಳೆ ಪರಿಹಾರ ಪ್ರಯತ್ನಗಳು ನಡೆದರೂ ಅವು ಪರಿಣಾಮಕಾರಿಯಾಗದಷ್ಟು ಅಪರ್ಯಾಪ್ತವಾದರೆ, ನಮ್ಮ ಧರ್ಮೇಂದ್ರಿಯವು ತಟಸ್ಥವಾಗಿರದೆ ನಮ್ಮನ್ನು ಕರ್ತವ್ಯ ಪರಾಯಣರಾಗಲು ಸಂತತವಾಗಿ ತಿವಿದು ತಿವಿದು ಚೋದಿಸುತ್ತಲೇ ಇರಬೇಕು. ಅಲ್ಲದೆ ನಾವು ಜನಕ್ಕೆ ಕೊಡುತ್ತಿರುವ ಎಚ್ಚರಿಕೆಗಳನ್ನು ತಪ್ಪದೆ ಅಡಿಗಡಿಗೆ ವೀಪ್ಸಾ ವಿಧಾನದಲ್ಲಿ ಕೊಡುತ್ತಲೇ ಇರಬೇಕು; ಮತ್ತು ಕಾಲಹರಣಕ್ಕೆ ಅವಕಾಶ ಕೊಡದೆ, ಕ್ಷಿಪ್ರವಾಗಿ ಪರಿಹಾರೋಪಾಯಗಳನ್ನು ಕೈಕೊಳ್ಳಬೇಕಾದ ಆವಶ್ಯಕತೆಯನ್ನು ಒತ್ತೊತ್ತಿ ಹೇಳುತ್ತಲೇ ಇರಬೇಕು.

ಹಿಂದೆ ಐದನೆಯ ಅಧ್ಯಾಯದಲ್ಲಿ ಸಾಮಾಜಿಕ ಶುಭಜೀವನವನ್ನು ವಿಚಾರಕ್ಕೆತ್ತಿಕೊಂಡಾಗ, ಮನುಷ್ಯ ಪ್ರಾಣಿಗಳನ್ನು ಒಳಕೊಂಡು ವಿವಿಧ ಸಾಮಾಜಿಕ ಪ್ರಾಣಿಗಳು ಹೇಗೆ ಅವರವರ ಪರಿಸರವನ್ನು ಅವಲಂಬಿಸಿ ಬಾಳಬೇಕಾಗಿದೆಯೆಂಬುದನ್ನು ನಾನು ವಿವರವಾಗಿ ಚರ್ಚಿಸಿದ್ದೇನೆ. ಈ ಅವಲಂಬನವೆಷ್ಟು ವ್ಯಾಪಕ ಮತ್ತು ದೂರ ಪರಿಣಾಮ

ಕಾರಕ ಎಂಬುದನ್ನೂ ಸೂಚಿಸಿದ್ದೇನೆ. ಅದೇ ಅಧ್ಯಾಯದಲ್ಲಿ ಶುಭಜೀವನಕ್ಕೆ ಮನುಷ್ಯ ವರ್ಗವನ್ನು ಅಣಿಮಾಡುವುದು ಹೇಗೆ ಎಂಬುದನ್ನೂ ತಿಳಿಸಿದ್ದೇನೆ. ವಿಚಾರ ಈ ಘಟ್ಟಕ್ಕೆ ಬಂದಿರುವಾಗ, ಜನವರ್ಗವೂ ಭೂಗ್ರಹದ ಇತರ ಪ್ರಾಣಿ ಪ್ರಕಾರಗಳೂ ವಾಸ ಮಾಡುತ್ತಿರುವ ಸಾಮಾಜಿಕ ಸ್ಥಿತಿಗತಿಗಳನ್ನು ಉತ್ತಮಪಡಿಸುವ ಕಾರ್ಯಕ್ಕೆ ನಾವು ಗಮನ ಕೊಡಬೇಕು. ಈ ಕಾರ್ಯವನ್ನು ಮಾಡಲು ಅಣಿಯಾದವರು, ಮತ್ತು ಈ ಕಾರ್ಯವನ್ನು ನಿರ್ವಾಹ ಮಾಡುವ ಆತಂಕದಲ್ಲಿರುವವರು ತಮ್ಮನ್ನು ಧರ್ಮದರ್ಶಿಗಳು ಎಂದು ಭಾವಿಸಿಕೊಂಡರೆ ಮಾತ್ರ ಉದ್ದೇಶ ನೆರವೇರುತ್ತದೆ. ಆದದ್ದರಿಂದ ಅವರ ಅವಗಾಹನೆಗೋಸ್ಕರ ಮತ್ತು ಗುರಿಮುಟ್ಟಲು ಅವರು ಅಡಿಯಿಟ್ಟಾಗ್ಗೆ ನೆರವಾಗುವುದ ಕ್ಕೋಸ್ಕರ ಕೆಲವು ಸಾಧನ ಸೋಪಾನದ ಮೆಟ್ಟಿಲುಗಳನ್ನು ಸೂಚಿಸುತ್ತೇನೆ.

## ಶುಭಜೀವನ ಸಿದ್ಧಿಗೆ "ಸಪ್ತಪದಿ"

### ಮೊದಲನೆಯ ಮೆಟ್ಟಿಲು: ಜನ ಸಮಸ್ತದ ಕಲ್ಯಾಣಕ್ಕೋಸ್ಕರ ಪ್ರಕೃತಿ ಸಂಪತ್ತನ್ನು ಬಳಸುವಾಗ ಮುಗಿಸಿ ಬಿಡದೆ ಉಳಿಸಿಕೊಳ್ಳುವುದು.

ಬಹುದೀರ್ಘಕಾಲದವರೆಗೆ ಇಳೆಯೂ ಅದರ ಸಂಪನ್ಮೂಲಗಳೂ ವಿವಿಧ ಶಕ್ತಿಗಳೂ ಮನುಷ್ಯವರ್ಗದಲ್ಲಿ ತೀರ ಅಲ್ಪಸಂಖ್ಯಾಕರ ಸ್ವಾಧೀನಾನುಭವದಲ್ಲಿದ್ದು ಕೊಂಡಿವೆ; ಮತ್ತು ಅವು ಈ ಅಲ್ಪಸಂಖ್ಯಾಕರ ಲಾಭಕ್ಕೋಸ್ಕರ, ಅಧಿಕಾರಕ್ಕೋಸ್ಕರ, ಮತ್ತು ಅವರ ವಿವಿಧ ವಿನೋದ ವಿಹಾರಗಳಿಗೋಸ್ಕರ ವಿನಿಯೋಗವಾಗುತ್ತ ಬಂದಿವೆ. ಆದರೆ ಮನುಷ್ಯರು ಈ ಜಗದ್ವಸ್ತುಗಳನ್ನು ಬಳಸುವುದರಲ್ಲಿ ಸಮಸ್ತಜನ ಹಿತೈಕ ದೃಷ್ಟಿಯು, ಮತ್ತು ವಿಸ್ತಾರವಾಗಿ ಬೆಳೆಯುತ್ತ ಸಾಗುತ್ತಿರುವ ಸೃಷ್ಟಿ ಹಿತೈಕ ದೃಷ್ಟಿಯ ತತ್ತ್ವಕ್ಕೆ ಇಂಬುಕೊಡುವ ಕಾಲವೀಗ ಬಂದಿದೆ. ಇಳೆಯೂ ಅದರ ಸಿರಿಯೂ ಸಮಸ್ತ ಜಗಜ್ಜನದ ಸೊತ್ತು. ಒಂದೊಂದು ತಲೆಮೊರೆಯೂ ಈ ಸೊತ್ತನ್ನು ಬಳಸಿ, ವಾರಸುದಾರರಾದ ಮುಂದಿನ ತಲೆಮೊರೆಯವರಿಗೆ ಉಳಿಸಿ ಅದನ್ನು ವರ್ಗಾಯಿಸಬೇಕು. ಭೂಮ್ಯಂತರ್ಗತವಾದ, – ಮತ್ತು ಮುಗಿದು ನಷ್ಟವಾಗಿ ಹೋದರೆ ಮರಳಿ ಅದನ್ನು ನಿಕ್ಷೇಪಮಾಡಿ ಭರ್ತಿ ಮಾಡಲಾಗದ,—ಅದಿರುಗಳನ್ನೂ ಖನಿಜಗಳನ್ನೂ; ಅಭಿವೃದ್ಧಿ ದಶೆಯಲ್ಲಿರಿಸಿ ಕೃಷಿಭೂಮಿಯ ಮೇಲ್ಪದರವನ್ನೂ, ಅರಣ್ಯ ವನ್ನೂ, ಸಂತತ ಶಕ್ತಿ ಸಂಪಾದನೆಗೋಸ್ಕರ ಜಲ ಸೌಕರ್ಯವನ್ನೂ, ಸರಕು ಸಾಗಣೆ ಗೋಸ್ಕರ ಮಾರ್ಗ ಸೌಕರ್ಯವನ್ನೂ, ಕೃಷಿಗೋಸ್ಕರ ನೀರಾವರಿ ಕಾಲುವೆಗಳನ್ನೂ, ಪುನರ್ಜೀವ ಸೃಷ್ಟಿಸಾಧನಗಳನ್ನೂ ಕೂಡಿದಮಟ್ಟಿಗೂ ಮಿತವ್ಯಯ ವಿಧಾನವಲ್ಲಿ ಬಳಸಿ ಮಿಗಿಸಿ ಮುಂದಿನ ಪೀಳಿಗೆಗೆ ಒದಗುವಂತೆ ಅವನ್ನು ವರ್ಗಾಯಿಸಬೇಕು.

ಮನುಷ್ಯವರ್ಗ ಭೂಮಿಯ ಮೇಲೆ ವಾಸಮಾಡುತ್ತಿರುವ ನಾನಾ ಜೀವ ಪ್ರಕಾರ ಗಳಲ್ಲಿ ಒಂದು. ಮನುಷ್ಯವರ್ಗಕ್ಕೆ ಕೆಲವು ಪ್ರಾಪ್ತವ್ಯ ಅಥವಾ ಹಕ್ಕು ಬಾಧ್ಯತೆಗಳು ಉಂಟು. ಹಾಗೆಯೇ ಇತರ ಜೀವ ಪ್ರಕಾರಗಳಿಗೂ ಮನುಷ್ಯನಿಗೆ ಇರುವಂತೆಯೇ ವಿನಿಮಯ ದೃಷ್ಟಿಯಿಂದ (reciprocal) ಹಕ್ಕು ಬಾಧ್ಯತೆಗಳಿವೆಯೆಂದು ಮನು ಷ್ಯನು ಮರ್ಯಾದಾಭಾವನೆಯಿಂದ ಅಂಗಿಕಾರಮಾಡಿ, ಈ ಅನ್ಯೋನ್ಯ ಸಂಬಂಧ ಗಳನ್ನು ಪ್ರಯೋಗಕ್ಕೆ ತಂದುಕೊಂಡು ಪ್ರಾಣಿಗಳಿಗೂ ಗೌರವ ಬುದ್ಧಿ ತೋರಿಸಬೇಕು.

ಮನುಷ್ಯನಿಗೆ ಈ ಪಾಠವೊಂದು ಪೂರ್ವನಿದರ್ಶನವಾಗಿ ಲಭ್ಯವಾಗುತ್ತ, ಅವ ನನ್ನು ಇತರ ಜೀವಭೂತಗಳೊಡನೆ ಜೊತೆಬಾಳ್ವೆ ನಡಸುವ ದಾರಿ ಹಿಡಿಯಲು ಚೋದನೆ ಕೊಡುತ್ತಿದೆ. ಅಂತರ ರಾಷ್ಟ್ರೀಯ ಶಾಸನವು ಸಾಗರಗಳ ಮೇಲಣ ನೌಕಾ ಮಾರ್ಗಗಳು ಎಲ್ಲ ರಾಷ್ಟ್ರಗಳಿಗೂ ಸಮಾನವಾದವು ಎಂಬ ಕಲ್ಪನೆಯನ್ನು ಸಂಮಾನ್ಯ ಮಾಡಿದೆ. ರಾಷ್ಟ್ರಗಳು ಸಾಮಾನ್ಯವಾಗಿ ನದಿಗಳನ್ನೂ ಕಾಲುವೆಗಳನ್ನೂ ಬಂದರು ಗಳನ್ನೂ ಸಾರ್ವಜನಿಕರಿಗೆ ಸಮಾನೋಪಯೋಗಿ ವಸ್ತುಗಳೆಂದು ಪರಿಗಣಿಸುತ್ತದೆ. ಇದೇ ಸಮಾನ ಭಾವನೆಯ ತತ್ತ್ವವನ್ನು ಅರಣ್ಯಗಳಿಗೂ ಖನಿಜಗಳಿಗೂ ಲೋಹ ಗಳಿಗೂ ಅನ್ವಯಿಸಬೇಕು.

**ಎರಡನೆಯ ಮೆಟ್ಟಿಲು: ಭೂಗ್ರಹದ ಮೇಲೆ ನಿರ್ವಾಹ ಯೋಗ್ಯವಾದ, ಆಡಳಿತ ಸಾಧಕವಾದ, ಯೋಜನಾಬದ್ಧವಾದ, ಜನಸಮುದಾಯಗಳಿಗೆ ವಲಸೆನೆಲಸಿಕೆಗಳಿಗೆ ತಕ್ಕಂಥ ಪುನರ್ವಸತಿ ಕ್ಷೇತ್ರಗಳನ್ನು ಕಲ್ಪಿಸಬೇಕು.**

ಸಾಂಪ್ರತಕ್ಕಿದುವರೆಗೆ ಇಳೆಯ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಜನದ ಆಗಮನ ನಿರ್ಗಮನಗಳನ್ನು ಮೂಲಭೂತ ಪ್ರಾಪ್ತವ್ಯ (Fundamental Rights) ಎಂದು ಸರ್ವತ್ರ ಮಾನ್ಯಮಾಡಲಾಗಿದೆ. ಆದರೆ ವಲಸೆಯ ಸಂಬಂಧವಾಗಿ ನಿಯಂತ್ರಣಕ್ಕೆ ಅವಕಾಶ ಕೊಡುವ ಶಾಸನಗಳು ರೂಢಿಯಲ್ಲಿವೆ; ಮತ್ತು ನೆಲಸಬಂದ ದೇಶದಲ್ಲಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಿ ಬರುವ ಓಡಾಟದ ಸಂಬಂಧವಾಗಿಯೂ (ಸ್ವಕೀಯ-ಪರಕೀಯ ಭೇದ ದೃಷ್ಟಿಯಿಂದ) ಈ ಮೂಲಭೂತ ಪ್ರಾಪ್ತವ್ಯವನ್ನು ನಿರರ್ಥಕ ಮಾಡುವುದಕ್ಕೆ ಅವಕಾಶ ಕೊಡಬಹುದಾದ ಸಾರ್ವಭೌ ಮಾಧಿಕಾರವನ್ನು ಪ್ರಪಂಚದಲ್ಲಿ ನೂರಕ್ಕಿಂತ ಹೆಚ್ಚು ಪ್ರಭುತ್ವಗಳು ಪ್ರಯೋಗಮಾಡ ಬಲ್ಲವು.

ಜಮೀನನ್ನು ಸ್ವಾಧೀನಕ್ಕೆ ಪಡೆದು ಅನುಭವದಾರನಾಗುವುದೂ ಈ ಸಾರ್ವ ಭೌಮ ರಾಷ್ಟ್ರೀಯ ಪ್ರಭುತ್ವಗಳ ಅಂತಿಮ ನಿರ್ಣಯಕ್ಕೆ ಸೇರಿದ ವಿಷಯವಾಗಿದೆ. ಕೆಲವು ಬಗೆಯ ಜಮೀನುಗಳು, ಅವುಗಳ ಫಲವತ್ತತೆ ಮತ್ತು ಸ್ಥಾನ ಮಹಿಮೆಗಳ

ಕಾರಣದಿಂದ ಜನಕ್ಕೆ ಇತರ ಜಮೀನುಗಳಿಗಿಂತ ಹೆಚ್ಚು ಪ್ರಿಯವಾಗಿರುತ್ತವೆ. ಹಿಂದಿನಕಾಲದಲ್ಲಿ ಜನಗಳು ವಿಶೇಷ ಜೀವಿಕಾ ಸೌಕರ್ಯಪ್ರದಗಳೆಂದು ನದೀತೀರಗಳ ಕಣಿವೆ ಪ್ರದೇಶಗಳಲ್ಲೂ ಕಡಲ ದಂಡೆಯ ಬಂದರುಗಳ ಸುತ್ತಮುತ್ತಣ ಪ್ರದೇಶಗಳಲ್ಲೂ ಕಿಕ್ಕಿರಿದು ವಾಸಮಾಡುತ್ತಿದ್ದರು. ಈಚೆಗೆ ಜನರು ಗ್ರಾಮಾಂತರಗಳಿಂದ ಪಟ್ಟಣಗಳಿಗೆ ವಲಸೆ ಹೋಗಿ ಕಿಕ್ಕಿರಿದು ನೆರೆಯುತ್ತಿದ್ದಾರೆ. ಈ ಎರಡು ಚಲನ ವಲನಗಳು ಹೆಚ್ಚುಕಡಿಮೆ ಒಂದು ಗೊತ್ತಾದ ವ್ಯವಸ್ಥೆಯಿಲ್ಲದೆ, ಅಸ್ತವ್ಯಸ್ತವಾಗಿ ನಡೆಯುತ್ತಿರುತ್ತವೆ. ಇವುಗಳ ಪರಿಣಾಮವೆಂದರೆ ಕಿಕ್ಕಿರಿತ (ನಿಬಿಡತೆ) ಕೆಲವು ಕಡೆಗಳಲ್ಲಿ, ಇನ್ನೂ ಕೆಲವು ಕಡೆಗಳಲ್ಲಿ ವಿರಳತೆ. ರಾಷ್ಟ್ರೀಯ ಗಡಿಗೆರೆಗಳು ಚಲನವಲನಕ್ಕೆ ಎಲ್ಲೆ ಕಟ್ಟುಗಳಾಗಿ ನಿರ್ಬಂಧಪಡಿಸುತ್ತವೆ. ಪ್ರಕೃತಿ ವಿಘ್ನಗಳಾದ ಬೆಟ್ಟ, ಮರಳ್ಗಾಡು, ನೀರ ಹರವು – ಇವು ಮಾತ್ರ ಚಲನವಲನವನ್ನು ತಡೆಗಟ್ಟುತ್ತವೆ.

ಇನ್ನು ಮೂವತ್ತು ವರ್ಷಗಳಲ್ಲಿ ವಿಶ್ವಪ್ರಪಂಚದ ಜನಸಂಖ್ಯೆ ಇಮ್ಮಡಿಯಾಗುವ ಸಂಭವವುಂಟು. ಆಗ ಜನವಸತಿಗೆ ಹೆಚ್ಚು ಹೆಚ್ಚು ಸ್ಥಲಗಳಿಗೆ ಬೇಡಿಕೆಯುಂಟಾಗುತ್ತದೆ. ಹಿಂದಿನ ಕಾಲದಲ್ಲಿ ಯುದ್ಧಗಳು ಜನವಸತಿ ಕ್ಷೇತ್ರಗಳನ್ನು ನಿರ್ಣಯಿಸುತ್ತಿದ್ದವು. ಈಗ ಈ ಸಮಸ್ಯೆಯನ್ನು ವಿಶ್ವರಾಷ್ಟ್ರ ಪ್ರಾತಿನಿಧ್ಯವುಳ್ಳ ಸಮರ್ಥ ಸಂಸ್ಥೆಯೊಂದು ಸಮಾಲೋಚನೆಮಾಡಿ, ಜನವಸತಿಗೆ ತಕ್ಕ ಪ್ರದೇಶಗಳ ವಿತರಣೆಗೋಸ್ಕರ ನಿರ್ದಿಷ್ಟವಾದ ನೀತಿ ನಿರೂಪಣಮಾಡಿ, ಬಹುಸಂಖ್ಯಾಕ ಜನವರ್ಗಕ್ಕೆ ಸಾಕಾಗುವಷ್ಟು ಹೆಚ್ಚು ಪ್ರಮಾಣದಲ್ಲಿ ಆರೋಗ್ಯವನ್ನೂ ಕ್ಷೇಮವನ್ನೂ ಭರವಸೆಮಾಡುವ ಕಾರ್ಯಾಚರಣೆಗೆ ಅವಕಾಶ ಕಲ್ಪಿಸುವುದು ಅವಶ್ಯವಾಗಿದೆ. ಮನುಷ್ಯವರ್ಗಕ್ಕೆಲ್ಲ ಅವಶ್ಯವಾದ ಈ ವಾಸಕ್ಷೇತ್ರ ಸೌಕರ್ಯವನ್ನು ಪರಿಗಣಿಸುವಾಗ ಮನೆಯಲ್ಲಿರಿಸಿಕೊಳ್ಳುವ ಪಳಗಿದ ಪ್ರಾಣಿಗಳ ವಾಸಕ್ಕೂ, ಅರಣ್ಯ ಪ್ರಾಣಿಗಳಿಗೆ ಅವಶ್ಯವಾದ ಆಶ್ರಯ ಕ್ಷೇತ್ರಗಳಿಗೂ ಅವಕಾಶಮಾಡಿಕೊಳ್ಳಬೇಕಾಗುತ್ತದೆ.

## ಮೂರನೆಯ ಮೆಟ್ಟಲು: ನೈಸರ್ಗಿಕ ಹಾಗೂ ಸಾಮಾಜಿಕ ಪರಿಸರಗಳಲ್ಲಾಗುವ ಪರಿವರ್ತನೆಗಳಿಗೆ ಮನುಷ್ಯವರ್ಗ ಹೊಂದಿಕೊಳ್ಳಬೇಕು.

ಮನುಷ್ಯನಿಗೆ ಒದಗುವ ಪರಿಸರವೂ ಸೌಕರ್ಯಗಳೂ ಆಗಾಗ್ಗೆ ಮಾರ್ಪಡುತ್ತಲೇ ಇರುತ್ತವೆ. ಬೇರೆಬೇರೆ ಸಾಮಾಜಿಕ ಅಂತಸ್ತುಗಳಲ್ಲಿ ಹಿಂದಿನ ಕಾಲದಲ್ಲಿ ಜನರು ವಾಸಿಸುತ್ತ, ಅವರವರ ವರಮಾನಕ್ಕೆ ಹೊಂದುವಂಥ ಸಂಸ್ಕೃತಿ ಜೀವನ ವಿಧಾನಗಳನ್ನು ತಂತಮ್ಮ ಬಾಳಿಗೆ ಅಳವಡಿಸಿಕೊಳ್ಳುತ್ತ ಬಂದರು:—ವಸನಭೂಷಣಗಳಲ್ಲಿ, ಪೀಠಶಯನಾದ್ಯುಪಕರಣಗಳ ನಮೂನೆಗಳಲ್ಲಿ, ಮತ್ತು ತಂತಮ್ಮ ಮನೆಗಳ ಹೊರ

ಸುತ್ತಿನ ನೆರೆಹೊರೆ ಪರಿಸರಗಳಲ್ಲಿ ಆಗುತ್ತ ಬಂದ ಮಾರ್ಪಾಡುಗಳಿಗೆ ಹೊಂದಿಕೊಳ್ಳುವುದು ಆಗ ಜನಕ್ಕೆ ಸುಲಭವಾಗಿತ್ತು. ಈಚೆಗೆ ಸೈನ್ಸ್ ಮತ್ತು ಟೆಕ್ನಾಲಜಿಗಳಲ್ಲಿ ಆಗಿರುವ ಕ್ರಾಂತಿಪರಿವರ್ತನೆಗಳು ಹೊಸ ಅಭಿವೃದ್ಧಿಯನ್ನು ಗಳಿಸಿಕೊಡುತ್ತಿವೆ. ಅಭಿವೃದ್ಧಿಯೊಡನೆ ನೂತನ ಅಪೇಕ್ಷೆಗಳು ಬೆಳೆದು ಬಲಿಯುತ್ತವೆ. ನಿರೀಕ್ಷಣೆ, ಸಿದ್ಧತೆ, ಮತ್ತು ಮಾರ್ಪಾಟಗೆ ಹೊಂದಾಣಿಕೆ – ಇವು ಸಾಮಾಜಿಕ ನಿಯತಿಗಳಾಗಿ, ನಿರ್ಬಂಧಕಗಳಾಗಿರುವುದರಿಂದ, ಜನವರ್ಗಗಳು ಈಗ ಸಾಧ್ಯವಾಗಿರುವ ಸಂಪರ್ಕ ಸಾಧನಗಳನ್ನೂ ಪರಾಮರ್ಶ ಸಹಾಯಗಳನ್ನೂ ಬಳಸಿ ನೂತನಪರಿಸ್ಥಿತಿಗೆ ತಕ್ಕಂತೆ ಬಾಳಲು ಏರ್ಪಾಟುಗಳನ್ನು ಮಾಡಿಕೊಳ್ಳಬೇಕಾಗುತ್ತದೆ.

## ನಾಲ್ಕನೆಯ ಮೆಟ್ಟಿಲು: ಬಲಾತ್ಕಾರದ ಅಭಾವ ಸಂಕಟದ ಸ್ಥಿತಿಯು ಪುಷ್ಕಲತೆಯ ಪಾಲುಹಂಚಿಕೆಯ ಸಂತೋಷಕ್ಕೆ ದಾರಿಮಾಡಬೇಕು.

ತುಂಬ ಪರಿಣಾಮಕಾರಿಗಳೂ ದೂರವ್ಯಾಪನೆಯುಳ್ಳವೂ ಆದ ಪರಿವರ್ತನೆಗಳಲ್ಲಿ ಇದೂ ಒಂದು. ಆಧುನಿಕ ಮನುಷ್ಯನು ಇದಕ್ಕೆ ಹೊಂದಿಕೊಂಡು ಜಗದ್ವ್ಯವಹಾರ ಮಾಡಬೇಕು.

ಸಾಮಾಜಿಕ ಇತಿಹಾಸದಲ್ಲಿ ದಾಖಲೆ ಕಂಡ ಪ್ರತಿಯೊಂದು ಆರ್ಥಿಕ ವ್ಯವಸ್ಥೆಯಲ್ಲೂ ಸ್ವಲ್ಪಜನಸಮುದಾಯ ಮಾತ್ರ ವಿವಿಧ ಜೀವನ ಸೌಕರ್ಯ ಭೋಗಗಳನ್ನು ಅನುಭವಿಸುತ್ತ ಬಂದಿದ್ದಾರೆ. ಬಹು ಸಂಖ್ಯಾಕ ಜನಸ್ತೋಮ ಅವರ ಅಂದಂದಿನ ಬದುಕನ್ನು ಸಾಗಿಸಲು ಸಾಕಾಗುವಷ್ಟು ಅವಶ್ಯಪದಾರ್ಥಗಳನ್ನು ಕಂಡಮಾತ್ರದಿಂದ ತಮ್ಮನ್ನು ಅದೃಷ್ಟಶಾಲಿಗಳೆಂದುಕೊಳ್ಳುತ್ತಾರೆ. ಇಂಥ ಜನವರ್ಗದಲ್ಲಿ ಕಣ್ಣುಗಳಿಗೆ ರಾವುಬಡಿವಂಥ ವಿಸದೃಶ ದೃಶ್ಯವೆಂದರೆ–ನ್ಯೂನಪೋಷಣೆಯ ಮತ್ತು ಅನ್ನಾಭಾವದ ಕಾರಣಗಳಿಂದ ಉಪವಾಸದಲ್ಲಿರುವ ಸ್ಥಿತಿಯಲ್ಲಿರುವ ಜೀವನ ಸ್ತರದಲ್ಲಿ ಸಂಪತ್ತಿಗೆ ಅಭಿಮುಖವಾಗಿ ದಾರಿದ್ರ್ಯ ಗೋಚರಕ್ಕೆ ಬರುವುದು. ನೂತನ ವಾಸ್ತುಶಿಲ್ಪಾದಿ ಇಂಜನಿಯರಿಂಗ್ ಶಾಸ್ತ್ರದ ಹಾಗೂ ಪರಿಕರ್ಮ ತಂತ್ರದ (ಟೆಕ್ನಾಲಜಿ) ನೆರವಿನಿಂದ ಸಂಪನ್ಮೂಲಗಳನ್ನು ಸಾಕಾಗುವಷ್ಟು ಪರಿಮಾಣದಲ್ಲಿ ಬಳಸಲು ವ್ಯವಸ್ಥಾ ಬದ್ಧ ಯೋಜನೆಯೊಂದನ್ನು ಕೈಗೊಂಡರೆ, ಜನ ಜೀವನವನ್ನು ಬಾಧಿಸುತ್ತಿರುವ ದಾರಿದ್ರ್ಯವು ಹಳೆಗಾಲದ ಮಾತಾಗುತ್ತದೆ; ಮತ್ತು ದಾರಿದ್ರ್ಯದ ಸ್ಥಾನದಲ್ಲಿ ಜನಜೀವನವನ್ನು ನೆಮ್ಮದಿಯ ನೆಲೆಗೇರಿಸಲು–ದಿನಕಳೆದಂತೆಲ್ಲ ಅತಿಶಯವಾಗಿ ಹೆಚ್ಚುತ್ತ ಹೋಗಬಲ್ಲ ಪುಷ್ಕಲತೆಗೆ ದಾರಿಯಾಗುತ್ತದೆ.

ಮನುಷ್ಯ ಸಮಾಜದ ಭವಿಷ್ಯತ್ತು ಹೇಗೆಂದು ಪರಿಶೀಲನ ಮಾಡುವ ಹೊತ್ತಿನಲ್ಲಿ, ಜನದಲ್ಲಿ ಪುಷ್ಕಲತೆಯನ್ನು ಹೇಗೆ ಹಂಚಬೇಕೆಂಬ ಪ್ರಶ್ನೆಗೆ ತುಂಬ ಮಹತ್ವಬರು

ತ್ತದೆ. ಈ ವಿತರಣೆಯ ಏರ್ಪಾಟಿನಲ್ಲಿ ಮನುಷ್ಯನಿಗೆ ಮಾತ್ರವಲ್ಲದೆ ಭೂಮಿಯಲ್ಲಿ ಮನುಷ್ಯನೊಡನೆ ಸಹವಾಸದಲ್ಲಿರುವ ಇತರ ಪ್ರಾಣಿಪ್ರಕಾರಗಳನ್ನೂ ಸೇರಿಸಿಕೊಳ್ಳ ಬೇಕೆ? ಯಂತ್ರೋದ್ಯಮ ಕ್ಷೇತ್ರದಲ್ಲಿ ತುಂಬ ಪ್ರಗತಿಯನ್ನು ಕಂಡಿರುವ ರಾಷ್ಟ್ರಗಳಲ್ಲಿ ಪಳಗಿದ ಪ್ರಾಣಿಗಳೂ ಜನದೊಡನೆ ಈ ಸೌಕರ್ಯಗಳನ್ನು ಪಾಲ್ಗೊಳ್ಳುತ್ತಿವೆ. ಪ್ರಾಣಿಗಳಿಗೆ ಅವಶ್ಯವಾದ ಆಹಾರವನ್ನೂ ಮನುಷ್ಯನಿಗೆ ಅವಶ್ಯವಾದ ಆಹಾರವನ್ನೂ ಅಕ್ಕ ಪಕ್ಕದಲ್ಲಿರಿಸಿ ಜನತಾ ಬಜಾರುಗಳು ಒದಗಿಸುತ್ತವೆ. ಆದರೆ ಅಶನ ವಸನ ವಸತಿ ಗಳೂ, ಪ್ರೌಢಶಾಲೆ (ಹೈಸ್ಕೂಲು) ಕಾಲೇಜು ಶಿಕ್ಷಣಗಳೂ, ಮನೆವಾರ್ತೆಯ ಸರಕು ಗಳೂ ರಾಜಮಾರ್ಗಗಳೂ ಮೋಟಾರು ಬಂಡಿಗಳೂ ಮನುಷ್ಯನಿಗೆ ಸ್ವತಸ್ಸಿದ್ಧ ಸೌಕ ರ್ಯಗಳೆಂದು ಪರಿಗಣಿತವಾಗಿವೆ. ಆದರೂ ಪ್ರಪಂಚ ಜನಸಂಖ್ಯೆಯಲ್ಲಿ ಮೂರರಲ್ಲೆರಡು ಪಾಲಿನಷ್ಟು ಜನ ನ್ಯೂನಪೋಷಣೆಯ ಬವಣೆಯಲ್ಲಿ ಬಾಳುತ್ತಿದ್ದಾರೆ, ಮುಕ್ಕಾಲು ಪಾಲುಜನ ನ್ಯೂನವಸತಿಯ ಬವಣೆಯಲ್ಲಿ ಬಾಳುತ್ತಿದ್ದಾರೆ.

**ಐದನೆಯ ಮೆಟ್ಟಿಲು: ಬಹುಜನ ಸಮುದಾಯಕ್ಕೆ ಕಲಿಯಲು, ತಿಳಿಯಲು, ಬೆಳೆಯಲು, ಕೋರಿಕೆಗಳನ್ನೂ ಅನಿಸಿಕೆಗಳನ್ನೂ ಒರೆಯಲು, ಅವು ಬಲಿಯಲು ಅವಕಾಶಗಳನ್ನೂ ಕಲ್ಪಿಸಬೇಕು.**

ಇಂಥ ಅವಕಾಶಗಳು ಹಿಂದೆ ಅನುಕೂಲಸ್ಥರಾದ ಕೆಲವರಿಗೆ ಮಾತ್ರ ಇದ್ದುವು. ಪುಷ್ಕಲತೆಯ ಸನ್ನಿವೇಶದಲ್ಲಿ ಅವು ಹಲವರಿಗೆ ಹಕ್ಕಾಗುತ್ತವೆ. ಶಿಕ್ಷಣಕ್ಷೇತ್ರವು ವಿಶಾಲ ವಾಗುತ್ತ ಬಂದಹಾಗೆಲ್ಲ, ಎಲ್ಲರೂ ವಿದ್ಯಾರ್ಥಿಗಳಾಗಿ, ಅಲ್ಲಿ ಕಲಿಯಲು ಅವರಿಗೆ ಅವಕಾಶಲಭಿಸುತ್ತದೆ. ಅಲ್ಲದೆ ಹಿಂದಿನ ಜ್ಞಾನಾನುಭವಗಳನ್ನು ಸಂಪಾದಿಸುವ ದಾಖಲೆ ಗಳನ್ನಿರಿಸಿಕೊಳ್ಳುವ, ಮತ್ತು ಇತರರಿಗೆ ಅವನ್ನು ತಿಳಿಸುವ ಎಲ್ಲ ಸಂಪರ್ಕಸಾಧನಗಳೂ ಅವರಿಗೆ ಶಿಕ್ಷಣಾಂಗಗಳಾಗುತ್ತವೆ. ಹಾಗೆಯೇ, ಸಾಂಪ್ರತಕಾಲದ ಜ್ಞಾನವೂ ಶಿಕ್ಷಣ ನೀತಿ ನಡವಳಿಕೆಗಳ ನಿರ್ಣಯವೂ ಸಾಮಾಜಿಕ ಕರ್ತವ್ಯ ಕ್ಷೇತ್ರದಲ್ಲಿ ಗಣನೆಗೆ ಬರುತ್ತವೆ. ಪುಷ್ಕಲತೆಯಿಂದ ಆಢ್ಯವಾದ ಸಮಾಜದಲ್ಲಿ ಅಗ್ರಗಣ್ಯನಾಗಿ, ಗೌರವ ಪ್ರತಿಷ್ಠೆಗಳನ್ನು ಪಡೆದವರಲ್ಲಿ ಒಬ್ಬನೆಂದು, ಶಿಕ್ಷಕನಿಗೆ ಸ್ಥಾನೋನ್ನತಿ ಬರುತ್ತದೆ.

**ಆರನೆಯ ಮೆಟ್ಟಿಲು: ಒಳ್ಳೆಯ ಆರೋಗ್ಯವನ್ನು ಪಡೆದು ಅದನ್ನು ಊರ್ಜಿತವಾಗಿರಿಸಿಕೊಳ್ಳುವುದನ್ನು ಶಿಕ್ಷಣಕ್ಕೆ ಸಮಾಂತರದಲ್ಲಿ ಸಾಧಿಸಲು ಅವಕಾಶ.**

ಸೈನ್ಸ್ ಮತ್ತು ಟೆಕ್ನಾಲಜಿಗಳು ಅಭಿವೃದ್ಧಿ ಪಡೆಯುತ್ತ ಪಡೆಯುತ್ತ, ಸಾರ್ವ ಜನಿಕ ಆರೋಗ್ಯವನ್ನು ಭರವಸೆಯಿಂದ ಕಾಪಾಡುವ ಮತ್ತು ಅನಾರೋಗ್ಯವನ್ನು ತಡೆಯುವ ಸಾಧನಗಳು ಪ್ರತಿಯೊಬ್ಬ ಸರಕಾರಿ ಅಧಿಕಾರಿಗೂ ಸುಲಭವಾಗಿ ಒದಗು

ತ್ತವೆ. ಬಿಸಿಲು, ನಿರ್ಮಲವಾದ ಗಾಳಿ, ಚೊಕ್ಕಟವಾದ ನೀರು ಪುಷ್ಟಿಕೊಡುವ ಆಹಾರ, ಅಂಗಸಾಧನೆ, ಕಾಯಕದಿಂದ ಕ್ಲುಪ್ತಕಾಲಕ್ಕೆ ಬಿಡುವು, ವಿನೋದ ವಿಶ್ರಾಂತಿ ಗಳು–ಇವು ಆರೋಗ್ಯವನ್ನು ಕಾಪಾಡಿ, ಊರ್ಜಿತವಾದ ಸುಸ್ಥಿತಿಯಲ್ಲಿರಿಸಿಕೊಳ್ಳುವು ದಕ್ಕೆ—ಅವಶ್ಯವಾದರೆ, ಈ ಅನುಕೂಲಗಳನ್ನು ಸಮಸ್ತಜನರಿಗೆ, ಅದರಲ್ಲೂ ಎಳೆಯ, ಮಕ್ಕಳಿಗೆ, ಒದಗಿಸುವುದು – ಹಳ್ಳಿ ಪಟ್ಟಣ ನೆರೆಹೊರೆಗಳ ಮಟ್ಟದಿಂದ ವಿಶ್ವ ಜಗತ್ತಿನ ವಿಶಾಲಸ್ತರದವರೆಗೆ, – ಎಲ್ಲ ಸರಕಾರೀ ಅಧಿಕಾರಿಗಳ ಮುಖ್ಯ ಜವಾಬ್ದಾರಿ ಯಾಗಿರುತ್ತದೆ. ಈ ಅಧಿಕಾರಿಗಳು ಕಾಯಕದ ರೂಢಿಗೆ ಬದ್ಧರಾಗಿರತಕ್ಕವರು, ಮತ್ತು ಯಶಸ್ವಿಯಾಗಿ ಕರ್ತವ್ಯ ನಿರ್ವಾಹ ಮಾಡುವುದು ಅವರಿಗೆ ವಾಡಿಕೆ. ಆದದ್ದ ರಿಂದ ಅವರ ಸಹಕಾರದಿಂದ ವಿಶ್ವಪ್ರಪಂಚದ ಮಟ್ಟದಲ್ಲಿ ಜನಾರೋಗ್ಯದ ಅಭಿವೃದ್ಧಿಗೆ ಅವಕಾಶ ಹೆಚ್ಚುತ್ತದೆ.

**ಏಳನೆಯ ಮೆಟ್ಟಿಲು:** ವಿಶ್ವಪ್ರಪಂಚವ್ಯಾಪ್ತಿಯಾಗಿ, ಕ್ಷಿಪ್ರವೂ ದಕ್ಷವೂ ಆದ ಕಾರ್ಯನಿರ್ವಾಹಕ ಗುಣದಿಂದ ಕೂಡಿದ ಒಳ್ಳೆಯ ಕೆಲಸಗಾರಿಕೆಯ ಹದನುಳ್ಳ ಆರ್ಥಿಕ ಸಾಮಾಜಿಕ ಯಂತ್ರವು ಶುಭಜೀವನಕ್ಕೆ ಬಹು ಜರೂರಾದ ಅವಶ್ಯಕತೆಯಾ ಗಿದೆ. ಈ ಕಾರ್ಯಯಂತ್ರದ ಸಹಾಯದಿಂದ ಯೋಜನೆ, ಸಂಘಟನೆ, ನಿರ್ದೇಶನಗಳ ಮೂಲಕ ಮನುಷ್ಯ ಸಮಾಜವು ಸುಕರವಾಗಿ ಕಾರ್ಯಮಾಡುವ ವಿಶ್ವಪ್ರಪಂಚ ಮಟ್ಟದ ನಿಯೋಗಗಳನ್ನು ನೇಮಿಸಿಕೊಳ್ಳಬಹುದು. ಶಾಸನದಲ್ಲಿ ಕೇವಲ ಅಕ್ಷ ರೋಕ್ತಿ ಎನ್ನಿಸಿದ್ದು ಈಗ ಪ್ರಯೋಗ ಕಾರಣದಿಂದ ಅರ್ಥವಂತವಾಗುತ್ತದೆ. 1899ರ ಮೊದಲನೆಯ ಹೇಗ್ ಸಮ್ಮೇಳನ ನಡೆದಂದಿನಿಂದ ಪ್ರಪಂಚ ಸಂಸ್ಥೆಯೊಂದು ಅಸ್ತಿತ್ವಕ್ಕೆ ಬರಲು ಹಲವಾರು ಪ್ರಯತ್ನಗಳು ನಡೆದುವು. ಅಂತರರಾಷ್ಟ್ರೀಯ ನ್ಯಾಯ ಸ್ಥಾನ, ಆಮೇಲೆ ಲೀಗ್ ಆಫ್ ನೇಷನ್ಸ್ ಈಗ ಯುನೈಟೆಡ್ ನೇಷನ್ಸ್ (ಸಂಯುಕ್ತ ರಾಷ್ಟ್ರಸಂಸ್ಥೆ) ವರೆಗೆ ಮುನ್ನಡೆ ಸಾಧ್ಯವಾಗಿದೆ. ಇವೆಲ್ಲ ಮುಂದೆ ಬರಲಿರುವ ವಿಶ್ವವ್ಯಾಪಕಾಧಿಕಾರವುಳ್ಳ ಏಕೈಕ ಜಗತ್ಪ್ರಭುತ್ವ ಸ್ಥಾಪನೆಗೆ ಅವಶ್ಯವಾದ ಪೂರ್ವ ಪ್ರಯತ್ನಗಳಾಗಿವೆ.

ಅಧಿಕಾರ ಕ್ಷೇತ್ರ ಎಷ್ಟು ವ್ಯಾಪಕವೋ ಕರ್ತವ್ಯ ಕಾರ್ಯಕ್ಷೇತ್ರವೂ ಸ್ವಲ್ಪ ಹೆಚ್ಚು ಕಡಮೆ ಅಷ್ಟೇ ವ್ಯಾಪಕವಾಗಿರಬೇಕೆಂಬುದು ರಾಜ್ಯಶಾಸ್ತ್ರದಲ್ಲಿ ನಾವು ವ್ಯಾಸಂಗ ಮಾಡುವ ಸ್ವತಸ್ಸಿದ್ಧ ಸೂತ್ರ. ಮನುಷ್ಯ ಸಮಾಜವು ಕಳೆದ ನಾಲ್ಕು ಶತ ಮಾನಗಳಿಂದ ಸಂಪರ್ಕ ಸಾಧನಗಳು, ವಾಣಿಜ್ಯ ಪ್ರವಾಸ, ವಲಸೆ, ಸೈನ್ಸ್, ಕ್ರೀಡೆ, ಕಲೆಗಳು—ಈ ಕ್ಷೇತ್ರಗಳಲ್ಲೆಲ್ಲ ವಿನಿಮಯ ಪ್ರಯತ್ನಗಳ ಕಡೆಗೂ ಪರಸ್ಪರಾವಲಂಬ ನದ ಕಡೆಗೂ ಸಾಗುತ್ತಾ ಬಂದಿದೆ. ಕ್ಷಿಪ್ರವಾಗಿಯೋ ಸ್ವಲ್ಪಕಾಲ ಕಳೆದೋ ಈ ಗತಿಚಲನೆ

ಯನ್ನು ಮುಂಬರಿಸಿದ್ದಾದರೆ, ಭೂಗ್ರಹವ್ಯಾಪಿಯಾದ ಏಕೈಕವಾದ ಪ್ರಭುತ್ವವು ಅಸ್ತಿತ್ವಕ್ಕೆ ಬರುವ ಸುಯೋಗವಿದೆ. ಈ ಜಗತ್ಪ್ರಭುತ್ವಕ್ಕೆ ನಾನಾ ರಾಷ್ಟ್ರಗಳು ತಂತಮ್ಮ ಪರಮಾಧಿಕಾರಗಳಲ್ಲಿ ಅಂಶಾಂಶ ಭಾಗವನ್ನು ವಹಿಸಿಕೊಡುತ್ತವೆ; ಇಲ್ಲವೆ ಈ ಪ್ರಭುತ್ವವು ಈ ರಾಷ್ಟ್ರಗಳಿಂದ ಸಾರ್ವಭೌಮಾಧಿಕಾರವನ್ನು ಸ್ವಾಧೀನಪಡಿಸಿಕೊಳ್ಳುವಷ್ಟು ಸಮರ್ಥವಾಗುತ್ತವೆ. ಅಂತರ ರಾಷ್ಟ್ರೀಯ ಚಲನವಲನಗಳಲ್ಲಿ ಒಂದು ಗೌರವನಿಷ್ಠ ನಿಯಮವನ್ನೂ ಕ್ರಮವ್ಯವಸ್ಥೆಯನ್ನು ಖಾತರಿಪಡಿಸುವುದಕ್ಕೆ ಪ್ರತಿಯೊಂದು ವ್ಯಕ್ತಿ ರಾಷ್ಟ್ರದಲ್ಲೂ ಈ ವಿಶ್ವಪ್ರಭುತ್ವಕ್ಕೆ ರಾಜಕೀಯ ದೃಷ್ಟಿಯಿಂದ-ಸರ್ವಕಾರ-ಸರಕಾರ-ಎನ್ನಿಸಿಕೊಳ್ಳುವಷ್ಟು ಪ್ರತಿಷ್ಠೆ ಬರುತ್ತದೆ. ನಾವು ಒಡಂಬಡಲಿ, ಬಿಡಲಿ, ಭೂಗ್ರಹದಲ್ಲಿ ಇಂದಿನ ಚಲನವಲನದ ಕೇಂದ್ರ ಪ್ರಭಾವಶಕ್ತಿಯು ಸೀಮಾಬದ್ಧ ಪರಮಾಧಿಕಾರ ಸಂಪನ್ನ ರಾಷ್ಟ್ರಕಲ್ಪನೆಯನ್ನು ಹಿಂದಕ್ಕೆ ಬಿಟ್ಟು ಭೂಗ್ರಹವ್ಯಾಪಿಯಾದ ಅಂತರ ರಾಷ್ಟ್ರೀಯ ಅಥವಾ ಏಕ ಜಗತ್ಪ್ರಭುತ್ವದ ಕಡೆಗೆ ಚಲಿಸುತ್ತದೆ.

ಸದ್ಯಃಕ್ಷಣದಲ್ಲಿ "ಏಕಜಗತ್ಪ್ರಭುತ್ವ"ವೆಂಬುದು ಅನೇಕ ಜನಕ್ಕೆ, ನಾನಾ ಕಾರಣಗಳಿಂದ, ಸಮ್ಮತಿಯೋಗ್ಯವಲ್ಲ. ಆದರೆ ಮೋಟಾರು ವಾಹನಗಳನ್ನು ಕಟ್ಟಿಕೊಂಡ ಮೇಲೆ ಅವು ಓಡಾಡಲು ತಕ್ಕ ರಸ್ತೆಗಳನ್ನು ನಿರ್ಮಾಣ ಮಾಡಿಕೊಳ್ಳುವ ಆವಶ್ಯಕತೆ ಮೂಡಿದಂತೆ, ಅಂತರರಾಷ್ಟ್ರೀಯ ಸಂಬಂಧಗಳು ಸಂಖ್ಯೆಯಲ್ಲೂ ಜಟಿಲತೆಯಲ್ಲೂ ಗೋಜಗೋಜು ಬೆಳವಣಿಗೆಗೆ ಆಸ್ಪದ ಕೊಡುತ್ತಿರುವುದರಿಂದ, ವಿಶ್ವಪ್ರಪಂಚದ ಶಾಸನಾನುಸಾರಿಯಾದ ಕ್ರಮವ್ಯವಸ್ಥೆಯ ಆಡಳಿತ ನಿರ್ವಾಹಕ್ಕೊಂದು ಜಗತ್ಪ್ರಭುತ್ವವನ್ನು ರಚಿಸಿಕೊಳ್ಳುವ ಅನಿವಾರ್ಯವಾದ ಇಲ್ಲವೆ ಅವಾರಣೀಯವಾದ ಸಂದರ್ಭ ತಪ್ಪದೆ ಸಂಪ್ರಾಪ್ತವಾಗುತ್ತದೆ. ಈ ಆಡಳಿತಕ್ಕೆ ಸಾಮಾಜಿಕ ನ್ಯಾಯವನ್ನು ನಿರ್ವಹಿಸುವುದು ಪ್ರಧಾನ ಕರ್ತವ್ಯಗಳಲ್ಲೊಂದಾಗುತ್ತದೆ.

## ನಮ್ಮ ಸಹವಾಸಿಗಳಾದ ಪ್ರಾಣಿಗಳಿಗೆ ಶುಭಜೀವನ

ನಾವು ಪ್ರಾಣಿಗಳನ್ನು ಪಂಜರಗಳಲ್ಲಿಯೋ ಬೋನುಗಳಲ್ಲಿಯೋ ಆಧುನಿಕ ಪ್ರಾಣಿ ಸಂಗ್ರಹಾಲಯಗಳಲ್ಲಿಯೋ ಪರಿಷ್ಕೃತ ಕಾರಾಗೃಹಗಳಲ್ಲಿಯೋ ಸುತ್ತ ಬೇಲಿಯ ಬಯಲು ಸೆರೆ ಬೀಡುಗಳಲ್ಲಿಯೋ ಇರಿಸಿ, ನಮಗೂ ನಮ್ಮ ಕಿಶೋರರಿಗೂ ವಿನೋದ ವಿಸ್ಮಯ ವೀಕ್ಷಣಗಳಿಗೆ ಅವಕಾಶ ಮಾಡಿಕೊಂಡಿದ್ದೇವೆ. ಈ ಒಂದು ಪದ್ಧತಿ ಮುಂಬರಿಯುತ್ತಿರುವ ವರೆಗೆ ನಾವು ನಮ್ಮ ಧರ್ಮೇಂದ್ರಿಯದ ತಿವಿತಕ್ಕೆ ಸಿಕ್ಕಿ ಅಶಾಂತರಾಗುತ್ತಲೇ ಇರಬೇಕು. ಎದುವರೆಗೆ ಅಶನಕ್ಕಾಗಿ ಮೃಗಯಾ ವಿಹಾರಕ್ಕೂ ಮತ್ಸ್ಯಪಚಯಕ್ಕೂ ಲಕ್ಷಗಟ್ಟಲೆ ರಹದಾರಿಗಳನ್ನು ಕೊಡುವ ಏರ್ಪಾಟು ಉಂಟೋ, ಕ್ರೀಡೆಗಾಗಿಯೋ ಮಾಂಸವ್ಯಾಪಾರಕ್ಕಾಗಿಯೋ ಮೃಗಗಳನ್ನು ಬೋನಿರಿಸಿಯೋ ಗುಂಡಿಟ್ಟೋ

ಪೀಡಿಸುವುದಕ್ಕೆ ಅವಕಾಶ ಎದುವರೆಗೆ ಉಂಟೋ ಅದುವರೆಗೆ ನಾವು ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಪ್ರಾಣಿಗಳನ್ನು ಉತ್ಪತ್ತಿ ಮಾಡುವ ಕ್ರಮವನ್ನು ಸಡಗರದಿಂದ ನಡಸುತ್ತಿದ್ದೇವೆ. ಏಕೆ? ಮುಂದೆ ಕಟುಕರಾಗಿ ಅವನ್ನು—ಆರೋಗ್ಯವಾಗಿರುವ ಅವನ್ನು–ನಿರ್ದಯದಿಂದ ಮರ್ದಿಸಿ ಕಡಿದು, ಮಾರುಕಟ್ಟೆಯಲ್ಲಿ ತೂಗಹಾಕಿ, ಗಿರಾಕಿಗಳನ್ನು ಸೆಳೆಯುವುದಕ್ಕೆ. ಕಡೆಗೆ ಅವನ್ನು ಬೇಯಿಸಿ ತಿನ್ನುವುದಕ್ಕೋಸ್ಕರ–ಪ್ರಾಚೀನ ಕಾಲದ ಸಜಾತಿಭಕ್ಷಕರ ಉತ್ಸಾಹ ಸಂಭ್ರಮಗಳನ್ನು ಅನುಕರಿಸಿ! ಈ ಕಠೋರವಾದ ಪದ್ಧತಿ ಸಾಗುತ್ತಿರುವ ವರೆಗೆ, ಆಮೂಲಾಗ್ರ ಸುಧಾರಣೆಯಲ್ಲಿ ಕಾತರರಾದ ರ್‍ಯಾಡಿಕಲ್ ಪಂಥದ ನಾವು “ನೀನು ಕೊಲೆಯಿಂದ ಹಿಮ್ಮೆಟ್ಟು” ಎಂಬ ಶ್ರುತಿವಾಕ್ಯವನ್ನು ಸಮಸ್ತ ಜೀವಭೂತ ಹಿತದೃಷ್ಟಿಯಿಂದ ವ್ಯಾಖ್ಯಾನ ಮಾಡುತ್ತ, ಮನುಷ್ಯನ ಕೃತಕ ಚೋದಿತವೋ ತ್ರಾಣವುಡುಗಿದ್ದೋ ಆದ ಮನುಷ್ಯವರ್ಗದ ಜಠರಪೂರಣಕ್ಕೋಸ್ಕರ ಬಲಿಯಾಗುತ್ತಿರುವ ನಾನಾಜಾತಿಯ ಪ್ರಾಣಿಪಕ್ಷಿ ಸಂಕುಲದ ಪರವಾಗಿ, ಸಂಘಟಿತ ಪ್ರಚಾರ ಕಾರ್ಯಮಾಡುತ್ತ, ಚಳವಳಿ ನಡಸುತ್ತಲೇ ಇರಬೇಕಾಗುತ್ತದೆ.

ಸಹವಾಸಿಗಳಾದ ಪ್ರಾಣಿರಾಶಿಗಳನ್ನು ವಿರೋಧಿಸಿ ಅಂಕೆಯಲ್ಲಿರಿಸಿಕೊಂಡರೆ ಅದು ಬಂಧನದಲ್ಲಿ ಇರಿಸಿದಂತಾಗದು ಎಂದು ಹೇಳಿಕೊಳ್ಳುವಹಾಗಿಲ್ಲ. ಪ್ರಾಣಿಗಳಿಗೆ ಹಿಂಸೆಕೊಟ್ಟು ಅವುಗಳ ಕೈ ಕಾಲು ಪುಕ್ಕಗಳನ್ನು ಮುರಿಯುವುದನ್ನು ಬರಿಯ ಆಟವೆಂದೂ ಸಹಿಸಿಕೊಳ್ಳಲಾಗುವುದಿಲ್ಲ. ಪ್ರಾಣಿಗಳಿಗೆ ಕೂಡ ನಮ್ಮಂತೆ ಬಾಳುವ ಹಕ್ಕುಂಟು. ಅವುಗಳ ಪ್ರಾಣಕ್ಕೆ ಸಂಚಕಾರ ತರಲು ನಮಗೆ ಹಕ್ಕು ಅದೆಲ್ಲಿಂದ ಬಂತು? ಉದ್ದೇಶಪೂರ್ವಕವಾಗಿ ಪ್ರಾಣಿಗಳನ್ನು ಕೊಲ್ಲುವುದು ಕೊಲೆಗೆ ಸಮಾನ. ನಾವು ಕೈ ಮಾಡುವುದು ಜೊತೆ ಮನುಷ್ಯನ ಮೇಲೋ ಜೊತೆ ಜಂತುವಿನ ಮೇಲೋ ಎಂಬುದು ನಮ್ಮ ಚರ್ಚೆಗೆ ಸಂಗತವಲ್ಲ.

ಜೊತೆ ಪ್ರಾಣಿಗಳಿಗಿರುವ ಪ್ರಾಪ್ತವ್ಯ (ಹಕ್ಕು)ಗಳ ಉಲ್ಲಂಘನೆ ಅನೇಕರೂಪಗಳನ್ನು ತಳೆಯಬಹುದು. ಬೋನಿಟ್ಟು ಇಲ್ಲವೇ ಬಲೆಯೊಡ್ಡಿ ಅವನ್ನು ವಶಪಡಿಸಿಕೊಳ್ಳುವುದು, ಗುಂಡಿಟ್ಟು ಕೆಡವಿ ಕೊಲ್ಲುವುದು; ವಿಷಧೂಳು ಮೊದಲಾದ ಬಗೆಯಲ್ಲಿ ಸಂಜಿಕ್ಕೆ ಪಕ್ಷಿಗಳನ್ನೂ ಮೊಲ ಮೊದಲಾದ ಸಸ್ತನಿಗಳನ್ನೂ ಕ್ರಿಮಿಕೀಟಗಳನ್ನೂ ಸಾಯಿಸವುದು; ಕಸಾಯಿಖಾನೆಗಳನ್ನು ತೆರೆದು ಕ್ರಮವಾಗಿ ಪ್ರಾಣಿಗಳನ್ನು ಕಡಿಯುವುದು ಜ್ಞಾನಾರ್ಜನೆ, ವಿನೋದ, ಕಾಲಯಾಪನೆ ಅಥವಾ ಪ್ರಯೋಗ ಪರೀಕ್ಷೆಯ ಉದ್ದೇಶಗಳಿಗೋಸ್ಕರ ಜೊತೆಯ ಪ್ರಾಣಿಗಳನ್ನು ಕೊಲ್ಲುವುದು; ಕಾಯಕಕೋಸ್ಕರ ಅವನ್ನು ಪಳಗಿಸಿ ಹೂಡುವುದು; ಕುರಿ ಮೇಕೆ ಒಂಟೆ ಮೊಲಗಳ ಉಣ್ಣೆ ಕೂದಲುಗಳನ್ನು ಕತ್ತರಿಸಿ ಅವನ್ನು ಬತ್ತಲೆಮಾಡುವುದು, ವನ್ಯಮೃಗಗಳ ಅಥವಾ ಗೃಹಪೋಷಿತ ಮೃಗಗಳ ಚರ್ಮಗಳನ್ನು ಸುಲಿದು ಬಳಸುವುದು; ಸರ್ಕಸ್ ಮತ್ತು ಜೂ ಬೋನು ಪಂಜರಗಳಲ್ಲಿ

ಜೊತೆಜೀವಿಗಳನ್ನು ಸೆರೆಯಿರಿಸಿಕೊಳ್ಳುವುದು; ಗೃಹಪೋಷಿತವಾದ ಮುದ್ದು ಪ್ರಾಣಿಗಳನ್ನು, ತಮ್ಮ ಯೋಗಕ್ಷೇಮ ಹೇಗೆಂಬ ಅರಿವಿಲ್ಲದ ಮುಗ್ಧ ಜಂತುಗಳನ್ನು, ತಮ್ಮನ್ನು ಬಿಡುಗಡೆ ಮಾಡಿದರೂ "ತೊತ್ತು ಬಾಳಲ್ಲೇ ರುಚಿ" ಇರಿಸಿಕೊಂಡೇ, ಒಡೆಯರಲ್ಲಿ ನ್ಯಾಸ್ತದಿಂದ ನಡೆದುಕೊಳ್ಳುವ, ಮತ್ತು ಬಿಡುಗಡೆಮಾಡಿದ ಮೇಲೂ ಸ್ವಂತ ಇಷ್ಟದಿಂದ ಮರಳಿ ಒಡೆಯರ ಬಳಿಗೇ ಓಡಿಬಂದು ತೊತ್ತಾಗಿ, ಅವರ ಬೇಸನೆಸಗುತ್ತ ಬಂದಳಿಕೆ ಬಾಳಿಗೆ ಹಿಂತಿರುಗುವ ಅಭ್ಯಾಸವಾದ ಬಡಪ್ರಾಣಿಗಳನ್ನು ಮನುಷ್ಯರು ಖಾಯಮಾಗಿ ಗುಲಾಮಗಿರಿಯಲ್ಲಿರಿಸಿಕೊಳ್ಳುವುದು.

ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲೂ ಇತರ ಕಡೆಯೂ ಮನುಷ್ಯ ಪ್ರಾಣಿಗಳನ್ನು ಬೇಟೆಯಾಡಿ ತಿನ್ನುವ, ಸೆರೆಹಿಡಿದು ಬೆಳಸಿ, ಸೊತ್ತಿನಂತೆ ಎಣಿಸಿ ಸೊತ್ತು–ಕೂಲಿಗಳಾಗಿ ಕೊಂಡು ಮಾರುವ, – ಅಷ್ಟೇನೂ ಪ್ರಾಚೀನವಲ್ಲದ, – ಕಾಲವೊಂದಿತ್ತು. ಬಹುಮಟ್ಟಿಗೆ ಈ ಬಗೆಯ ಘೋರ ಗುಲಾಮಗಿರಿ ಇಂದು ರದ್ದಾಗಿದೆ. ಪ್ರಾಣಿ–ಪಕ್ಷಿ–ಕೀಟಗಳನ್ನು ತೊತ್ತು–ಸೆರೆಗೂ ಚಿತ್ರಹಿಂಸೆಗೂ, ಕಾರಾಗೃಹ ಬಂಧನಕ್ಕೂ ಮತ್ತು ಪ್ರಾಣಹಾನಿಗೂ, ಮನುಷ್ಯ ಚಾಪಲ್ಯ ಹವ್ಯಾಸ ವಾಡಿಕೆ ಒಲವುಗಳಿಗೋಸ್ಕರವೂ ಇಲ್ಲವೆ ಅವಶ್ಯವೆಂದು ಸ್ವೇಚ್ಛಾವೃತ್ತಿಯ ಕಠೋರ ಸಂತೃಪ್ತಿಗೋಸ್ಕರವೂ ಗುರಿಮಾಡುವ ಕೆಟ್ಟ ನಡತೆ ಇನ್ನೂ ವಿಸ್ತಾರ ಪ್ರಮಾಣದಲ್ಲಿ ಅಭ್ಯಾಸದಲ್ಲಿದ್ದುಕೊಂಡಿದೆ. ಯಂತ್ರೋದ್ಯಮಾಭಿವೃದ್ಧಿಯಲ್ಲಿ ತುಂಬ ಮುನ್ನಡೆದು, ನಾಗರಿಕತೆಯಲ್ಲಿ ತುಂಬ ಪ್ರಗತಿಪಥದಲ್ಲಿರುವೆವೆಂದುಕೊಂಡಿರುವ ಜನವರ್ಗಗಳೂ ಬಿಡದೆ ಈ ದುರಭ್ಯಾಸದಲ್ಲಿ ಮುಂಬರಿಯುತ್ತಿದ್ದಾರೆ. ಸಾಮೂಹಿಕವಾಗಿ ಕಂತಿಜೇಲಿಯ ಬಯಲು ಶಿಬಿರಗಳಲ್ಲಿ ಸೆರೆಯೋ, ಇನ್ನೂ ಇತರ ಅಮಾನುಷರೀತಿಯ ಪ್ರಾಣಿ ಹಿಂಸಾವರ್ತನೆಯೋ ಪ್ರತಿದಿನವೂ ನೋಟಕ್ಕೆ ಸಿಕ್ಕುವ ಘೋರ ಸಂಗತಿಯಾಗಿದೆ.

ಹೀಗೆ ಜೊತೆಪ್ರಾಣಿಗಳಿಗೆ ಸ್ವಾತಂತ್ರ್ಯವನ್ನು ತಪ್ಪಿಸಿ ನಿರ್ಬಂಧದಲ್ಲಿರಿಸುವುದು, ಸೆರೆಯಿಡುವುದು, ಸುಲಿಗೆಗೆ ಗುರಿಮಾಡುವುದು, ಚಿತ್ರಹಿಂಸೆ ಕೊಡುವುದು, ಕೊಲೆ ಮಾಡುವುದು–ಎಲ್ಲ ನಡೆಯುತ್ತಿದ್ದರೂ ಇಂದಿನ ಪ್ರಮುಖ ನಾಗರಿಕ ದೇಶಗಳಲ್ಲಿ ಯಾರೂ ಅದನ್ನು ಕಣ್ಣಿಟ್ಟು ಗಮನಿಸಿ, ಆಕ್ಷೇಪಿಸಿ ಟೀಕೆಯ ಸೊಲ್ಲೆತ್ತವೆ ತೆಪ್ಪಗಿದ್ದು ಬಿಟ್ಟಿದ್ದಾರೆ. ಹಿಂದೆ ಸ್ವಜಾತಿ ಜನರನ್ನು ತೊತ್ತುಗಳನ್ನಾಗಿ ಮಾಡಿಕೊಂಡು ತೋರಿಸುತ್ತಿದ್ದ ಕ್ರೂರವರ್ತನೆಯನ್ನು ಸಹಿಸಿಕೊಳ್ಳುತ್ತಿದ್ದ ಹಾಗೆಯೇ ಈ ಮೃಗಹಿಂಸೆಯನ್ನೂ ಈಗ ಸಹಿಸಿಕೊಳ್ಳುತ್ತಿದ್ದಾರೆ. ಮಾನವತೆ ಸ್ವಜಾತಿ ಭಕ್ಷಣನೀತಿಯನ್ನು ಹಾದು, ಸೊತ್ತಿನಂತೆ ತೊತ್ತು ಕೂಲಿಗಳಾಗಿ ಕೊಂಡು ಮಾರುವ ನೀತಿಯ ದಾರಿಯನ್ನು ಸವೆಸಿ ಮುಗಿಸಿದೆ. ಇನ್ನು ತನ್ನ ಮುಂದಣ ಕ್ರಮಿಕ ವಿಕಸನ ಮಾರ್ಗದಲ್ಲಿ ಮಾನವತೆ ತನ್ನೊಡನೆ ಬಾಳುತ್ತಿರುವ ಸಮಸ್ತ ಜೀವರಾಶಿಯ ಪರಮಾವಧಿಯ ಸಂಖ್ಯೆಗೆ ಪರ

ಮಾವಧಿಯ ಶುಭಜೀವನವನ್ನು ಭರವಸೆಪಡಿಸುವ ತತ್ತ್ವಕ್ಕೆ ಸಮ್ಮತಿಕೊಟ್ಟು, ಪ್ರಯೋಗ ಕ್ಷೇತ್ರದಲ್ಲಿ ಮಾನವ ಸಮುದಾಯದ ಜೊತೆಗೆ ಅವರ ಸಹವಾಸಿಗಳಾದ ನೆರೆಹೊರೆಯ ಮೃಗಸಮುದಾಯವನ್ನೂ ಸೇರಿಸಿಕೊಳ್ಳುವುದು ಖಂಡಿತ.

ತನಗಾಗಿ ತನ್ನ ರಕ್ಷಣೆ, ಘನತೆ, ಪ್ರಾಣಭದ್ರತೆ – ಈ ವಿಷಯಗಳನ್ನು ಜೀವ ಭೂತವೊಂದೊಂದೂ ತನಗೆ ಪ್ರಾಪ್ತವ್ಯ (ಹಕ್ಕು) ಎಂದು ಅಪೇಕ್ಷಿಸಿ ಗೆದ್ದುಕೊಳ್ಳುವ ಅವಕಾಶವಿದ್ದರೆ, ಸಮಸ್ತ ಜೀವರಾಶಿಗೂ ಈ ಅವಕಾಶ ಸಮಾನ ಬಲದಿಂದ ಅನ್ವಯಿ ಸುತ್ತದೆ. ಈ ಭೂಗ್ರಹಕ್ಕೂ ಅದರ ನಿವಾಸಿಗಳೆಲ್ಲರಿಗೂ ನಾವು ಮನುಷ್ಯವರ್ಗವು ಧರ್ಮದರ್ಶಿಗಳು ಎಂದು ಭಾವಿಸಿ ನಡೆಯಬಲ್ಲೆವಾದರೆ, ಅಂಥ ಪ್ರಾಪ್ತವ್ಯಗಳು ತನ್ನೊಡನೆ ಸಮಸ್ತ ಜೀವರಾಶಿಗೂ ಸಮಾನವಾಗಿ ಇವೆಯೆಂಬುದನ್ನು ಒಪ್ಪಿಕೊಂಡು, ಸಂಭವಿಸಬಹುದಾದ ಪ್ರಾಪ್ತವ್ಯ ನಿರಾಕರಣೆಯನ್ನು ವಿರೋಧಿಸಿ ಪ್ರತಿಭಟಿಸುತ್ತೇವೆ. ಈ ನಿರಾಕರಣೆಗೆ ಗುರಿಯಾದ ಜೀವಜಾತಿ ಯಾವುದೆಂಬುದರ ಗಣನೆ ನಮ್ಮ ಧ್ಯೇಯ ನಿರೂಪಣೆಗೆ ಸಂಗತವಲ್ಲ.

## ಶುಭಜೀವನ ಪ್ರಶ್ನೆಯ ಪರಿಹಾರಕ್ಕೆ ವಿಶ್ವರಾಷ್ಟ್ರ ಸಂಸ್ಥೆಯ ಅಸೆಂಬ್ಲಿಯ (ಕಮಿಷನ್ ನಿಯೋಗ)

ರ್‍ಯಾಡಿಕಲ್ ಪಂಥದ ನಾನು ವಿಶ್ವರಾಷ್ಟ್ರ ಸಂಸ್ಥೆಯ ಅಸೆಂಬ್ಲಿ (United Nations Assembly) ಒಂದು ವಿಶೇಷಾಧಿಕಾರವುಳ್ಳ ನಿಯೋಜಿತ ಮಂಡಲಿ ಯನ್ನೋ ಉಪಸಮಿತಿಯನ್ನೋ ನೇಮಿಸಿ, ಭೂಗ್ರಹವನ್ನು ಮನುಷ್ಯವರ್ಗಕ್ಕೂ ಇತರ ಪ್ರಾಣಿವರ್ಗಕ್ಕೂ ತಕ್ಕ ವಾಸದ ಬೀಡಾಗುವುದಕ್ಕೆ ಸಂಬಂಧಿಸಿದ ಪ್ರಶ್ನೆಯನ್ನು ಅದರ ವ್ಯಾಸಂಗಕ್ಕೂ ಪರ್ಯಾಲೋಚನೆಗೂ ಒಪ್ಪಿಸಿ, ಸಮಿತಿಯ ವರದಿಯನ್ನು ತರಿಸಿ ಕೊಳ್ಳಬೇಕೆಂದು ಒತ್ತಾಯ ಮಾಡುತ್ತೇನೆ. ಭೂಮಿಯನ್ನು ಸ್ವರ್ಗದ ನಂದನವನ ದಂತೆ ಅಭಿವೃದ್ಧಿಪಡಿಸಿ, ಅದರ ಯೋಗಕ್ಷೇಮಕ್ಕೆ ತಕ್ಕ ಯೋಜನೆಯೊಂದನ್ನು ತಯಾರಿಸಿ, ಕಾರ್ಯನಿರ್ವಾಹಕ್ಕೋಸ್ಕರ ಸ್ಥಳೀಯ, ಪ್ರಾದೇಶಿಕ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ (ವಿಶ್ವಪ್ರಪಂಚದ) ಮಟ್ಟದ ಅಧಿಕಾರಿ ಮಂಡಲಿಗಳನ್ನು ನೇಮಿಸಿ, ಈ ಮಂಡಲಿಗಳನ್ನು ಅವವಕ್ಕೆ ಗೊತ್ತಾದ ಕರ್ತವ್ಯಕರ್ಮದಲ್ಲಿ ಇರಿಸ ಬೇಕೆಂದೂ ಒತ್ತಾಯಮಾಡುತ್ತೇನೆ. ಸಂತತ ಶುಭಜೀವನ ನಿರ್ವಾಹಕ್ಕೂ ಸಮಸ್ತ ಜೀವರಾಶಿಯ ಸಾರ್ವತ್ರಿಕ ಕಲ್ಯಾಣ ಸಾಧನೆಗೂ ಈ ಕಾರ್ಯಕ್ರಮಗಳ ಮೂಲಕ ಅವಕಾಶ ಮಾಡಬೇಕೆಂದು ವಿಶ್ವರಾಷ್ಟ್ರ ಸಂಸ್ಥೆಯನ್ನು ಒತ್ತಾಯಪಡಿಸುತ್ತೇನೆ.

ವಾಸಗೃಹಗಳ ಸಾಲು, ಬೀದಿಗಳು ಸೇರುವೆಡೆ ಅಚ್ಚುಕಟ್ಟಾದ ಸಾರ್ವಜನಿಕ ಶೃಂಗಾಟಕ (ಚೌಕ, ಸ್ಕ್ವೇರ್), ಸಾರ್ವಜನಿಕರು ಹಾಯಾಗಿ ಹೊತ್ತು ಕಳೆಯುವುದಕ್ಕೆ

ಉಪವನಗಳು–ಇವೆಲ್ಲ ಅನ್ಯ ಪ್ರೇರಣೆಯನ್ನು ಅಪೇಕ್ಷಿಸದೆ ಕೈಗೂಡಬೇಕಾದ ಸ್ವತಸ್ಸಿದ್ಧ ಜನ ಸೌಕರ್ಯಗಳೆಂದು ರ್‍ಯಾಡಿಕಲ್ ಪಂಥದ ಎಲ್ಲರೂ ಒಡಂಬಡುತ್ತಾರೆ. ಈ ಸೌಕರ್ಯಗಳು ದಕ್ಷರಾದ ಇಂಜಿನಿಯರುಗಳಿಂದಲೂ ಪರಿಕರ್ಮ ತಂತ್ರಜ್ಞರಿಂದಲೂ ನಿರ್ಮ್ಮಾಣವಾಗಿ, ಪ್ರಕೃತಿ ಸೌಂದರ್ಯಕ್ಕೆ ಪೂರಕವಾದ ರೀತಿಯಲ್ಲಿ ಹೊಂದಿಕೆಯಾಗಿರುತ್ತ ದೃಶ್ಯಸೌಂದರ್ಯವನ್ನೊದಗಿಸಬೇಕು. ಇಡಿಯ ಭೂಗ್ರಹದ ಉದ್ದ ಅಗಲಗಳಲ್ಲೂ ಜಗದ್ವಸ್ತುಗಳನ್ನು ಬಳಸಿ ಅಂದವಾಗಿ ಬೆಳೆಸುವ ಈ ಜನಸೌಕರ್ಯ ಕಲ್ಪನೆಯ ತತ್ತ್ವವನ್ನು ಅನ್ವಯಿಸಿ, ಎಲ್ಲೆಲ್ಲೂ ಸೌಂದರ್ಯವರ್ಧನೆಗೆ ಅವಕಾಶಮಾಡುವ ಹೊತ್ತು ಬಂದಿದೆ. ಈ ಸಲಹೆ ವ್ಯವಹಾರಸಾಧ್ಯವಲ್ಲದ ದೊಡ್ಡ ಆಕಾಂಕ್ಷೆಯೆಂದು ಮೊದಲ ನೋಟಕ್ಕೆ ತೋರಬಹುದು. ಆದರೆ ಭೂಗ್ರಹದ ಯೋಗಕ್ಷೇಮಕ್ಕೆ ಬೇರೆ ದಾರಿ ಯಾವುದು ? ಭೂಮಿಯನ್ನು ಬಳಸಿದರೂ ಅದನ್ನು ಹಾಳುಮಾಡದೆ ಉಳಿಸಿ ಬೆಳೆಸುವ ಈ ತತ್ತ್ವವನ್ನು ಕಾರ್ಯತಃ ಯಶಸ್ವಿಯಾಗಿ ಪ್ರಯೋಗಿಸಲು ವಿಶ್ವಾದ್ಯಂತ ಚಳವಳಿ ನಡಸುವುದಕ್ಕೂ ಕಾಲ ಪಕ್ವವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಮನುಷ್ಯವರ್ಗ ಇಂಥ ರಚನಾತ್ಮಕ ಕಾರ್ಯದಲ್ಲಿ ತೊಡಗಿ ಜಯ ಸಂಪಾದಿಸಲು ಅವಶ್ಯವಾದ ತಾಂತ್ರಿಕ ಸಾಧನಗಳನ್ನೂ ಕೌಶಲವನ್ನೂ ಅನುಭವವನ್ನೂ ಬಿಡುವನ್ನೂ ಪಡೆದುಕೊಂಡಿದೆ. ಈ ಕೆಲಸಕ್ಕೆ ಬಿಡುವಿಲ್ಲ ಎಂದು ಯಾವ ಮನುಷ್ಯನೂ ಸಬೂಬು ಹೇಳುವಂತಿಲ್ಲ.

ಇಂದಿನ ಪ್ರಪಂಚದಲ್ಲಿ ಎಲ್ಲಿ ನೋಡಿದರೂ ಪರಿಮಿತವಾದ ಅವಧಿಯವರೆಗೆ ನಿಯತ ಕಾಯಕ ವ್ಯವಸ್ಥೆಯುಳ್ಳ ದಿನಕ್ಕೂ, ಕೆಲಸದ ದಿನಗಳಲ್ಲಿ ನಿಯತ ವ್ಯವಸ್ಥೆಯುಳ್ಳವಾರಕ್ಕೂ, ಸಂಬಳ ಸಂದಾಯವಾಗುವ ಅವಧಿಯವರೆಗೆ ವಿಶ್ರಾಂತಿಕಾಲಕ್ಕೂ ಸಾರ್ವತ್ರಿಕವಾದ ಚಳವಳಿ ನಡೆಯುತ್ತಿದೆ. ಮಕ್ಕಳಿಗೆ 14–15 ವರ್ಷ ವಯಸ್ಸಾಗುವವರೆಗೆ ಅವರನ್ನು ಕಡ್ಡಾಯವಾಗಿ ವಿದ್ಯಾರ್ಜನೆಯಲ್ಲಿರಿಸುವ ಏರ್ಪಾಟನ್ನು ಜಾರಿಗೆ ತರಬೇಕೆಂದು ಪ್ರಪಂಚದಲ್ಲಿ ಎಲ್ಲೆಲ್ಲೂ ಸಾರ್ವತ್ರಿಕ ಚಳವಳಿ ನಡೆಯುತ್ತಿದೆ. ಇಷ್ಟೇ ವ್ಯಾಪಕವಾಗಿ ನಡೆಯುತ್ತಿರುವ ಚಳವಳಿ – ಹೆಂಗಸರಿಗೂ ಗಂಡಸರಿಗೂ, ಅವರು 60 ವರ್ಷ ವಯಸ್ಸನ್ನು ಮುಟ್ಟಿದೊಡನೆ, ವಿಶ್ರಾಂತಿವೇತನ ಕೊಟ್ಟು ಅವರೆಲ್ಲ ಬಾಳಸಂಜೆಯನ್ನು ನೆಮ್ಮದಿಯಾಗಿ ಕಳೆಯಬೇಕೆಂದು ಒತ್ತಾಯ ಮಾಡುತ್ತಿದೆ. ಹೀಗೆ ಎಲ್ಲರೂ ಬಿಡುವಿಗೆ ಹಾತೊರೆಯುವವರೇ. ಆದರೆ ಈ ಬಿಡುವಿನ ವೇಳೆಯನ್ನು ಹೇಗೆ ಸಾರ್ಥಕವಾಗಿ ಕಳೆಯುವುದು ಎಂಬುದೇ ದೊಡ್ಡ ಪ್ರಶ್ನೆ. ಬಿಡುವಿನ ಹೊತ್ತಿನಲ್ಲಿ ಒಂದು ಪಾಲನ್ನಾದರೂ ಬುದ್ಧಿ ಪ್ರಯುಕ್ತವೂ ನಿಷ್ಕೃಷ್ಟವೂ ಆದ ಯೋಜನೆಯೊಂದನ್ನು ಕಲ್ಪಿಸಿಕೊಂಡು, ಅದಕ್ಕನುಕೂಲಸಾರವಾಗಿ ನೈಸರ್ಗಿಕ ಪರಿಸರವನ್ನು ಅಭಿವೃದ್ಧಿ ಪಡಿಸಿಕೊಳ್ಳಬಹುದು.

ಪ್ರಕೃತಿ ಪರಿಸರವನ್ನು ಯೋಜನಾಬದ್ಧ ವಿಧಾನಗಳಿಂದ ಅಭಿವೃದ್ಧಿ ಪಡಿಸಿಕೊಳ್ಳುವ ಪ್ರಯತ್ನ ಇನ್ನೊಂದು ಗಮನಾರ್ಹವಾದ ಅನುಕೂಲವನ್ನು ಗಳಿಸಿಕೊಡುತ್ತದೆ.

ಎಳೆಯ ವಯಸ್ಸಿನವರು, ತರುಣಿಯರಾಗಿಯೋ ತರುಣರಾಗಿಯೋ ಬೆಳೆದು, ಪ್ರೌಢವಯಸ್ಕರಾದಾಗ, ಪ್ರಾಯಶಃ ಅವರು ಗೃಹಕೃತ್ಯದ ಹೊಣೆಗಳನ್ನು ಹೊತ್ತವರಾಗಿರುವುದಿಲ್ಲ. ಉದ್ಯೋಗವೊಂದನ್ನು ಹಿಡಿದು ಕಾಯಕದಲ್ಲಿರಲಿ, ಇಲ್ಲವೆ ನಿರುದ್ಯೋಗಿಗಳಾಗಿರಲಿ, ಅವರು ಗೃಹಕೃತ್ಯದ ಹೊಣೆಹೊರುವ ಸ್ಥಿತಿಯಲ್ಲಿ ಇಲ್ಲವೆ ಇರಬಹುದು. ಅವರಲ್ಲಿ ಶಕ್ತಿ ದಿನೇ ದಿನೇ ಕಾಯಕಕ್ಕೆ ವೆಚ್ಚವಾದರೂ ಉಳಿದಿರುತ್ತದೆ. ಇಂಥವರು ವಿಶ್ರಾಂತಿಕಾಲವನ್ನು ಕಳೆಯುವುದು ಹೇಗೆ ಎಂದು ಕಿರಿಕಿರಿಯನ್ನೂ ಅನುಭವಿಸುತ್ತಾರೆ. ಹಿಂದೆ ಹೇಗೋ ಹಾಗೆ ಇಂದೂ ಸೈತಾನನು ಆಲಸ ಚಿತ್ತಗಳಿಗೆ ಮುತ್ತಿಗೆ ಹಾಕುತ್ತಾನೆ, ಹಾವಳಿಯೆಬ್ಬಿಸುತ್ತಾನೆ. ಆದದ್ದರಿಂದ ತರುಣರಿಗೊಂದು ಯೋಜನಾಬದ್ಧ ಕಾರ್ಯಕ್ರಮವು ತಯಾರಾದರೆ ಅವರು ತಮ್ಮ ಬಿಡುವು ಹೊತ್ತನ್ನೂ ಶಕ್ತಿಯನ್ನೂ ದೇಶಹಿತಕ್ಕಾಗಿ ಬಳಸಿಯಾರು.

ಈಚಿನ ಅನುಭವವೊಂದು ತರುಣರ ಬಗ್ಗೆ ನಾನು ಎತ್ತಿರುವ ತಕರಾರಿಗೆ ಸಮರ್ಥನೆ ಕೊಡುತ್ತದೆ. 1918 ರ ಯುದ್ಧಾನಂತರವೂ 1945 ರ ಯುದ್ಧಾನಂತರವೂ ಬಿದ್ದ ಪಾಳು ಬೀಳುಗಳನ್ನು ತೆಗೆದು ಸ್ಥಳಶುದ್ಧಿ ಮಾಡುವುದಕ್ಕೆ ಸ್ವಯಂಸೇವಕರ ಸೇವೆಯನ್ನು ಅಣಿಮಾಡಿಕೊಂಡು ಹೂಡಲಾಯಿತು. ಈ ಕಾರ್ಯವು ನಿರುದ್ಯೋಗಿಗಳ ಕೈಗೊಂದಷ್ಟು ಕೆಲಸವನ್ನು ಕೊಟ್ಟಿತು. ಸಮತಾವಾದಿ ದೇಶಗಳಲ್ಲಿ ಸ್ವಯಂಸೇವೆಯ ಆಧಾರದಂತೆ ಅಭಿವೃದ್ಧಿ ಕಾರ್ಯಗಳೂ ಮತ್ತು ವಾತಾವರಣ ಪರಿಸರಾಭಿವೃದ್ಧಿಗೋಸ್ಕರ ಪುನಾರಚಣೆಗಳೂ ಜೊತೆಜೊತೆಯಾಗಿ ನಡೆಯುತ್ತಿವೆ. ಈ ಕಾರ್ಯಗಳು ಇಡಿಯ ತರುಣ ತಲೆಮಾರಿನವರ ಜೀವನಕ್ಕೆ ಯೋಜನೆ ಮತ್ತು ಉದ್ದೇಶಗಳನ್ನು ಅಳವಡಿಸುವ ಉಪಕಾರ ಮಾಡುತ್ತವೆ. ಸಂಯುಕ್ತ ಸೋವಿಯತ್ ರಾಷ್ಟ್ರದಲ್ಲೂ, ಅದರಲ್ಲೂ ವಿಶೇಷವಾಗಿ ಚೀನಾ ದೇಶದಲ್ಲೂ, ಪೂರ್ವ ಯೂರೋಪು ದೇಶಗಳಲ್ಲೂ–ಎಲ್ಲೆಲ್ಲಿ ಯಾಂತ್ರಿಕ ಸಹಾಯದ ಕೊರತೆಯುಂಟೋ ಅಲ್ಲೆಲ್ಲ–ಮನುಷ್ಯ ಕಾಯಕವನ್ನು **ದೇಶಋಣ**ವೆಂದು ಒತ್ತಾಯ ಮಾಡಲಾಗುತ್ತಿದೆ. ದೊಡ್ಡ ನೀರಾವರಿ ಯೋಜನೆಗಳು, ರಸ್ತೆ ಮತ್ತು ರೈಲುದಾರಿಗಳ ನಿರ್ಮಾಣಗಳು, ಸರ್ವಜನೋಪಯೋಗದ ಇತರ ಕಾಮಗಾರಿಗಳು – ಗೊತ್ತಾದ ಯೋಜನೆಯಂತೆ ಸೇತುವೆ ಕಟ್ಟಡಗಳು, ಕ್ರೀಡಾಂಗಣಗಳು ಮತ್ತು ವಿಹಾರಧಾಮಗಳು– ಇವಕ್ಕೆಲ್ಲ ಮನುಷ್ಯರಲ್ಲಿ ಬಳಸದೆ ಉಳಿದಿರುವ ಸಾಮರ್ಥ್ಯಗಳು ವಿನಿಯೋಗವಾಗುತ್ತಿವೆ. ಹೀಗೆ ಮನುಷ್ಯ ಸಾಮರ್ಥ್ಯಗಳು ಉಪಯುಕ್ತವಾಗಿ ಪ್ರಯೋಗವಾಗದಿದ್ದರೆ ಅವು ಪೊಳ್ಳುಗಳಲ್ಲಿ ವೆಚ್ಚವಾಗಿ ಹೋಗುವ ಸಂಭವವೇ ಹೆಚ್ಚು.

ಈ ಕಾರ್ಯಕ್ರಮದಿಂದ ಇನ್ನೂ ಒಂದು ಹೆಚ್ಚಿನ ಅನುಕೂಲವಾಗುತ್ತದೆ. ಎಲ್ಲ ಬಗೆಯ ಭೌಗೋಲಿಕ ಸ್ತರಗಳಲ್ಲೂ ಎಲ್ಲ ಮಟ್ಟದ ಜನಗಳಿಗೋಸ್ಕರವಾಗಿಯೂ

ಈ ಕಾರ್ಯಕ್ರಮವನ್ನು ಹೊಂದಿಸಿ ಜಾರಿಗೆ ತರಬಹುದು. ಭೂಗ್ರಹದಲ್ಲಿ ಒಂದೊಂದು ಭಾಗವೂ ಚೆಲುವಿನ ನೆಲೆವೀಡನ್ನು ಪಡೆದಿರುತ್ತದೆ. ಅನೇಕ ವೇಳೆ ಅದು ಇರುವುದು ಜನದ ಗಮನಕ್ಕೆ ಬಂದಿರುವುದಿಲ್ಲ. ಬಂದಿದ್ದರೂ ಆಡಿಗಡಿಗೆ ಅಲ್ಲಿಗೆ ಹೋಗಿ ಸುಖ ಪಡುವುದು ಜನಕ್ಕೆ ವಾಡಿಕೆಯಾಗಿಲ್ಲ. ಪ್ರತಿಯೊಂದು ಜನವರ್ಗಕ್ಕೂ ಅವರವರ ಮನೆಯನ್ನು ಚೊಕ್ಕಟವಾಗಿರಿಸಿಕೊಳ್ಳುವುದಕ್ಕೂ ಆಗಿಂದಾಗ್ಗೆ ದುರಸ್ತಿ ಕೆಲಸಮಾಡಿ ಸರಿಪಡಿಸಿ ವಿಸ್ತಾರಪಡಿಸಿಕೊಳ್ಳುವುದಕ್ಕೂ ಅವಕಾಶವಿರುತ್ತದೆ. ಒಂದೊಂದು ಕ್ಷೇತ್ರದಲ್ಲೂ ಅಭಿವೃದ್ಧಿಗೆ ಅವಕಾಶವಿಲ್ಲದೆ ಇಲ್ಲ. ಪ್ರತಿಯೊಂದು ನೆರೆಹೊರೆಯೊ, ಹಳ್ಳಿಯೋ ಪಟ್ಟಣವೋ ನಗರವೋ ಗ್ರಾಮ ಪ್ರದೇಶವೋ ಇಲ್ಲವೆ ರಾಷ್ಟ್ರಸಮಸ್ತವೋ, ಇವು ಒಂದೊಂದೂ ತನ್ನ ತನ್ನ ಪಾತ್ರವೇನೆಂದು ತಿಳಿದು, ತನ್ನ ತನ್ನ ಗೊತ್ತಾದ ನೆಲೆಯಲ್ಲಿ ಅಭಿವೃದ್ಧಿ ಯೋಜನೆಯನ್ನು ಜಾರಿಗೆ ತಂದುಕೊಂಡು, ಆಯಾ ಪ್ರದೇಶದಲ್ಲಿ ವಿಶಿಷ್ಟವೆಂದು ಹೆಸರಾದ ಸಂಸ್ಕೃತಿ ಮುಖವನ್ನು ನೆಲೆಗೊಳಿಸುವ ಅವಕಾಶವನ್ನು ಬಳಸಿಕೊಂಡು, ಪರಿಸರ ಸೌಂದರ್ಯ ವರ್ಧನೆಗೆ ನೆರವಾಗಬಹುದು. ಹೀಗೆ ಮನುಷ್ಯವರ್ಗದ ಒಂದೊಂದು ಭಾಗವೂ ಸ್ವಯಮಾಧಿಪತ್ಯದ ತತ್ತ್ವವನ್ನು ಆಚರಣೆಗೆ ತಂದು, ನೈಸರ್ಗಿಕ ಪರಿಸರ ಸನ್ನಿವೇಶದಲ್ಲಿ ತನ್ನ ಕೈವಾಡವನ್ನು ತೋರಿಸುತ್ತ, ಪರಿಸರವನ್ನು ತನ್ನ ಐತಿಹಾಸಿಕ ಸಂಸ್ಕೃತಿಗುಣದ ಭೂಮಿಕೆಯಲ್ಲಿ ನೆಲೆಗೊಳಿಸಿ, ಜನಹಿತಾವಶ್ಯಕತೆಗಳನ್ನು ಪೂರಯಿಸುತ್ತ, ಅದು ಇನ್ನಷ್ಟು ಚೆನ್ನಾಗುವಂತೆ ಮಾಡಿಕೊಳ್ಳಬಹುದು. ಪ್ರವಾಸಿಗಳು, ಪಯಣಿಗರು, ವಿಶ್ರಾಂತಿ ವಿಹಾರಿಗಳು, ಭೂಮಿಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಿಬರುತ್ತ ಅಲ್ಲಲ್ಲಿಯ ಸೌಂದರ್ಯಧಾಮಗಳಲ್ಲಿ ತಂಗಿ, ತಾವು ಅದುವರೆಗೆ ಸಂದರ್ಶಿಸಿದ ಸ್ಥಲ ವಿಸ್ಮಯ ವೈಭವಗಳಲ್ಲಿ ಒಂದಕ್ಕೊಂದನ್ನು ಹೋಲಿಸಿ, ವ್ಯತ್ಯಾಸವಿಶೇಷಗಳನ್ನು ತಿಳಿದು, ಕಲಿತು, ವಿಶ್ವವ್ಯಾಪಿಯಾಗಿ ಸಹಕಾರವೃತ್ತಿಯಿಂದ ಸಂಸ್ಕೃತಿ ವಿನಿಮಯ ಮಾಡಿಕೊಳ್ಳುವ ಬಗ್ಗೆ ಸಲಹೆ ಸೂಚನೆಗಳನ್ನು ಕೊಟ್ಟು ನೆರವಾಗಬಹುದು. ಈ ಸಂದರ್ಭದಲ್ಲಿ ನಾನು ಕೊಡುವ ಸೂಚನೆ ಇದು: ಈ ಪರಿಸರಾಭಿವೃದ್ಧಿ ಯೋಜನೆಯನ್ನು ಜಾರಿಗೆ ತಂದುಕೊಳ್ಳುವುದರಲ್ಲಿ ಸ್ವಯಂಸೇವಕರೂ, ರಜಾದಿನಗಳನ್ನು ಹಾಯಾಗಿ ಕಳೆಯುವ ವಿಶ್ರಾಂತಿ ಪ್ರಿಯರೂ ಸಾಕಾದಷ್ಟು ಪರಿಮಾಣದ ಕಾರ್ಯದಲ್ಲಿ ಪಾಲ್ಗೊಂಡು, ತಂತಮ್ಮ ಕರ್ತವ್ಯ ಪಾತ್ರವನ್ನು ನಿರ್ವಹಿಸುವ ಅವಕಾಶವಿದೆ. ಇವರೆಲ್ಲ ಬಿಸಿಲು ಗಾಳಿಗಳಿಗೆ ಮೈಯೊಡ್ಡಿ, ಶ್ರಮದಾನದಿಂದ ಹುರುಪೇರುತ್ತ, ತಮ್ಮ ಶಕ್ತಿಸಾಮರ್ಥ್ಯಗಳನ್ನು ಸಮುದಾಯ ಹಿತಾಭಿವೃದ್ಧಿಯ ಕಾರ್ಯಕ್ಕೆ ವಿನಿಯೋಗಿಸುತ್ತಿದ್ದೇವೆಂಬ ಧನ್ಯತಾಭಾವವನ್ನು ಮೈಗೂಡಿಸಿಕೊಳ್ಳಬಹುದು. ಶುಭಜೀವನಕ್ಕೋಸ್ಕರ ಅವರು ಇಡುವ ಹೆಜ್ಜೆಗಳಲ್ಲಿ ಇದೂ ಒಂದಾಗುತ್ತದೆ. ಸಾರ್ವತ್ರಿಕ ಕಲ್ಯಾಣದ ಉದ್ದೇಶಕ್ಕೆ ಅವರು ಸಲ್ಲಿಸುವ ಕಾಣಿಕೆ ಇದು.

## ವಿಶ್ವರಾಷ್ಟ್ರಸಂಸ್ಥೆಯ ಪಾತ್ರ

ಪ್ರಕೃತಿ ಪರಿಸರದ ಅಭಿವೃದ್ಧಿಗೋಸ್ಕರ ಜನತೆ ವೈಯಕ್ತಿಕವಾಗಿಯೂ ಸಾಮುದಾಯಿಕವಾಗಿಯೂ ಕೈಗೊಳ್ಳುವ ಪ್ರಯತ್ನಕ್ಕೆ – ವಿಶ್ವರಾಷ್ಟ್ರಸಂಸ್ಥೆಯೂ ನೆರವಾಗಬಹುದು. ಈ ಸಂಸ್ಥೆ ಇದುವರೆಗೆ ಮುನ್ನಡೆದು ಬಂದ ಈ ಮಜಲಲ್ಲಿ, ಅದಕ್ಕಿರುವ ಅಧಿಕಾರಗಳನ್ನು ಸದಸ್ಯರಾಷ್ಟ್ರಗಳು ಎಷ್ಟೇ ಮೊಟಕುಮಾಡಿದರೂ, ಈಗ ಇರುವ ಸಾಕಾದಷ್ಟು ಅಧಿಕಾರವನ್ನು ಅದು ಬಳಸಿ ತನ್ನ ಕರ್ತವ್ಯ ಪಾತ್ರವನ್ನು ನಿರ್ವಹಿಸಬಹುದು. ಜನತೆಯ ಅನುಸರಣೆಗೆ ಒಂದು ಮಾದರಿ ಯೋಜನೆಯನ್ನು ಗೊತ್ತುಮಾಡಿ ಒಂದೆರಡುಕಡೆ ಅದನ್ನು ಪ್ರಯೋಗಿಸಿ ನೋಡಿ, ಸ್ವಕಾರ್ಯ ಸಾಧನೆಯ ನಿದರ್ಶನದಿಂದ ಜನಕ್ಕೆ ಮಾರ್ಗದರ್ಶನ ನೀಡಬಹುದು. ಕಾರ್ಯಮಾಡುತ್ತಹೋದ ಹಾಗೆಲ್ಲ ಈ ಸಂಸ್ಥೆ ತನ್ನ ಅಧಿಕಾರ ವ್ಯಾಪ್ತಿಗೆ ಮೀರಿದ ಕ್ಷೇತ್ರಗಳನ್ನು ತನ್ನ ಸದಸ್ಯರಾಷ್ಟ್ರಗಳ ಕರ್ತವ್ಯ ನಿರ್ವಾಹಕ್ಕೆ ತಕ್ಕವೆಂದು ಅವಕ್ಕೆ ಒಪ್ಪಿಸಬಹುದು. ವಿಶ್ವಸಂಸ್ಥೆ ಕೈಗೊಂಡ ಕಾರ್ಯಕ್ರಮಗಳಿಗೆ ಯಶಸ್ಸು ಒದಗಿ, ಜನಕ್ಕೆ ಉಪಯುಕ್ತವೂ ಸುಂದರವೂ ಆದ ಪರಿಸರವು ಅಭಿವೃದ್ಧಿಗೆ ಬರುತ್ತಿರುವುದನ್ನು ಕಂಡಾಗ, ಅಂಥ ಅಭಿವೃದ್ಧಿಯನ್ನು ಇನ್ನೂ ಕಾಣದ ಕಡೆಗಳಲ್ಲೂ ಜನಕ್ಕೆ ಆ ಬಗ್ಗೆ ಕುತೂಹಲವುಂಟಾಗುತ್ತದೆ, ಸಾರ್ವತ್ರಿಕ ಪ್ರೋತ್ಸಾಹವೂ ಸಾಧನೋಪಕರಣ ಸಂಪತ್ತೂ ಲಭ್ಯವಾಗುತ್ತವೆ. ವಿಶ್ವಸಂಸ್ಥೆಗೆ ಜಗದ್ರಾಷ್ಟ್ರಗಳೇ ಈ ದೊಡ್ಡ ಪ್ರಶ್ನೆಯನ್ನು ಸಮಾಧಾನಕರವಾದ ಇತ್ಯರ್ಥಕ್ಕೆ ತರಲು ಅವಶ್ಯವಾಗುವ ಹೆಚ್ಚಿನ ಅಧಿಕಾರವನ್ನು ಸಹಕಾರವನ್ನೂ ನೀಡಲು ಮುಂದೆ ಬರುತ್ತವೆ.

## ಅಮೆರಿಕಾ ಒಕ್ಕೂಟವನ್ನು ಚೊಕ್ಕಟಮಾಡಿ ಆಧುನಿಕವಾಗಿ ನಡಸುವ ಕಾರ್ಯ

ಭೂಗ್ರಹವನ್ನು ಜನವರ್ಗಕ್ಕೂ ಅವರ ಸಹವಾಸಿಗಳಾಗಿ ಜನ್ಮಕ್ಕೆ ಬರುತ್ತಿರುವ ಇತರ ಪ್ರಾಣಿವರ್ಗಕ್ಕೂ ನಿವಾಸಯೋಗ್ಯವನ್ನಾಗಿ ಮಾಡುವ ಕಾರ್ಯ ಮುಂಬರಿದಂತೆ, ಈ ವಿಷಯಕ್ಕೆ ಸಬಂದಪಟ್ಟ ಎಲ್ಲ ವಿವರಗಳಲ್ಲೂ ಕುತೂಹಲಪಡುವ ಜನ ಇಳೆಯಲ್ಲಿ ಎಲ್ಲೆಲ್ಲೂ ಮುಂದಕ್ಕೆ ಬರಬೇಕು. ಈ ಬಗ್ಗೆ ಆಲೋಚನೆ, ಕಾರ್ಯಾರಂಭ ಸಂಕಲ್ಪ, ಕಾರ್ಯಕ್ರಮ ಯೋಜನೆಗಳ ನಿಷ್ಕರ್ಷೆ ಮತ್ತು ಯೋಜನೆಯಂತೆ ಕಾರ್ಯಾರಂಭಮಾಡಿ ನಡಸಿ ನಿರ್ವಾಹ ಮಾಡುವುದು–ಇವೆಲ್ಲ ಆಯಾ ಪ್ರದೇಶದ ಜಿಲ್ಲೆಗಳಲ್ಲೂ ಸ್ಥಳೀಯ ಸ್ತರಗಳಲ್ಲೂ ಕುಟುಂಬ ಜನ ಹಾಗೂ ನೆರೆಹೊರೆಯ ಜನರ ನಡುವೆ ಪರಸ್ಪರ ಸಹಕಾರ ಬುದ್ಧಿಯಿಂದ ನಡೆದು ನೆರವೇರತಕ್ಕವು. ಈ ಕಾರ್ಯವನ್ನು **ಭೂಋಣವೆಂದೂ** ಮುಖ್ಯವೆಂದೂ ಎಣಿಸಿ ಇವರೆಲ್ಲ ಹೊಣೆಯನ್ನು ತಮ್ಮ ಹೆಗಲಿಗೇರಿಸಿಕೊಳ್ಳಬೇಕು. ಹಳ್ಳಿಗರು, ಪಟ್ಟಣಿಗರು, ನಗರ ಪ್ರಜೆಗಳು, ಪ್ರಾಂತ ರಾಷ್ಟ್ರಗಳ ಪ್ರಜಾಗಣ

ಹೀಗೆ ಸಮಸ್ತರಿಗೂ ಹಂತ ಹಂತವಾಗಿ ಈ ಜಗತ್ಪರಿಸರಾಭಿವೃದ್ಧಿ ಕಾರ್ಯದಲ್ಲಿ ಪಾತ್ರವುಂಟು. ಇತರ ರಾಷ್ಟ್ರಗಳಂತೆ ಅಮೆರಿಕಾ ಸಂಯುಕ್ತ ಸಂಸ್ಥಾನಗಳ ರಾಷ್ಟ್ರಕ ಪ್ರಜೆಗಳೂ ಈ ಕಾರ್ಯವನ್ನು ತಮ್ಮ ದೊಡ್ಡ ಹೊಣೆಯೆಂದು ತಿಳಿದು ತಮ್ಮ ಗಡಿಯೊಳಗಡೆ, ತಮ್ಮ ಅಧಿಕಾರಕ್ಕೆ ಬಂದಿರುವ ಮೂವತ್ತೈದು ಲಕ್ಷ ಚದರ ಮೈಲಿಯಷ್ಟು ವಿಸ್ತಾರವಾದ ಭೂಮಿಯ ಮೇಲಿನ ಪರಿಸರದ ಯೋಗಕ್ಷೇಮಕ್ಕೆ ಮನಸ್ಸುಕೊಡಬೇಕು.

ಕಳೆದ ಅರ್ಧಶತಮಾನದ ಅವಧಿಯಲ್ಲಿ ಅಮೆರಿಕಾ ರಾಷ್ಟ್ರವು ಅಭಿವೃದ್ಧಿ ಪಥದಲ್ಲಿ ನಡೆದು ಇತರ ಜಗದ್ರಾಷ್ಟ್ರಗಳ ಗಮನವನ್ನು ಸೆಳೆದಿದೆ. ಮುಂದೆ ಉರುಳಲಿರುವ ಐವತ್ತು ವರ್ಷಗಳಲ್ಲಿ ಅಮೆರಿಕಕ್ಕೆ ಪ್ರಪಂಚನಾಯಕ ರಾಷ್ಟ್ರವಾಗುವ ಅರ್ಹತೆಯನ್ನು ಗಳಿಸಲು ನಿರ್ಣಾಯಕವೂ ಅನ್ಯರಾಷ್ಟ್ರಗಳಿಗೆ ದುರ್ಲಭವೂ ಆದ ಮಹಾವಕಾಶವೊಂದು ಘಟಿಸಿದೆ. ಜಗತ್ಪರಿಸರಾಭಿವೃದ್ಧಿಯ ಮಹಾ ಪ್ರಯತ್ನಕ್ಕೆ ದೀಕ್ಷಾಬದ್ಧವಾದ ಮನೋಭಾವ, ಕ್ರಿಯಾಶಕ್ತಿ, ಉತ್ಸಾಹ ಪಟುತೆಗಳನ್ನು ಹೂಡಿ ಅಮೆರಿಕವು ತನ್ನ ಪಾತ್ರವನ್ನು ನಿರ್ವಹಿಸಬೇಕು. ಏಕೆಂದರೆ ಜಗದ್ರಾಷ್ಟ್ರಗಳಲ್ಲಿ ಇಂದು ಅಮೆರಿಕವು ಅತಿಶಯವಾಗಿ ವಸ್ತುಗಳನ್ನು ಉತ್ಪಾದಿಸುವ ರಾಷ್ಟ್ರ, ಅತ್ಯಂತ ಧನಿಕರಾಷ್ಟ್ರ, ಬಹು ಪ್ರಬಲಾಧಿಕಾರ ಸಂಪನ್ನವಾದ ರಾಷ್ಟ್ರ ಎನ್ನಿಸಿಕೊಂಡಿದೆ. ವಿಶ್ವವ್ಯಾಪಿಯಾದ ಮಹಾ ಕಾರ್ಯವೊಂದರ ಸಿದ್ಧಿಯ ವಿಷಯದಲ್ಲಿ ತನಗಿರುವ ಪಾತ್ರ ವಿಶೇಷವನ್ನು ಈ ರಾಷ್ಟ್ರ ಉಪೇಕ್ಷಿಸುವಂತಿಲ್ಲ. ಅಲ್ಲದೆ, ಅಮೆರಿಕವು ತಾನು ಕೆಲಸಮಾಡಿ ಅನ್ಯರಾಷ್ಟ್ರಗಳಿಗೆ ಮೇಲ್ಪಂಕ್ತಿಯಾಗುವಷ್ಟು ಆಢ್ಯವಾಗಿದೆ. ಪ್ರಕೃತಿ ಸಂಪನ್ಮೂಲಗಳನ್ನು ಬಳಸಿ ಉಳಿಸಿಡುವ ಕಾರ್ಯಕ್ಕೂ, ವಿವಿಧ ವಸ್ತುಗಳ ಉತ್ಪಾದನೆಗೂ, ವಿವಿಧ ಯಂತ್ರಗಳ ಉತ್ಪಾದನೆಗೂ ಸೈನ್ಸ್ ಮತ್ತು ಟೆಕ್ನಾಲಜಿ ಸಾಧಿಸಿಕೊಟ್ಟಿರುವ ಜ್ಞಾನಸಾಮರ್ಥ್ಯ ವಿವೇಚನೆಗಳನ್ನು ಜಗದ್ವಿನಾಶಕ್ಕೆ ಬಳಸದೆ ಜನತೆಯ ಕಲ್ಯಾಣ ಸಾಧನೆಯ ಉದ್ದೇಶಗಳಿಗೂ ವಿನಿಯೋಗಿಸಿ ಇತರ ರಾಷ್ಟ್ರಗಳಿಗೆ ಮೇಲ್ಪಂಕ್ತಿ ಹಾಕಬೇಕು.

ರಾಷ್ಟ್ರೀಯ "ಗೃಹನಿರ್ಮಲೀಕರಣ" ಎಂಬ ದೊಡ್ಡ ಕಾರ್ಯಕ್ಷೇತ್ರದಲ್ಲಿ ಪರಿಗಣನೆಗೆ ಬರಬೇಕಾದ ಸಂಗತಿಗಳಿವು: ಬಂಡವಾಳ ಪತ್ರಗಳ ಮಾರುಕಟ್ಟೆ (ಸ್ಟಾಕ್ ಎಕ್ಸ್‌ಚೇಂಜ್), ಸ್ಥಿರಾಸ್ತಿಗಳ ಮಾರುಕಟ್ಟೆ (ರಿಯಲ್ ಎಸ್ಟೇಟ್ ಮಾರ್ಕೆಟ್)—ಇಂಥ ಆರ್ಥಿಕ ಸಂಸ್ಥೆಗಳಿಂದ ಈವರೆಗೆ ಇದ್ದ ಉಪಯೋಗದ ಕಾಲ ಮುಗಿದು ಹೋಯಿತಾದದ್ದರಿಂದ, ಅವನ್ನು ತಮಾಷೆ ಬಂಗಲೆಗಳಲ್ಲಿ (ಮ್ಯುಸಿಯಂ ಸರಕುಗಳನ್ನಾಗಿ) ಇರಿಸಿ, ಗತಕಾಲದ ವಿನೋದ ಸಾಮುಗ್ರಿಯೆಂದು ಆಗಾಗ ಜ್ಞಾಪಕಕ್ಕೆ ತಂದುಕೊಳ್ಳಬಹುದು. ಇಲ್ಲವೆ ಅವನ್ನು ಕಸವೆಂದು ಗುಡಿಸಿ ತೊರೆಯಬಹುದು. ಅಮೆರಿಕದ ಆರ್ಥಿಕ ವ್ಯವಸ್ಥೆಯಲ್ಲಿ ಸೇರಿಕೊಂಡಿರುವ ಇಂಥ ಇತರ ಬಾಬುಗಳನ್ನು ಸಾಂಪ್ರತಕಾಲಕ್ಕೆ ಉಪಯೋಗ–ಅನುಪಯೋಗ ದೃಷ್ಟಿಯಿಂದ ವಿಂಗಡಿಸಿ, ಉಪಯೋಗಕ್ಕೆ ಬರುವವನ್ನು

ಮಾತ್ರ ಉಳಿಸಿಕೊಳ್ಳಬೇಕು. ಇಂದು ಅಮೆರಿಕದಲ್ಲಿ ಪೇಟೆಯ ತುಂಬ ಇಡಿಕಿರಿದು ದಾಸ್ತಾನಿನಲ್ಲಿರುವ ಗೃಹೋಪಕರಣಗಳಲ್ಲಿ ಹಲವು ಪ್ರಕೃತ ಕಾಲದಲ್ಲಿ ಪ್ರಯೋಜನಕ್ಕೆ ಬಾರದವು – ಮನುಷ್ಯನಿರ್ಮಿತವಸ್ತುಗಳು, ಮನೆಯಲ್ಲಿ ಕಾರ್ಯೋಪಯುಕ್ತವೆಂದು ಬಳಸುವ ಯಂತ್ರ ಸಲಕರಣೆಗಳು (ಗಾಡ್ಜೆಟ್ಸ್), ಇತರ ಸಾಮಗ್ರಿಗಳು (ಅಪ್ಲಯನ್ಸ್) –ಇವು ವಾಸ್ತವವಾಗಿ ಕೆಲಸಕ್ಕೆ ಒದಗದವು, ಕಾಲದೃಷ್ಟಿಯಿಂದ ಸವೆದುಹೋದವು, ಅವುಗಳ ಸ್ಥಾನದಲ್ಲಿ ಹೊಸವನ್ನು ಮಾಡಿಸಿಕೊಳ್ಳಲು ಒತ್ತಾಯಮಾಡತಕ್ಕವು. ಈ ಉಪಕರಣಗಳ ಜೊತೆಗಡನೆ ಕ್ಷಿಪ್ರವಾಗಿ ಮುಗಿದು, ಹೇರಳವಾಗಿ ಪೇರಿಕೆಯಲ್ಲಿರುವ ಸರಕುಗಳನ್ನೆಲ್ಲ ತೊರೆದುಬಿಡಬೇಕು. ಅಮೆರಿಕದಂಥ ದೊಡ್ಡ ರಾಷ್ಟ್ರದಲ್ಲೂ ಸಂಗ್ರಹಾತಿರೇಕ ಇನ್ನೊಂದುಂಟು. ಅದು ಸಂಗ್ರಹಿಸಿರುವ ಶಸ್ತ್ರಾಸ್ತ್ರಗಳು, ಇತರ ಮಿಲಿಟರಿ ಸಾಮಗ್ರಿಗಳು ಇಡಿಯ ಮನುಷ್ಯ ಸಂತತಿಯನ್ನು ನಿರ್ಮೂಲ ಮಾಡಿಬಿಡುವ ಮಟ್ಟದಲ್ಲಿವೆ. ಈ ಮಿಲಿಟರಿ ಸರಪರಾಜುಗಳು ಮನುಷ್ಯ ವರ್ಗಕ್ಕೆ ತುಂಬ ಅಪಾಯ ಭೀತಿಯನ್ನೊಡ್ಡಿವೆ. ಅಮೆರಿಕವೊಂದೇ ಅಲ್ಲ, ಜಗದ್ರಾಷ್ಟ್ರಗಳಲ್ಲಿ ಯಾವಯಾವ ರಾಷ್ಟ್ರ ಇಂಥ ಮಾರಕಾಸ್ತ್ರಗಳನ್ನು ರಾಸಿರಾಸಿಯಾಗಿ ಪೇರಿಸಿದೆಯೋ ಅವೆಲ್ಲ ಕಳಪೆಕಸವೆಂದು ಅವನ್ನು ತಿಪ್ಪೆಗೆಸೆಯಬೇಕು. ವಿಶ್ವವ್ಯಾಪಿಯಾಗಿ ಅನ್ವಯವಾಗುವ ನಿಶ್ಶಸ್ತ್ರೀಕರಣದ ಒಪ್ಪಂದವೊಂದನ್ನು ಮಾಡಿಕೊಂಡು, ಆರ್ಜವ ಬುದ್ಧಿಯಿಂದ ಮಾರಕಾಸ್ತ್ರಗಳನ್ನು ತ್ಯಜಿಸಿಬಿಡಬೇಕು.

ಸಂಯುಕ್ತ ಅಮೆರಿಕದ ಪ್ರಜೆಗಳಿಗೆ ಹೊರೆಯಾಗಿರತಕ್ಕದ್ದು, ಅಭಾವಪರಿಸ್ಥಿತಿಯ ಆಧಾರಾವಲಂಬನದಂತೆಯೆ, ಕಟ್ಟಿಕೊಂಡ ಬೆಲೆ–ನಫೆಯ ಆರ್ಥಿಕವ್ಯವಸ್ಥೆ. ಇಂದಿನ ಯುಗದಲ್ಲಿ, ಅಭಿವೃದ್ಧಿ ಸೂಚಕವಾದ ಪುಷ್ಕಲತೆಯ ಯುಗದಲ್ಲಿ, ಈ ಇಡಿಯ ಆರ್ಥಿಕ ವ್ಯವಸ್ಥೆ ಪೂರ್ತಿ ಪರಿಷ್ಕರಣವಾಗುವುದಕ್ಕೆ ತಕ್ಕದ್ದಾಗಿದೆ. ಅದರಲ್ಲಿ ಇನ್ನೂ ಉಪಯೋಗ ದಶೆಯಲ್ಲಿರುವ ಸಲಕರಣೆಗಳನ್ನೂ, ಅಭ್ಯುದಯ ಸಾಧಕ ಸೂತ್ರಗಳನ್ನೂ ಉಳಿಸಿಕೊಳ್ಳಬೇಕು. ಮಿಕ್ಕವನ್ನು ತೊರೆದುಬಿಡಬೇಕು. ಪ್ರಕೃತಕಾಲದ ನೂತನೋದ್ದೇಶಗಳಿಗೆ ಹೊಂದಿಕೆಯಾಗಬಲ್ಲವನ್ನು ಪರಿಷ್ಕರಿಸಿ ಉಳಿಸಿಕೊಳ್ಳಲು ಅಭ್ಯಂತರವಿಲ್ಲ.

ಸಂಯುಕ್ತ ಅಮೆರಿಕದ ಪ್ರಜೆಗಳು ಇದೇ ರೀತಿಯಲ್ಲಿ ಇನ್ನೊಂದು ಹೊರೆಯನ್ನು ಹೊತ್ತಿದ್ದಾರೆ. ಪ್ರಮುಖವಾಗಿ ಗ್ರಾಮಾಂತರ ಪ್ರದೇಶಗಳ ಹಾಗೂ ಸಣ್ಣ ಪಟ್ಟಣ ಪ್ರದೇಶಗಳ ಜನಸಮುದಾಯಮಾತ್ರದ ಹಿತಸಾಧನೆಗೆ ಪ್ರಯೋಜನವಾಗುತ್ತಿದ್ದ ಹದಿನೆಂಟನೆಯ ಶತಮಾನದ ರಾಜಕೀಯ ಸಲಕರಣೆಯನ್ನು ಇನ್ನೂ ಬಳಸುತ್ತಿರುವುದೇ ಈ ಎರಡನೆಯ ಹೊರೆ. ಈ ರಾಜಕೀಯ ವ್ಯವಸ್ಥೆ ಖಾಸಗಿ ಉದ್ಯಮ ಪ್ರೋತ್ಸಾಹದ ಏರ್ಪಾಟಿನ ಸುತ್ತ ಬೆಳೆದುಬಂದದ್ದು. ಈ ಹಳೆಯ ಕಟ್ಟಡವನ್ನು ತೊರೆದು, ಅದರ ಸ್ಥಾನದಲ್ಲಿ ಈಗಣ, ಪ್ರಮುಖವಾಗಿ ಯಂತ್ರೋದ್ಯಮ

ಪ್ರಾಬಲ್ಯವಿರುವ ಪಟ್ಟಣ ಪ್ರದೇಶಗಳಿಗೆ ಹೊಂದುವಂಥಾ ಆಡಳಿತ ಸಲಕರಣೆಯನ್ನು ಕಟ್ಟಿಕೊಂಡು, ಈ ವಿಧಾನವನ್ನು ವಿಶ್ವಪ್ರಜಾಸಮುದಾಯದ ಕಲ್ಯಾಣಸಿದ್ಧಿಯ ಮುಖ್ಯಾಂಗವಾಗಿರುವಂತೆ ಆಗಾಗ್ಗೆ ನವೀಕರಿಸುತ್ತ ಬಳಸಿಕೊಳ್ಳಬೇಕು.

1945ರಲ್ಲಿ ದ್ವಿತೀಯ ಮಹಾಯುದ್ಧ ಮುಗಿದ ಮೇಲೆ, ಅಮೆರಿಕದ ಯಂತ್ರೋದ್ಯಮಿ – ಸೈನಿಕ – ಸ್ವಲ್ಪಜನಾಧಿಪತಿಗಳ ಕೂಟವು 19ನೆಯ ಶತಮಾನದ ಚರಿತ್ರೆಯನ್ನು ಈ ಇಪ್ಪತ್ತನೆಯ ಶತಮಾನದಲ್ಲೂ ಪುನರಾವರ್ತನಗೊಳಿಸುವುದಕ್ಕೆ ಉದ್ಯೋಗಿಸಿತು. ಅವರ ನವೀನ ಕಾರ್ಯತಂತ್ರ ಇದು: ಇದುವರೆಗೆ ಪ್ರಭಾವ ಸ್ಥಾನದಲ್ಲಿದ್ದ ಬ್ರಿಟಿಷ್ ಸಾಮ್ರಾಜ್ಯದ ಕೇಂದ್ರವಾದ ಲಂಡನ್ ಪಟ್ಟಣವನ್ನು ಕೈಬಿಟ್ಟು, ಅಮೆರಿಕದ ರಾಜಧಾನಿಯಾದ ವಾಷಿಂಗ್‌ಟನ್ ಪಟ್ಟಣದ ಸ್ನೇಹ ಬಲ ವನ್ನು ಕೈಗೊಂಡರು. ವಿಶ್ವಸಾಮ್ರಾಜ್ಯದ ರಾಜಕೀಯ ಯಂತ್ರ, ಧನವ್ಯವಸ್ಥೆ, ಮತ್ತು ಆಡಳಿತ ವ್ಯವಸ್ಥೆಗಳಿಗೆ ವಾಷಿಂಗ್‌ಟನ್ ಪಟ್ಟಣವನ್ನು ಕೇಂದ್ರ ಶಕ್ತಿಯಾಗಿ ಬಳಸಿಕೊಂಡರು. ಈ ಒಂದು ಸಖ್ಯ ಪರಿವರ್ತನೆಯಲ್ಲಿ ಇನ್ನೊಂದು ಸರ್ವನಾಶಕ ಘೋರ ಸಂಗ್ರಾಮ ನಡೆಯುವುದೆಂಬ ಸೂಚನೆಕೊಡುವ ಪ್ರಲಯ ಘಟನೆಯ ಅಪಾ ಯಕ್ಕೆ ಬೀಜಾಂಕುರವಾಯಿತು. ಇಂದು ನಾಯಕ ಪದವಿಗೇರಿದ ಅಮೆರಿಕದ ಅಧಿ ಕಾರ ಚಿತ್ತದ ಹಾಗೂ ಅದು ಗೊತ್ತುಮಾಡಿಕೊಂಡ ಪಾತ್ರಗ್ರಹಣದ ವಿಚಿತ್ರಗತಿಯಲ್ಲಿ ಮಾರ್ಪಾಟುಗಳು ದುರಂತ ಸೂಚಕವಾಗಿ ಕಾಣಬರುತ್ತಿವೆ. ಅಮೆರಿಕವು ಇಂದು ವಿಶ್ವಶಾಂತಿಯ ಕಡೆಗೆ ಓಲುತ್ತವೆಯೋ, ಇಲ್ಲವೆ 1939–45 ರ ಯುದ್ಧದ ಭೀಕರ ರುದ್ರಘಟನೆಗಿಂತ ಅತಿಶಯ ಭಯಾನಕ ಘೋರ ಘಟನೆಯೆನ್ನಿಸುವ ಇನ್ನೊಂದು ವಿಶ್ವಸಂಗ್ರಾಮದ ಕಡೆಗೆ ಓಲುತ್ತದೆಯೋ ಎಂಬ ಶಂಕೆ ಜನಮನದಲ್ಲಿ ಉತ್ಪನ್ನವಾಗಿ ರುವ ಈ ಹೊತ್ತಿನಲ್ಲಿ ಅಮೆರಿಕವು ತನ್ನ ಗೃಹಶುದ್ಧಿ ಕಾರ್ಯದ ಕಡೆಗೆ ಗಮನಕೊಡ ಬೇಕಾಗಿದೆ. ಈ ಕಾರ್ಯ ಇಮ್ಮಡಿ ಜರೂರಾದ ಅತ್ಯವಶ್ಯ ಪ್ರಶ್ನೆಯಾಗಿ ಎದ್ದು ಕೂತಿದೆ.

ಅಮೆರಿಕದ ಗೃಹಶುದ್ಧಿಗೆ ಅನೇಕ ದೃಷ್ಟಿಗಳಿಂದ ಮುಖ್ಯವೆನ್ನಿಸುವ ಇನ್ನೊಂದು ಮುಖವುಂಟು. ಈ ಗಣಶಾಸನದ ಪ್ರಕಾರ ಸ್ಥಳೀಯ ಕಾಮ್ಯುನಿಸ್ಟ್ ಪಂಥದವರನ್ನು ಅಮೆರಿಕದ ಜನಜೀವನ ಕ್ಷೇತ್ರದಿಂದ ಬಹಿಷ್ಕರಿಸಲಾಗಿದೆ. ಆದರೆ ತಂತಮ್ಮ ದೇಶಗಳಲ್ಲಿ ಕಳೆದ ಎರಡು ದಶಕಗಳ ಅವಧಿಯಲ್ಲಿ ನಡೆದ ಚಳವಳಿಗಳ ಬಿಸಿಯನ್ನು ತಡೆಯಲಾರದೆ ಸ್ವದೇಶ ತ್ಯಾಗಮಾಡಿದ ದೊಡ್ಡ ದೊಡ್ಡ ಶ್ರೀಮಂತರನ್ನೂ ಸೊತ್ತುಗಾರರನ್ನೂ ವಿಶೇಷ ಸೌಲಭ್ಯ ಭೋಗಿಗಳನ್ನೂ ಇಲ್ಲಿಗೆ ಬನ್ನಿರೆಂದು ವಾಷಿಂಗ್‌ಟನ್ ಪ್ರಭುತ್ವ ಆದರದಿಂದ ಸ್ವಾಗತಿಸುತ್ತಿದೆ. ಈ ಪ್ರತಿ – ಕ್ರಾಂತಿಕಾರ ಶರಣಾರ್ಥಿಗಳಿಗೆ ಭೋಜನ ಸಲ್ಲುತ್ತಿದೆ, ವಸನ ಭೂಷಣಗಳ ದಾನ ಸಲ್ಲುತ್ತಿದೆ, ಅವರ ಕೈಗಳಿಗೆ ಶಸ್ತ್ರಾಸ್ತ್ರಗಳ

ನ್ನಿತ್ತು, ಅವರಿಗೆ ವೀರ ಪಟ್ಟವನ್ನು ಕಟ್ಟಿ, ರಣವೀಳೆಯವನ್ನು ಕೊಟ್ಟು, ಸಾಕಾದಷ್ಟು ದೊಡ್ಡ ಪ್ರಮಾಣದಲ್ಲಿ ಸಹಾಯ ಸಲಕರಣೆಗಳನ್ನು ನೀಡಿ, ಪ್ರತಿಕ್ರಾಂತಿ ಪ್ರತೀಕಾರ ಯತ್ನಗಳಲ್ಲಿ ತರಪೇತುಮಾಡಿ ಅವರವರ ದೇಶಗಳಿಗೆ ಬೀಳ್ಕೊಟ್ಟು ಕಳಿಸಲಾಗುತ್ತಿದೆ. ಅಮೆರಿಕದ ಸಿ.ಐ.ಎ ಮೊದಲಾದ ಗೂಢಚಾರ ನಿಯೋಗಗಳು ನೆರೆಹೊರೆಯ ರಾಷ್ಟ್ರಗಳಲ್ಲಿ ಪ್ರತಿಕ್ರಾಂತಿಯ ದ್ರೋಹಾಚರಣೆಗಳಲ್ಲಿ ಪಾತ್ರವಹಿಸುತ್ತಿರುವುದು ಸರ್ವತ್ರ ಪ್ರಕಟವಾದ ಹೇಯ ಸಂಗತಿ. ಇಂಥ ನಿಯೋಗಗಳನ್ನ ಕೂಡಲೆ ರದ್ದುಪಡಿಸ ಬೇಕು, ಇಲ್ಲವೆ ವಿಶ್ವಶಾಂತಿ ರಕ್ಷಣೆಗಳಿಗೆ ನಿಷ್ಠವಾಗಿರುವ ಬಗೆಯಲ್ಲಿ ಅಮೆರಿಕದ ಅಂತರರಾಷ್ಟ್ರೀಯ ವ್ಯವಹಾರವನ್ನು ಶುದ್ಧೀಕರಿಸಿ, ಗೂಢಚಾರರ ಪಾತ್ರವನ್ನು ಈ ಸದುದ್ದೇಶಕ್ಕೋಸ್ಕರ ತಿದ್ದಿಕೊಳ್ಳಬೇಕು.

ಗತಕಾಲಕ್ಕೆ ಅವಿಚಾರದಿಂದ ವಿಧೇಯತೆ ಸಲ್ಲಿಸುತ್ತ, ಭವಿಷತ್ ಸಂಭವಗಳ ಸ್ಪಷ್ಟ ಚಿತ್ರವನ್ನು ತಿಳಿದೂ ಗ್ರಹಿಸದೆ, ಆಗುಹೋಗುಗಳಿಗೆ ಸಿದ್ಧವಾಗೆನೆಂದು ಹಟ ದಿಂದ ನಿರಾಕರಿಸುವ ಅಮೆರಿಕದಂಥ ಒಂದು ಘನರಾಷ್ಟ್ರಕ್ಕೆ ಈಗ ಹೊಣೆ ಹೆಚ್ಚಿದೆ. ಅವರ ಅಂತರ್ಬಾಹ್ಯ ವ್ಯವಹಾರ ನೀತಿಯನ್ನೂ ಆಡಳಿತ ಯಂತ್ರವನ್ನೂ ಸುಧಾರಣೆಗೆ ತಂದುಕೊಂಡು ಪರಿಷ್ಕರಿಸಿ ಪುನರ್ನಿರ್ದೇಶನ ಮಾಡುವ ದೊಡ್ಡ ಹೊಣೆ ಅದು. ಪರಿಸ್ಥಿತಿ ಹೀಗಿದ್ದರೂ ಅಮೆರಿಕದ ಪ್ರಜಾಗಣವೂ ಪ್ರಭುತ್ವವೂ ಇನ್ನೂ ಗತಕಾಲಕ್ಕೇ ಅಂಟಿ ಕೊಂಡು ಅದಕ್ಕಭಿಮುಖವಾಗಿರುವುದು ಅತ್ಯಂತ ಶೋಚನೀಯವಾದ ಸಂಗತಿ. ಈ ಧೋರಣೆಯನ್ನು ತೊರೆದು ಭವಿಷ್ಯತ್ತಿಗೆ ತಿರುಗಿ ಅದಕ್ಕೆ ಅಭಿಮುಖವಾಗಿ ಸಾಗಬೇಕು–ಇಡಿಯ ಭೂಗ್ರಹವನ್ನು ಮನುಷ್ಯ ವರ್ಗಕ್ಕೆ ನಿವಾಸಯೋಗ್ಯವಾಗಿ ಮಾಡುವ ದೊಡ್ಡ ಕರ್ತವ್ಯಕ್ಕಾಗಿ ತನಗೆ ನ್ಯಾಯವಾದ ಮಹಾಪಾತ್ರವನ್ನು ಹೂಡಿ.

ಸ್ವಗೃಹ ಶುದ್ಧಿಕಾರ್ಯವನ್ನು ಮಾಡಿಮುಗಿಸಿದಮೇಲೆ ಅಮೆರಿಕದ ಜನ ಸಮಾಜ ತಮ್ಮ ಮನೆಗಳನ್ನು ಕಾವಳಿಸಿರುವ ಇಲ್ಲಣಗಳನ್ನೂ ಇಡಿಕಿರಿದ, ಉಪಯೋಗ ವಶಿದಾಟಿದ, ಗೃಹೋಪಕರಣ ಯಂತ್ರ ಸಲಕರಣೆ ಮೊದಲಾದ ಸಾಧನ ಸಾಮಗ್ರಿ ಗಳನ್ನೂ ಕಂಡಹಾಗೆ ಬೇಸರತರುವ ಕಸದ ಗುಡ್ಡೆಗಳನ್ನೂ ಗುಡಿಸಿ ಎಸೆದು, ಮನೆ ವಾರ್ತೆಯನ್ನು ಚೊಕ್ಕಟ ಮಾಡಿಕೊಂಡ ಮೇಲೆ, ಅಮೆರಿಕಾ ದೇಶೀಯರು "ಆಧುನಿಕ" ವಾಗುವುದಕ್ಕೆ ಗಮನ ಕೊಡಬಹುದು. ಅಮೆರಿಕದ ಸಮಸ್ತ ಪ್ರಜಾಗಣವೆಲ್ಲವನ್ನೂ ವಿಶ್ವವ್ಯಾಪಿಯಾದ ಪರಿಸರಾಭಿವೃದ್ಧಿಯ ತತ್ತ್ವಕ್ಕೆ ಒಡಂಬಡಿಸಿ, ತನ್ನ ರಾಷ್ಟ್ರ ಪರಿಸರದೊಡನೆ–ಸುಮಾರು ಎರಡು ಸಾವಿರಲಕ್ಷ ಜನ ವಾಸವಾಗಿರುವ ಜಗದ್ರಾಷ್ಟ್ರ ಗಳ ಪರಿಸರಗಳನ್ನು ಅಭಿವೃದ್ಧಿ ಪಡಿಸುವ ಸಾಮೂಹಿಕ ಪ್ರಯತ್ನಕ್ಕೆ ಸಿದ್ಧವಾಗಬೇಕು.

ಅಮೆರಿಕವನ್ನು ಆಧುನಿಕತೆಯಲ್ಲಿ ನಡಸುವ ಪೂರ್ಣ ಪರಿಮಾಣದ ಕಾರ್ಯ ಕ್ರಮದಲ್ಲಿ ಸೇರುವ ವಿವರಾಂಶಗಳು ಇವು :—

(1) ಒಳ್ಳೆಯ ಬಾಳಿಗೋಸ್ಕರ ಹಿಡಿದ ದಾರಿಯಲ್ಲಿ ಮುನ್ನಡೆಯಲು ಅಡ್ಡ ಬರುವ, ಇಲ್ಲವೆ ಗುರಿಮುಟ್ಟುವುದನ್ನು ತಡೆಯುವ, (ಹಿಂದೆ ಮೂರನೆಯ ಅಧ್ಯಾಯದಲ್ಲಿ ವಿವರಿಸಿರುವ) ಆರು ಎಡರುಗಳನ್ನು ಅಥವಾ ಮಾರ್ಗಕಂಟಕಗಳನ್ನು ಪೂರ್ತಿಯಾಗಿ ನಿವಾರಿಸಿಕೊಳ್ಳುವುದು, ಇಲ್ಲದಿದ್ದರೆ ಆದಷ್ಟು ಮಟ್ಟಿಗೆ ದಾರಿಸಾಗಲು ಅನುಕೂಲಿಸುವಂತೆ ಎಡರುಗಳನ್ನು ಕಡಿಮೆ ಮಾಡಿಕೊಳ್ಳುವುದು.

(2) ಈ ಶತಮಾನದ ಮಿಕ್ಕ ವರ್ಷಗಳಲ್ಲಿ ಜಗತ್ತಿನ ಎಲ್ಲ ರಾಷ್ಟ್ರಗಳ ಮಾನವ ಕುಟುಂಬಗಳಿಗೆ ಪರಮಾವಧಿಯ ಆರೋಗ್ಯ, ಕಲ್ಯಾಣ ಮತ್ತು ನೆಮ್ಮದಿಯನ್ನು ಭರವಸೆ ಪಡಿಸಲು ನೇಮಕವಾದ ಅಂತರರಾಷ್ಟ್ರೀಯ ಯೋಗಕ್ಷೇಮ ಸಮಿತಿಯೊಂದಕ್ಕೆ ಅಮೆರಿಕದ ಜನತಾ ಪ್ರತಿನಿಧಿಗಳನ್ನು ಬಿಡದೆ ಅವಶ್ಯವಾಗಿ ಸೇರಿಸಿ, ಆ ಸದಸ್ಯರಿಂದ ಸಮಿತಿಗೆ ಪ್ರಯೋಜನವಾಗುವಂತೆ ದುಡಿಸುವುದು.

(3) ಅಮೆರಿಕವನ್ನು ನೂತನವೂ ಆಮೂಲಾಗ್ರ ಸುಧಾರಕವೂ ಆದ ಭಾವನೆಗಳ ಶಾಶ್ವತ ಮೂಲಮಾತೃಕೆಯಾಗಿಯೂ, ಆರ್ಥಿಕ ರಾಜಕೀಯ ಸಾಮಾಜಿಕ ರಂಗಗಳಲ್ಲಿಯೂ ಭಾವನ ಶಾಸ್ತ್ರರಂಗಗಳಲ್ಲಿಯೂ ಸಾಂಪ್ರತಕಾಲದ ವಿಶ್ವಜನ ಜೀವನಕ್ಕೆ ನಿರಂತರವಾಗಿ ಸಲಹೆ ಸೂಚನೆಗಳನ್ನು ಕೊಡಬಲ್ಲ ಮಹಾರಾಷ್ಟ್ರವನ್ನಾಗಿಯೂ ಮಾಡಬೇಕು.

(4) ಅಮೆರಿಕದ ಜನತೆಯಲ್ಲಿ, ಅದರಲ್ಲೂ ರಾಷ್ಟ್ರದ ಯುವ ಜನದಲ್ಲಿ, ಪ್ರಯೋಗ ಪರೀಕ್ಷಾ ಹವ್ಯಾಸದ ಪ್ರೀತಿಯನ್ನೂ ಪ್ರಯೋಗಸಿದ್ಧವಾದ ನಿರ್ಣಯಗಳು ಸೂಚಿಸುವ ಹೊಸ ರ್‍ಯಾಡಿಕಲ್ ಭಾವನೆಗಳನ್ನೂ ಕಾರ್ಯಕ್ರಮಗಳನ್ನೂ ಅನುಸರಿಸುವ ಮನೋಧರ್ಮವನ್ನೂ ಚೋದಿಸಬೇಕು.

(5) ಸಂಯುಕ್ತ ಅಮೆರಿಕದ ಅಧಿಕಾರ ಕ್ಷೇತ್ರಕ್ಕೆ ಒಳಪಟ್ಟ ಉತ್ತರ ಅಮೆರಿಕಾ ಪ್ರದೇಶವನ್ನು,—ಶಿಸ್ತಿಗೊಳಪಟ್ಟದ್ದೂ, ಪ್ರಯೋಜನಕಾರಿಯಾದದ್ದೂ ಸುಂದರವಾಗಿ, ಘನವಾದ ಆಶೋತ್ತರ ಮತ್ತು ಧ್ಯೇಯೋತ್ಸಾಹಗಳನ್ನು ತುಂಬಿಕೊಂಡದ್ದೂ ಆದ (ಸ್ವರ್ಗದ ನಂದನವನದಂಥಾ) ಈಡನ್ ಉಪವನವನ್ನಾಗಿ ಮಾಡಿ ಅಭಿವೃದ್ಧಿ ಪಡಿಸುವುದು.

(6) ಮನುಷ್ಯನು ಹುಡುಕುತ್ತಿರುವ ಒಳ್ಳೆಯ ಜೀವನವನ್ನೂ ಈಗ ಬಾಳುತ್ತಿರುವುದಕ್ಕಿಂತ ಉತ್ತಮವಾದ ಜೀವನವನ್ನೂ ಕಂಡುಕೊಳ್ಳುವ ಮಹಾ ಪುರುಷಕಾರ ಪ್ರಯತ್ನದಲ್ಲಿ ಅವಶ್ಯವಾದ ನಾಯಕತ್ವವನ್ನು ಸಂಯುಕ್ತ ಅಮೆರಿಕಾ ಪ್ರಭುತ್ವಕ್ಕೂ ಅದರ ರಾಷ್ಟ್ರಕ ಪ್ರಜಾಗಣಕ್ಕೂ ಒದಗಿಸುವುದು.

ಮನುಷ್ಯವರ್ಗ ಬದುಕಿನಲ್ಲಿ ಆಶೆಯಿರಿಸಿಕೊಳ್ಳುವುದಕ್ಕೆ, ಮನಶ್ಚಿತ್ರಗಳನ್ನು ಕಲ್ಪಿಸಿಕೊಳ್ಳುವುದಕ್ಕೆ, ಜೀವನ ಪರಿಷ್ಕಾರಕ ಯೋಜನೆಗಳನ್ನು ರೂಪಿಸಿಕೊಳ್ಳುವುದಕ್ಕೆ, ವಸ್ತುಗಳನ್ನು ಉತ್ಪಾದಿಸುವುದಕ್ಕೆ, ಬಗೆಬಗೆಯ ಕಟ್ಟಡಗಳನ್ನು ಕಟ್ಟಿಕೊಳ್ಳುವುದಕ್ಕೆ,—ಇಂಥ ರಸಾತ್ಮಕ ಸೃಜನಶೀಲತೆಗೆ ನೆರವಾಗುವ ಮುಖ್ಯಸಾಧನಗಳಲ್ಲಿ ಒಂದು ಪ್ರಕೃತಿ ಪರಿಸರ, ಇನ್ನೊಂದು ಸಮಾಜ ಪರಿಸರ. ಪ್ರಕೃತಿ ಪರಿಸರವು ಮನುಷ್ಯನ ಜೊತೆಗೆ ಹಿಂದಿನಿಂದ ಇದ್ದುಕೊಂಡೇ ಇದೆ: ಭೂಮಿ ಮತ್ತು ಅದರಲ್ಲಿ ಈಗ ನೆಲೆಗೊಂಡಿರುವ, ಮತ್ತು ಮುಂದೆ ಇನ್ನೂ ಹೆಚ್ಚುವ ಸಾಧ್ಯತೆಯುಳ್ಳ ಭೂಮಿ ಶಕ್ತಿಗಳು ಮತ್ತು ವಿವಿಧ ನಿಕ್ಷಿಪ್ತನಿಧಿಗಳು. ಸಮಾಜವು ಮನುಷ್ಯ ಚಿತ್ತವೂ ಹಸ್ತಗಳೂ ವಿವಿಧ ಕೌಶಲಗಳೂ ನಿರ್ಮಿಸಿದ ಕೃತಿಯಾಗಿ, ಅವನು ಹುಟ್ಟುವ ಹೊತ್ತಿಗೇ ಸಿದ್ಧವಾಗಿರುತ್ತ, ಆಮೂಲಾಗ್ರ ಅಭಿವೃದ್ಧಿಗೋಸ್ಕರ ಅವನ ಶ್ರದ್ಧೆ ಪರಿಶ್ರಮಗಳಿಗೆ ಕಾಯುತ್ತ ಇದ್ದುಕೊಂಡಿರುತ್ತದೆ. ಮನುಷ್ಯ ಸಾಮರ್ಥ್ಯಗಳು ಅವನ ಚಿತ್ತಕ್ಕೆ ಲಗ್ನವಾಗಿ ಮಾಡಿದ ವ್ಯವಸಾಯದ ಫಲವೇ ಸಮಾಜ ಪರಿಸರ ಮತ್ತು ಕಾಲಕಾಲಕ್ಕೆ ಅದರಲ್ಲಿ ಆಗುವ ಅಭಿವೃದ್ಧಿ.

ಶುಭ ಜೀವನಕ್ಕಿರುವ ಅವಕಾಶಗಳನ್ನು ವಿಸ್ತರಿಸುವ ಸಾಧನವೆಂದರೆ—ಮುಖ್ಯವಾಗಿ ಮನುಷ್ಯ ಚಿತ್ತ ಸಹಾಯ ಮತ್ತು ಅವನಲ್ಲಿರುವ ನಿರ್ಣಯ ಸಾಮರ್ಥ್ಯ—ಪ್ರಯೋಗಪರೀಕ್ಷಾ ದಶೆಯಿಂದ ಮುಂಬರಿದು ಅಭಿವೃದ್ಧಿಯನ್ನು ಕಾಣುವ ಎದೆ ತುಡಿತ. ಪ್ರತಿಯೊಂದು ಕುಟುಂಬವೂ, ಪ್ರತಿಯೊಂದು ಗ್ರಾಮವೂ, ಪಟ್ಟಣ ನಗರಗಳೂ, ಒಂದೊಂದು ರಾಜ್ಯ ಜನಪದವೂ ಪರಿಸರಾಭಿವೃದ್ಧಿ ಪ್ರಯತ್ನದಲ್ಲಿ ಅದದಕ್ಕೆ ಉಚಿತವಾದ ಪಾತ್ರವಹಿಸಲು ಕಲಿತು ಕಾರ್ಯಸಂಘಟನೆ ಮಾಡಿಕೊಳ್ಳಬೇಕು. ಸಮಾಜ ಪರಿಸರದ ಅಂಗ ತಾನೆಂದು ಕುಟುಂಬದಿಂದ ಹಿಡಿದು ಒಟ್ಟು ರಾಷ್ಟ್ರ ಜನಪದದ ವರೆಗೆ ಒಂದೊಂದು ಸಮಾಜಸ್ತರವೂ ಭಾವಿಸಿ ದುಡಿಯುತ್ತ ಹೋದ ಹಾಗೆಲ್ಲ, ಸಮಾಜ ಪರಿಸರವು ವೈಯಕ್ತಿಕ ಸಾಮೂಹಿಕ ಸಾರ್ವತ್ರಿಕ ಶುಭಜೀವನ ಸಾಕ್ಷಾತ್ಕಾರಕ್ಕೆ ಸಂಸಿದ್ಧವಾಗುತ್ತದೆ. ಸ್ಥಳೀಯ ಅಭಿವೃದ್ಧಿಗೆ ಕಾತರಪಡುವ ಸ್ಥಳಾಭಿಮಾನವು ಪ್ರಗತಿ ಚೋದನೆಗೆ ಒಳಪಟ್ಟು ಸಕ್ರಿಯ ವ್ಯವಸಾಯಕ್ಕೆ ತಿರುಗಬೇಕು. ಹಾಗೆಯೇ ಸ್ಥಲಾಭಿಮಾನವು ವ್ಯಾಪಕವಾಗಿ ಹರಡುತ್ತ, ಸರ್ವಪ್ರದೇಶಾಭಿಮಾನವಾಗಿ ಹಬ್ಬಿಕೊಂಡು, ವಿಶ್ವಜೀವನದ ಒಂದೊಂದು ಸ್ತರದಲ್ಲೂ ಕ್ರಿಯಾಶೀಲವಾಗಿ ಬಲಿಯುತ್ತದೆ. ವಿಶ್ವಾಸಾರ್ಹಗಳಾದ ಯೋಜನೆಗಳನ್ನು ನಿರೂಪಿಸಿ ಜನದ ಮುಂದೆ ಇಟ್ಟಾಗ, ಒಂದೊಂದು ಯೋಜನೆಯನ್ನೂ ಕಾರ್ಯಮುಖವಾಗಿ ನಡಸುವ ಮಾರ್ಗ ಸಾಧನ ಸ್ಪಷ್ಟಪಟ್ಟಾಗ, ಮನುಷ್ಯಚಿತ್ತವು ಕ್ಷಿಪ್ರವಾಗಿ ಅದರಲ್ಲಿ ಕುತೂಹಲಿಸಿ, ಉತ್ಸಾಹದಿಂದ ತರತಮಾಭಿವೃದ್ಧಿ ವಿಧಾನದಲ್ಲಿ ಸಾಗಲು ವ್ಯವಸಾಯ ಮಾಡುತ್ತ, ಉತ್ತರೋತ್ತಮ ಸಿದ್ಧಿಯನ್ನು ಪಡೆಯಲು ಖಂಡಿತವಾಗಿ ಮುಂದೆ ಬರುತ್ತದೆ.

ಪ್ರತಿಯೊಂದು ತಲೆಮೊರೆಯೂ ಮುಂದೆ ಆಗಬೇಕಾದದ್ದನ್ನು ಪ್ರತೀಕ್ಷಿಸಿ ಪ್ರಯತ್ನಮುಖವಾಗಬಹುದು—ಆಮೂಲಾಗ್ರವಾಗಿ, ನಿರ್ಣಾಯಕವೆನ್ನಿಸುವಂತೆ, ಮುನ್ನಡೆಯುವ ದೃಢಸಂಕಲ್ಪದಿಂದ ಮುನ್ನಡಿಯಿಟ್ಟು, ಆಯಾ ಪೀಳಿಗೆಯ ಸದಸ್ಯ ಸಮುದಾಯವನ್ನು ಉಚಿತ ಶಿಕ್ಷಣದಾನದಿಂದ ಅಣಿಮಾಡುವ ಇನ್ನಷ್ಟು ಹೆಜ್ಜೆಗಳನ್ನು ಮುಂದು ಮುಂದಕ್ಕಿಡಬಹುದು. ಇದು ದೂರದೃಷ್ಟಿಯುಳ್ಳ ಪ್ರಗತಿಯನ್ನು ಉದ್ದೇಶ ದಲ್ಲಿರಿಸಿಕೊಂಡು ಹೊರಟ ಜೀವನಯಾತ್ರೆ—ಮನುಷ್ಯಜೀವನವನ್ನು ಘನಪಡಿಸುತ್ತ ಉದಾತ್ತ ಮಾಡಿಕೊಳ್ಳುವ ಅವಕಾಶಗಳನ್ನು ಹಾಯುವ ಯೋಜನಾಬದ್ಧ ಪುರುಷಕಾರವಿಶೇಷ.

ಇಂಥ ಯೋಜನಾ ಬದ್ಧ ಕಾರ್ಯಕ್ರಮದ ಹಿಂದೆ ರಸಸ್ಫೂರ್ತಿಯಿರಬೇಕಲ್ಲದೆ, ವಿಸ್ತಾರ ಪ್ರದೇಶಗಳಿಗೆ ಯೋಜನೆಯನ್ನು ಅನ್ವಯಿಸಿ ಜಾರಿಗೆ ತರುವ ದೃಢಮನಸ್ಸು ಇರಬೇಕು. ತಲೆಮೊರೆಯಿಂದ ತಲೆಮೊರೆ ಈ ಯೋಜನೆಗೆ ಬೆಂಬಲಕೊಡುತ್ತ ಹೋಗುವ ತವಕವನ್ನು ಜನರೆಲ್ಲ ಸಂತಸವಾಗಿ ಉಕ್ಕಿಸಬಲ್ಲಂತೆ ಯೋಜನೆಯ ಜನಾಕರ್ಷಕಮುಖವನ್ನು ಎತ್ತಿಹಿಡಿಯಬೇಕು – ಸಾಂಪ್ರತ ಐತಿಹಾಸಿಕ ಭೂಮಿಕೆಗೆ ಹೊಂದಿಕೆಯಾಗಿ, ಮನುಷ್ಯ ಸ್ವಭಾವದ ವಿವಿಧ ಸೃಜನ ಶೀಲ ಪ್ರವೃತ್ತಿಗಳಿಗೆ ಪ್ರಿಯವಾಗಿ, ಪ್ರತಿಯೊಬ್ಬ ವ್ಯಕ್ತಿ ಪ್ರಜೆಯಲ್ಲೂ ಯೋಜನೆಯಬಗ್ಗೆ ಸ್ವಾಭಾವಿಕವಾದ ತೀವ್ರಾಸಕ್ತಿಯನ್ನು ಕೆರಳಿಸಿ, ಮಾನವತೆಗೆ ಅಭ್ಯುದಯದ ಪರಾಕಾಷ್ಠ ದಶೆಯೇನೆಂಬುದನ್ನು ಕಣ್ಣಿಗೆ ಕಟ್ಟಿ, ಎಲ್ಲರೂ ಅಂಥ ಪರಮ ಸಿದ್ಧಿಯನ್ನು ಆಗ ಮಾಡಿಸುವ ಜೀವನ ವಿಧಾನಕ್ಕೆ ತಿರುಗುವಂತೆ ಮಾಡುವುದರಲ್ಲಿ ಯೋಜನೆ ಕೃತಕೃತ್ಯವಾಗಬೇಕು.

ಈ ಕಾರ್ಯಕ್ರಮದಂತೆ ನಡಸುವ ಪ್ರಯೋಗವಿವರದಲ್ಲಿ ಗತಿ ಚಲನೆ ಹೆಚ್ಚಿದಂತೆ, ಮನುಷ್ಯ ಜೀವನ ವಿಧಾನದಲ್ಲಿ ಕಂಡಹಾಗೆ_ಸಂತತವಾದ, ಆಮೂಲಾಗ್ರವಾದ, ಅಭ್ಯುದಯಮುಖವಾದ ಪರಿವರ್ತನೆ ಸಾಧ್ಯವಾಗುತ್ತದೆ. ಶಿಕ್ಷಣ ಕ್ಷೇತ್ರವನ್ನು ಈ ಪ್ರಗತಿಗೆ ಸಹಾಯಕವಾಗುವಂತೆ ತಿದ್ದಿ ಬಳಸಿಕೊಂಡು ತಲೆಮೊರೆಯಿಂದ ತಲೆಮೊರೆ ಅಭ್ಯುದಯ ಸೋಪಾನವನ್ನೇರುತ್ತ ಹೋಗುತ್ತದೆ.

ಪರಿಣಾಮಕಾರಿಯಾಗುವ ಶೈಕ್ಷಣಿಕ ಕಾರ್ಯಕ್ರಮವೊಂದನ್ನು ಇಲ್ಲಿ ಪ್ರಸ್ತಾಪಿಸಬೇಕು: ಇಂಥ ಕಾರ್ಯಕ್ರಮವು ಸಮಾಜದ ಉಳಿವನ್ನೂ ಗಟ್ಟಿಬಾಳಿಕೆಯನ್ನೂ ಏಳಿಗೆಯನ್ನು ಭರವಸೆಪಡಿಸಬೇಕು. ಮುಂದೆ ಒಕ್ಕಣಿಸಿರುವ ಧ್ಯೇಯ ಸಾಧಕ ಸೂತ್ರವನ್ನು ಮೂರು ಹಂತಗಳಲ್ಲಿ ನಾವು ರಚಿಸಿಕೊಳ್ಳಬಹುದು. (1) ಸಾಂಪ್ರತಕಾಲದ ಪೀಳಿಗೆ ಹಿಂದಿನ ಪೀಳಿಗೆಗಳಿಂದ ಸಾಗಿಬಂದ ಹಾಗೂ ತನ್ನ ಪ್ರಯತ್ನದಿಂದ ಗಳಿಸಿದ ಸಂಪದನುಭವಗಳ ಮೊತ್ತ ನೂರಾದರೆ, ಆಪೈಕಿ ಎಂಬತ್ತು ಪಾಲನ್ನು ಅದು ಸ್ವಂತದ್ದೆಂದು ಮುಂದಿನ ಪೀಳಿಗೆಗೆ ಸಲ್ಲಿಸುವುದು; (2) ಹೊಸ

ಪೀಳಿಗೆ ಹಿಂದಿನ ಪೀಳಿಗೆಯಿಂದ ಸಾಗಿ ಬಂದ ಸಂಪದನುಭವ ಸಾಮಗ್ರಿಯಲ್ಲಿ ಮೌಲ್ಯ ನಿರ್ಣಯಕ್ಕೋಸ್ಕರ ಎತ್ತಿಕೊಳ್ಳುವ ಪಾಲು ಸೇಕಡಾ ಏಳು, (3) ಹೊಸ ಪೀಳಿಗಯ ಪ್ರತಿನಿಧಿಗಳಾದ ವಿಚಾರ ಪರರು ತಾವಾಗಿ ವಿಚಾರಾರಂಭಮಾಡಿ, ಹೊಳೆದ ಮಾರ್ಪಾಟು ಗಳನ್ನೂ ಮೇಲ್ಪಾಡುಗಳನ್ನೂ ಸೇರಿಸಿ ತಮ್ಮ ಪೀಳಿಗೆಯ ಒಪ್ಪಿಕೆಗಾಗಿ ಸಲ್ಲಿಸುವುದು.

ಈ ಸೂತ್ರವು ಭವಿಷ್ಯತ್ತಿಗಿಂತ ಭೂತಕಾಲಕ್ಕೇ ಹೆಚ್ಚಾಗಿ ಪಕ್ಷಪಾತಿಯೆಂದು ತೋರುವ ಸಂಭವವುಂಟು. ಹಾಗೆ ತೋರಿದ್ದಾದ್ದರೆ, ಅದಕ್ಕೆ ನನ್ನ ಸಮಾಧಾನವೇನೆಂದರೆ- ಮನುಷ್ಯ ಸಂಸ್ಕೃತಿಯ ವಾಹಿನಿಯಲ್ಲಿ ಒಂದುಪಾಲು ಗತಕಾಲದಿಂದ ಅದಕ್ಕೆ ಬಂದು ಸೇರಿಕೊಂಡದ್ದು ಎಂಬುದು; ಮತ್ತು ಇನ್ನೊಂದುಪಾಲು ಒಂದೊಂದು ಪೀಳಿಗೆಯೂ ಮುಂದಣದಕ್ಕೆ ಸಾಗಿಸಿದ್ದು ಎಂಬುದು. ಸಕ್ರಿಯವೂ ಸರ್ವತೋಮುಖವೂ ಆದ ಕ್ರಾಂತಿಕಾಲದ ಪರಿವರ್ತನೆಯ ಸಂದರ್ಭದಲ್ಲೂ, – ಸಾಂಪ್ರತ ಜನಸಮಾಜವು ಅಂಥ ಪರಿವರ್ತನೆಯನ್ನು ಹಾಯುತ್ತದೆ, – ಸಂಸ್ಕೃತಿಯ ಗುಣ ಸ್ವಭಾವಗಳಲ್ಲಿ ನೂರಕ್ಕೆ ಎಂಬತ್ತೈದು ಪಾಲಿನ ಮೂಲವು ನಿಕಟ ಅಥವಾ ದೂರದ ಗತಕಾಲದಲ್ಲಿ ಸೇರಿಕೊಂಡಿದ್ದದ್ದೇ ಮುಂದಕ್ಕೆ ಸಾಗಿ ಬರತಕ್ಕದ್ದು. ನೂರರಲ್ಲಿ ಕೇವಲ ಹದಿನೈದರಷ್ಟು ಮಾತ್ರ ವರ್ತಮಾನ ಪೀಳಿಗೆಯ ಕಾಣಿಕೆಯಾಗಿ, ತನ್ನ ಅಸ್ತಿತ್ವಕ್ಕೆ ಬೆಲೆತರುತ್ತದೆ. ಗತಕಾಲಕ್ಕೆ ಅಷ್ಟಿಷ್ಟು ಋಣಿಯಾಗದೆ ಯಾವ ಪೀಳಿಗೆಯೂ ಬಾಳಲಾರದು.

ಈ ಸೂತ್ರವು ಜನಕ್ಕೆ ಒಪ್ಪಿಕೆಯಾಗುವುದೋ ಇಲ್ಲವೋ – ವಾಸ್ತವಾಂಶ ವಂತೂ ಇದು : ಪ್ರತಿಯೊಂದು ಪೀಳಿಗೆಯೂ ಮುಂದಿನ ಪೀಳಿಗೆಗೆ ತನ್ನ ಭಾವನೆ ಗಳನ್ನೂ ಕಾರ್ಯನೀತಿಗಳನ್ನೂ ಪದ್ಧತಿ ಸಂಸ್ಥೆಗಳನ್ನೂ ವರ್ಗಾಯಿಸಿಕೊಂಡು ಹೋಗುತ್ತದೆ. ಈ ಪ್ರಯತ್ನದ ಬಹುಭಾಗವು ವಿದ್ಯಾಭ್ಯಾಸದ ಅಂಗವಾಗಿ ನಡೆಯು ತ್ತದೆ. ಅದೇ ಕಾಲಕ್ಕೆ ಪ್ರಾಪ್ತವಯಸ್ಕರಲ್ಲಿ ಅತ್ಯುತ್ತಮವಾದದ್ದನ್ನು ಯುವಕರಿಗೆ ಸಲ್ಲಿಸಲಾಗುತ್ತದೆ; ಅಲ್ಲದೆ ಯಾವುದು ಯುವಕರಿಗೆ ಕಲಿಸಲ್ಪಡುತ್ತದೆಯೋ ಅದನ್ನು ಅವರು ವಿಮರ್ಶೆಮಾಡದೆ ಅದನ್ನು ಇದ್ದಂತೆಯೇ ಒಪ್ಪಿಕೊಳ್ಳಬಾರದೆಂಬ ಬುದ್ಧಿ ವಾದವೂ ಸಲ್ಲುತ್ತದೆ. ಯುವಕರಿಗೆ ಸಂದದ್ದನ್ನು ಅವರು ವಿಭಜನೆಮಾಡಿ, ಅದರ ಬೆಲೆ ಯೆಷ್ಟೆಂದೂ, ಅದು ತಮ್ಮ ಆವಶ್ಯಕತೆಗಳಿಗೂ, ಧ್ಯೇಯಗಳಿಗೂ ಸಂಗತವಾಗಿ ಹೊಂದುತ್ತವೆಯೆ ಹೇಗೆ ಎಂದೂ ವಿಚಾರಪೂರ್ವಕವಾಗಿ ವಿಮರ್ಶೆಮಾಡಿ ಮೌಲ್ಯ ನಿರ್ಣಯ ಮಾಡುತ್ತಾರೆ. ಅನಂತರವೇ ಸಮ್ಮತಿದಾನ. ವಿದ್ಯಾಭ್ಯಾಸದ ಕಡೆಯ ಭಾಗ ವನ್ನು ಜೀವನಾಭಿವೃದ್ಧಿಗೆ ವಿನಿಯೋಗ ಮಾಡಲಾಗುತ್ತದೆ. ಹೊಸಭಾವನೆಗಳನ್ನು ಕಂಡುಕೊಂಡು, ಜನಜೀವನಕ್ಕೆ ಅನ್ವಯಿಸುವುದರ ಮೂಲಕ ಅವನ್ನು ಬೆಳಸಿ, ವೈಯಕ್ತಿಕ – ಸಾಮಾಜಿಕ – ಸಾರ್ವತ್ರಿಕ ಶುಭಜೀವನದ ಕಡೆಗೆ ಭರವಸೆಯಿಂದ ಹೆಜ್ಜೆ ಹಾಕಲು ಅವಕಾಶವಾಗುತ್ತದೆ.

ಆದರೆ ಇಂದು ಸಂಯುಕ್ತ ಅಮೆರಿಕವು ತಲೆಕೊಬ್ಬಿನಿಂದಲೂ, ಸ್ವಾತ್ಮಪ್ರಶಂಸೆಯಿಂದಲೂ, ಸ್ವಾತ್ಮಪ್ರಗತಿಯಲ್ಲಿ ಸಂತೃಪ್ತಮನೋಭಾವದಿಂದಲೂ ಕೂಡಿ, ಭೂಗ್ರಹದಲ್ಲಿ ತನಗೆ ನಾಯಕ ಪಟ್ಟವು ಲಭ್ಯವಾಗುವುದೇ ವಿಧಿಚಿತ್ತವೆಂಬ ಭಾವಪರವಶತೆಯಿಂದನೆ ಬೀಗುತ್ತಿದೆ. ಈ ಮನಃ ಪ್ರವೃತ್ತಿ ಅನ್ಯರಾಷ್ಟ್ರ ಜನರ ಮನಸ್ಸಿಗೆ ನೋವುಂಟು ಮಾಡುತ್ತದೆ; ಮತ್ತು ಸಂಯುಕ್ತ ಅಮೆರಿಕದ ಪ್ರಜೆಗಳಲ್ಲಿ ನೀತಿ ಧರ್ಮ ವಿನಾಶಕ್ಕೆ ಅವಕಾಶ ಮಾಡುತ್ತದೆ; ಇದರಿಂದ ಅವರ ಸದ್ಗುಣಗಳೆಲ್ಲ ಹಾಳಾಗುತ್ತವೆ. ಅಮೆರಿಕವೇನೂ ಪರಿಪೂರ್ಣ ರಾಷ್ಟ್ರವಲ್ಲ; ಅದು ಮುಖ್ಯ ರಾಷ್ಟ್ರವಾಗಿರಬಹುದು, ಆಗಿಲ್ಲದೆ ಇರಬಹುದು. ಇಳೆಯಲ್ಲಿರುವುದು ಅದೊಂದೇ ರಾಷ್ಟ್ರವಲ್ಲ. ವಾಸ್ತವಾಂಶವೋ ಅವರ ಪದ್ಧತಿ ಸಂಸ್ಥೆಗಳು ಸ್ವದೇಶದಲ್ಲೇ ಸಾರ್ವತ್ರಿಕವಾಗಿ ಅಂಗೀಕಾರ ಪಡೆದಿಲ್ಲ. ಅಮೆರಿಕದ ಪ್ರಜೆಗಳೂ ಪ್ರಭುತ್ವಗಳೂ ಪರಿಪೂರ್ಣತೆಯ ಸಿದ್ಧಿಗೋಸ್ಕರ ಸವೆಯಿಸಬೇಕಾದ ದಾರಿ ಇನ್ನೂ ಎಷ್ಟೋ ಇದೆ. ಗೃಹ ನಿರ್ಮಲೀಕರಣ ಮತ್ತು ಆಧುನಿಕತಾ ಸಾಧನೆ ಎಂಬಿವು ಇತರ ರಾಷ್ಟ್ರಗಳಿಗೆ ಹೇಗೆ ಮುಖ್ಯವೋ ಹಾಗೆಯೇ ಅಮೆರಿಕಕ್ಕೂ ಮುಖ್ಯವೇ ಆಗಿದೆ.

## ಸಾಮಾಜಿಕ ನ್ಯಾಯಕ್ಕೋಸ್ಕರ ವಿಶ್ವವ್ಯಾಪಿಯಾದ ಧರ್ಮಯುದ್ಧ

ಅಮೆರಿಕಕ್ಕೆ ಸಂಬಂಧಪಟ್ಟಂತೆ ಸಮಾಜ ಪರಿಸರಾಭಿವೃದ್ಧಿಯನ್ನು ಕುರಿತು ನಾನು ಬರೆದಿದ್ದೇನೆ. ಏಕೆಂದರೆ ನಾನು ಈ ಪುಸ್ತಕವನ್ನು ಬರೆದು ಪ್ರಕಟ ಪಡಿಸುತ್ತಿರುವುದು ಅಮೆರಿಕದಲ್ಲಿ. ಆದದ್ದರಿಂದ ಭೂಗೋಲದ ಈ ಭಾಗದಲ್ಲಿ ನನಗೆ ತತ್ ಕ್ಷಣದ ಆತಂಕವಾಯಿತು. ಬಾಳನ್ನು ಎತ್ತಬಲ್ಲದೆಂದು ನಾನು ನಂಬಿದ ರ್‍ಯಾಡಿಕಲ್ ಭಾವನೆಗಳನ್ನು ಅಮೆರಿಕಕ್ಕೆ ಅನ್ವಯಿಸುವಂತೆ ರೂಪಿಸಿ ನಿರೂಪಿಸಲು ನಾನು ಇಲ್ಲಿ ಪ್ರಯತ್ನಿಸಿದ್ದೇನಾದರೂ, ಇಲ್ಲಿ ನಾನು ಯಾವುದನ್ನು ಶಿಫಾರಸುಮಾಡುತ್ತಿರುವೆನೋ ಅದು ಅಮೆರಿಕಕ್ಕೆ ಮಾತ್ರವಲ್ಲದೆ ಬೇರೆ ರಾಷ್ಟ್ರಗಳ ಜನವರ್ಗಕ್ಕೂ ಆಯಾರಾಷ್ಟ್ರ ಸಂದರ್ಭಗಳಿಗೆ ತಕ್ಕಂತೆ ಬೇರೆ ಬೇರೆ ಮಟ್ಟಗಳಲ್ಲಿ ಅನ್ವಯಿಸುತ್ತದೆಯಲ್ಲದೆ, ವಿಕಸನ ಕ್ರಮದಲ್ಲಿರುವ ಇತರ ಪ್ರಾಣಿವರ್ಗಕ್ಕೂ ಅನ್ವಯಿಸುತ್ತ, ನನ್ನ ಸಲಹೆಗಳಿಗೆ ಸರ್ವತ್ರಾನ್ವಯದ ಗುಣವಿದ್ದೀತು ಎಂದು ನನಗನ್ನಿಸುತ್ತದೆ.

ವೈಯಕ್ತಿಕ ಸಾಮಾಜಿಕ ಸಾರ್ವತ್ರಿಕ ಶುಭಜೀವನದಲ್ಲಿ ನನಗೆ ತುಂಬು ನಂಬಿಕೆಯುಂಟು; ಅಂಥ ಬದುಕನ್ನು ಬಾಳಲು ನನಗೆ ಆಶೆಯುಂಟು. ಹಾಗೆಯೇ ಹೆರವರೂ ಬಾಳಬೇಕೆಂದು ಪ್ರೋತ್ಸಾಹಿಸಲು ತವಕಿಸುತ್ತಿರುವವನು ನಾನು. ಶುಭ ಜೀವನ ಪ್ರಾಪ್ತಿಗೆ ನನ್ನಿಂದ ಆಗುವ ಎಲ್ಲವನ್ನೂ ಇನ್ನೂ ಚೆನ್ನಾಗಿ ಮಾಡುವುದು ನಾನು ತೊಟ್ಟ ವ್ರತ.

ಭೂಗ್ರಹದ ಮೂಲೆಮೂಲೆಯಲ್ಲೂ ಸಾಮಾಜಿಕ ನ್ಯಾಯ ಸಿದ್ಧಿಗೂ ಸಮಾಜದ ಸರ್ವಾಂಗೀಣವಾದ ಉನ್ನತಿ ಸಂಪ್ರಾಪ್ತಿಗೂ ಬುದ್ಧಿಪೂರ್ವಕವಾಗಿ ನಡೆಯುವ ಧರ್ಮ ಯುದ್ಧ ಪ್ರಯತ್ನದಲ್ಲಿ ನಾನು ಪಾತ್ರವಹಿಸಲು ಬಯಸುತ್ತೇನೆ. ಇಂದಿನ ನಮ್ಮ ಸೇವೆಯಿಂದ ಮುಂದಿನ ಪೀಳಿಗೆಗಳು ಶುಭಜೀವನದಲ್ಲಿ ಪಾಲ್ಗೊಳ್ಳಲು ಅವಕ್ಕೆ ಬೇಕಾದ ಅವಕಾಶದ ಪರಾಕಾಷ್ಠೆಯನ್ನೊದಗಿಸುವುದು ಸಾಧ್ಯವಾದರೆ, ಅದೇ ನಮ್ಮ ಸಾಂಪ್ರತ ಜನ್ಮಕ್ಕಿರುವ ಏಕಮಾತ್ರ ಧ್ಯೇಯವಾಗಲಿ.

ವರ್ಷವರ್ಷವೂ ಸಂತಾನವೃದ್ಧಿಯಿಂದ ಬೆಳೆಯುತ್ತಿರುವ ಮುಂದಿನ ಪೀಳಿಗೆಗಳನ್ನು ಕುರಿತು ನನಗೆ ತುಂಬ ಆತಂಕವಾಗುತ್ತದೆ. ಏಕೆಂದರೆ ಮಾನವ ದೃಷ್ಟಿಯಿಂದ ಮುಂದಿನ ಪೀಳಿಗೆಯೇ ನಮ್ಮ ಭವಿಷ್ಯತ್ತಾಗಿರುವಾಗ, ಅದರಲ್ಲಿ ಕೂಡಿಕೊಂಡು ರಚನಾತ್ಮಕವೋ ವಿನಾಶಾತ್ಮಕವೋ ಆಗಿ ಬೆಳೆಯುವ ಸಾಧ್ಯತೆಯಿರುವ ನಮ್ಮ ಕಾಲದ ಟೆಕ್ನಾಲಜಿ (ಪರಿಕರ್ಮ ತಂತ್ರ)–ಮುಂದಿನ ಪೀಳಿಗೆಯವರ ಕ್ರಮಿಕವಿಕಾಸಕ್ಕಿಂತ ಕ್ಷೀಣಗತಿಯ ವಿನಾಶಕ್ಕೇ ಅವಕಾಶಮಾಡವೇ ಎಂದು ನನ್ನ ಆತಂಕ ತೀವ್ರವಾಗುತ್ತದೆ.

ಆಧುನಿಕ ಪರಿಕರ್ಮ ತಂತ್ರವು ಜಗತ್ತಿನ ನಾಲ್ಕು ಮೂಲೆಗಳಿಗೂ ಹರಡಿದಂತೆಲ್ಲ ಮುಂದೆ ಹುಟ್ಟುವ ಜನವರ್ಗವನ್ನು ಸುಶಿಕ್ಷಿತರೂ ಕುಶಲ ಕರ್ಮಿಗಳೂ ಅನುಭವಿಗಳೂ ಆದವರೆನ್ನಿಸುವ ಪ್ರಾಜ್ಞರಾದ ಸ್ತ್ರೀಪುರುಷರ ಕೈಗೊಪ್ಪಿಸಬೇಕಾಗುತ್ತದೆ. ಮುಂದಿನ ಪೀಳಿಗೆಯ ಯೋಗಕ್ಷೇಮದ ಹೊಣೆ ಹೊತ್ತ ಇವರಿಗೆ ಜೀವನಗತಿ ನಿರ್ಧಾರಕ ಶಕ್ತಿಗಳ ಕ್ರಿಯೆ ಪ್ರತಿಕ್ರಿಯೆಗಳ ಸಂಘಟನೆಯ ಗುಟ್ಟು ಏನೆಂಬುದು ತಿಳಿದಿರುತ್ತದೆ; ಮತ್ತು ಮನುಷ್ಯವರ್ಗಕ್ಕೆಲ್ಲ ನಷ್ಟ ಹಾಗೂ ಅಪಾಯದ ಶಂಕೆಯೊಡ್ಡಿರುವ ಸಮಸ್ಯೆಗಳು ಯಾವುವೆಂಬ ಪರಿಜ್ಞಾನ ಅವರಿಗಿರುತ್ತದೆ. ತಮ್ಮ ಕಾಲಕ್ಕೂ ಭವಿಷ್ಯತ್ತಿಗೂ ಸಂಬಂಧಿಸಿದಂತೆ ತಮ್ಮ ಕರ್ತವ್ಯಕ್ಕೆ ಇರುವ ಉತ್ತರವಾದಿತ್ವವನ್ನು ಅವರು ಬಲ್ಲವರು; ಮತ್ತು ತಮ್ಮ ಹೆಗಲಿಗೇರಿದ ಹೊಣೆಗಳನ್ನು ಚೆನ್ನಾಗಿ ಅರಿತು, ಬಾಳನ್ನು ತಿದ್ದಿಕೊಂಡು ಸಾಗಿಸುತ್ತ ನುರಿತು ನಿದರ್ಶನ ಪ್ರಾಯವಾಗಿರತಕ್ಕವರು ಅವರು.

ಯಾವ ಒಂದು ರಾಷ್ಟ್ರವಾಗಲಿ, ಸಾಮ್ರಾಜ್ಯವಾಗಲಿ, ಜನಪದವಾಗಲಿ, ನಾಯಕ ಮನುಷ್ಯಕುಲವಾಗಲಿ ಮಾನವತೆಯನ್ನು ಸಂರಕ್ಷಿಸಲಾರದು; ಇವುಗಳಲ್ಲಿ ಯಾವ ಒಂದೂ ತನ್ನ ನೆರೆರಾಷ್ಟ್ರಗಳ ಮೇಲೋ ಅಧೀನ ಜನವರ್ಗದ ಮೇಲೋ ಶತ್ರುಜನವರ್ಗದ ಮೇಲೋ ಎಂದೆಂದಿಗೂ ಶಾಶ್ವತವಾಗಿಯೂ ಪ್ರತಿವಾದಿಭಯಂಕರವೆನ್ನಿಸುವಂತೆಯೂ ತನ್ನ ಅಧಿಕಾರವನ್ನು ಚಲಾಯಿಸಲಾರದು. ಇತರ ಮನುಷ್ಯ ಶಕ್ತಿಗಳಿಗಿರುವಂತೆ ಅಧಿಕಾರಕ್ಕೂ ಒಂದು ಮಿತಿಯುಂಟು. ಯಾವಾಗ ಒಂದು ಜನವರ್ಗದ ಭಾಗವಾದ ಸಮಾಜವೊಂದರ ನಡುವಣಿಂದ ಜನ ತಂಡವೊಂದು ಸಿಡಿದೆದ್ದು

ತನ್ನ ಚಿತ್ತವನ್ನು ಮಿಕ್ಕವರ ಮೇಲೆ ಒತ್ತಿ ದಬ್ಬಾಳಿಕೆ ನಡಸಲು ಹೊರಡುತ್ತದೆಯೋ ಇಲ್ಲವೇ ಜನಸಮಸ್ತವನ್ನೂ ಪೀಡಿಸಹೋರಡುತ್ತದೆಯೋ ಆಗ ಮನುಷ್ಯಾಧಿಕಾರಕ್ಕಿರುವ ಮಿತಿಗಳು ಎಷ್ಟೆಂಬುದು ಸ್ಪಷ್ಟವಾಗಿ ಗೋಚರಕ್ಕೆ ಬರುತ್ತದೆ.

ಮನುಷ್ಯವರ್ಗ ತನ್ನ ನಾಯಕರನ್ನು – ಎಂದರೆ ಇಷ್ಟದಿಂದ ಆಯ್ದುಕೊಂಡ ನಾಯಕರನ್ನು ಅವಲಂಬಿಸಿ ಆತ್ಮೋದ್ಧಾರಮಾಡಿಕೊಳ್ಳಬೇಕು. ತಲೆಮಾರಿನಿಂದ ತಲೆಮಾರಿಗೆ ಹಾಯುತ್ತ ಜನವರ್ಗ ತನ್ನ ಭವಿಷ್ಯತ್ತನ್ನು ಕಟ್ಟಿಕೊಳ್ಳುತ್ತದೆ; ತನ್ನ ಅಧೀನಕ್ಕೆ ಬಂದಿರುವ ಜನಕುಲದ ಹಾಗೂ ಪ್ರಾಣಿ ಸಂಕುಲದ ಭವಿಷ್ಯತ್ತು ಸಿರ್ಧರವಾಗುವಂತೆ ಮಾಡಬಲ್ಲ ಪಾತ್ರಗಳಲ್ಲಿ ಕರ್ತವ್ಯನಿರತವಾಗುತ್ತದೆ.

ಮನುಷ್ಯ ನಾಯಕತ್ವವೂ ಸಹಚರತ್ವವೂ ಯಾವಾಗ ನ್ಯಾಯವಿತರಣಕ್ಕೆ ಸರ್ವದಾ ಸಿದ್ಧವಾಗಿ, ಸಕಲ ಭೂತದಯಾ ಪ್ರವೃತ್ತಿಯಲ್ಲಿ ಪ್ರೀತ್ಯಾದರಗಳುಳ್ಳವಾಗಿ, ಉತ್ಸಾಹದಿಂದ ಬಾಳುತ್ತ ಬದುಕನ್ನು ಸಾರ್ಥಕಪಡಿಸುತ್ತವೆಯೋ, ಯಾವಾಗ ಮನುಷ್ಯಸಾಮರ್ಥ್ಯಗಳಲ್ಲಿ ಅನಂತಕಾಲದ ವಿಕಾಸ ಸಾಧ್ಯತೆಯ ಗುಣ ಆನುಷಂಗಿಕವಾಗಿ ಸೇರಿಕೊಂಡಿರುತ್ತದೆ ಎಂದು ಅರಿತು ಸ್ಫೂರ್ತಿಯಿಂದ ಜಗದ್ವ್ಯವಹಾರ ಮಾಡುತ್ತವೆಯೋ ಆಗ ಅವು ಮನುಷ್ಯ ಸಮಾಜವನ್ನು ಪ್ರಗತಿ ಪಥದಲ್ಲಿ ನಡಸುವ ಅವಕಾಶ ಪಡೆಯುತ್ತವೆ. ನಮ್ಮ ಜನಸಮಸ್ತವು ನೀಡಬೇಕಾದ ಬಿಡಿಬಿಡಿ ಕಾಣಿಕೆಗಳನ್ನು ಗಾತ್ರದಲ್ಲೂ ಸಂಪತ್ಸಮೃದ್ಧಿಯಲ್ಲೂ ಹೆಚ್ಚಿಸಿಕೊಳ್ಳುತ್ತ, ವಿಶ್ವಪ್ರಪಂಚವನ್ನು ಉಚ್ಛ್ರಾಯ ಸ್ಥಿತಿಯಲ್ಲಿ ಊರ್ಜಿತವಾಗಿ ಇರಿಸುವುದೇ ನಮ್ಮ ಜಗದ್ವ್ಯವಹಾರಕ್ಕಿರುವ ಏಕಮಾತ್ರಧ್ಯೇಯ. ನಮ್ಮ ಪ್ರಯತ್ನಗಳು ಯಾವಾಗಲೂ ರಚನಾತ್ಮಕವಾಗಿರಬೇಕು; ಕಟ್ಟುವುದರಲ್ಲಿ ನಮ್ಮ ಪರಿಶ್ರಮ ಸಾಗಬೇಕೇ ಹೊರತು ಉರುಳಿಸುವುದರಲ್ಲಿ ಅಲ್ಲ. ಜನ ಸಮುದಾಯದಲ್ಲಿ ಯೋಜನಾ ಬದ್ಧ, ಸಹಕಾರ ನಿಷ್ಠ, ಪ್ರಯತ್ನ ಬಲಿಯಬೇಕು. ಇಂಥ ಜನೋತ್ಸಾಹದ ಜೊತೆಗೆ, ವಿವೇಕಪೂರಿತವಾದ ಪುರುಷಕಾರವೂ ಸೇರುವುದರ ಫಲವಾಗಿ ಭವಿಷ್ಯತ್ತು ಭರವಸೆಯ ಬೆಳಕಾಗಿ ಆ ಜನ ಬಳಿಸಾರುತ್ತದೆ.



ಅಧ್ಯಾಯ ಏಳು

# ಇತಿಹಾಸದ ಅನುಕೂಲತೆ ಇನ್ನುಮುಂದೆ ರ್‍ಯಾಡಿಕಲ್ ಪಂಥಕ್ಕೆ

ನಾವು ರ್‍ಯಾಡಿಕಲ್ (ಆಮೂಲಾಗ್ರ ಸುಧಾರಕ) ಪಂಥದವರು ಇಂದಿನ ಜನವರ್ಗ ಪಾಯುತ್ತಿರುವ ಸಂದುಕಟ್ಟಿನಲ್ಲಿ ನಿರ್ಣಾಯಕ ವಿವೇಚನೆಯ ಗತಕಾಲದ ಬಳುವಳಿಯಾಗಿ ಪಡೆದಿದ್ದೇವೆ; ಮತ್ತು ಕೆಲಮಟ್ಟಿಗೆ ಈ ಸನ್ನಿವೇಶವನ್ನು ಬರಮಾಡಿಕೊಳ್ಳಲು ನಮ್ಮಿಂದ ಒಂದಷ್ಟು ನೆರವೂ ಸಂದಿದೆ. ನಮ್ಮ ಸಹಾಯದಿಂದ, ಮತ್ತು ಕೆಲವೇಳೆ ನಮ್ಮ ನಾಯಕತ್ವದಲ್ಲಿ, ಮನುಷ್ಯವರ್ಗವು ಪ್ರಗತಿಪಥವಲ್ಲಿ ಮುನ್ನಡೆದು, ಉಗ್ರ ಸನ್ನಿವೇಶವನ್ನು ಸಾಧ್ಯವಾದಮಟ್ಟಿಗೆ ಹತೋಟಿಯಲ್ಲಿಟ್ಟುಕೊಳ್ಳುವ, ಹಾಗೂ ಗಣನೀಯವಾದ ಉತ್ತರವಾದಿತ್ವದಿಂದ ವರ್ತಿಸುವ ಸ್ಥಾನಮರ್ಯಾದೆಯನ್ನು ಗಳಿಸಿಕೊಂಡಿದೆ. ಬಹುಕಾಲದಿಂದ ಮಾನವಕುಲ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಜ್ಞಾನಭಂಡಾರಗಳನ್ನು ಸಂಗ್ರಹಿಸಿಕೊಂಡು, ಅದನ್ನು ಪರಂಪರೆಯಾಗಿ ಮುಂದಣ ಪೀಳಿಗೆಗೆ ಸಾಗಿಸುತ್ತ ಬಂದಿದೆ. ಇಳೆಯ ವಿವಿಧ ಭಾಗಗಳ ಜನವರ್ಗಗಳು ಅನೇಕ ಕೌಶಲಗಳನ್ನು ಮೈಗೂಡಿಸಿಕೊಂಡು, ಅಗಣಿತ ಪ್ರಯೋಗ ಪರೀಕ್ಷೆಗಳನ್ನು ಕೈಕೊಂಡು ಅನುಭವವನ್ನು ರಾಶಿ ರಾಶಿಯಾಗಿ ಗಳಿಸಿವೆ. ಈ ಕೌಶಲಗಳ ಹಿಂದೆ ಜ್ಞಾನದ ಆಧಾರವಿದೆ, ಆದದ್ದರಿಂದ ಈ ಕೌಶಲಗಳಿಗೆ ಕಳೆಬಂದಿದೆ. ಅವು ಉತ್ತರೋತ್ತರ ಸಂವೀಕ್ಷಣೆ ಪರೀಕ್ಷಣೆ ಪ್ರಯೋಗಗಳಿಗೆ ಆಕರಗಳೆನ್ನಿಸಿ ದಾಖಲೆಯಾಗಿ, ವಿಂಗಡನೆ ವಿಭಜನೆ ವರ್ಗೀಕರಣೆಗಳಿಗೂ ಒಳಪಟ್ಟು, ಶಿಕ್ಷಣರಂಗದ ವಿವಿಧ ಮಾರ್ಗಗಳ ಮೂಲಕ ಮುಂದಿನ ಪೀಳಿಗೆಗಳಿಗೆ ಸಾಗಿಹೋಗುತ್ತವೆ. ಅನೇಕ ಪ್ರಕೃತಿ ಶಕ್ತಿಗಳನ್ನಿಂದು ಮನುಷ್ಯವರ್ಗ ನಿಯಂತ್ರಣಮಾಡಿ ವಶಪಡಿಸಿಕೊಂಡು, ಅನೇಕವೇಳೆ ಪ್ರಕೃತಿಯ ಮುಖವನ್ನೇ ಬದಲಾಯಿಸುವ ಪಾತ್ರಧಾರಿಯಾಗಿ ಕಾರ್ಯ ನಿರ್ವಾಹ ಮಾಡಿಕೊಂಡು ಬಂದಿದೆ. ಮನುಷ್ಯರು ತಮ್ಮ ಸಮಾಜವನ್ನು ಕಟ್ಟಿಕೊಂಡು, ಬುದ್ಧಿಪೂರ್ವಕವಾಗಿ ಅದರಲ್ಲಿ ಮಾರ್ಪಾಟುಗಳನ್ನು ತಂದುಕೊಳ್ಳುತ್ತಿದ್ದಾರೆ. ಕಾಲಕಾಲಕ್ಕೆ ಮನುಷ್ಯರು ಸಮಾಜದ ರೂಪದಲ್ಲೂ ಕಾರ್ಯ ವಿವರದಲ್ಲೂ ಪರಿವರ್ತನೆ ತಂದು, ನೂತನ ರೂಪ ಹಾಗೂ ಕಾರ್ಯವಿಧಿಗಳನ್ನು ಸಮಾಜಕ್ಕೆ ಅಳವಡಿಸಿ ನಿರ್ದೇಶಿಸುತ್ತ ಬಂದಿದ್ದಾರೆ. ಹೀಗೆ ಮನುಷ್ಯಕುಲ ಭಾಗಶಃ ತನ್ನ ಭವಿಷ್ಯತ್ತಿನ ಹೊಣೆ ಹೊತ್ತುಕೊಂಡಿದೆ. ಇತರ ಜೀವ ಪ್ರಕಾರಗಳಿಗೆ ಧರ್ಮದರ್ಶಿಯೂ ಬುದ್ಧಿವಾದಿಯೂ ಆಗಿದೆ. ಈ ಎಲ್ಲ ದಿಕ್ಕುಗಳಲ್ಲಿ, ಈ ಎಲ್ಲ ಚಟುವಟಿಕೆಗಳ ಮೂಲಕ ನಾವು ರ್‍ಯಾಡಿಕಲ್ ಪಂಥದವರು ಗಮನಾರ್ಹವಾದ ಪಾತ್ರವಹಿಸುತ್ತ ಬಂದಿದ್ದೇವೆ.

ಸಂಪ್ರದಾಯವಾದಿಗಳು (ಕನ್ಸರ್ವೆಟಿವ್ ಪಂಥದವರು) ಯಥಾಸ್ಥಿತಿ ಪಾಲನೆಯ ನೀತಿಯನ್ನು ಪಟ್ಟುಹಿಡಿದು ಅದನ್ನು ಆಯ್ದುಕೊಂಡಿದ್ದಾರೆ. ಗತಕಾಲದಲ್ಲಾದ ಅಭಿವ

ದ್ಧಿಯ ಪ್ರಯೋಜನಗಳನ್ನು ಅನುಭವಿಸುತ್ತ ಅವರು ಸ್ಥಾನಮಾನಗಳನ್ನೂ ಅಧಿಕಾರ ಪ್ರತಿಷ್ಠೆಯನ್ನೂ ಗಳಿಸಿಕೊಂಡವರು. ಆಗಾಗ್ಗೆ ತಮ್ಮನ್ನು ರ್‍ಯಾಡಿಕಲ್ ಯುವಕರೆಂದು ಕರೆದುಕೊಂಡು, ರ್‍ಯಾಡಿಕಲ್ ನೆಲೆಯಿಂದ ಲಿಬರಲ್ (ಉದಾರ ಪಂಥದ) ನೆಲೆಗೆ, ಬಳಿಕ ಮತ್ತೆ ಕನ್ಸರ್ವೆಟಿವ್ ನೆಲೆಗೆ ಹಿಂತಿರುಗುತ್ತ, ಸಾಗ ಹೊರಟ ಇಡಿಯ ವೃತ್ತಪರಿಧಿಯ ಚಾಪದಂಚನ್ನೆಲ್ಲ ಯಾತಾಯಾತದಿಂದ ಸವೆಯಿಸಿದ್ದಾರೆ: ಈ ಸುತ್ತಾಟವನ್ನು ಮುಗಿಸಿ, ಅವರ ಕಸಬೂ ಬದುಕೂ ವಿಶೇಷ ಸೌಕರ್ಯಭೋಗದ ನೆಲೆಗಳಲ್ಲೂ ಅಧಿಕಾರ ದರ್ಪದ ಸ್ಥಾನಗಳಲ್ಲೂ ಸುಪ್ರತಿಷ್ಠಿತವಾಯಿತು. ಇಲ್ಲವೆ, ಅನ್ಯಾಧಿಕಾರಿಗಳ ಸೇವಕರಾಗಿಯೋ ಸಲಹೆಗಾರಪರಾಮರ್ಶಕರಾಗಿಯೋ ಅವರು ನಡೆದುಕೊಂಡರು. ವಿಶೇಷ ಸೌಕರ್ಯ ಭೋಗವೂ ಅಧಿಕಾರ ಪ್ರಯೋಗವೂ ಕನ್ಸರ್ವೆಟಿವ್ ಪಂಥಿಗಳನ್ನು ಕೈಕೆಸರು –ಬಾಯಿಮೊಸರಿನ ಕಾಯಕ ಕ್ಲೇಶಗಳಿಂದ ಬಿಡಿಸಿ, ಅವರ ಕಸಬುಗಳನ್ನು ಶೋಷಣೆಯ ಕ್ಷೇತ್ರಗಳಿಗೆ ತಿರುಗಿಸಿ, ಸಿರಿವಂತಿಕೆಯ ದಾರಿಯಲ್ಲಿ ನಡಸಿ, ದುಡಿಯದೆಯೆ ಅವರ ಕೈತುಂಬ ಬರುವ ಗಳಿಕೆಗಳಿಗೂ ಭೋಗಜೀವನಕ್ಕೂ ಅವಕಾಶಮಾಡಿಕೊಟ್ಟು, ಕಡೆಗೆ ಅವರನ್ನು ಬಂದಳಿಕೆ – ಬಾಳಿನ ದೈನ್ಯದಲ್ಲಿರಿಸಿತು.

ಲಿಬರಲ್ ಪಂಥದವರಾಗಿ ಅವರು ಒಂದುಕಡೆ ಪಟ್ಟಭದ್ರ ಸಂಸ್ಥೆಗಳ ಮುಂದೆ ಕ್ಷಮಾಯಾಚನೆಗೆ ನಿಲ್ಲುತ್ತ, ಇನ್ನೊಂದುಕಡೆ ಸಣ್ಣ ಸಣ್ಣ ಸುಧಾರಣೆಗಳಾಗಲೆಂದು ಪ್ರಚೋದನೆ ಕೊಡುತ್ತಾರೆ. ಕ್ಷಮಾಯಾಚನೆಯ ನೆಲೆಯಿಂದ ಹೊರಟು ಪಟ್ಟಭದ್ರ ಸಂಸ್ಥೆಗಳ ಆಡಳಿತದ ನೀತಿ ಸಮರ್ಥನೆಯ ನೆಲೆಗೈದಿ, ಕಡೆಗೆ ಕನ್ಸರ್ವೆಟಿವ್ ಪಂಥದ ಪಂಕ್ತಿಗೇ ಸೇರಿಕೊಂಡಿದ್ದಾರೆ.

ರ್‍ಯಾಡಿಕಲ್ ಪಂಥದವರೋ – ಯುವಕರಾಗಲಿ ಮುದುಕರಾಗಲಿ – ಎಲ್ಲರೂ ಪೀಡಕರ ನಿಗ್ರಹಕ್ಕೂ ದಬ್ಬಾಳಿಕೆಗೂ ಸಿಕ್ಕಿ ಪಾಡುತ್ತಲಿರುವವರು; ಭ್ರಷ್ಟಾಚಾರವನ್ನು ನೋಡಿ ನೋಡಿ ಚಕಿತರಾಗಿ ನೊಂದವರು; ಉಪೇಕ್ಷೆ ಆಲಸ್ಯಗಳನ್ನು ಕಂಡು ಕಂಡು ಜಿಗುಪ್ಸೆಪಟ್ಟವರು; ದುಃಖ ಯಾತನೆಗಳು ತುಂಬಿದ ಜನಜೀವನವನ್ನೂ ಮಾನವನ ಘನತೆಯನ್ನಿಳಿಸುವ ನೀತಿಭ್ರಷ್ಟತೆಯನ್ನೂ ನೋಡುತ್ತ ನೋಡುತ್ತ ಕೆರಳಿದವರು. ಇಂಥ ಸನ್ನಿವೇಶಕ್ಕಿರುವ ಕಾರಣವೇನೆಂದು ರ್‍ಯಾಡಿಕಲ್ ಪಂಥಿಗಳು ಹುಡುಕ ಹೊರಟು, ಬೇರಿನವರೆಗೆ ಅವರ ಹುಡುಕಾಟ ಬೆದಕಾಟಗಳನ್ನು ನಡಸಿದ್ದಾರೆ. ತತ್ತ್ವತಃ ಅವರು ಕೆಲವು ಬದಲಾವಣೆಗಳನ್ನು ಸೂಚಿಸಿದ್ದಾರೆ. ಈ ಬದಲಾವಣೆಗಳನ್ನು ಕಾರ್ಯತಃ ಜಾರಿಗೆ ತರಲು ಹೊರಟು ಅವರು ಜನಮನೋಭಾವನೆಗಳಲ್ಲೂ ಸಂಪ್ರದಾಯ ಸಂಸ್ಥೆಗಳಲ್ಲೂ ತಕ್ಕಷ್ಟು ಪರಿವರ್ತನೆ ತಂದಿದ್ದಾರೆ. ಹೊಸ ಜೀವನತತ್ತ್ವಗಳನ್ನು ಪ್ರತಿಪಾದಿಸುತ್ತ, ಸುಧಾರಣೆಗಳಿಗೆ ಬೆಂಬಲ ಕೊಡುತ್ತ, ವರ್ಗಶಕ್ತಿಯ ಸಮತೋಲನದಲ್ಲಿ ಏರುಪೇರನ್ನು ತಂದಿದ್ದಾರೆ. ಅಲ್ಲದೆ ದಬ್ಬಾಳಿಕೆಗೆ ಸಿಕ್ಕಿ ಕುಗ್ಗಿದವರ ಹಾಗು ಸುಲಿಗೆಗೆ ಸಿಕ್ಕಿ

ಬಸವಳಿಯುತ್ತಿದ್ದವರ ಪಕ್ಷವಹಿಸಿ, ಹಳೆಯ ಆಚರಣೆಗಳನ್ನು ಅಳಿಸಿಹಾಕಿ, ಮನುಷ್ಯ ವರ್ಗದ ದೊಡ್ಡ ದೊಡ್ಡ ಭಾಗಗಳಿಗೆ ಕಲ್ಯಾಣವಾಗುವ ಮೇಲು ಮೇಲಾದ ಮಟ್ಟಗಳನ್ನು ತೋರಿಸಲು ಧರ್ಮ ಯುದ್ಧವನ್ನು ಹೂಡಿದ್ದಕ್ಕೋಸ್ಕರ ಅನೇಕರ ದ್ವೇಷವನ್ನು ಕಟ್ಟಿಕೊಂಡಿದ್ದಾರೆ.

ಸುಲಿಗೆಗೆ ಸಿಕ್ಕಿ ಬಾಡುತ್ತಿರುವ ಜನಸಮುದಾಯಕ್ಕೆ ವಿವೇಕವಿಲ್ಲವೆಂದು ಹೇಗೆ ಹೇಳಬಹುದು ? ಅಪಕ್ವ, ಅವಿಚಾರಿತ ಎಂದು ಒಳ್ಳೆಯ ಭಾವನೆಗಳನ್ನೂ ಆಚರಣೆಗಳನ್ನೂ ವಿಶೇಷ ಸೌಲಭ್ಯ ಭೋಗಿಗಳು ವಿರೋಧಿಸಿದರೆ, ಪ್ರಚಾರದ ಒತ್ತಾಯಕ್ಕೆ ಸಿಕ್ಕಿ ಶೋಷಿತ ಜನವರ್ಗ ಅವನ್ನು ತಿರಸ್ಕರಿಸುತ್ತ ಬಂದಿರುವುದುಂಟು. ಆದರೆ ಯಾವ ಬದಲಾವಣೆಗಳನ್ನು ತಂದುಕೊಳ್ಳಲು ಸಾಕಾದಷ್ಟು ಪೂರ್ವಸಿದ್ಧತೆಗಳು ನಡೆದು, ಆ ಬದಲಾವಣೆಗಳಿಂದ ತತ್ ಕ್ಷಣದ ಮತ್ತು ಸ್ವಯಂಸ್ಪಷ್ಟವಾದ ಅನುಕೂಲಗಳು ಆಗುತ್ತ ಬಂದವೋ ಅಂಥ ಬದಲಾವಣೆಗಳನ್ನು ಸಾಮಾಜಿಕ ಅನ್ಯಾಯಕ್ಕೆ ಬಲಿಯಾದ ಬಹುಸಂಖ್ಯೆಯ ಜನವರ್ಗವು ಸಂಭ್ರಮದಿಂದ ಬರಮಾಡಿಕೊಂಡು, ಸಾಮಾಜಿಕ ಕ್ರಾಂತಿಗಳಾಗಲು ಅವಕಾಶ ಕೊಡುತ್ತ ಬಂದಿವೆ.

ಕಳೆದ ಎರಡು ಶತಮಾನಗಳ ಅವಧಿಯಲ್ಲಿ ಕ್ರಮಕ್ರಮವಾಗಿ ಕ್ರಾಂತಿಕಾರಕ ಕ್ಷಿಪ್ರತೆಯಿಂದ ಪರಿವರ್ತನೆಗಳು ನಡೆದು ಬಂದಿವೆ. ಪರಿವರ್ತನೆಯಲ್ಲಿ ಗತಿವೇಗಗಳು ಹೆಚ್ಚುತ್ತ ಕ್ರಾಂತಿಯ ಅವಧಿಯನ್ನು ಪಕ್ವಕ್ಕೆ ತಂದುವು. ಪರಿವರ್ತನೆಯ ಒಂದೊಂದು ಅಲೆಯೂ ಬಹುಸುಲಭವಾಗಿ, ಸ್ವತಃಸಿದ್ಧವಾದ ಸಂಗತಿಯೆಂಬಂತೆ ಹಳೆಯ ತಪ್ಪುಗಳನ್ನು ತಿದ್ದಿ ನೇರ್ಪಡಿಸಿವೆ. ಉಪಯೋಗಕಾಲ ಮುಗಿದುಹೋದ ಹಳೆಯ ಸಾಮಾಜಿಕ ಪದ್ಧತಿಗಳನ್ನು ಕಳಚಿ ತೊರೆದು, ಹೊಸಪದ್ಧತಿಗಳನ್ನು ಅಳವಡಿಸಿವೆ. ಆಮೂಲಾಗ್ರ (ರ್‍ಯಾಡಿಕಲ್) ಪರಿವರ್ತನೆ ಯಥಾಸ್ಥಿತಿವಾದಿಗಳ ಪ್ರಭಾವವನ್ನು ಕೆಳನೆಲೆಗೆ ಇಳಿಸಿದ್ದಲ್ಲದೆ, ರ್‍ಯಾಡಿಕಲ್ ಪಂಥದವರನ್ನು ನಾಯಕತ್ವ ಹಾಗೂ ಉತ್ತರವಾದಿತ್ವದ ಮೇಲ್ನೆಲೆಗೆ ಏರಿಸಿತು.

ರಾಜಕೀಯ ಕ್ಷೇತ್ರದಲ್ಲಿ ಪರಿವರ್ತನಗತಿಯ ಫಲವಾಗಿ ನಿರಂಕುಶತೆ ಹಿಂದಕ್ಕೆ ಸರಿಯಿತು; ಅದರ ಸ್ಥಾನಕ್ಕೆ ಪ್ರಜಾಸಾರ್ವಭೌಮತ್ವ ಬಂದು ನೆಲಸಿತು. ಸ್ವೇಚ್ಛಾಧಿಕಾರವು ಹಿಂದಕ್ಕೆ ಸರಿದು ಅದರ ಸ್ಥಾನಕ್ಕೆ ಉತ್ತರವಾದಿ ಶಾಸನಾನುಸಾರಿ ಪ್ರಭುತ್ವ ಬಂದು ನೆಲಸಿತು. ಸುಲಿಗೆಯ ಪದ್ಧತಿ ಹಿಂದಕ್ಕೆ ಸರಿದು ಪುಷ್ಕಲತೆಯಲ್ಲಿ ಜನಕ್ಕೆ ಪಾಲು ನೀಡುವ ಹಂಚಿಕೆಯ ಪದ್ಧತಿ ಬಂದು ನೆಲಸಿತು. ಸಂಕುಚಿತ ಪರಿಮಿತ ಜನವರ್ಗದ ಸಂಸ್ಕೃತಿ ಹಿಂಜರಿದು ಅದರ ಸ್ಥಲದಲ್ಲಿ ಸಮಸ್ತ ಜನಪದ ಸಂಸ್ಕೃತಿ ಬಂದು ನೆಲಸಿತು.

ಈ ಕಾರ್ಯಗತಿಯ ಒಂದು ಉತ್ತಮ ನಿದರ್ಶನವನ್ನು ಹೊವರ್ಡ್ ಮಮ್‌ಫರ್ಡ್ ಜೊನ್ಸ್ ಎಂಬಾತ ಬರೆದ "ಓ ವಿಚಿತ್ರ ನೂತನ ಪ್ರಪಂಚವೆ!" (O Strange New world !)‡ ಎಂಬ ಪುಸ್ತಕದ ಒಂದು ಭಾವೋತ್ತೇಜಕವಾದ ಅಧ್ಯಾಯದಲ್ಲಿ ಕಾಣಬಹುದು. ಆ ಅಧ್ಯಾಯದ ಶೀರ್ಷಿಕೆ "ರ್ಯಾಡಿಕಲ್ ರಿಪಬ್ಲಿಕ್" (ಆಮೂಲಾಗ್ರ ಪರಿವರ್ತನ ನಿಷ್ಠ ಗಣರಾಜ್ಯ). ಅದರಲ್ಲಿ ಅಲ್ಲಲ್ಲಿ ಫಳಫಳಿಸುವ ರತ್ನದಂಥ ವಾಕ್ಯಗಳ ಪೋಂಣಿಸುವಣೆಯಿದೆ. ಆ ಅಧ್ಯಾಯದ ಪ್ರಾರಂಭ ವಾಕ್ಯಗಳು ಅದರ ಗುಣವನ್ನು ಬೆಳಗುತ್ತವೆ. ರ್ಯಾಡಿಕಲ್ ಪಂಥದಲ್ಲಿ (ವಾಮ – left) ಉಗ್ರಗಾಮಿಗಳನ್ನು ಬಹಿಷ್ಕರಿಸಿದ್ದಾದಮೇಲೆ ಅದೇ ಪಂಥದ (ದಕ್ಷಿಣ–right) ಮಂದಗಾಮಿಗಳ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದು ಸಮಕಾಲಿಕ ಅಮೆರಿಕ ದೇಶೀಯರಿಗೆ ತಿಳಿಯದೆ ಪೇಚಿನಲ್ಲಿ ಸಿಕ್ಕಿದ್ದಾರೆ. ಸಂಯುಕ್ತ ಅಮೆರಿಕವು ಒಂದು ರಾಷ್ಟ್ರವಾಗಿ ರೂಪುಗೊಂಡ ಕಾಲದಲ್ಲಿಯೂ ಆಮೇಲೆ ಬಹು ವರ್ಷಗಳಲ್ಲಿಯೂ ಹೊರದೇಶಗಳ ಜನ ಆಶಿಭಯಗಳು ಬೆರೆತ ದೃಷ್ಟಿಯಿಂದ ಅದನ್ನು ನೋಡುತ್ತ ಬಂದರು; ಈ ಬಗೆಯ ದೃಷ್ಟಿ ಸ್ವದೇಶ ಬಾಂಧವರಲ್ಲೂ ಇದ್ದದ್ದನ್ನು ಈ ಸಮಕಾಲಿಕ ಅಮೆರಿಕ ದೇಶೀಯರು ನೋಡಲಾರದೆ ಹೋದರು. ಆಗ ನಾವು ಆಮೇಲಾಮೇಲೆ ಸೋವಿಯತ್ ರಷ್ಯದ ಸಿದ್ಧಿಯನ್ನೂ ಇದೇ ದೃಷ್ಟಿಯಿಂದ ಅವಜ್ಞೆ ಮಾಡಿ ನೋಡಿದೆವು. ಗಣರಾಜ್ಯ ಸ್ಥಾಪನೆಯ ಕಾಲದಲ್ಲಿ ಅಮೆರಿಕವು ರಾಜಸತ್ತೆಗಳೇ ವಿರಾಜಮಾನವಾಗಿದ್ದ ಪ್ರಪಂಚದಲ್ಲಿ ಶಿಶು–ರಾಷ್ಟ್ರವಾಗಿ ತುಂಬಿತುಳುಕುವ ಉತ್ಸಾಹದಿಂದ ಕೂಡಿತ್ತು....ದರ್ಶನ ಶಾಸ್ತ್ರದ ಪರಿಭಾಷೆಯನ್ನು ಬಳಸಿಕೊಂಡು, ರ್ಯಾಡಿಕಲ್ ಫೆಡರಲ್ ರಾಜ್ಯ ಶಾಸನವನ್ನು ರಚಿಸಿಕೊಂಡಿತು.... ಪ್ರಜಾಸತ್ತೆ ಎಂಬ ಮಾತು ಅಭಿನಂದನೀಯವಲ್ಲದ ಮಾತಾಗಿದ್ದ ಕಾಲದಲ್ಲಿ ಈ ಹೊಸ ರಾಷ್ಟ್ರವನ್ನು ಡೆಮೊಕ್ರಾಟಿಕ್ (ಪ್ರಜಾಸತ್ತಾತ್ಮಕ)ಪ್ರಭುತ್ವವೆಂದು ಟೀಕೆಮಾಡಲಾಯಿತು. ಅಲ್ಲಿ ರಾಜಭವನವಿಲ್ಲ; ಭೂಸ್ವಾಮಿಗಳುಳ್ಳ ಶ್ರೀಮಂತ ವರ್ಗವಿಲ್ಲ. ಆದರೆ (ತತ್ಫಲವಾಗಿಯೋ ಏನೋ) ಅದು ತನ್ನ ಜನಜಂಗುಳಿಯ ಹಿಂಸಾತ್ಮಕ ಚಳವಳಿಯ ಮರಾದರ್ಶವನ್ನೂ ರಾಜಕೀಯ ಅಸ್ಥಿರತೆಯನ್ನೂ ಆರ್ಯಪದ್ಧತಿಗೆ ಅವಿನಯವನ್ನೂ ಜಗತ್ತಿಗೆ ಪ್ರಕಟಿಸಿದ್ದರ ದಾಖಲೆಯಿಟ್ಟುಕೊಂಡಿತು." ಬಳಿಕ ಲೇಖಕರು ದೇಶದಲ್ಲಿ ನಡೆದ ದಂಗೆ ಬಂಡಾಯಗಳ ಪಟ್ಟಿಯನ್ನು ಕೊಡುತ್ತಾರೆ; ಮತ್ತು ಜನಜಂಗುಳಿಯ ಹಿಂಸಾಚರಣೆಗಳಿಗೆ ನಿದರ್ಶನವನ್ನೂ, ಅಮೆರಿಕದಲ್ಲಿ ಬಿಳಿಯರಿಂದ ನೀಗ್ರೋಗಳಿಗೆ ಆಗುತ್ತಿದ್ದ ಕಶಾಪ್ರಹಾರರೂಪದ ಘೋರವರ್ತನೆಯ ಕರಾಳ ಚಿಹ್ನೆಗಳು ಅಮೆರಿಕದ ಆದಿವರ್ಷಗಳ ಚರಿತ್ರೆಯಲ್ಲಿ ಮುಚ್ಚಿಸಾಲನ್ನು ಬಿಟ್ಟುಹೋದ ಸಂಗತಿಯನ್ನೂ ಪ್ರಸ್ತಾವಿಸಿದ್ದಾರೆ.

‡ N. Y., Viking, 1964

ಅಮೆರಿಕಾ ಸಂಯುಕ್ತ ಸಂಸ್ಥಾನಗಳು ತನ್ನ 1789 ರ ರಾಜ್ಯಶಾಸನವನ್ನು ಅಂಗೀಕಾರಮಾಡಿಕೊಂಡ ಹೊತ್ತಿನ ಮತ್ತು ಆಮೇಲಿನ ಐತಿಹಾಸಿಕ ಘಟನೆಗಳು ರಾಷ್ಟ್ರಶರೀರಕ್ಕೆ ಸರ್ವತೋಮುಖವಾದ ಪ್ರಗತಿ ಧ್ಯೇಯವುಳ್ಳ ರ್ಯಾಡಿಕಲ್ ತತ್ತ್ವದ ಒಂದು ಉತ್ಸಾಹ ಪ್ರವೃತ್ತಿಯನ್ನು – ದೇಶಚರಿತ್ರೆಯ ಹರಿವಿನಲ್ಲಿ ಒಂದು ಮುಖ್ಯವಾದ ಘಟ್ಟವನ್ನು ತಂದಂತೆ – ಅಳವಡಿಸಿದುವು. ಪ್ರೊಫೆಸರ್ ಜೋನ್ಸ್ ಅವರು ಈ ಘಟನೆಗಳನ್ನು ಒಂದೇ ಒಂದು ವಾಕ್ಯದಲ್ಲಿ ಹೀಗೆ ವರ್ಣಿಸುತ್ತಾರೆ, "ಅಮೆರಿಕದ ರಾಷ್ಟ್ರಜೀವನದ ಸಾರಗುಣ ಅಸ್ಥಿರತೆ". ಮುನ್ನಡೆಯುವ ಬಾಳಹದವನ್ನು ತೋರಿಸುವ ನಾಡಿಗರ ಸವಿಗುರುತು ಇದು.

ಹದಿನೆಂಟನೆಯ ಶತಮಾನದ ಅಮೆರಿಕನರು ತಮ್ಮನ್ನು "ಒರಟರೆಂದೋ ಬರ್ಬರರೆಂದೋ ತಿಳಿಯದೆ, ಕಾಲ ಕೋಶದಲ್ಲಿ ಅರ್ವಾಚೀನ ಸ್ತರಕ್ಕೆ ನಡೆದು, ಎಲ್ಲ ಗತಯುಗಗಳ ಸಿರಿಯನ್ನು ಬಳುವಳಿಯಾಗಿ ಪಡೆದವರು ಎಂದು ಭಾವಿಸಿಕೊಂಡರು.... ಮನುಷ್ಯನ ಇತಿಹಾಸದಲ್ಲಿ ತಾವು ಒಂದು ಹೊಸ ಅಧ್ಯಾಯವನ್ನು ಉಪಕ್ರಮಿಸುವುದಾಗಿ ಎಣಿಸಿದರು." ನಿಜವಾಗಿಯೂ ಉತ್ತರ ಅಮೆರಿಕದಲ್ಲಿ ನೆಲಸಿದ ಆಂಗ್ಲಜನ ಸಂತಾನ ರ್ಯಾಡಿಕಲ್ ಮನೋಭಾವದವರಾಗಿ ಇರಲಿಲ್ಲ. ಆದರೆ ಪಶ್ಚಿಮ ಹಾಗೂ ಮಧ್ಯಯೂರೋಪಿನ ಪ್ರಾಜ್ಞಜನವೋ ಅಮೆರಿಕದ 1770 ರಿಂದ 1815 ರ ಅವಧಿಯ ಕುಲುಕಾಟ ಕೋಲಾಹಲಗಳನ್ನು ಕಂಡವರು; ಅಂದಿನ ಅಮೆರಿಕಾ ರಾಷ್ಟ್ರದಲ್ಲೂ ಅದರ ಜನಪದದಲ್ಲೂ ಅಪಾಯ ವಿನಾಶಗಳನ್ನು ತರುವ ರ್ಯಾಡಿಕಲ್ ಮನೋವೃತ್ತಿಯನ್ನು ಇವರು ಕಂಡುಕೊಂಡರು. ಕ್ರಾಂತಿಗಳು ನಿರ್ಧಾರಕ್ಕೆ ತಂದ ಸಿದ್ಧಾಂತಗಳನ್ನು ಜನ ಆಚರಣೆಗೆ ತಂದುಕೊಂಡಾಗ, ಅವು ಸ್ವಭಾವತಃ ರ್ಯಾಡಿಕಲ್ ಮನೋವೃತ್ತಿಯನ್ನು ಸೂಚಿಸತಕ್ಕವು. ಅಮೇರಿಕದ ಕ್ರಾಂತಿಯನ್ನು ಮಾರ್ಗದರ್ಶನ ಕೊಟ್ಟು ಮುನ್ನಡಸಿದ ಸ್ತ್ರೀಪುರುಷರು ಅನ್ಯ ದೇಶಗಳಲ್ಲಿ ಕ್ರಾಂತಿಯನ್ನು ಆಗಮಾಡಿಸಿದವರಂತೆ ಅಷ್ಟು ಮಟ್ಟಿಗಾದರೂ ರ್ಯಾಡಿಕಲ್ ಮನೋಗತದಿಂದ ಕೂಡಿದ್ದವರೇ.

"ಪ್ರಪಂಚವು ಯಾವ ಗತಿ ಹಿಡಿದು ಸಾಗುತ್ತಿದೆ?" ಎಂದು ಅದರ ದಿಕ್-ಗತಿಗಳಲ್ಲಿ ಕುತೂಹಲಗೊಂಡ ವಿll ಜೋನ್ಸ್ ಅವರು ಆಲಂಕಾರಿಕ ಶೈಲಿಯಲ್ಲಿ ಪ್ರಶ್ನೆಯೆತ್ತಿದ್ದಾರೆ. ಸಂಯುಕ್ತ ಅಮೇರಿಕದ ರಾಷ್ಟ್ರಶಾಸನೋದಯದ ವರ್ಷವೇ (1789) ಪ್ರಶ್ನೆಗೆ ಈ ಉತ್ತರವನ್ನು ಹೊರಡಿಸಿತು. "ಯೂರೋಪಿನ ನಾಗರಿಕತೆ ಸಂಸ್ಕೃತಿಗಳಲ್ಲಿ ಮಹಾ ಪರಿವರ್ತನೆಯನ್ನು ತಂದ ಅಂದಿನ ರ್ಯಾಡಿಕಲ್ ಮನೋಧರ್ಮದ ಸ್ಫೋಟಕ ಸಂದರ್ಭ ಅದು. ಅಮೇರಿಕದ ಜನ ತೋರಿಸಿದ ನಿದರ್ಶನವನ್ನು ಹಿಡಿದು ನಡೆದ ಫ್ರಾನ್ಸಿನ ಮಹಾಕ್ರಾಂತಿ ಅಲ್ಲಿಯ ಜನತೆಯನ್ನು ನಿರ್ಬಂಧಗಳಿಂದ ಬಿಡಿಸುವ ವಿಮೋಚಕ ಸಲಕರಣೆಯಾಗಿ ಅವರನ್ನು ಕರ್ತವ್ಯಕ್ಕೆ ಎಚ್ಚರಿಸಿತು."

ಇದರೊಡನೆ ಆರ್ನಾಲ್ಡ್ ಟಾಯ್ನ್‌ಬೀ ಅವರ "ಅಮೆರಿಕ ಮತ್ತು ವಿಶ್ವಪ್ರಪಂಚ ಕ್ರಾಂತಿ" (America and the World Revolution) ‡ ಎಂಬ ಪುಸ್ತಕವನ್ನು ಪೂರಕವ್ಯಾಸಂಗಕ್ಕೋಸ್ಕರ ಎತ್ತಿಕೊಂಡಾಗ, ಮೇಲಣ ಈ ಕ್ರಾಂತಿ ಸ್ವರೂಪದ ವಿವರಣೆ ಒಂದೇ ಪೀಳಿಗೆಯಲ್ಲಿ ಜಗತ್ತಿನ ಒಂದೊಂದು ಭೂಖಂಡದಲ್ಲೂ ನಡೆದ ಕ್ರಾಂತಿಗಳ ಫಲವಾಗಿ, ಆಧುನಿಕ ವಿಶ್ವಸಮಾಜದ ವಿವಿಧ ವಿಭಾಗಗಳು ಅನುಭವಿಸಿದ ಮಾರ್ಪಾಟುಗಳ ಸಂಗ್ರಹ ಚರಿತ್ರೆಯೇ ಆಗುತ್ತದೆ ಎಂಬುದು ಸ್ಪಷ್ಟಪಡುತ್ತದೆ. ಉಪಯೋಗದ ಕಾಲ ಮುಗಿದುಹೋದ ಸಾಮಾಜಿಕ ಪದ್ಧತಿ ವಿಧಾನಗಳು ಪೂರಕಸೇವೆಯನ್ನು ಕಂಡು ಗುಡಿಸಿಹಾಕಲ್ಪಟ್ಟವು. ಸಾಗಿಬಂದ ಪ್ರಾಚೀನ ವಿಧಾನಗಳಲ್ಲಿ ಕೆಲವು ಉಳಿಯಬಲ್ಲವಾಗಿ ಹೊಸ ಜೀವ ಪಡೆದು ಉಳಿದುಕೊಂಡೋ, ನೂತನ ವಿಧಾನಗಳು ನಿರ್ಮಾಣವಾಗಿಯೋ ಜನಾನುಷ್ಠಾನಕ್ಕೆ ಒದಗಿದುವು. ಇವು ವ್ಯಾಪಕವಾಗಿ ಹರಡುತ್ತ ನೆಲೆಗೊಂಡು ಮೇಲ್ಪಾಡನ್ನು ಪಡೆಯುತ್ತ ಹೋದುವು.

ಕಳೆದ ಎರಡು ಶತಮಾನಗಳಲ್ಲಿ ಜೀವನ ಸಂದರ್ಭಗಳಲ್ಲೂ ಕಾಲ ಸಂದರ್ಭಗಳಲ್ಲೂ ಕ್ರಮುಕ್ರಮವಾದ ಪರಿವರ್ತನೆಯಾಗಿದೆ; ಜನವರ್ಗಗಳೂ ಕ್ರಮುಕ್ರಮವಾಗಿ ಎಚ್ಚತ್ತುಕೊಂಡು ನವಚೇತನೋತ್ಸಾಹಗಳನ್ನು ಪಡೆದಿದ್ದಾರೆ. ವಿಜ್ಞಾನ ಕ್ಷೇತ್ರದಲ್ಲೂ ಪರಿಕರ್ಮತಂತ್ರಕ್ಷೇತ್ರದಲ್ಲೂ (ಸೈನ್ಸ್ ಮತ್ತು ಟೆಕ್ನಾಲಜಿ) ಹೊಸ ಹೊಸ ನಿರ್ಮಾಣಗಳೂ (Inventions), ಶೋಧನೆಯಿಂದ ವಸ್ತುಗಳ ಹೊಸ ಹೊಸ ಅನಾವರಣಗಳೂ (Discoveries) ಆಗಿ ಕ್ರಾಂತಿಪರಂಪರೆಗೆ ಎಲ್ಲೆಲ್ಲೂ ಅವಕಾಶವಾಗಿದೆ. ಕಾರ್ಯ ಸಂಧಾನಕ್ಕೆ ವಾಡಿಕೆಯಾಗಿ ಹೂಡಿಕೊಂಡು ಬರುತ್ತಿದ್ದ ಕುದುರೆಯುಳವು ಆವಿಯುಳವಿಗೆ ಎಡೆಬಿಟ್ಟು ಹಿಂಜರಿದಿದೆ; ವಿದ್ಯುಚ್ಛಕ್ತಿ ಅಣುಶಕ್ತಿಗೆ ಎಡೆಬಿಟ್ಟು ಹಿಂಜರಿಯುತ್ತಿದೆ. ಸಮಾಂತರ ಸ್ತರದಲ್ಲಿ ಸಾಮಾಜಿಕ ಸಂಬಂಧಗಳು ಪರಿವರ್ತನೆಯನ್ನು ಕಾಣುತ್ತಿವೆ. ದೊಡ್ಡ ದೊಡ್ಡ ಜನ ಸಮುದಾಯಗಳು ಗುಲಾಮಗಿರಿಯನ್ನೊದರಿ, ಸ್ವಾಮಿ-ಭೃತ್ಯವ್ಯವಸ್ಥೆಯು ಅಸ್ತಿತ್ವಸೌಲಭ್ಯವನ್ನು ಕಂಡಿವೆ. ವಿವಿಧೋದ್ಯಮ ರಂಗಗಳಲ್ಲಿ ಈ ಸ್ವಾಮಿ-ಭೃತ್ಯ ವ್ಯವಸ್ಥೆಯು ಬಂಡವಾಳ ವ್ಯವಸ್ಥೆಗೂ (Capitalism), ಬಂಡವಾಳ ವ್ಯವಸ್ಥೆಯ ಸಮತಾವಾದಕ್ಕೂ (Socialism) ಎಡೆಬಿಟ್ಟು ನೇಪಥ್ಯಕ್ಕೆ ಸೇರುತ್ತಿವೆ. ಯೂರೋಪಿನ ಪಶ್ಚಿಮ ಭಾಗದಲ್ಲೂ ಈ ಕ್ರಾಂತಿಕಾರಕ ಶಕ್ತಿಗಳು ಮೊದಲಾಗಿ, ಅಲ್ಲಿಂದ ಭೂಗೋಲದ ಉದ್ದಕ್ಕೂ ವ್ಯಾಪಕವಾಗಿ ಹರಡಹೊರಟು, ಇಂದು ಎಲ್ಲ ಭೂಖಂಡಗಳನ್ನೂ ಹೊಕ್ಕು ನೆಲೆಗೊಂಡು, ತನ್ನ ಜನಹಿತಕಾರ್ಯವನ್ನು ಸಾಧಿಸತೊಡಗಿದೆ.

---

‡ N.Y. Oxford University press, 1962

## ಬಂಡವಾಳಶಾಹಿಯ ನಿರ್ಮಾಣಯುಗ

1914ರ ಜುಲೈ ತಿಂಗಳ ಅಂತಿಮ ದಿನಗಳಲ್ಲಿ ಪಾಶ್ಚಾತ್ಯ ನಾಗರಿಕತೆಯನ್ನು ಅವಸಾನ ಘಟ್ಟಕ್ಕೆ ತರಲು ಏಕಸ್ವಾಮ್ಯಾಧಿಕಾರದಲ್ಲಿ ಬಂಡವಾಳಸ್ತರು ಉದ್ಯಮಿಸುವ ಹೊತ್ತಿಗೆ, ಜಗದ್ರಾಷ್ಟ್ರಗಳು ಅನೇಕ ಪ್ರಗತಿಪರವಾದ ಹೆಜ್ಜೆಗಳನ್ನಿಟ್ಟಿದ್ದುವು. ಇಡಿಯ ಒಂದು ಶತಮಾನದ ಅವಧಿಯಲ್ಲಿ ಮನುಷ್ಯಶಕ್ತಿ ರಚನಾತ್ಮಕವಾದ ಕಾರ್ಯಕಲಾಪಗಳಲ್ಲಿ ತೊಡಗಿಕೊಂಡುಬಂದಿತ್ತು. ಈ ಕಾಲದ ಮನುಷ್ಯ ಪ್ರಗತಿಯ ವಿವರಗಳನ್ನು ಹೀಗೆ ಉಲ್ಲೇಖಿಸಬಹುದು: (1) ಪ್ರಕೃತಿ ಪರಿಸರವೊದಗಿಸುವ ವಸ್ತುಗಳನ್ನೂ ಶಕ್ತಿಗಳನ್ನೂ ಹೆಚ್ಚು ಹೆಚ್ಚಾಗಿ ದಕ್ಷತೆಯಿಂದ ಬಳಸಿಕೊಳ್ಳುವುದು; (2) ಈ ವಸ್ತುಶಕ್ತಿಗಳ ಬಳಕೆಗೆ ಬೇಕಾದ ಸಾಧನೋಪಕರಣ ಸಲಕರಣೆಗಳನ್ನು ಸಜ್ಜು ಮಾಡಿಕೊಳ್ಳುವುದು; (3) ಬುದ್ಧಿಪೂರ್ವಕವಾಗಿ ಯೋಜನೆಗಳನ್ನು ತಯಾರಿಸಿ ಜಾರಿಗೆ ತಂದುಕೊಂಡು ಸಾಮಾಜಿಕ ಪರಿಸರಾಭಿವೃದ್ಧಿಯನ್ನು, ಮುಖ್ಯವಾಗಿ ಈ ಸಾಮಾಜಿಕ ಪರಿಸರದರಾಜಕೀಯ ಮುಖದ ಅಭಿವೃದ್ಧಿಯನ್ನು, ಸಾಧಿಸಲು ಪ್ರಯತ್ನಮಾಡುವುದು; (4) ಬಂಡವಾಳಶಾಹಿಯಲ್ಲಿ ಉದ್ಯಮ ಪ್ರಗತಿಗೆ ಬೇಕಾದ ಯಂತ್ರಸಂಧಾನ ಕಾರ್ಯ ವಿವರಗಳನ್ನು ಪರಿಶೀಲಿಸಿ, ಪರಿಕರ್ಮ ತಂತ್ರ (ಟೆಕ್ನಿಕಲ್) ಕ್ಷೇತ್ರಕ್ಕೆ ಬುದ್ಧಿವಂತರನ್ನು ಆಕರ್ಷಿಸಿ ಶಿಕ್ಷಣಕೊಟ್ಟು, ಅವರನ್ನು ನಿರ್ಣಾಯಕ ಪಾತ್ರಗಳಲ್ಲಿ ನಿಲ್ಲಿಸಿ ಕೆಲಸ ಮಾಡಿಸುವುದು; (5) ಮಧ್ಯಮ ತರಗತಿಯ ಜನರಲ್ಲಿ ಕಾರ್ಯೋತ್ಸಾಹವನ್ನು ಚೋದಿಸಲು ಅವರಿಗೆ ಸರ್ವತೋಮುಖವಾದ ಉತ್ತೇಜನಾವಕಾಶಗಳನ್ನು ಕಲ್ಪಿಸುವುದು; (6) ಮಧ್ಯಮ ತರಗತಿಯ ಜನವರ್ಗಕ್ಕೆ ಬೆಳೆಯಲು ಅವಕಾಶಕೊಟ್ಟು, ಅವರನ್ನು ಶಿಸ್ತಿನಲ್ಲಿ ನಡಸಿ, ಅವರ ವಾಸಕ್ಕೆ ತಕ್ಕ ವಸತಿಗಳನ್ನು ಕಲ್ಪಿಸಿ, ಅವರಿಗೋಸ್ಕರ ಉದ್ಯೋಗಾವಕಾಶಗಳನ್ನು ವಿಸ್ತಾರವಾಗಿ ಹರಡಿ, ಭೋಜನ ವಿನೋದ ವಿಹಾರಗಳ ಸೌಕರ್ಯಗಳನ್ನು ಒದಗಿಸಿ, ಅವರನ್ನು ಹೆಚ್ಚು ಹೆಚ್ಚಾಗಿ ಬಳಸಿಕೊಳ್ಳುವುದು; (7) ಮಧ್ಯಮ ಶ್ರೇಣಿಯ ಜನದಿಂದ ಉದ್ಯಮ ಪ್ರಪಂಚಕ್ಕೆ ಉದ್ಬುದ್ಧದ ಸಾಲುಗಳಲ್ಲಿ ಅಭ್ಯರ್ಥಿಗಳನ್ನೂ ಅಭ್ಯಾಸಿಗಳನ್ನೂ ಆಕರ್ಷಿಸಿ, ತಕ್ಕ ಶಿಕ್ಷಣ ಕೊಟ್ಟು, ಅವರನ್ನು ತಮಗೆ ಆಶ್ರಿತ ವರ್ಗವಾಗಿರುವಂತೆ ಮಾಡಿಕೊಂಡು ಸ್ವಲ್ಪಜನಾಧಿಪ (Oligarchy) ಬಂಡವಾಳ ಶಾಹಿಯ ಅಧಿಕಾರ ಶ್ರೇಣಿಯ ಭದ್ರತೆಗಾಗಿಯೂ ಬಲ ಪ್ರಭಾವಗಳ ವಿಸ್ತರಣಕ್ಕಾಗಿಯೂ ನೀತಿ ನಿರ್ಧಾರಣೆಗಳನ್ನು ಮಾಡುತ್ತ, ಬಂಡವಾಳಶಾಹಿಗೆ ಸಮರ್ಥವಾದ ವ್ಯವಸ್ಥಾಪಕ (Managerial) ನಿರ್ದೇಶನ ಸೇವೆಯನ್ನು ಒದಗಿಸುವುದು.

ಬಂಡವಾಳಶಾಹಿಯ ಈ ವಿಶಾಲ ಕ್ಷೇತ್ರದಲ್ಲಿ ಉದ್ಯಮಾಭಿವೃದ್ಧಿಗೆ ವಿಜ್ಞಾನಿಗಳು, ಶಿಲ್ಪಿಗಳು ಮತ್ತು ತಂತ್ರಶಾಸ್ತ್ರಜ್ಞರ ನೆರವು ಮುಖ್ಯವಾಗಿ ಉದ್ಯಮದ ಪ್ರಾರಂಭ

ದಶೆಯಲ್ಲಿ ಅವಶ್ಯವಾದದ್ದರಿಂದ ಆಯಾ ಜ್ಞಾನ ವಿಭಾಗದಲ್ಲಿ ಅರ್ಹತೆಯುಳ್ಳವರಿಗೆ ವಿಶೇಷ ಶಿಕ್ಷಣದ ಏರ್ಪಾಟಾಯಿತು. ಆಗ್ಗೆ ಕಾರ್ಮಿಕ ಜನದ ವರ್ಗೀಕರಣವಾಯಿತು; ವಿಶೇಷ ವಿಷಯಜ್ಞರ ತಂಡ ಬೆಳೆಯಿತು; ಜನದಿಂದ ಆಗಬೇಕಾಗಿದ್ದ ವೃಥಾಶ್ರಮ ವನ್ನು ಪರಿಹರಿಸುವ ಯಂತ್ರಸಂಧಾನಕ್ಕೆ ಅವಕಾಶವಾಯಿತು; ಮತ್ತು ಸ್ವತಶ್ಶಕ್ತಿಗಳ ಅಳವಡಿಕೆಯಿಂದ ಯಂತ್ರಸಂಧಾನ ಸೌಕರ್ಯ ಹೆಚ್ಚಿತು. ಇವೆಲ್ಲ ಬೀಜರೂಪದಲ್ಲಿದ್ದು ಮುಂದೆ ಉದ್ಯಮಗಳು ಅಭಿವೃದ್ಧಿಯಾದಂತೆ ಅವುಗಳ ಪ್ರಯೋಜನ ತುಂಬ ಹೆಚ್ಚಿತು. ಬಂಡವಾಳ ಪದ್ಧತಿ ಬೆಳಸಿದ ಇತರ ಬೆಳವಣಿಗೆಗಳು ಇವು: ಪಟ್ಟಣ ಪ್ರದೇಶ ಗಳ ಆವಶ್ಯಕತೆ ಉದ್ಯಮಾಭಿವೃದ್ಧಿಯಿಂದ ಅನಿವಾರ್ಯವಾಯಿತು; ಪಟ್ಟಣ ಪ್ರದೇಶ ಗಳ ಪಕ್ಕದಲ್ಲಿ ಉಪ ಪಟ್ಟಣಗಳು ಅವಶ್ಯವಾಗಿ ಅವೂ ಬೆಳೆದುವು. ಈ ನಗರ ಪ್ರದೇಶಗ ಳಿಗೆ ಆಹಾರ ಸಾಮಗ್ರಿಯ, ಪೂರೈಕೆ ಯಂತ್ರೋದ್ಯಮಕ್ಕೂ ಭೂವ್ಯವಸಾಯಕ್ಕೂ ಬೇಕಾದ ಕಚ್ಚಾಮಾಲು, ಗೊಬ್ಬರ ಮತ್ತು ಇತರ ಉಪಕರಣಗಳ ಸರಬರಾಜು ವ್ಯವಸ್ಥೆ–ಇವೆಲ್ಲ ವ್ಯಾಪಕವಾಗಿ ಭರವಸೆಯಿಂದ ನಡೆದುವು. ಪಟ್ಟಣ ಪ್ರದೇಶಗಳು ಅಭಿವೃದ್ಧಿ ಹೊಂದಿದಂತೆ ಅಲ್ಲಿ ಕುಶಲ ಕಾರ್ಮಿಕವರ್ಗದ ಬಲವೂ ಅರ್ಧಮರ್ಧ ಕೌಶಲವುಳ್ಳ ಕಾರ್ಮಿಕವರ್ಗದ ಬಲವೂ – ಉದ್ಯಮದಲ್ಲಿ ಆಗಬೇಕಾದ ಕಾರ್ಯ ವಿವರಗಳಿಗೆ ತಕ್ಕಂತೆ–ಇತರ ಸೌಕರ್ಯಗಳೂ ಹೆಚ್ಚಿದುವು.

ಯೂರೋಪಿನಲ್ಲಿ ಬಂಡವಾಳಬಲದ ಆಧಾರದಂತೆ ರಚನೆಯಾಗುವಾಗ್ಗೆ, ಅದರ ಪಕ್ಕದಲ್ಲೇ ಸಮಾಂತರದಲ್ಲಿ ಅದು ಸಮಾರಂಭಗೊಳಿಸಿದ ನೂತನ ಪದ್ಧತಿಗೆ ಹೊಂದಿಕೊಳ್ಳಲಾರದೆ ವಿರೋಧಿಸುತ್ತಾ ಇದ್ದ ಸ್ವಾಮಿ–ಭೃತ್ಯ (feudal) ಪದ್ಧತಿ ನಿಷ್ಠ ಸಮಾಜದ ಶಿಲ್ಪವನ್ನು ಒಡೆದು ಕೆಡವಲಾಯಿತು; ಮತ್ತು ಆ ಪದ್ಧತಿಯಲ್ಲಿ ನೂತನ ಬಂಡವಾಳ ಪದ್ಧತಿಗೆ ಸಂಗತವಾಗದೆ, ತಿದ್ದಿ ಅನ್ವಯಮಾಡಿಕೊಳ್ಳಲು ಸಾಧ್ಯವಾಗದೆ ಇದ್ದ, ಆಚರಣೆಗಳನ್ನೂ ಸಂಸ್ಥೆಗಳನ್ನೂ ಕೈಬಿಡಲಾಯಿತು. ಮುಂದೆ ಮೂರು ಶತಮಾನಗಳ ಅವಧಿಯಲ್ಲಿ ಯೂರೋಪಿನಲ್ಲಿ ಹಳೆಯ ಫ್ಯೂಡಲ್ (ಸ್ವಾಮಿ–ಭೃತ್ಯ ಅಥವಾ ಊಳಿಗ–ಮಾನ್ಯ) ಪದ್ಧತಿಯ ವಿಸರ್ಜನೆ ಹಾಗೂ ಕ್ಯಾಪಿಟಲಿಸ್ಟ್ (ಬಂಡವಾಳ) ಪದ್ಧತಿಯ ರಚನೆ ಪಕ್ಕಪಕ್ಕದಲ್ಲೇ ನಡೆದುವು.

ಯೂರೋಪಿನ ಹೊರಗಡೆ ಏಷ್ಯಾ ಆಫ್ರಿಕಾ ಅಮೆರಿಕಾ ಖಂಡಗಳ ಬಹು ಸಂಖ್ಯಾಕ ಜನವರ್ಗಗಳ ನಡುವೆ ಬಂಡವಾಳ ಪದ್ಧತಿಯ ರಚನೆ ಮುಂದೆ ಹೇಳುವಂತೆ ಸಾಗಿತು; (1) ಬಂಡವಾಳ ಶಾಹಿಯ ವಿಸ್ತರಣಕ್ಕೆ ಕಡಮೆ ಬೆಲೆಯಲ್ಲಿ ಪೂರೈಕೆ ಯಾಗಬೇಕಾದ ಆಹಾರ ಮತ್ತು ಸರಬರಾಜಾಗಬೇಕಾದ ಕಚ್ಚಾಮಾಲು ಸಂಗ್ರಹ ವಾಯಿತು; (2) ಕಾರ್ಖಾನೆಗಳಲ್ಲಿ ತಯಾರಿಸಿದ ಸರಕುಗಳ ಮಾರುವಿಗೆ ಅವಶ್ಯವಾದ ಹೊರದೇಶಗಳ ಪೇಟೆಗಳನ್ನು ಒದಗಿಸಿಕೊಳ್ಳಲಾಯಿತು; ಬಂಡವಾಳಗಾರರು ಆಮದು

ಮಾಡಿಕೊಳ್ಳಬೇಕಾದ ಸರಕುಗಳ ವೆಚ್ಚವನ್ನು ಸರಿತೂಗಿಸಲು ಸರಕು ರಫ್ತಿನ ಮತ್ತು ಸಿಬ್ಬಂದಿಗಳ ಸೇವಾದಾನದ ಏರ್ಪಾಟು ನಡೆಯಿತು; (3) ಬಂಡವಾಳಗಾರ ಮುಖ್ಯಸ್ಥರಿಗೆ ವಸಾಹತುಗಳಲ್ಲಿ ವಿಶ್ವಾಸಾರ್ಹರಾದ ಕನಿಷ್ಠವರ್ಗದ ಸಹಭಾಗಿಗಳನ್ನು (ಪಾಲುದಾರರನ್ನು) ಮತ್ತು ಸ್ಥಳೀಯ ಪ್ರತಿನಿಧಿಗಳನ್ನು ನೆರವಾಗಿ ಕಟ್ಟಿಕೊಂಡು, ವಸಾಹತುಗಳಲ್ಲಿ ವಾಣಿಜ್ಯ ಪ್ರಗತಿಯನ್ನೂ ವಿವಿಧ ವೃತ್ತಿ ಉದ್ಯಮಗಳ ಪ್ರಗತಿಯನ್ನೂ ಖಾತರಿಪಡಿಸಿಕೊಳ್ಳಲಾಯಿತು. (4) ಸಾಮ್ರಾಜ್ಯ ಭೋಗದಲ್ಲಿದ್ದ ಮಹಾಪ್ರಭುಗಳಿಗೆ ಉತ್ಪಾದನೆಯಲ್ಲಿ ಹೆಚ್ಚುವರಿಗಳು ಸಲ್ಲಬೇಕು; ಇದು ಸಾಧ್ಯವಾಗುವಂತೆ ಕಾರ್ಮಿಕರ ಕೈದುಡಿಮೆಯನ್ನು ಒತ್ತಾಯಿಸುವ ಅತ್ಯಂತ ಘೋರವಾದ ಶೋಷಣನೀತಿಯನ್ನು ಅವಲಂಬಿಸಬೇಕು. ಬಂಡವಾಳ ಪದ್ಧತಿಯಂತೆ ಅಸ್ತಿತ್ವಕ್ಕೆ ಬಂದ ಯಂತ್ರೋದ್ಯಮ ನಿಷ್ಠ ಸಮಾಜವು ಸ್ವಲ್ಪವರಮಾನದಲ್ಲಿ ತೃಪ್ತಿಪಡುತ್ತ ಕೆಲಸ ಮಾಡುವ ಕಾರ್ಮಿಕ ವರ್ಗವನ್ನು ಪ್ರಭುಸೇವೆಗೆ ಒದಗಿಸುವ ಹೊಣೆಯನ್ನು ಹೊತ್ತುಕೊಳ್ಳಬೇಕು.

ಈ ಸಂದರ್ಭಗಳನ್ನು ಬಳಸಿಕೊಂಡು ಐರೋಪ್ಯವರ್ತಕರೂ ವಸ್ತುಗಳ ಉತ್ಪಾದಕರೂ, ಚಿಲ್ಲರೆ ವ್ಯಾಪಾರಿಗಳೂ ಧನಕೋಶಿಗಳ ಸಾಹುಕಾರರೂ (bankers) ಹತ್ತೊಂಬತ್ತನೆಯ ಶತಮಾನದ ಬಂಡವಾಳಶಾಹೀ – ಸಾಮ್ರಾಜ್ಯತತ್ತ್ವದ ಆಧಾರದಂತೆ ಸಮಾಜಶಿಲ್ಪದ ರಚನೆ ಮಾಡಿದರು. ಈ ವ್ಯವಸ್ಥೆಯಲ್ಲಿ ಮೇಲ್ಮಟ್ಟದ ಜೀವನ ಸೌಕರ್ಯಗಳೂ ಭೋಗಾನುಭವದ ಅನುಕೂಲಗಳೂ ಕೇವಲ ಸ್ವಲ್ಪಜನಕ್ಕೆ ಮಾತ್ರ ಸಾಧ್ಯವಾದುವು; ವಿಶೇಷಾಧಿಕಾರಗಳನ್ನು ಅನುಭವಿಸುವವರ ಜೀವಿತಾವಧಿ ಹೆಚ್ಚಿತು. ಐರೋಪ್ಯ ಮಧ್ಯಮ ತರಗತಿಯ ಆವಶ್ಯಕತೆಯನ್ನು ಪೂರಯಿಸುವ ರಾಜಕೀಯ ಆಡಳಿತ ವ್ಯವಸ್ಥೆ ರೂಪಗೊಂಡಿತು; ಮತ್ತು ಐರೋಪ್ಯ ಕಾರ್ಮಿಕರನ್ನೂ ಬೇಸಾಯಗಾರರನ್ನೂ ನಿತ್ಯಕಾಯಕದಲ್ಲಿ ಇರಿಸಲಾಯಿತು. ಯುದ್ಧಗಳೇನಾದರೂ ಸಂಭವಿಸಿದುವೋ – ಆಗ ಯೂರೋಪಿಗೆ ಎಡೆಬಿಡದೆ ಆಹಾರವೂ ಬೇಕಾಗುವಷ್ಟು ಕಚ್ಚಾ ಮಾಲುಗಳೂ ಇತರ ಕೊಳ್ಳಿಗಳೂ, ಮನುಷ್ಯವರ್ಗ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುವ ವಸಾಹತುಗಳಿಂದಲೂ ಮತ್ತು ಅಧೀನ ರಾಜ್ಯಗಳಿಂದಲೂ ಸರಬರಾಜಾಗುವ ಏರ್ಪಾಟು ಆಯಿತು.

ಹತ್ತೊಂಬತ್ತನೆಯ ಶತಮಾನದ ಬಂಡವಾಳಶಾಹಿಯು ಕಟ್ಟಡವನ್ನು ಕಟ್ಟಿಕೊಳ್ಳಲು ನಡೆದ ಚಟುವಟಿಕೆ ಮನುಷ್ಯನು ಅದುವರೆಗೆ ನಡಸಿಕೊಂಡು ಬಂದ ಸಾಹಸೋದ್ಯಮಗಳಲ್ಲೆಲ್ಲ ಅತ್ಯಂತವಿಸ್ತಾರವಾದದ್ದು ಎನ್ನಿಸಿತು. ಐದು ಸಾವಿರ ವರ್ಷಗಳಷ್ಟು ದೀರ್ಘಾವಧಿಯ ಮಾನವ ಚರಿತ್ರೆಯಲ್ಲಿ ಮೊತ್ತಮೊದಲಿಗೆ ಇಡಿಯ ಮನುಷ್ಯವರ್ಗ ಪರಸ್ಪರಾವಲಂಬನವುಳ್ಳ ಜೀವನ ವ್ಯಾಪಾರವನ್ನು ನಡಸುವಂತಾಯಿತು. ಮುಖ್ಯವಾಗಿ

ಯೂರೋಪುಖಂಡದ ಜನವರ್ಗದ ಚಲನವಲನಗಳ ಫಲವಾಗಿ ಭೂಗ್ರಹದ ಮೂಲೆ ಮೂಲೆಯಲ್ಲೂ ಜನವಸತಿಯಿದ್ದ ಕಡೆಯಲ್ಲೆಲ್ಲ ಭಿನ್ನ ಭಿನ್ನ ಮನೋಧರ್ಮದ ಜನವರ್ಗದ ಸಹಬಾಳ್ವೆಗೂ ಭಿನ್ನ ಭಿನ್ನ ಶಕ್ತಿಗಳ ಸಂಘಟನೆಗೂ, ಮತ್ತು ಭಿನ್ನ ಭಿನ್ನ ಆಚರಣೆಗಳಿಗೂ ಅವಕಾಶವಾಯಿತು. ಬಂಡವಾಳದ ಈ ಪದ್ಧತಿಗೆ ಪ್ರತಿಕ್ರಿಯೆಯಾಗಿ, ರಷ್ಯದ ಜಾರ್ ಪ್ರಭುತ್ವ 1917 ರಲ್ಲಿ ಪತನವಾಯಿತು. ಈ ಬೆಳವಣಿಗೆ ಕಾರಣವಾಗಿ ಸಮತಾವಾದದ ಕಟ್ಟಡವೊಂದು ನಿರ್ಮಾಣವಾಗುವುದಕ್ಕೆ ಅನುಕೂಲವಾತಾವರಣಸನ್ನಿವೇಶವೂ ಒದಗಿಬಂದಿತು.

## ಸಮತಾವಾದಿ ಕಟ್ಟಡದ ಬೆಳವಣಿಗೆ

1793 ರಿಂದ 1815 ರ ವರೆಗಿನ ಐರೋಪ್ಯ ಯುದ್ಧಗಳು ಸ್ವಾಮಿ-ಭೃತ್ಯ ನ್ಯಾಯದ ವ್ಯವಸ್ಥೆಯನ್ನು ದುರ್ಬಲಪಡಿಸಿ, ಬಂಡವಾಳ ತತ್ತ್ವದ ಕಟ್ಟಡಕ್ಕೆ ದಾರಿ ಮಾಡಿದುವು. 1815 ರಿಂದ 1914ರ ವರೆಗೆ ವಿಶ್ವವ್ಯಾಪಿಯಾಗಿ ಉರುಬಿನಿಂದ ಹರಡಿಕೊಂಡ ಬಂಡವಾಳಪದ್ಧತಿಯ ಕಟ್ಟಡದಲ್ಲಿ ಶೈಥಿಲ್ಯ ಕಾಣಿಸಿಕೊಂಡು, ಕಟ್ಟಡದ ತ್ರಾಣ ಇಳಿಮುಖವಾಯಿತು. 1898 ರಿಂದ 1919ರ ವರೆಗಿನ ಯುದ್ಧಗಳು ಐರೋಪ್ಯ ಬಂಡವಾಳಶಾಹಿಗಳನ್ನು ಸ್ವಗೃಹ ಕ್ಷೇತ್ರಗಳಲ್ಲೂ ಹೊರಗಣ ಅವುಗಳ ವಸಾಹತು ಮತ್ತು ಅಧೀನ ಕ್ಷೇತ್ರಗಳಲ್ಲೂ ನಿರ್ವೀರ್ಯಗೊಳಿಸಿ, ಮೊದಲು ಯುರೋಪಿನಲ್ಲೂ ಆಮೇಲೆ ಅಮೆರಿಕಾ ಖಂಡಗಳಲ್ಲೂ ಆಮೇಲಾಮೇಲೆ ಏಷ್ಯಾಖಂಡದಲ್ಲೂ ಸಮಾಜವಾದಿ ತತ್ತ್ವ ಪ್ರಯೋಗವಾಗಲು ಅವಕಾಶವಾಗಿ, ಸಮಾಜವಾದಿ ಕಟ್ಟಡಗಳು ಏಳಲು ದಾರಿಮಾಡಿದುವು. ಪರಿವರ್ತನದ ವಕ್ರರೇಖೆಗಳು ಸ್ತರಸ್ತರವಾಗಿ ಮೇಲಕ್ಕೆ ಎದ್ದು ಕಲೆತು ಚೂಪಾಗುತ್ತ 1945 ರ ಯುದ್ಧಾನಂತರ ಕಟ್ಟಡದ ಶಿಖರಗಳನ್ನು ತೋರಿಸಿದುವು. ಈ ಕ್ರಾಂತಿಕಾರಕ ಶಿಲ್ಪಾಗ್ರವು ಚೇತನಗಾಢತೆಯಿಂದ ಸ್ಪಂದಿಸಿತು; ಮತ್ತು ಭೂಗೋಲದ ಬಹು ವಿಸ್ತಾರವಾದ ಪ್ರದೇಶಗಳಲ್ಲಿ ತನ್ನ ಮಹಾಪ್ರಭಾವವನ್ನು ಪ್ರಕಾಶಪಡಿಸಿತು. ಕಳೆದ ಐದುಸಾವಿರ ವರ್ಷಗಳ ಸಾಮಾಜಿಕ ಇತಿಹಾಸದಲ್ಲಿ ಎಂದೂ ಈ ಇಪ್ಪತ್ತು ವರ್ಷಗಳ ಅವಧಿಯನ್ನು ಒತ್ತಾಗಿ ತುಂಬಿದ ಪರಿವರ್ತನ ಸರಣಿಯನ್ನು ಕಾಣಲು ಸಾಧ್ಯವಿಲ್ಲ.

ಮಾನವತೆಯ ಪ್ರಗತಿ ಪ್ರಯತ್ನ ಭಾವಗಳಿಗೆ ಮುಗಿವೆಂಬುದು ಇರುವುದಿಲ್ಲ. ಮುಗಿವಿಗೆ ಬದಲಾಗಿ, ಮುನ್ನಡೆದಂತೆ ತೋರಿಕೊಂಡ ಸಿದ್ಧಿಗಳು ಆಯಾಕಾಲಗಳಲ್ಲಿ ಆದ ಬೆಳವಣಿಗೆಯ ಮೊದಮೊದಲ ಘಟ್ಟಗಳೇ ಆಗಿರುತ್ತವೆ. ಈಗ ಮುನ್ನಡೆಯುತ್ತ ಮುಟ್ಟಿದ ಘಟ್ಟದಲ್ಲಿ ನಾವು ಪ್ರಕೃತಿಯ ಮೇಲೆ ಸಾಕಾದಷ್ಟು ಹತೋಟಿಯನ್ನು ತಂದುಕೊಳ್ಳುವ ಪ್ರಯತ್ನದಲ್ಲಿ ಆರಂಭ ಕಾರ್ಯವನ್ನು ಮಾತ್ರ ಸಾಧಿಸಿದ್ದೇವೆ ಎನ್ನಿಸುತ್ತದೆ. ಇದುವರೆಗಿನ ಸಿದ್ಧಿಯಿಂದ, ನಾವು ಭೂಗ್ರಹದ ಮೇಲೆ

ಹರಡಿಕೊಂಡಿರುವ ಮನುಷ್ಯ ವರ್ಗದೊಡನೆ ಪರಿಣಾಮಕಾರಿಯಾಗಿ ಸಂಪರ್ಕದಲ್ಲಿರಬಹುದಾಗಿದೆ. ಈಗ ಎಚ್ಚತ್ತು ವಿಚಾರ ಪ್ರಚೋದನೆಗೆ ಒಳಗಾದ ಜನಸ್ತೋಮದಿಂದ ಸಮುದಾಯ ಸಮುದಾಯ ಪರಿಮಾಣದಲ್ಲಿ ಬೇಡಿಕೆಗಳು ಬರುತ್ತಲಿವೆ. ಈ ಬೇಡಿಕೆಗೆ ಇನ್ನೂ ದೊಡ್ಡ ದೊಡ್ಡ ಜನಸಮುದಾಯಗಳು ದನಿಬೆರಸಿ ಅಪೇಕ್ಷೆಗಳನ್ನು ತ್ವರೆ ಪಡಿಸುತ್ತವೆ.

ಒಂದೊಂದು ತಲೆಮಾರಿನ ಒಂದೊಂದು ದಶಕದಲ್ಲೂ ಈಗ ಮುನ್ನಡೆಯಲು ಮುಂದುಮುಂದಕ್ಕೆ ಅಡಿಯಿಡಲಾಗುತ್ತಿದೆ. ಇಂದಿನ ಪೀಳಿಗೆ ಅನೇಕ ಕ್ಷೇತ್ರಗಳಲ್ಲಿ ತನ್ನ ಕಾಣಿಕೆಯನ್ನು ಸಲ್ಲಿಸಿದೆ. ಶೋಧಿತ ವಸ್ತುಗಳ ಅನಾವರಣ, ನೂತನ ವಸ್ತುಯಂತ್ರಗಳ ನಿರ್ಮಾಣ, ವಿವಿಧ ಕಲೆಗಳ ಕ್ಷೇತ್ರದಲ್ಲಿ ಮುನ್ನಡೆ, ಉದ್ಯಮ ಕ್ಷೇತ್ರದಲ್ಲಿ ಭೂರಿ ಉದ್ಯಮಾಭಿವೃದ್ಧಿ ಆಗಿ, ಕೃಷಿ ಕ್ಷೇತ್ರದಲ್ಲಿ ಭೂರಿ ಕಾಯಕಾಭಿವೃದ್ಧಿಯಾಗಿ, ಆಹಾರ ಹಾಗೂ ಇತರ ವಸ್ತು ಪ್ರಸ್ಕಲತೆ ಕೈಗೆ ಬಂದಿದೆ. ಕಸಬುಗಳು ಬಗೆಬಗೆಯಾಗಿ ಹೆಚ್ಚಿ ಹಬ್ಬುತ್ತಿವೆ. ದರ್ಶನ ಕ್ಷೇತ್ರದಲ್ಲಿ ವಿವಿಧ ಪಂಥ ವಿಚಾರಗಳ ಜಿಜ್ಞಾಸೆಗೆ ಅವಕಾಶ ಹೆಚ್ಚುತ್ತಿದೆ. ಮನುಷ್ಯರು ಜೀವನದ ತಾತ್ಪರ್ಯ ಗ್ರಹಣ ಮಾಡುತ್ತ ಹೋದಂತೆಲ್ಲ, ಜೀವನದ ಸಿದ್ಧಿಸಾಧ್ಯತೆಗಳನ್ನು ಅರಿತುಕೊಳ್ಳುತ್ತ ಹೋದಂತೆಲ್ಲ, ಅವರು ಜೀವನವೊಡ್ಡುವ ಹಲಬಗೆಯ ಸಮಸ್ಯೆಗಳ ಪರಿಹಾರದಲ್ಲಿ ಪ್ರವೀಣರಾಗುತ್ತಿದ್ದಾರೆ. ಅವರು ಜಗದ್ವ್ಯವಹಾರ ಮುಗಿಸಿ ಕಣ್ಮರೆಯಾದ ಮೇಲೆ ಬರುವವರು ಅವರಿಗಿಂತ ಹೆಚ್ಚು ತೀವ್ರವಾಗಿ ಸರಕು ಸೇವೆಗಳನ್ನು ಮನುಷ್ಯವರ್ಗ ಪಾಲ್ಗೊಂಡು ಬಾಳಬೇಕೆಂಬ ತತ್ತ್ವವನ್ನು ಸಾರುತ್ತಾರೆ. ಈಗಾಗಲೆ ಕೈಗೊದಗಿದ ತಂತ್ರ ಸಾಧನ ಸಲಕರಣೆಗಳನ್ನು ಬಳಸಿಕೊಂಡು ಇನ್ನಷ್ಟು ಪರಿಶ್ರಮ ಮಾಡುತ್ತಾರೆ. ಈ ಚಟುವಟಿಕೆಯ ನಿದರ್ಶನಗಳನ್ನು ಈಗ ಎಲ್ಲ ಭೂಖಂಡಗಳೂ ಒದಗಿಸುತ್ತಲಿವೆ. ಈ ನಿದರ್ಶನಗಳಲ್ಲಿ ಅತ್ಯಂತ ಸ್ವತಃಸಿದ್ಧವೆನ್ನಿಸತಕ್ಕವು — ಸ್ಪರ್ಧೆ ಹೂಡಿ ಗುರಿ ಮುಟ್ಟಿ - ಮುಟ್ಟದ ಶೋಷಕ ಸಮಾಜವನ್ನು, ಎಂದರೆ, ಪಾಶ್ಚಾತ್ಯ ನಾಗರಿಕತೆಯನ್ನು, ಪರಸ್ಪರ ಸಹಕಾರ ನಿಷ್ಠ ಸಮಾಜವನ್ನಾಗಿ ಪರಿವರ್ತಿಸುವ, ಎಂದರೆ ಸಮತಾವಾದ ಇಲ್ಲವೆ ಸಮಾಜವಾದ ಪದ್ಧತಿನಿಷ್ಠ ಸಮಾಜವನ್ನಾಗಿ ಪರಿವರ್ತಿಸುವ ಪ್ರಯತ್ನಗಳು. ಹಿಂದಿನ ಕಾಲದಲ್ಲಿ ಈ ಪ್ರಯತ್ನಗಳು ಉದ್ದೇಶಬದ್ಧ ಜನಸಮುದಾಯಗಳಿಗೆ ಸೀಮಿತವಾಗಿ, ಇಲ್ಲೋ ಅಲ್ಲೋ ವಿರಳವಾಗಿ ನಡೆದುವು; ವ್ಯಾಪ್ತಿ–ಮಿತಿಯಲ್ಲಿ ಪೃಥಕ್ ಪೃಥಕ್ಕಾಗಿ ನಡೆದುವು. ಆದರೆ ಈ ಪರಿಮಿತ ಪ್ರಯತ್ನಗಳನ್ನು ಆಗ್ಗೆ ಅಧಿಕಾರಾರೂಢವಾಗಿದ್ದ ಸ್ವಲ್ಪ ಜನಾಧಿಪತ್ಯದ ಪ್ರಬಲರು ಕೈ ಬೀಸಿಯೋ ಕೈಮಾಡಿಯೋ ಅಸಮ್ಮತಿ ಸೂಚಿಸಿ ತಿದ್ದಬಹುದಾಗಿತ್ತು, ಇಲ್ಲವೆ ಉಜ್ಜಿ ಎಸೆದೋ ರದ್ದುಪಡಿಸಬಹುದಾಗಿತ್ತು.

ಈ ಹೊತ್ತು ಸಮಾಜವಾದಿ ಕಟ್ಟಡ ಪ್ರತಿಯೊಂದು ಭೂಖಂಡದಲ್ಲೂ ಆರ್ಥಿಕ ರಾಜಕೀಯ ಮತ್ತು ಸಾಮಾಜಿಕ ಜೀವನ ವಿಧಾನದ ಒಂದು ಭಾಗವಾಗಿ ಭದ್ರಸಡುತ್ತಿದೆ. ಅದರ ಸುದ್ದಿ ವೃತ್ತ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದೆ. ಅದು ಪ್ರಯೋಗದಲ್ಲಿರುವ ಪ್ರದೇಶಗಳಿಗೆ ಹೋಗಿಬರುವ ಪ್ರವಾಸಿಗಳೂ ಸಂದರ್ಶಕರೂ ಸಮೀಕ್ಷಾ ಪ್ರವಾಸವನ್ನು ಮುಗಿಸಿ, ತಾವು ಕಂಡದ್ದರ ವಿವರಗಳನ್ನು ಕೊಡುತ್ತಿದ್ದಾರೆ, ನಡೆಯುತ್ತಿರುವುದಕ್ಕೆ ತಮ್ಮ ವ್ಯಾಖ್ಯಾನವನ್ನು ನೀಡುತ್ತಿದ್ದಾರೆ. 1917ರ ವರೆಗೆ ಸಮತಾವಾದ ಕೇವಲ ಭಾವನಾಮಾತ್ರದ ತತ್ತ್ವ ಪ್ರಣಾಲಿಕೆಯಾಗಿತ್ತು; ಮತ್ತು ಬರಿಯ ಪ್ರಚಾರಕ್ಕೆ ಮಾತ್ರ ವಸ್ತುವಾಗಿತ್ತು. ಆಮೇಲೆ ವಿಸ್ತಾರವಾದ ಭೂಸ್ತರಗಳಲ್ಲಿ ತತ್ತ್ವವು ಪ್ರಯೋಗಮುಖವಾಗುವಂತೆ ಕಾರ್ಯನಡೆದು, ಫಲಗಳನ್ನು ಕೊಡಲು ಮೊದಲಾಯಿತು. ಇಂದು ಪ್ರಪಂಚ ಜನಕ್ಕೆ ಬೋಧೆಯಾಗಿರುವ ಸಂಗತಿಯೆಂದರೆ – ಲೋಕದಲ್ಲಿ ಪ್ರಾಬಲ್ಯದಲ್ಲಿರತಕ್ಕವು ಮೂರು ವಿಶ್ವರಾಷ್ಟ್ರಗಳು. ಸಂಯುಕ್ತ ಅಮೆರಿಕ, ಸಂಯುಕ್ತ ಸೋವಿಯತ್ ರಷ್ಯಾ ಮತ್ತು ಪ್ರಜಾಧಿಕಾರದ ಚೀಣ. ಈ ಮೂರು ರಾಷ್ಟ್ರಗಳಲ್ಲಿ ಮೊದಲನೆಯದು ಪಾಶ್ಚಾತ್ಯ ನಾಗರಿಕತೆಯ ಪ್ರತಿನಿಧಿ; ಮಿಕ್ಕ ಎರಡೂ ಸಮತಾವಾದದ ಪ್ರತಿನಿಧಿಗಳು.

1945ರಲ್ಲಿ ದ್ವಿತೀಯ ಮಹಾಯುದ್ಧ ಮುಗಿಯುವ ವರೆಗೆ ಸಂಯುಕ್ತ ಸೋವಿಯತ್ ರಷ್ಯಾ ಸಮತಾವಾದ ತತ್ತ್ವವನ್ನು ಪ್ರಯೋಗತಃ ರಚನೆಮಾಡಿ ಯಶಸ್ಸನ್ನು ಸಂಪಾದಿಸುವ ದೀಕ್ಷೆಯಲ್ಲಿತ್ತು. ಈ ಹೊತ್ತು ಐದಾರು ಪ್ರಪಂಚ ರಾಷ್ಟ್ರಗಳು ತಂತಮ್ಮ ಲಿಖಿತ ರಾಜ್ಯಾಂಗ ಶಾಸನಗಳಲ್ಲೂ ಇತರ ರಾಜ್ಯಶಾಸನಗಳಲ್ಲೂ ಸಮತಾವಾದಿ ಧ್ಯೇಯವನ್ನು ಆಚರಣೆಗೆತರಲು ಗೊತ್ತುಮಾಡಿಕೊಂಡಿವೆ — ಸಮತಾವಾದಿ ಕಟ್ಟಡ ಕಟ್ಟುವ ಪರಿಶ್ರಮ ಕಾಲದಲ್ಲಿ ಕೈಗೆ ತೆಗೆದುಕೊಂಡ ವಿವಿಧ ಪರಿಕರ್ಮ ತಂತ್ರ ಸಾಧನಗಳನ್ನು ಚೆನ್ನಾಗಿ ಬಳಸಿಕೊಂಡು.

ಸಾಂಪ್ರತಕಾಲದಲ್ಲಿ ಸಮತಾವಾದವನ್ನು ಪ್ರಯೋಗಮಾಡುತ್ತಿರುವ ರಾಷ್ಟ್ರಗಳೆಲ್ಲ ತತ್ಪೂರ್ವದಲ್ಲಿ ಅಭಿವೃದ್ಧಿಯ ಕೊರತೆಯನ್ನು ಅನುಭವಿಸುತ್ತಿದ್ದವು. ಅದರಲ್ಲೂ 1945ರಲ್ಲಿ ಎರಡನೆಯ ಮಹಾಯುದ್ಧ ಮುಗಿಯುವ ಹೊತ್ತಿಗಂತೂ ಈ ರಾಷ್ಟ್ರಗಳಲ್ಲಿ ಹಲವು ತೀರ ಹಿಂದುಳಿದಿದ್ದುವು. ಪೂರ್ವ ಜರ್ಮನಿ ಮತ್ತು ಜೆಕೊಸ್ಲೊವೇಕಿಯಾ ರಾಷ್ಟ್ರಗಳನ್ನು ವಿನಾಯಿಸಿದರೆ, ಏಳಿಗೆಯಲ್ಲಿ ಹಿಂದುಳಿದಿದ್ದ ಈ ದೇಶಗಳೆಲ್ಲ ವಿಶೇಷವಾಗಿ ಕೃಷಿನಿಷ್ಠವಾಗಿದ್ದುವು; ಮತ್ತು ಅಲ್ಲಲ್ಲಿಯ ಪ್ರಜಾಜನ (ಸಂಖ್ಯೆಯಲ್ಲಿ) ಪಟ್ಟಣಗಳಿಗಿಂತ ಗ್ರಾಮಾಂತರಗಳಲ್ಲೇ ಹೆಚ್ಚು ದಟ್ಟವಾಗಿ ನೆಲಸಿ ಬಾಳುತ್ತಿದ್ದರು. ಸ್ವರಾಷ್ಟ್ರಗಳಲ್ಲಿ ಯಾದವೀ ಕಲಹಗಳಿಂದಲೂ ಅಂತರರಾಷ್ಟ್ರೀಯ ಯುದ್ಧಗಳಿಂದಲೂ ನಷ್ಟಪಡುತ್ತ ಸತ್ತ್ವವುಡುಗಿ, ಬೇಗೆಯಲ್ಲಿ ಬಾಳುತ್ತ, ಸಾಮ್ರಾಜ್ಯ ರಾಷ್ಟ್ರಗಳಿಂದ ಸುಲಿಗೆ ಕಿರುಕುಳ

ಗಳಿಗೆ ಬಲಿಸಿಕ್ಕಿ ಕುಗ್ಗುತ್ತ ಇದ್ದ ಈ ಎಲ್ಲ ದೇಶಗಳ ಜನತೆ ಸಮತಾವಾದಿ ತತ್ತ್ವಗಳು ಅನ್ಯದೇಶಗಳಲ್ಲಿ ಫಲಪ್ರದವಾಗಿ ಪ್ರಯೋಗವಾಗುತ್ತಿರುವುದನ್ನು ತಿಳಿದು ಎಚ್ಚತ್ತು, ಅಲ್ಪಸಂಖ್ಯಾಕರಾದರೂ ಆಮೂಲಾಗ್ರ ಸುಧಾರಣೆಗಳಿಂದ ಮಾತ್ರ ಸದ್ಯದ ಸಂಕಟದ ಪರಿಸ್ಥಿತಿಯಿಂದ ಪಾರಾದೇವೆಂದು ರ್‍ಯಾಡಿಕಲ್ ಮನೋಧರ್ಮವನ್ನು ಬೆಳಸಿಕೊಂಡರು. ವೀರಭಟೋಚಿತವಾದ ರೀತಿಯಲ್ಲಿ ಸಂಘಟನೆಮಾಡಿಕೊಂಡು ಸಮತಾವಾದಿ ತತ್ತ್ವಗಳನ್ನು ಕಾರ್ಯಕ್ಷೇತ್ರದಲ್ಲಿ ಪ್ರಯೋಗ ಮಾಡುವ ಘಟ್ಟವನ್ನು ಮುಟ್ಟಿದರು. ಈ ವೀರಭಟೋಚಿತ ಅಲ್ಪಸಂಖ್ಯಾಕ ಜನಸಮುದಾಯದ ಸದಸ್ಯರಲ್ಲಿ ಬಹುಶಃ ಎಲ್ಲರೂ ಪೂರ್ವ ಪದ್ಧತಿಯ ಆಡಳಿತ ದೃಷ್ಟಿಯಲ್ಲಿ ಯಃಕಶ್ಚಿತ್ ಜನರಾಗಿದ್ದವರು. ಅನೇಕ ಸಂದರ್ಭಗಳಲ್ಲಿ ಅವರು ರ್‍ಯಾಡಿಕಲ್ ಮನೋವೃತ್ತಿಯವರೆಂದು ಅಧಿಕಾರಿಗಳ ಬಹಿಷ್ಕಾರಕ್ಕೂ ಬಗೆ ಬಗೆಯ ಉಪದ್ರವಗಳಿಗೂ ಗುರಿಯಾಗಿದ್ದವರು.

ಜನರು ವಿಚಾರಪರರಾಗಿ ರ್‍ಯಾಡಿಕಲ್ ತತ್ತ್ವಗಳಿಗೆ ಇಂಬುಕೊಡುತ್ತಾರಲ್ಲ, ಇವರ ದಾರಿ ಯಾವುದು? ಸ್ವಲ್ಪ ಜನಾಧಿಪತ್ಯದ ದಬ್ಬಾಳಿಕೆಯನ್ನು ಕುರಿತು ಅಧ್ಯಯನಮಾಡಿ, ತರುವಾಯ ಚಳವಳಿಯ ಚಟುವಟಿಕೆಯಲ್ಲಿ ಇರುತ್ತ ಇರುತ್ತ, ರ್‍ಯಾಡಿಕಲ್ ಪಂಥಿಗಳ ಮನಸ್ಸಿಗೆ ಕೆಲವು ಪರಿವರ್ತನ ಸೂತ್ರಗಳು ಹೊಳೆದುವು. ಅವು ಅನುಷ್ಠಾನ ಯೋಗ್ಯಗಳೆಂದು ಮನಸ್ಸಿಗೆ ಖಚಿತವಾಗಿ, ಹಳೆಯ ಪದ್ಧತಿಗಳಲ್ಲಿ ನಂಬಿಕೆ ಕದಲಿದಾಗ, ಸಮತಾವಾದಿ – ಸಮಾಜವಾದಿ (ಸೋಷಲಿಸ್ಟ್ – ಕಮ್ಯುನಿಸ್ಟ್) ತತ್ತ್ವವು ವ್ಯವಹಾರ ಸಾಧ್ಯವಾದ ಪರ್ಯಾಯ ರೂಪದಲ್ಲಿ ರೂಢಿಗೆ ತಂದುಕೊಳ್ಳಬಹುದಾದ ಜೀವನ ವಿಧಾನವೆಂದು ಅವರು ನಂಬಿಕೊಳ್ಳುತ್ತಾರೆ. ಈ ನೂತನ ವಿಧಾನವನ್ನು ಜಾರಿಗೆ ತಂದುಕೊಳ್ಳಲು ಅವರು ಪರಿಶುದ್ಧವಾದ ಅಂತಃಕರಣದಿಂದ ವ್ರತತೊಟ್ಟು, ತ್ರಿಕರಣಗಳನ್ನು ಹೂಡಿ, ಕಾರ್ಯರಂಗಕ್ಕೆ ಇಳಿಯುತ್ತಾರೆ.

ಸಮತಾವಾದಿ ಚಳವಳಿ ಅಸ್ತಿತ್ವಕ್ಕೆ ಬಂದ ಇದುವರೆಗಣ ಅವಧಿಯಲ್ಲಿ ಪರಂಪರೆಯ ಭಕ್ತರ ಅಸಮ್ಮತಿಗೂ ಹಲಬಗೆಯ ಉಪದ್ರವಗಳಿಗೂ ಅದು ಗುರಿಯಾಗಿದೆ. ಇವರು ಶೀತಲ ಸಮರದಂಥ ಕಿರುಕುಳದ ಕುತಂತ್ರ ಸಾಧನಗಳನ್ನು ಬಳಸಿಯೋ ಸೈನ್ಯ ಶಕ್ತಿಯನ್ನು ಪ್ರಯೋಗಿಸಿ ಉಷ್ಣ ಸಮರವನ್ನು ಹೂಡಿಯೋ–ಸಮತಾವಾದಿ ಚಳವಳಿ ಕಟ್ಟಿದ ಹೊಸ ಸಮಾಜವನ್ನು ನಾಶಮಾಡಲು ಸಂತತ ಪ್ರಯತ್ನದಲ್ಲಿ ತೊಡಗಿ ವಿರೋಧ ಮಾಡುತ್ತಲೇ ಬಂದಿದ್ದಾರೆ. ನೂತನಕ್ರಾಂತಿ ನಡೆಯುತ್ತಿರುವ ಸಮಾಜವಾದಿ ಕೇಂದ್ರಗಳು ಅಂತಶ್ಶತ್ರುಗಳ ದಮನಕಾರಕ ಪೀಡೆಗೂ ಬಹಿಶ್ಶತ್ರುಗಳ ಮುತ್ತಿಗೆಯ ಹಾವಳಿಗೂ ಪಕ್ಕಾಗಿ, ಕ್ರಾಂತಿಕಾರರು ತಮ್ಮ ಧ್ಯೇಯಸಾಧನೆಗೆ ತುಂಬ ಬೆಲೆ ತೆರಬೇಕಾಗಿ ಬಂತು. ಕೆಲವು ಸಂದರ್ಭಗಳಲ್ಲಿ ಪ್ರತಿಕ್ರಾಂತಿಕಾರರ ಚಟುವಟಿಕೆಗಳಿಂದ

ಕ್ರಾಂತಿಕಾರರೂ ಅವರ ಪರವಾಗಿ ವಾದಿಸುತ್ತ ಕಾರ್ಯರಂಗದಲ್ಲಿದ್ದ ಜನಸಮೂಹ ಗಳೂ ಒರಸಿಹಾಕಲ್ಪಟ್ಟದ್ದು ಉಂಟು.

ಇಷ್ಟೆಲ್ಲ ಪ್ರತಿಕೂಲಗಳಿದ್ದರೂ ಕಳೆದ ಎರಡು ದಶಕಗಳ ಅವಧಿಯಲ್ಲಿ ಜನ ಜೀವನಹಿತಕ್ಕಾಗಿ ಸಮಾಜಸ್ವಕರಣದ (ನ್ಯಾಷನಲೈಸೇಷನ್) ಚಳವಳಿ ಬಿರುಸಿನಲ್ಲಿ ನಡೆದು, ಅದರ ದೊಡ್ಡಲೆಗಳು ಹಿಂದಿನ ದಶಕಗಳಲ್ಲಿ ಏರಿದ್ದದ್ದಕ್ಕಿಂತ ಹೆಚ್ಚು ಎತ್ತರಕ್ಕೆ ಏರಿ, ಬಹು ವಿಸ್ತಾರವಾದ ಪ್ರದೇಶಗಳಲ್ಲಿ ಉರುಳಿ, ಕ್ರಾಂತಿ ಸಂದೇಶಕ್ಕೆ ಜನಸಮ್ಮತಿ ಯನ್ನೂ ಸಹಕಾರವನ್ನೂ ಪಡೆದುವು.

ಸಮಾಜಸ್ವಕರಣ ಈಗ ಶಿಖರವನ್ನು ಮುಟ್ಟಿ, ಬುಡದಿಂದ ತುದಿವರೆಗೆ ತನ್ನ ಬೆಳವಣಿಗೆಯ ಸ್ವರೂಪವನ್ನು ಸ್ಪಷ್ಟವಾಗಿ ಪ್ರಕಟಪಡಿಸುತ್ತಿದೆ. ಅದರ ಸಿದ್ಧಿ ವಿವರಗಳು ಯಾವುವೆಂದರೆ – (1) ಸಮತಾವಾದವನ್ನು ಕಟ್ಟಿ ರಚನೆಯನ್ನು ದೃಢಪಡಿಸಲು, ಕಳೆದ ಎರಡು ಶತಮಾನಗಳಲ್ಲಿ ಬಂಡವಾಳಶಾಹಿಯ ನೇತೃತ್ವದಲ್ಲಿ ಕೈಗೊಂಡಿದ್ದ ಸಿದ್ಧಿ ಗಳಲ್ಲಿ ಕೆಲವನ್ನು ಎರವಲು ಪಡೆದು ತಿದ್ದಿಕೊಂಡು ಬಳಸಲಾಯಿತು – ಭಾವನೆಗಳು, ಕಾರ್ಯಸೂತ್ರಗಳು, ನಿರ್ಮಾಣಗಳು, ಶೋಧಿತವಸ್ತುಗಳು, ಕಾರ್ಯ ಪ್ರಯೋಗದ ತಂತ್ರಗಳು, ಆಚರಣೆಗಳು, ಸಲಕರಣೆಗಳು, ಪದ್ಧತಿ ಸಂಸ್ಥೆಗಳು – ಇವೆಲ್ಲ ಬಂಡವಾಳ ಶಾಹಿಯಲ್ಲೂ ಒಂದಲ್ಲ ಒಂದು ರೂಪದಲ್ಲಿ ಇದ್ದವೇ. ಆದರೆ ಕ್ರಾಂತಿಕಾರರು ಹಳೆ ಯವು ಎಂದು ಇವನ್ನು ಪೂರಾ ತೊರೆಯದೆ, ಉಪಯುಕ್ತಾಂಶಗಳನ್ನು ಗ್ರಹಿಸಿ, ಪರಿಷ್ಕರಿಸಿ, ನೂತನ ಸಮಾಜವಾದಿ ಕಟ್ಟಡಕ್ಕೆ ಬಳಸಿಕೊಂಡರು. (2) ನಿರ್ಮಾಣಗಳು, ಶೋಧಿತವಾದ ಅನಾವೃತ ವಸ್ತುಗಳು, ಜಾಗರೂಕ ಯೋಜನೆಗಳು, — ಇವೆಲ್ಲ ಆರ್ಥಿಕ ಕ್ಷೇತ್ರದಲ್ಲಿ ದಾರ್ಢ್ಯಸ್ಥಿರತೆಗಳನ್ನು ತಂದುವು; (3) ವಸ್ತೂತ್ಪಾದನೆಯಲ್ಲಿ ಏರಿಕೆಯಾಗಿ, ಪುಷ್ಕಲತೆಯ ಪರಿಮಾಣ ಅತಿಶಯವಾಗಿ ಹೆಚ್ಚಿ, ವೆಚ್ಚವಾದ ಮೇಲಣ ಉಳಿಕೆಗಳು (Surplus) ಹೆಚ್ಚಿನ ಬಂಡವಾಳದ ರೂಪದಲ್ಲೂ, ಪರಿಶ್ರಮಾನಂತರ ವಿಶ್ರಾಂತಿಯ ರೂಪದಲ್ಲೂ ತೋರಿ, ಇವೆಲ್ಲ ಸಮತಾವಾದಿ ಯೋಜನೆಗಳಿಗೆ ಲಭ್ಯವಾದ ಯಶಸ್ಸನ್ನು ಸೂಚಿಸಿದುವು. (4) ಗೊಂದಲದ ಪರಿಸ್ಥಿತಿಯನ್ನು ಹಾದು, ಜನಜಂಗು ಳಿಯ ಮಟ್ಟದಲ್ಲಿ ದಂಗೆಗಳು ನಡೆದು, ವಸಾಹತು ಪ್ರದೇಶಗಳು ಬಂಡವಾಳಶಾಹಿಯ ಕಪಿಮುಷ್ಟಿಯಿಂದ ಬಿಡುಗಡೆ ಪಡೆದುವು. (5) ಸಂಸ್ಕೃತಿ ವಿನಿಮಯದ್ವಾರಾ ಒಂದೊಂದು ಸಮಾಜವಾದಿ ರಾಷ್ಟ್ರವೂ ಪ್ರಾದೇಶಿಕ ಸಂಕುಚಿತ ದಶೆಯನ್ನು ದಾಟಿ, ಸಂಸ್ಕೃತಿ ಕ್ಷೇತ್ರದಲ್ಲಿ ವೈಶಾಲ್ಯವನ್ನು ಸಾಧಿಸಿದುವು.

ಸಮಾಜದ ಈ ಐದು ಶಕ್ತಿಗಳ ಸಂಗಮವು ಯಂತ್ರೋದ್ಯಮಗಳಲ್ಲಿ ದುಡಿಯುವ ಕಾರ್ಮಿಕರ ಭೃತಿಸಂಪಾದನೆಯಲ್ಲಿ ಏರಿಕೆಯನ್ನು ತಂದು, ಅವರ ಜೀವನದ ಮಟ್ಟ

ವನ್ನು ಉತ್ತಮಪಡಿಸಿತು; ಹಾಗೆಯೇ ಕೃಷಿಕ್ಷೇತ್ರದಲ್ಲಿ ದುಡಿಯುವ ಬೇಸಾಯಗಾರರ ಜೀವನದ ಮಟ್ಟವನ್ನೂ ಸ್ವತಂತ್ರ ಭೂವ್ಯವಸಾಯ ಮಾಡುವ ಸಣ್ಣಸಣ್ಣ ಜಮೀನ್ದಾರರ ಹಾಗೂ ಕುಶಲ ಕಲೆಗಳಲ್ಲಿ ನಿರತರಾದ ವೃತ್ತಿಬಾಂಧವರ ಜೀವನದ ಮಟ್ಟಗಳನ್ನೂ ಉತ್ತಮಪಡಿಸಿತು. ಅದರಲ್ಲೂ ಪರಿಕರ್ಮತಂತ್ರದಲ್ಲಿ (ಟೆಕ್ನಾಲಜಿ) ವ್ಯವಸಾಯ ಮಾಡುವ ಮೇಧಾವಿಗಳ ವರ್ಗವು ಸ್ವಾಭಿಪ್ರಾಯ ನಿರೂಪಣೆಗೂ ಸ್ವಾತ್ಮನಿರ್ಣಯ ಸ್ವಾತಂತ್ರ್ಯಕ್ಕೂ ಅವಕಾಶ ಪಡೆಯಲು, ಮತ್ತು ಕೇಂದ್ರಾಧಿಕಾರ ದಲ್ಲಿರುತ್ತ ಅದರ ನಿರ್ದೇಶನದಲ್ಲಿ ನಡೆಯುವ ಯೋಜನೆಗೆ ಸಹಕಾರ ನೀಡಲು, ದ್ವಿಮುಖವಾಗಿ ಪ್ರಯತ್ನಿಸಿ ತಮ್ಮ ಜೀವನದ ಮಟ್ಟವನ್ನು ಉತ್ತಮಪಡಿಸಿಕೊಳ್ಳುವ ಅನುಕೂಲಗಳನ್ನು ಕಂಡರು.

ಇವೊತ್ತು ಸಮತಾವಾದವು ಸೋವಿಯತ್ (ಯೂನಿಯನ್) ಒಕ್ಕೂಟದಲ್ಲಿಯೂ ಪೂರ್ವಯೂರೋಪಿನ ಸಮತಾವಾದಿ ರಾಷ್ಟ್ರಗಳಲ್ಲಿಯೂ ಆಚರಣೆಯಲ್ಲಿದೆ. ಚೀಣಾ, ಉತ್ತರ ಕೋರಿಯಾ, ಉತ್ತರ ವಿಯತ್ನಾಮ್, ಮತ್ತು ಮಂಗೋಲಿಯಾ-ಈ ದೇಶಗಳಲ್ಲಿಯೂ ಈ ತತ್ತ್ವ ಪ್ರಯೋಗ ನಡೆಯುತ್ತಲಿದೆ. ಈ ದಿಕ್ಕಿನಲ್ಲಿ ಬ್ರಿಟಿಷ್ ಗಯಾನಾ ಪ್ರದೇಶವೂ ಸಾಕಷ್ಟು ಮುನ್ನಡೆದಿದ್ದರೂ ಪಶ್ಚಿಮಾರ್ಧ ಭೂಗೋಲದಲ್ಲಿ ಸಮತಾವಾದ ಪ್ರಯೋಗಕ್ಕೆ ಪ್ರತಿಜ್ಞಾಬದ್ಧವಾಗಿ ತ್ರಿಕರಣಪೂರ್ವಕವಾದ ಶ್ರದ್ಧೆಯಿಂದ ಕಾರ್ಯಮಾಡುತ್ತಿರುವ ಸೋಷಲಿಸ್ಟ್ ದೇಶವೆಂದರೆ ಕ್ಯೂಬಾ ದ್ವೀಪವೊಂದೇ.

ಸಮತಾವಾದವನ್ನು ಆಚರಣೆಗೆ ತಂದುಕೊಳ್ಳುತ್ತಿರುವ ದೇಶಗಳ ಹೊರಗಡೆ ಈ ನವೀನಜೀವನ ವಿಧಾನವನ್ನು ಕುರಿತ ತಿಳಿವಳಿಕೆ ಇಂಡೊನೇಷ್ಯಾ, ಇಂಡಿಯಾ (ಭರತಖಂಡ), ಆಲ್ಜೀರಿಯಾ ದೇಶಗಳಲ್ಲೂ, ಮತ್ತು ಈಚೆಗೆ ಸಾಮ್ರಾಜ್ಯವಾದಿಗಳ ಪಟ್ಟಾಳಿಕೆಯಿಂದ ಬಿಡುಗಡೆ ಪಡೆದ ಇತರ ಹಲವು ದೇಶಗಳಲ್ಲೂ ಹರಡಿ, ಆಯಾದೇಶಗಳು ಪ್ರಯೋಗ ಪರೀಕ್ಷೆಗಳನ್ನು ನಡಸಿ, ಅದರ ಸಮಾಜೋಪಕಾರಕ ಲಕ್ಷಣಗಳನ್ನು ಗ್ರಹಿಸುತ್ತಿವೆ; ಮತ್ತು ಈ ದೇಶಗಳಲ್ಲಿ ಹಲವು ಗಣರಾಜ್ಯಗಳಾಗಿ (ರಿಪಬ್ಲಿಕ್) ಬೆಳೆಯುತ್ತ, ತಮ್ಮ ದೇಶಗಳನ್ನು ಪ್ರಜಾ ಪಾರಮ್ಯ ಹಾಗೂ ಆತ್ಮನಿರ್ಣಯಾಧಿಕಾರಗಳ ಕಷ್ಟಮಾರ್ಗದಲ್ಲಿ ದಿಟ್ಟತನದಿಂದ ನಡಸುತ್ತಿವೆ.

ರ್‍ಯಾಡಿಕಲ್ ಸೋಷಲಿಸ್ಟರು (ಎಂದರೆ, ಆಮೂಲಾಗ್ರ ಸುಧಾರಣೆಯಲ್ಲಿ ನಿಷ್ಠರಾದ ಸಮತಾವಾದಿಗಳು), 1917ರ ನಂತರ ಸಂಕ್ಷೋಭೆ ತುಂಬಿದ ಸಂವತ್ಸರಗಳನ್ನು ಸ್ವಾಗತಿಸಿ, ಮುನ್ನೋಟ ಬೀರುತ್ತ, ತಾವು ಪ್ರತಿಪಾದಿಸುತ್ತಿರುವ ನೂತನ ಜೀವನ ವಿಧಾನದ ಅವಲಂಬನೆಯಿಂದ ಮನುಷ್ಯಕುಲದ ಸಂಸ್ಕೃತಿಯ ಮಟ್ಟ ಮೇಲ್ಪಡುವುದೆಂದು ಭರವಸೆಯಿಂದ ಹಾರೈಸಿದರು. ಅವರ ನಿರೀಕ್ಷೆ ಸರಿಯೆಂದು ಅದಕ್ಕೆ ಅನುಭವದ ಸಮರ್ಥನೆ ಈಗ ದೊರೆಯುತ್ತಿದೆ.

ಸಮತಾವಾದವು ಇಂದು ಜನತೆಯ ಚಳವಳಿಯ ಸ್ತರವನ್ನು ದಾಟಿ, ಹೆಚ್ಚು ಪರಿಣಾಮಕಾರಿ ರಚನಾತ್ಮಕ ಸ್ತರದಲ್ಲಿ ಆಚರಣೆಯಲ್ಲಿದೆ. ಅದೋ-ಇದೋ ಎಂಬ ನಿಷ್ಠೆಯನ್ನೊಪ್ಪಿಸುವ ವಿಷಯದಲ್ಲಿ ಡೋಲಾಯಮಾನವಾಗಿರುವ ಜನ ಸಮುದಾಯ ತನ್ನ ಮುಂದೆ ಆಯ್ಕೆಗಿರುವ ಸಾಮ್ರಾಜ್ಯವಾದ–ಸಮತಾವಾದಗಳೆರಡರಲ್ಲಿ ಒಂದನ್ನು ಆಯ್ದುಕೊಳ್ಳುವ ಹೊತ್ತು ಬಳಿಸಾರಿದೆ. ಆಯ್ಕೆಯಲ್ಲಿ ಅವರು ಒಂದು ಗೊತ್ತಾದ ತೀರ್ಮಾನಕ್ಕೆ ಬರಲು ಅನುಕೂಲಿಸುವಂತೆ, ಒಂದು ಕಡೆ ಸಾಮ್ರಾಜ್ಯವಾದದ ವೈಫಲ್ಯವನ್ನು ಸೂಚಿಸುವ ಪಟ್ಟಿಯೂ ಇನ್ನೊಂದು ಕಡೆ ಸಮಾಜವಾದದ ಯಶಸ್ಸನ್ನು ತೋರಿಸುವ ಪಟ್ಟಿಯೂ ಅವರ ಅಧ್ಯಯನಕ್ಕೂ ವಿಚಾರಕ್ಕೂ ಪಕ್ಕಪಕ್ಕದಲ್ಲೇ ಸವಿವರವಾಗಿ ಸ್ಪಷ್ಟನಿರೂಪಣೆಯಾಗಿ ಸಿಕ್ಕುತ್ತದೆ. ದರೋಡೆ, ವಿನಾಶ, ಶೋಷಣೆ ಇವು ಸಾಮ್ರಾಜ್ಯವಾದಿಗಳ ಪಟ್ಟಿಯಿಂದೆದ್ದು ಕಣ್ಣು ಕುಕ್ಕಿದರೆ, ಇದುವರೆಗೆ ಬೆಳೆಯಲು ಅವಕಾಶಗಳೂ ಅನುಕೂಲಗಳೂ ಇಲ್ಲದೆ ಹಿಂದುಳಿದಿದ್ದ ಜನಕ್ಕೆ ಗಣ್ಯತೆ ಗೌರವಗಳನ್ನೂ ಸ್ಥಾನಮಾನಗಳನ್ನೂ ತಂದು ಕೊಟ್ಟ ರ್ಯಾಡಿಕಲ್ ಸೋಷಲಿಸ್ಟರ ಯಶಸ್ಸು ಬದುಕಿಗೆ ಉತ್ಸಾಹವನ್ನೂ ನವಸ್ಫೂರ್ತಿಯನ್ನೂ ತುಂಬುತ್ತದೆ. ಆದದ್ದರಿಂದಲೇ ಹಿಂದುಳಿದ ರಾಷ್ಟ್ರಗಳ ಒಲವು, ಪಕ್ಷಪಾತ, ಕ್ರಮವಾಗಿ ಸಮತಾವಾದದ ಕಡೆಗೆ ಓಲುತ್ತಿರುವುದು ಹೆಚ್ಚು ಹೆಚ್ಚು ಖಚಿತವಾಗುತ್ತಿದೆ.

ಜನದೊಟ್ಟಿನ ಪುರೋಭಿವೃದ್ಧಿಗೆ ಬೇಕಾದ ಜನದೊಟ್ಟಿನ ಚಳವಳಿಯ ಮಜಲನ್ನು ದಾಟಿ, ಸಮಾಜವಾದವು ಕೆಲವು ರಾಷ್ಟ್ರಗಳಲ್ಲಿ ಅತಿಶಯ ಪರಿಮಾಣದಲ್ಲಿ ರಚನಾತ್ಮಕ ಕಾರ್ಯಗಳನ್ನು ಸಾಧಿಸಿ, ಇತರ ದೇಶಗಳಿಗೆ ಸ್ಫೂರ್ತಿ ಚೋದನೆಯನ್ನು ಕೊಟ್ಟಿದೆ. ಸಾಮ್ರಾಜ್ಯವಾದದ ಕೊನೆಗಾಣ್ಕೆಗೂ, ಸ್ವಲ್ಪ ಜನದ ಅನುಭವದಲ್ಲಿರುವ ವಿಶೇಷ ಸೌಲಭ್ಯಗಳ ಭೋಗ ವಿಷಯದಲ್ಲಿ ನಿಯಂತ್ರಣ ಪ್ರಯೋಗಕ್ಕೂ, ಜನದೊಟ್ಟಿನ ಏಳಿಗೆಗೆ ಅವಶ್ಯವಾದ ಅವಕಾಶಗಳನ್ನು ಸಾರ್ವತ್ರಿಕವಾಗಿ ವಿಸ್ತರಿಸುವುದಕ್ಕೂ ನಡೆಯುತ್ತಿರುವ ಸಮತಾವಾದಿ ಪ್ರಯತ್ನಗಳನ್ನು ಕಂಡು ಭೂಖಂಡಗಳೈದರಲ್ಲೂ ಜನ ಸಂಭ್ರಮದಿಂದ ಎಚ್ಚೆತ್ತು, ಜಡತೆಯನ್ನೂ ನಿದ್ರಾಲಸ್ಯಗಳನ್ನೂ ತೊರೆದು ಲವಲವಿಕೆಯಿಂದ ದೇಶಕಾರ್ಯಗಳಲ್ಲಿ ತೊಡಗುತ್ತಿದ್ದಾರೆ. ಲಕ್ಷೋಪಲಕ್ಷ ಯಂತ್ರೋದ್ಯಮ ಕಾರ್ಮಿಕರೂ ಭೂವ್ಯವಸಾಯದ ಕೃಷಿಕಜನವೂ ಹಸಿವು, ಅಜ್ಞಾನ ರೋಗ, ಹೊಟ್ಟೆಬಟ್ಟೆ ಬೇಡುಗಳ ಪಾಡಿಗೆ ಸಾಕಾಗದ ಉದ್ಯೋಗ ಮತ್ತು ಇತರ ದೈನ್ಯಕಾರಕ ಸಂದರ್ಭಗಳನ್ನು ಕಂಡ ರ್ಯಾಡಿಕಲ್ ಪಂಥದವರು ತಡೆಯಲಾರದೆ, ಇತ್ತೀಚಿನವರೆಗೆ ಪ್ರಶ್ನಾರ್ಥಕವಾಗಿ ಉದ್ಗರಿಸುತ್ತಿದ್ದರು – “ಇನ್ನೆಷ್ಟು ಕಾಲ ಹೀಗೆ? ಈ ಭೀಕರ ಸಂದರ್ಭಗಳಿಗೆ ಅವರು ಇನ್ನೆಷ್ಟುಕಾಲ ಸಿಕ್ಕಿ ಪೇಚಾಡಬೇಕು? ಮುಗಿಯಲಾರದೋ ಎಂಬಂತಿರುವ ಅವರ ತೋರಿಕೆಯ ತಾಳ್ಮೆ ಕೊನೆಗೆ ಸವೆದುಹೋಗದೆ ?” ಎಂದು ಮುಂತಾಗಿ.

ಈಹೊತ್ತು ಪ್ರಪಂಚದ ಉದ್ದ ಅಗಲಕ್ಕೂ ರ್‍ಯಾಡಿಕಲ್ ಪಂಥದವರು ಧನ್ಯತಾ ಭಾವದಿಂದ ಉದ್ಗರಿಸುತ್ತಿದ್ದಾರೆ – "ಕಡೆಗೂ ಪರಿಣಾಮವು ರಮಣೀಯವಾಯಿತು! ಜನವರ್ಗ ತಮ್ಮ ಪ್ರತಿಭಟನೆಯನ್ನು ಸಾರಿ ಹೇಳುತ್ತಿದ್ದಾರೆ; ಯುಗಾಂತರಗಳಿಂದ ತಮ್ಮ ಬೀಳುಪಾಡಿಗೆ ಕಾರಣವಾಗಿದ್ದ ಹೀನ ಪದ್ಧತಿಯ ಬಗ್ಗೆ ತಮ್ಮ ಧೋರಣೆ ಯೇನೆಂದು ಸ್ಪಷ್ಟಪಡಿಸುತ್ತಿದ್ದಾರೆ."

ತೀರ ತಡವಾಗಿ ಬಿಡುಗಡೆಯ ನೇಸರು ಮೂಡಿದನು; ಉಪಯುಕ್ತತೆ ಕಳೆದು ಕೊಂಡು ಆತ್ಮಘಾತಕವಾಗಿ ವರ್ತಿಸುತ್ತಿದ್ದ ಸಮಾಜದ ಮರಣಾವಶೇಷಗಳಿಂದ ಹೊಸ ಪ್ರಪಂಚವು ಜೀವತಳೆದು ಎದ್ದುನಿಲ್ಲುತ್ತಿದೆ.

## ಪುದುಬಾಳ್ಕೆಯ ಒಂದು ಪೀಳಿಗೆ

ಬಂಡವಾಳಶಾಹಿಯೇ ಪ್ರಬಲವಾಗಿದ್ದ ಪ್ರಪಂಚದಲ್ಲಿ ಸೋವಿಯತ್ ಒಕ್ಕೂಟ ಕೈಗೊಂಡ ಸಮತಾವಾದಿ ರಚನೆಯೆಂಬುದು ಅಜ್ಞಾತವೂ ಪರಿಶೋಧನೆಗೆ ಇನ್ನೂ ಸಿಕ್ಕದೆ ಇರತಕ್ಕದ್ದೂ ಆದ ಅರಣ್ಯ ಪ್ರದೇಶದಲ್ಲಿ ಸೋಷಲಿಸ್ಟರು ನಂಬಿಕೆಯಿಂದ ನಡಸಿದ ಆದಿಪ್ರಯೋಗ ಪರೀಕ್ಷಾ ಸಾಹಸ. ಮೊದಲಿನಿಂದ ಬೋಲ್ಷೆವಿಕ್ ಸಾಹಸವನ್ನು ಕುರಿತು ಅಜ್ಞಾನ, ಭಯ, ಪ್ರಕಟವಾಗಿ ವಿರೋಧ–ಇವು ಘಂಟಾಘೋಷ ವಿಧಾನದಲ್ಲಿ ಸರ್ವತ್ರ ಪ್ರಚುರವಾಗಿದ್ದ ಪ್ರತಿಕ್ರಿಯೆ. ಜಗದ್ರಾಷ್ಟ್ರಗಳು ಸೋವಿಯತ್ ಒಕ್ಕೂಟಕ್ಕೆ ರಾಯಭಾರ ಮನ್ನಣೆಯನ್ನು ನಿರಾಕರಿಸಿದುವು; ಸಂಪರ್ಕಕ್ಕೆ ಅನರ್ಹವಾದ, 'ಪರಯ' ರಾಷ್ಟ್ರವೆಂಬಂತೆ 'ಬಾಯ್ಕಾಟ್' ಮಾಡಿದುವು; ತಕ್ಸೀರು ಮಾಡಿದವರ ಪಟ್ಟಿಗೆ ಸಮತಾ ವಾದಿಗಳನ್ನು ದಾಖಲುಮಾಡಿದುವು; ಮತ್ತು ಹೊಸದಾಗಿ ಸ್ಥಾಪಿತವಾದ ಸಮತಾವಾದಿ ರಾಷ್ಟ್ರಗಳಿಗೆ ಸಾಮಾನ್ಯವಾಗಿ ನೀಡುವ ಸೌಕರ್ಯಗಳನ್ನೂ ನೀಡದೆ ತಿರಸ್ಕರಿಸಿದವು.

ವಿರೋಧಿ ಸೈನ್ಯಗಳು ಎರಡು ಸಂದರ್ಭಗಳಲ್ಲಿ ರಷ್ಯಕ್ಕೆ ದೊಡ್ಡ ಪ್ರಮಾಣದಲ್ಲಿ ಮುತ್ತಿಗೆ ಹಾಕಿದ್ದುಂಟು. ಮೊದಲನೆಯ ಮುತ್ತಿಗೆ ಕ್ರಾಂತಿ ನಡೆದ ಕೂಡಲೆ ನಡೆಯಿತು. ಅದು ವ್ಯವಸ್ಥೆಯಿಂದ ನಡೆದದ್ದಲ್ಲ; ಮತ್ತು ಮುತ್ತಿಗೆಗೆ ಹೊಣೆ ಹೊತ್ತ ವರು ಸರಿಯಾಗಿ ಕಾರ್ಯನಿರ್ವಾಹಮಾಡಲಾರದೆ ದುಡುಕಿ ಪ್ರಮಾದ ಮಾಡಿದರು. ಅಷ್ಟೇ ಅಲ್ಲ, ಬೋಲ್ಷೆವಿಕ್ ರಾಷ್ಟ್ರದಲ್ಲಿ ಪಶ್ಚಿಮವು ತಲೆ ಹಾಕುವುದೇಕೆ ಎಂದು ಪ್ರಪಂಚದ ಆದ್ಯಂತವೂ ಆಕ್ರಮಣಕ್ಕೆ ವಿರೋಧವೇ ಪ್ರಕಟವಾಯಿತು. ಆದರೆ 1941 ರ ಜೂನ್ ತಿಂಗಳಲ್ಲಿ ನಡೆದ ಎರಡನೆಯ ಮುತ್ತಿಗೆಗೆ ತಕ್ಕ ವ್ಯವಸ್ಥೆಯನ್ನು ಮಾಡಿ ಕೊಂಡಿತ್ತು. ಪಶ್ಚಿಮ ಪ್ರಪಂಚದ ರಾಷ್ಟ್ರಗಳ ಸಹಕಾರವೂ ಮುತ್ತಿಗೆಗಾರರಿಗೆ ಒದಗಿ ಬಂತು. ಸೈನಿಕ ಇತಿಹಾಸದಲ್ಲಿ ಅತ್ಯಂತ ದೊಡ್ಡದೂ ಶ್ರೇಷ್ಠತಮ ಸಶಸ್ತ್ರ ದಂಡ ಯಾತ್ರೆಯನ್ನಿಸಿದ್ದೂ ಆಯಿತು ಈ ಎರಡನೆಯ ಮುತ್ತಿಗೆ.

ಎರಡು ವರ್ಷಗಳಕಾಲ ಆಕ್ರಮಣಕಾರ ಸೈನಿಕರು ಸೋವಿಯತ್ ರಕ್ಷಕದಳಗಳನ್ನು ಲೆನಿನ್‌ಗ್ರಾಡಿನ ಸುತ್ತಮುತ್ತಿನ ವರೆಗೂ, ಆಮೇಲೆ ಮಾಸ್ಕೋ ಹಾಗೂ ಸ್ಟಾಲಿನ್‌ಗ್ರಾಡ್ ಪಟ್ಟಣಗಳ ವರೆಗೂ ಅಟ್ಟಿಸಿಕೊಂಡು ಹೋದರು. ಅಪಾರವಾದ ನಷ್ಟಗಳನ್ನೂ, ನಂಬುವುದಕ್ಕೆ ಆಗದೆಂಬಷ್ಟು ಕಷ್ಟಗಳನ್ನೂ ಅನುಭವಿಸಿ ರಷ್ಯದ ಸಂರಕ್ಷಕ ದಳಗಳು ತಮ್ಮ ವ್ಯೂಹ ರೇಖೆಗಳನ್ನು ಕಾಪಾಡಿಕೊಂಡು, ಆಕ್ರಮಣಕಾರರನ್ನು ಸದೆಬಡಿದು ಹಿಮ್ಮೆಟ್ಟಿಸಿ, ಸ್ವರಾಷ್ಟ್ರದ ಗಡಿಗಳಿಂದಾಚೆಗೆ ಓಡಿಸಿದರು.

1946 ರಿಂದ ಮೊದಲಾದ ಕದನವಿರಾಮ, ಕೆಲವು ವೇಳೆ 'ಶೀತಲಸಮರ' ತಂತ್ರವೆಂಬ ವಿಧಾನದಲ್ಲಿ ನಡೆದು, ಸಂಶಯ, ವಿರೋಧ ಮತ್ತು ಶಸ್ತ್ರಾಸ್ತ್ರ ಸಂಗ್ರಹಗಳ ಸ್ಪರ್ಧೆ ಚಲನವಲನಗಳಲ್ಲಿ ಹಾದು, ಕಡೆಗೆ 1963 ರಲ್ಲಿ ಒಪ್ಪಂದವಾಯಿತು. ಈ ಒಪ್ಪಂದದಂತೆ ಕೆಲವು ಬಗೆಯ ಅಣ್ವಸ್ತ್ರಗಳ ಪ್ರಯೋಗ ಪರೀಕ್ಷೆಗಳನ್ನು ತಡೆಹಿಡಿಯಬೇಕೆಂದು ಇತ್ತಂಡಗಳೂ ಒಡಂಬಟ್ಟವು. ಈ ಎರಡು ದಶಕಗಳ ಅವಧಿಯಲ್ಲಿ ಪಶ್ಚಿಮ ರಾಷ್ಟ್ರಗಳು ವಾಷಿಂಗ್‌ಟನ್ ಪ್ರಭುತ್ವದ ನಾಯಕತ್ವದಲ್ಲಿ ಯೂರೋಪ್ ಮತ್ತು ಏಷ್ಯಾಖಂಡಗಳ ಸಮತಾವಾದಿ ರಾಷ್ಟ್ರಗಳ ಸುತ್ತ ಸೈನಿಕ ಸ್ಥಾವರಗಳನ್ನು – ಎಂದರೆ ಸೇನಾಚರಣೆಗೆ ಆಧಾರ ಸ್ಥಾನಗಳನ್ನು ಕಟ್ಟಿಕೊಂಡು, ಅವನ್ನು ಬಾಹ್ಯಸಂಪರ್ಕಶೂನ್ಯಪ್ರದೇಶಗಳನ್ನಾಗಿ ಮಾಡಿಕೊಂಡರು. ಕ್ಯೂಬದ ಹೊಸ ಸಮತಾವಾದಿ ಪ್ರಭುತ್ವಕ್ಕೆ ಎಡರೊಡ್ಡುತ್ತ, ಅದನ್ನು ಹಾಳುಮಾಡುವ ಸಂತತ ಪ್ರಯತ್ನದಲ್ಲಿ ತೊಡಗಿದರು.

ಲೆಬನಾನ್, ಇಸ್ರಾಯಿಲ್, ಕ್ಯೂಬಾ, ಕಾಂಗೋ, ಗಾಟೆಮಾಲಾ ದೇಶಗಳೊಡನೆ ಲಘುಯುದ್ಧಗಳಲ್ಲಿ ಕಾಲಹಾಕಿ, ಕೋರಿಯಾ, ಆಗ್ನೇಯ ಏಷ್ಯಾ, ಮಲಯಾ ಮತ್ತು ಆಲ್ಜೀರಿಯಾ ದೇಶಗಳೊಡನೆ ದೊಡ್ಡ ಪ್ರಮಾಣದ ಯುದ್ಧಗಳನ್ನೂ ಸಾಗಿಸಿದರೂ ಬಂಡವಾಳವಾದವೂ ಸಮತಾದವೂ ಶೀತಲ ಸಮರಕಾಲದಲ್ಲಿ ಪುದುಬಾಳ್ಕೆ–ಸಹಬಾಳ್ವೆ–ನಡಸಿದವು.

19ನೆಯ ಶತಮಾನದ ಯೂರೋಪಿನ ಸಾಮ್ರಾಜ್ಯಶೇಷಗಳೂ ಜಪಾನ್ ಮತ್ತು ಸಂಯುಕ್ತ ಅಮೆರಿಕಾ ರಾಷ್ಟ್ರಗಳೂ ಆರ್ಥಿಕವಾಗಿಯೂ ರಾಜಕೀಯವಾಗಿಯೂ ಪರಸ್ಪರ ಪೈಪೋಟಿ ನಡಸುತ್ತಿದ್ದಾಗ, ಬಂಡವಾಳವಾದಿ ಪಶ್ಚಿಮಕ್ಕೂ ಸಮತಾವಾದಿ ಪೂರ್ವಕ್ಕೂ ನಡುವಣ ಗಡಿಗೆರೆ ವಿರಸ ದ್ವೇಷಗಳ ಹಳೆಯ ಹುಣ್ಣಾಗಿ ಕಾಡುತ್ತಿತ್ತು.

ಇತ್ತಂಡಗಳನ್ನೂ ಪ್ರತ್ಯೇಕಿಸಿಡಲು ಶೀತಲಸಮರವು ಎತ್ತಿ ಕಟ್ಟಿದ ಉಕ್ಕಿನ ತೆರೆಅಡ್ಡವಿದ್ದರೂ ಒಂದು ಬಗೆಯ ಸಹಬಾಳ್ವೆಯಲ್ಲಿ ಉಭಯ ಪಕ್ಷಗಳೂ ರಾಜಕೀಯ ಆರ್ಥಿಕ ಹಾಗೂ ಸಂಸ್ಕೃತಿ ಕ್ಷೇತ್ರಗಳಲ್ಲಿ ವಿನಿಮಯಗಳನ್ನು ಮಾಡಿಕೊಳ್ಳುತ್ತ ಬಂದವು.

ಇಬ್ಬರಲ್ಲೂ ಪ್ರೀತಿ ವಿಶ್ವಾಸಗಳು ಇನ್ನೂ ಕುದುರದಿದ್ದರೂ ಹೊಸ ಸಿರಾಮಿಕ್ಸಿನ ಜತೆ ಬಾಳ್ವೆಯ ಏರ್ಪಾಟು ಲೇಪನ್ನಿಸಿದರೂ ತಪ್ಪುಗ್ರಹಿಕೆ, ಚಿತಾವಣೆಗಳ ಹಾಸುಹೊಕ್ಕಿನಲ್ಲಿ ಇತ್ತಂಡಗಳೂ ತಮ್ಮ ನಂಟನ್ನು ಗೊಂದಲಿಸಿಕೊಂಡು ಬಾಳಿದವು.

## ಮುನ್ನಡೆಗೆ ಇರಿಸಿದ ಇನ್ನಷ್ಟು ಹೆಜ್ಜೆಗಳು

ಇತಿಹಾಸ ರ್ಯಾಡಿಕಲ್ ಪಂಥಿಗಳ ಪರವಾಗಿದೆ. ಮನುಷ್ಯ ವರ್ಗದ ಮೇಲೆ ಮಹಾ ಪ್ರಭಾವ ಬೀರುತ್ತ, ಜನರಿಗೆ ನೂತನ ವಸ್ತು ಪರಿಶೋಧನೆಗಳ ಹಾಗೂ ತದನುಸಾರ ಗುಣಾಕಾರ ವೃದ್ಧಿಯಲ್ಲಿ ಮಾಡಿದ ವಸ್ತು ತಂತ್ರ ನಿರ್ಮಾಣಗಳ ಫಲಪ್ರಯೋಜನವನ್ನು ಕೊಡುತ್ತ, ಪ್ರಬಲವಾಗಿರುವ ಸನಾತನವಾದಿ ದೈತ್ಯಶಕ್ತಿಗಳ ವಿರುದ್ಧ ಹಿರಿಕಿತನದ ಲಿಬರಲ್ಲುಗಳೂ ಮೊಂಡುಬಗೆಯ ಕನ್ಸರ್ವೇಟಿವ್‌ಗಳೂ ಪ್ರಗತಿವಿರೋಧಿಗಳಾದ ಪಟ್ಟುಬಿಡದ ಕಲ್ಲೆದೆಯ ಪ್ರತಿಗಾಮಿಗಳೂ ಮಾರಾಂತು ನಿಲ್ಲುವುದಕ್ಕಾಗದೆ ಅಡಿಗಡಿಗೆ ಅಪ್ರತಿಭರಾಗಿದ್ದಾರೆ. ಅಲ್ಲದೆಯೆ ಜನಕ್ಕೊಂದು ಭರವಸೆಕೊಡುವ ಬೆಳವಣಿಗೆಗೆ ಇವು: ಮನುಷ್ಯಕುಲ ಎಂಥ ಮುಳ್ಳುಹಾದಿಯನ್ನಾದರೂ ನಡೆದು ಸಾಗಲು ಗಟ್ಟಿ ಪಾದರಕ್ಷೆಗಳನ್ನು ತೊಟ್ಟು, ದಿಟ್ಟತನದಿಂದ ಹೆಜ್ಜೆಯಿಡುತ್ತ, ಶುಭಜೀವನದ ಗುರಿಗೈದುವ ಪಯಣದ ಕೊನೆಯ ಹಂತದಲ್ಲಿದೆ.

ಸಾಮಾನ್ಯವಾಗಿ ಸಮಸ್ತಮನುಷ್ಯವರ್ಗ, ಅದರಲ್ಲೂ ವಿಶೇಷವಾಗಿ ತರುಣವರ್ಗ ಈಗ ತವಕಿಸುತ್ತ, ಚಡಪಡಿಸುತ್ತ ಈ ಐತಿಹಾಸಿಕ ಶಕ್ತಿಗಳು ನಡಸುತ್ತಿರುವ ಚಳವಳಿಯುಮುಜಲನ್ನು ಕ್ಷಿಪ್ರವಾಗಿ ಮುಗಿಸಬೇಕೆಂದು ಕೋರುತ್ತಿದೆ. ಫಲ ಸಾಕ್ಷಾತ್ಕಾರದ ಸಿದ್ಧಿಯನ್ನು ಬಯಸಿ ಒತ್ತಾಯಿಸುತ್ತಿದೆ. ಅವರೀಗ ತಾಳ್ಮೆಗೆಟ್ಟಿದ್ದಾರೆ. ಕಾರ್ಯಸಿದ್ಧಿಯಾಗುವ ಸ್ಪಷ್ಟ ಭರವಸೆಗಳನ್ನು ಕೊಡಿರೆಂದು ಸಮಾಜವಾದಿಗಳನ್ನು ನಿರ್ಬಂಧಿಸುತ್ತಿದ್ದಾರೆ. ಅವರಿಗೆ ಒದಗಿಬರುತ್ತಿರುವ ನೂತನಾವಕಾಶಗಳಲ್ಲಿ ಧ್ಯೇಯ ಸಿದ್ಧಿಗೋಸ್ಕರ ಮಾರ್ಗದರ್ಶನವನ್ನು ನಿರೀಕ್ಷಿಸುತ್ತಿದ್ದಾರೆ, ನಿಷ್ಕರ್ಷೆಯಾಗಿ ಮನುಷ್ಯವರ್ಗದ ಗುರಿ ಯಾವುದು, ಅದನ್ನು ಮುಟ್ಟಿಸುವ ಪರಿಣಾಮಕಾರಿಯಾದ ಸಾಧನ ಯಾವುದು, ಮತ್ತು ಅದಕ್ಕೆ ಕೈಕೊಳ್ಳುವ ಯೋಜನೆ ಎಂಥಾದ್ದು? ನಮ್ಮ ಉದ್ದೇಶಗಳು ಶೋಧನೆಗೊಂಡು ನಿರ್ಣಯಕ್ಕೆ ಬಂದದ್ದಾಗಿವೆಯೆ?

ಪ್ರಜಾ ಸಮುದಾಯ ಹೀಗೆ ಪ್ರಶ್ನಮಾಲಿಕೆಯನ್ನೆತ್ತಿ ಈ ಸ್ಪಷ್ಟೀಕರಣವನ್ನು ಕೇಳುವುದು ನ್ಯಾಯವಾಗಿಯೇ ಇದೆ. ನಾವು ರ್ಯಾಡಿಕಲ್ ಪಂಥಿಗಳು ಅವರಿಗೆ ತೃಪ್ತಿ ಕೊಡುವ ಜೀವನ ವಿಧಾನದ ನಕ್ಷೆ, ನಕಾಶೆಗಳನ್ನೂ ಗೊತ್ತಾದ ಪೂರ್ಣ ವಿವರಣೆಯುಳ್ಳ ತಪಸೀಲು ಪಟ್ಟಿಗಳನ್ನೂ ಕೊಡುವ ಸ್ಥಿತಿಯಲ್ಲಿ ಇಲ್ಲ. ಆದರೆ ಜನವರ್ಗಕ್ಕೆ ತೃಪ್ತಿಕೊಡುವ ಸಮಾಧಾನವನ್ನೂ ತರುವ ಉತ್ತರಗಳನ್ನೂ ಕಟ್ಟಿಕೊಡಬಲ್ಲೆವು. ಈಗ

ನಡೆಯುತ್ತಿರುವ ಮಹಾ ನಿರ್ಮಾಣ ಕಾರ್ಯಗಳಲ್ಲಿ ಇನ್ನು ಮೇಲೆ ಅವರು ಹೆಚ್ಚು ಹೆಚ್ಚಾಗಿ ಪಾತ್ರ ವಹಿಸುವ ಅವಕಾಶ ಸನ್ನಿವೇಶ ಬಂದಿದೆ ಎಂದು. ಇವನ್ನು ನಂಬಿ ಆಚರಣೆಗೆ ತರಬಹುದು. ಸೃಜನಾತ್ಮಕ ಪ್ರಯತ್ನಗಳಲ್ಲಿ ಈಗಾಗಲೇ ಯಥೇಚ್ಛವಾದ ಪ್ರಗತಿ ಸಾಧನೆಯಾಗಿದೆ; ನೂತನ ವಿಶ್ವಪ್ರಪಂಚ ರಚನೆ ಸಂಕಲ್ಪಾನುಸಾರವಾಗಿ ರೂಪಗೊಳ್ಳುತ್ತಿದೆ. ಮಹಾಶೋಭಾಯಮಾನವಾದ ಕಲಾಸೃಷ್ಟಿ ಇದಾಗುತ್ತದೆ. ಇದರಿಂದ ಮನುಷ್ಯವರ್ಗದ ಯೋಗಕ್ಷೇಮದ ಭರವಸೆ ಹೊರಡುತ್ತದೆ. ಯುಗಯುಗಾಂತರಗಳಿಂದ ಮನುಷ್ಯವರ್ಗ ಇದುವರೆಗೆ ನಿರಾಕಾರದಲ್ಲಿ ತೊಳಲುತ್ತ ಆಕಾರದರ್ಶನ ಮಾಡುವ ಘಟ್ಟಕ್ಕೆ ಪಯಣ ಬೆಳಸಿಕೊಂಡು ಬಂದಿದೆ. ನಿಷ್ಫಲ ದುಷ್ಫಲಗಳ ಕಹಿರುಚಿ ಮುಗಿದು, ಗಮನಾರ್ಹವಾದ ಸಫಲ ಸತ್ಫಲಗಳ ಸಿಹಿರುಚಿಯ ಕಡೆಗೆ, ತೊಳಲಾಟದ ಅನಿಶ್ಚಯದಿಂದ ಗಟ್ಟಿ ಹೊಣೆಗಳನ್ನು ಹೆಗಲಿಗೇರಿಸುವ ದೃಢ ಕರ್ತವ್ಯಭಾರಗಳ ನಿಶ್ಚಯದ ಕಡೆಗೆ, ಕೇವಲ ಅಸಹಾಯಕತೆಯ ನೆಲೆಯಿಂದ ವಿವಿಧ ವಿಷಯಜ್ಞತೆ ಪ್ರಭುಪ್ರವೀಣತೆಗಳ ಸ್ತರಕ್ಕೆ ಮನುಷ್ಯ ವರ್ಗದ ಪಯಣ ಬೆಳೆದು ಬಂದಿದೆ.

ಮನುಷ್ಯನು ತಾನು ಬಾಳುತ್ತಿರುವ ಪರಿಸರವನ್ನು ಆರೈದುನೋಡಿ, ಆಗಬೇಕಾದ ತಿದ್ದಿಕೆಯ ಗೆಯ್ಮೆಯಲ್ಲಿ ತೊಡಗಲು ಅವನಿಗೆ ಪಾತ್ರವುಂಟು. ಹಾಗೆಯೇ ನಿತ್ಯವಿಕಸನ ಕ್ರಮದಲ್ಲಿ ವಿಸ್ತಾರವಾಗುತ್ತಿರುವ ವಿಶ್ವಪ್ರಪಂಚದ ವಿದ್ಯಮಾನಗಳಲ್ಲಿ ಮುಂಗಾಣ್ಕೆಯಿಂದಲೂ ಪೂರ್ವಯೋಜನೆಯಿಂದಲೂ ಮನುಷ್ಯನು ತನ್ನ ಪಾತ್ರನಿಷ್ಕರ್ಷ ಮಾಡಿಕೊಂಡು ಕರ್ತವ್ಯನಿರತನಾಗಬೇಕು. ಈ ವಿವರಗಳಲ್ಲಿ ಮನುಷ್ಯನು ಎಷ್ಟುಮಟ್ಟಿಗೆ ತನ್ನ ಭವಿಷ್ಯತ್ತಿನ ನಿರ್ಧಾರಕ್ಕೋಸ್ಕರ ಸಾಂಪ್ರತ ಪ್ರಯತ್ನಗಳಲ್ಲಿ ಪಾಲ್ಗೊಂಡು ಉದ್ಯಮಿಸುವನೋ ಅಷ್ಟುಮಟ್ಟಿಗೆ ಅವನು ಮುಂದೆ ಬದುಕುವ ಜೀವನ ಅರ್ಥವಂತವಾಗುತ್ತದೆ.

ಮನುಷ್ಯನು ಮುಂದೆ ಕಟ್ಟಿಕೊಳ್ಳಬೇಕಾದ ಕೃತಿರಚನೆ, ನಿರ್ಮಾಣಗಳು, ನೂತನ ಸೃಷ್ಟಿವಿವರಗಳು, ಕ್ರಮವ್ಯವಸ್ಥೆ, ಸಮರಸ ದೃಷ್ಟಿ, ಸೌಂದರ್ಯಾಭಿರುಚಿ ರಸಿಕತೆಗಳು ಇತರ ಸಂಸ್ಕೃತಿ ವಿವರಗಳು, ಪ್ರಗತಿ, ತರತಮ ವಿಧಾನದಲ್ಲಿ ಸರ್ವತೋಮುಖ ಅಭಿವೃದ್ಧಿ–ಇವೆಲ್ಲ ಅವನ ಪಾತ್ರನಿರ್ವಾಹದಿಂದ ಸಿದ್ಧಿಸಾಧ್ಯಗಳೇ, ಪ್ರಯತ್ನಾಧೀನಗಳೇ, ಪ್ರಯತ್ನಗಳಿಗೆ ಅನಿವಾರ್ಯ ಫಲಗಳೇ ಎಂದು ತನ್ನ ಪಾತ್ರಕ್ಕಿರುವ ಫಲಸಾಧ್ಯತೆಯನ್ನೂ ಸಾಮರ್ಥ್ಯಕ್ಕಿರುವ ಫಲ ಸಾಧ್ಯತೆಯನ್ನೂ ನಂಬಿ, ಗಟ್ಟಿನಂಬಿಕೆಯಿಂದ ದುಡಿಯುವ ಹೊತ್ತು ಅವನಿಗೆಬಂದಿದೆ. ಇದಕ್ಕಾಗಿ ಅವನ ತನ್ನ ನೆರೆಹೊರೆಯ ಪರಿಸರವನ್ನು ನಿತ್ಯ ವಿಸ್ತಾರವಾಗುತ್ತಿರುವ ವಿಶ್ವಪ್ರಪಂಚದ ಒಂದುಭಾಗವೆಂದು ಅಲ್ಲಿ ಪ್ರಯತ್ನಾರಂಭ ಮಾಡಬಹುದು. ಅವನಪಾತ್ರ ಅಲ್ಪಮಾತ್ರದ್ದಾಗಿರಬಹುದು. ಆದರೆ

ಅವನಶ್ರದ್ಧೆ ವಿಶ್ವಾಸಗಳಿಗೆ ಅದು ಅಲ್ಪವಲ್ಲ. ಯಾವ ಒಬ್ಬ ವ್ಯಕ್ತಿಮನುಷ್ಯನೂ, ಯಾವ ಒಂಟಿ ಜನಸಮುದಾಯವೂ ಇಡಿಯ ಜನಸಮುದಾಯದ ಸಮಷ್ಟಿ ಸಹಕಾರ ಪ್ರಯತ್ನ ಮಾತ್ರದಿಂದ ಸಾಧಿಸ ಬಹುದಾದಷ್ಟನ್ನು ಸಾಧಿಸಲು ಅಗದು. ಆದರೆ ಒಬ್ಬೊಬ್ಬ ವ್ಯಕ್ತಿಮನುಷ್ಯನೂ ಒಂದೊಂದು ಶ್ರದ್ಧಾಳು ಕಾರ್ಯಕರ್ತತಂಡವೂ ನೂತನಸಮಾಜ ನಿರ್ಮಾಪಕರ ಸಾಲಿನಲ್ಲಿ ಗಣ್ಯರೇ. ಸಮಾಜದೊಟ್ಟಿನ ಪ್ರಯೋಜನ - ಸಮರಸ-ಸೌಂದರ್ಯ-ವೈಭವಗಳನ್ನು ಹೆಚ್ಚಿಸುವ ಮಹಾ ಪ್ರಯತ್ನಕ್ಕೆ ಒಬ್ಬೊಬ್ಬನಿಂದಲೂ ವ್ಯರ್ಥವೆನ್ನಿಸದ, ಹಾಗೂ ಒಬ್ಬನನ್ನು ತೊರೆದು ಇನ್ನೊಬ್ಬನನ್ನು ಪ್ರಯತ್ನದಲ್ಲಿರಿಸ ಬೇಕು ಎನ್ನಿಸದ, ಹಿರಿಯ ಕಾಣಿಕೆ ಸಂದು ವಿಶ್ವಜನ ಜೀವನದ ಒಟ್ಟಂದ ಬೆಳೆಯುತ್ತಿವೆ.

ಮನುಷ್ಯವರ್ಗ ಭೂಗ್ರಹದಲ್ಲಿ ಇರವಿಗೆ ಬಂದಂದಿನಿಂದ ಪ್ರತಿಭಾ ಪ್ರಕಾಶನ, ಭಾವಪ್ರತಿಮಾನಿರ್ಮಾಣ, ವಿಚಾರಾಲೋಚನೆಗಳು, ಶಿಲ್ಪ, ಲಲಿತಕಲೆ_ಈ ಎಲ್ಲ ಕ್ಷೇತ್ರಗಳಲ್ಲೂ ಅನೇಕ ಅದ್ಭುತಗಳನ್ನು ಸಾಧಿಸಿದೆ. ಮನುಷ್ಯನ ಕಲ್ಪನಾಶಕ್ತಿಯ ಚಟುವಟಿಕೆಗಳನ್ನು ಸಾರುವ ನಾನಾ ಸ್ಮಾರಕವಸ್ತುಗಳು ವಿಶ್ವಪ್ರಪಂಚದ ವಿವಿಧ ಭೂಪ್ರದೇಶಗಳಲ್ಲಿ ನೆಲೆಗೊಂಡಿವೆ; ಅವನ ಪ್ರತಿಯೊಂದು ಚಟುವಟಿಕೆಯೂ ಒಬ್ಬೊಬ್ಬ ವ್ಯಕ್ತಿಮನುಷ್ಯನಾಗಲಿ, ಒಟ್ಟಾಗಿ ಕಲೆತು ದುಡಿದ ಒಂದೊಂದು ಕಾರ್ಯಕರ್ತ ದಳವಾಗಲಿ,-ಬಿಡಿಬಿಡಿಯಾಗಿ ತಲತಲಾಂತರದಿಂದ ತನತನಗೆ ಬಂದ ಅವಕಾಶಗಳಿಗೆ ತಕ್ಕಂತೆ, ಜಗತ್ಸಂಪನ್ಮೂಲಗಳನ್ನೂ ಶಕ್ತಿಗಳನ್ನೂ ಬಳಸಿಕೊಂಡು, ಗೊತ್ತಾದ ಕ್ರಮದಲ್ಲಿ ಕಾರ್ಯಮಾಡಿದ್ದರ ಅಷ್ಟಿಷ್ಟು ಸಂಕ್ಷೇಪ ವಿವರಣೆಯನ್ನು ಕೊಡುತ್ತ ಈ ವಿವಿಧ ಸ್ಮಾರಕಗಳು ಚಿರಸ್ಥಾಯಿಯಾಗಿವೆ. ಈ ಸ್ಮಾರಕ ಸಂದೋಹಗಳನ್ನು ಒಟ್ಟಾಗಿ ಪರಿಗಣಿಸಿದಾಗ, ಅವು ಮನುಷ್ಯರಚಕರು ಅವರವರ ಪ್ರಯತ್ನ ಪರಿಶ್ರಮಗಳ ಫಲವಾಗಿ ಸೇರಿಸುತ್ತಾಹೋದ ಕಾಣಿಕೆಗಳು ಮೊತ್ತವಾಗಿ ಕಲೆತು, ವಿಶ್ವಪ್ರಪಂಚದ ಕಲ್ಪನ ಸಂಪತ್ತನ್ನು ಹೇಗೆ ಬೆಳಸಿದರು ಎಂಬುದು ವಿಶದಪಡುತ್ತದೆ. ಪ್ರತಿಯೊಂದು ಮನಃ ಪ್ರೇರಣೆಯೂ, ಪ್ರತಿಯೊಂದು ಆಲೋಚನೆಯೂ, ಪ್ರತಿಯೊಂದು ಅಂಗಭಂಗಿಯೂ, ಕೈಕೊಂಡ ಪ್ರತಿಯೊಂದು ಪ್ರಯತ್ನವೂ, ಇಟ್ಟ ಪ್ರತಿಯೊಂದು ಹೆಜ್ಜೆಯೂ ಜಗತ್ತಿನ ಕ್ರಮವ್ಯವಸ್ಥೆಯನ್ನೂ ಸಮರಸವನ್ನೂ ಸೌಂದರ್ಯವನ್ನೂ ಮಹತಿಯನ್ನೂ ಪ್ರಯೋಜನವನ್ನೂ ಹೆಚ್ಚಿಸುತ್ತ, ಮನುಷ್ಯಜೀವನ ಪ್ರವಾಹದ ಕಲ್ಪನಾವಿಲಾಸದ ಮೊತ್ತವನ್ನೂ ತತ್ಫಲವಾದ ಸುಸ್ಮೃತಿ ಪರಿಮಲವನ್ನೂ ಅತಿಶಯಪಡಿಸಿವೆ.

ಮನುಷ್ಯನೊಂದು ಜೀವಚ್ಚೈತನ್ಯ; ಚಲನವಲನಪ್ರಿಯನಾಗಿ ಸಂವೇದಿಸುತ್ತ, ಆಲೋಚಿಸುತ್ತ, ಸದಾ ಚಟುವಟಿಕೆಯಲ್ಲಿರುತ್ತ, ಸ್ವಾತ್ಮಗುಣಪ್ರಜ್ಞೆಯುಳ್ಳ ಜೀವ ವಿಶೇಷ ಜಡದ ಪಕ್ಕದಲ್ಲಿ ಜೀವ ಅಸ್ತಿತ್ವದಲ್ಲಿರುವುದನ್ನು ಬಲ್ಲವನಾಗಿ, ತಾನು

ಬಾಳುವ ಪರಿಸರದಿಂದ ತನ್ನನ್ನು ಭಾವತಃ ಹಾಗೂ ದೇಹತಃ ಬೇರ್ಪಡಿಸಿಕೊಳ್ಳಬಲ್ಲವನಾಗಿ, ಸಾಕ್ಷಿಸ್ಥಾನದಲ್ಲಿ ನಿಂತು ಮನುಷ್ಯನ ಮಹಾ ವಿಕಸನಲೀಲೆಯನ್ನು ನೋಡಬಲ್ಲವನಾಗಿ, ಮನುಷ್ಯನಿಗಿರುವ ಅದೃಷ್ಟ ಸಿದ್ಧಿಯನ್ನು ಸಾಧಿಸಿ ಸಾಕ್ಷಾತ್ಕರಿಸಿಕೊಳ್ಳಬಲ್ಲ ಸಮರ್ಥ. ತನಗೆ ತಾನು ಜ್ಞೇಯವಾದ ವಿಷಯವಾಗಬಲ್ಲ; ತನ್ನ ಕೃತಿಸಿದ್ಧಿಯನ್ನು ಜ್ಞಾತೃವಾಗಿ ತಿಳಿದು ಸಾಕ್ಷ್ಯ ಹೇಳಬಲ್ಲ. ಸಮಾಜ ಚರಿತ್ರೆಯ ಹರಿವ ಹೊನಲನ್ನು ನೋಡಿ, – ಅದರೊಟ್ಟಿನಿಂದ ತನ್ನನ್ನು ಬಿಡಿಸಿಕೊಂಡು, ಅಹಂಭಿನ್ನವಾದ ನೆಲೆಗೇರಿ, ಬಾಹ್ಯ ವಸ್ತುಸ್ಥಿತಿಯನ್ನು ಆರೈದು ನೋಡಿ, ಅದರ ವರ್ತನೆಯೆಂತೆಂದು ವರದಿಮಾಡುವ ಅಳವು ಇದು. ಸ್ವಾಂತರಂಗದಲ್ಲಿ ಪ್ರಜ್ಞೆ ತೀವ್ರ ಪ್ರಬುದ್ಧ ದಶೆಯಲ್ಲಿದ್ದಾಗ ಮನುಷ್ಯನು ನಿಕಟ ಪರಿಸರಾತೀತನೂ ಆಗಿ, ಸುವ್ಯವಸ್ಥೆಯಲ್ಲಿ ನಡೆಯುವ ವಿಶ್ವಪ್ರಪಂಚದ ಸಮಷ್ಟಿವಿದ್ಯಮಾನದ ಲಘುದರ್ಶನದಿಂದ ಜೆಲಗೇರಿ, ಅದರ ಅಭಿವೃದ್ಧಿಯ ಸ್ಥೂಲರೇಖೆಗಳನ್ನೂ ಗುಣಲಕ್ಷಣಗಳನ್ನೂ ಗ್ರಹಿಸಬಲ್ಲವನೂ ಹೌದು.

ತನ್ನ ಇರವು ಬದುಕುಗಳ ಆಗುಹೋಗುಗಳ ಬಗ್ಗೆ, ತನ್ನ ಹೊಣೆಯೆನ್ನಿಸಿದ ಪಾತ್ರದ ಬಗ್ಗೆ, ತನ್ನ ಅದೃಷ್ಟದ ಬಗ್ಗೆ, ತಾನು ಸಿಕ್ಕಿಕೊಂಡಿರುವ ಸಾಮಾಜಿಕ ಯಂತ್ರಜಾಲದ ಬಗ್ಗೆ,–ತನ್ನ ತಿಳಿವಳಿಕೆಯ ಮಿತಿಯಲ್ಲಿ, ತಾನು ವಿಶ್ವಯಂತ್ರದ ಒಂದು ಭಾಗವೇ ಆಗಿರುತ್ತೇನೆಂಬ ಸ್ವಾತ್ಮಪ್ರಜ್ಞೆಯುಳ್ಳ ಮನುಷ್ಯನು ವಿಚಾರ ವ್ಯಾಪಾರ ಮಾಡುವಾಗ, ಅವನು ಬರಿಯ ಊಹೆ ಕಲ್ಪನೆಗಳ ಜಗತ್ತಿನಲ್ಲೇ ವಿಹರಿಸವೆ ತನ್ನ ಕಾಲುಗಳನ್ನು ಗಟ್ಟಿ ತಳಪಾಯದ ಮೇಲಿರಿಸಿ ಸ್ಥಿರನಾಗಿ ನಿಂತು–ತನ್ನ ನಂಬಿಕೆಗೆ ತಕ್ಕ ಆಧಾರ ಭೂಮಿಕೆಯನ್ನು ಆಶ್ರಯಿಸಿರುತ್ತಾನೆ; ಧ್ಯೇಯಾನುಸಾರವಾಗಿ ವ್ಯಾಪಾರ ಮಾಡುತ್ತಾನೆ. ಈ ಅವನ ಆಧಾರ ಭೂಮಿಕೆಯನ್ನು ಭದ್ರಪಡಿಸಿರುವ ತಳಪಾಯದ ಶಂಕು ಶಿಲೆಗಳು ನಾಲ್ಕು. ಅವು ಯಾವುವೆಂದರೆ—ಮೊದಲನೆಯ ಶಂಕು ಶಿಲೆ ಅವನ ಉದ್ದೇಶ ಕಲ್ಪನೆಗಳ ಮಾಲೆ. ಇದನ್ನು ಮನುಷ್ಯಕುಲ ಬಹುಕಾಲ ಆಶ್ರಯಿಸಿಕೊಂಡು ಬಂದಿದೆ. ಜೀವನಕ್ಕೆ ಅವಶ್ಯವಾದ ತತ್ತ್ವವಿವರಗಳನ್ನು ಅಥವಾ ಸೂತ್ರಗಳನ್ನು, ಜಗದ್ವ್ಯವಸ್ಥೆಯಿಂದ ತಾನು ಪಡೆದ ತನ್ನ ಅಂದಂದಿನ ಅನುಭವಗಳನ್ನು ನೆಮ್ಮಿ, ಕಟ್ಟಿಕೊಂಡು ಬಂದಿದ್ದಾನೆ ಮನುಷ್ಯವ್ಯಕ್ತಿ. ಈ ಸೂತ್ರಗಳನ್ನು ಜೀವನಕ್ಕೆ ಅನ್ವಯಿಸಿಕೊಂಡದ್ದರ ಫಲಗಳು ಇವು: ಪ್ರಯೋಜಕತೆ, ಕ್ರಮವ್ಯವಸ್ಥೆ, ಸಮರಸ, ಸೌಂದರ್ಯ, ಜೀವನ ವೈಭವ; ಮನುಷ್ಯಕುಲದ ಈ ಒಟ್ಟು ಸಿದ್ಧಿಯನ್ನು ಆಗಮಾಡಿಸಿದ ವ್ಯಕ್ತಿಮನುಷ್ಯನೊಬ್ಬೊಬ್ಬನ ಬಿಡಿ ಬಿಡಿ ಪ್ರಯತ್ನಗಳು; ತಕ್ಕಂತೆ ಇವು ಆಯಾ ಪ್ರಯೋಗ ಕ್ಷೇತ್ರಗಳಲ್ಲಿ ನಡೆದು, ಜೊತೆಯ ಮನುಷ್ಯರ ಬಿಡಿಬಿಡಿ ಪ್ರಯತ್ನಗಳಿಗೆ ಹೊಂದಿಕೆಯಾಗಿ ಸೇರಿ, ಒಟ್ಟು ಮನುಷ್ಯವರ್ಗದ ಕೃತಿಸಿದ್ಧಿಯನ್ನು ರಚನೆಯಲ್ಲೂ ಕೃತಿಕೌಶಲದಲ್ಲೂ ಬೆಳಸಿ ನಿಲ್ಲಿಸಿವೆ. ತಳಪಾಯದಲ್ಲಿ ಅಲ್ಲಲ್ಲಿ ಕಾಲೋಪಾಧಿಯಿಂದ ಶಿಥಿಲತೆ ಕಂಡುಬಂದಾಗ ಅದನ್ನು ಗಟ್ಟಿಪಡಿಸುವ ತಿದ್ದಿಕೆ ನೇರ್ಪಾಟುಗಳು ಅವಶ್ಯವೆಂದು

ಮನುಷ್ಯಬುದ್ಧಿಯು ಸ್ವಾನುಭವದಿಂದ ಕಂಡುಕೊಳ್ಳುವವರೆಗೆ, ಅದರ ಮೇಲಣ ರಚನೆಗೆ ಆಧಾರವಾಗಿ, ಅಥವಾ ಮೂಲತತ್ತ್ವ ಪ್ರಾಯವಾಗಿ, ತಳಪಾಯ ಸಾಕಾ ದಷ್ಟು ನೆರವುಕೊಡುತ್ತಿರುತ್ತದೆ. ಮನುಷ್ಯನು ಹೀಗೆ ತಳಪಾಯದ ಆಧಾರ ಬಲವನ್ನು ಖಾತರಿ ಪಡಿಸಿಕೊಂಡು, ತನ್ನೋದ್ದೇಶಗಳಿಗೆ ತಕ್ಕ ಆಲೋಚನೆ, ಯೋಜನೆ ಮತ್ತು ಕಾರ್ಯಕ್ರಮಗಳ ಮೂಲಕ ಕೃತಿಸಾಧನೆ ಮಾಡುತ್ತಾನೆ.

ಎರಡನೆಯ ಶಂಕುಶಿಲೆ, ರಚನಾತ್ಮಕವಾದದ್ದಕ್ಕಿಂತ ಹೆಚ್ಚಾಗಿ ಆಚಾರಾರ್ಥಕ ವಾದದ್ದು. ಅದರಲ್ಲಿ ರಚಕನ, ಯೋಜಕನ, ನಿರ್ಮಾಪಕನ, ಆಡಳಿತಗಾರನ ಮನೋಭಾವವು ವಿವಿಧಾನುಭವಗಳನ್ನು ಅಪೇಕ್ಷಿಸುವ ಯಾವುದೇ ಕ್ಷೇತ್ರಕ್ಕೆ ಸಂಬಂಧಿ ಸಿದ ವಾಸ್ತವಿಕ ಸನ್ನಿವೇಶದ ಸಮಕ್ಷದಲ್ಲಿ ಕಾರ್ಯಮಾಡಬೇಕಾಗುತ್ತದೆ. ನಾವು ಈಗ ವಿಮರ್ಶೆಮಾಡುತ್ತಿರುವ ಸಾಮಾನ್ಯವಾದ ಉದ್ದೇಶಗಳನ್ನು ಈ ಕಾರ್ಯ ಕರ್ತನಲ್ಲಿ ಒಬ್ಬೊಬ್ಬನೂ ಪ್ರಾಯಶಃ ಒಪ್ಪಿಕೊಂಡಾನು. ಆ ಉದ್ದೇಶಗಳ ಪರಿಚಯ ಅವನಿಗಿದ್ದರೆ, ಮತ್ತು ನಿಜವಾಗಿ ಅವನು ಅವನ್ನು ಸಮ್ಮತಿಸುವವನಾದರೆ, ಅವನು ಕೈಕೊಂಡ ಕಾರ್ಯವು ಸಾಂಗವೇ ಆಗುತ್ತದೆ. ಆಗ ಅವನು ಬರಿಯ "ಕೈತೂಕ ಬಾಯಿಬಣ್ಣ" ವೆಂಬ ರೀತಿಯ ಕಾರ್ಯ ವಿಧಾನ ಇಲ್ಲವೆ "ಅಭ್ಯಾಸದ ನೆಪ್ಪು" ತನ್ನನ್ನು ಕಾರ್ಯ ಕ್ಷೇತ್ರದಲ್ಲಿ ನಡಸುವುದಕ್ಕೆ ಅವಕಾಶಕೊಡದೆ,—ವಿಷಯ ಸ್ವಭಾವವನ್ನು ತಿಳಿದವನಾಗಿದ್ದು, ಸಾಮಾಜಿಕ ಭೌಗೋಲಿಕ ವಿಷಯಗಳ ಲ್ಲೊಂದನ್ನೋ ಇಲ್ಲವೆ ವಿಶ್ವಪ್ರಪಂಚದ ವ್ಯವಸ್ಥಾ ವಿಷಯಗಳಲ್ಲೊಂದನ್ನೋ ಅಧ್ಯಯನಕ್ಕೆ ಎತ್ತಿಕೊಂಡ ಜಿಜ್ಞಾಸುಗಳಲ್ಲಿ ಒಬ್ಬನಾಗಿರುತ್ತ ಸಾಧಕನಾಗಿ ಶ್ರದ್ಧೆ ಯಿಂದ ಕಾರ್ಯಮಾಡುತ್ತಾನೆ. ಒಪ್ಪಿಗೆಯ ಮಾತಿರಲಿ, ಅವನಿಗೆ ವಿಷಯಜ್ಞತೆ ಯಿಲ್ಲದಿದ್ದರೂ, ಅವನು ಕಲಿತು ನಿಪುಣನಾದ ಕಾರ್ಮಿಕನಾಗಿ ತನ್ನ ಕಾಯಕದ ಕಾಣಿಕೆ ಯನ್ನು ನೀಡಬಲ್ಲನು.

ಮನುಷ್ಯನು ತನ್ನ ವ್ಯಾಪಾರಕ್ಕೋಸ್ಕರ ಕಟ್ಟಿಕೊಂಡ ಅವನದೇ ಆದ ಪ್ರಪಂಚದ ಮೂರನೆಯ ಮೂಲಾಧಾರತತ್ತ್ವ-ಅವನ ಜಗದ್ವ್ಯಾಪಾರ ಸಾಗುತ್ತ ಸಾಗುತ್ತ ಅದಕ್ಕೆ ಸಿದ್ಧಿ ಸಾಧ್ಯತೆಯುಂಟೆಂಬ ಸಂಭವಗಳ ಮಾಲೆಯನ್ನು ಸೂಚಿಸು ತ್ತದೆ. ಕೆಲವು ವೇಳೆ ಈ ಸಾಧ್ಯತೆಯನ್ನು "ಶೀಲ" ಎಂದೂ ಕರೆಯುವುದುಂಟು. ಶೀಲಾವಲಂಬನದಿಂದಲೇ ಮನುಷ್ಯನು ತನ್ನ ಜಗದ್ವ್ಯಾಪಾರವನ್ನು ಪ್ರಾರಂಭಿಸು ತ್ತಾನೆ. ಮನುಷ್ಯನಲ್ಲಿರುವ ಸಿದ್ಧಿಸಾಧ್ಯತಾಸಾಮರ್ಥ್ಯವು ಸಾಮಾನ್ಯವಾಗಿ ಗೋಚರಕ್ಕೆ ಬಾರದೆ ಗೂಢವಾಗಿರುತ್ತದೆ; ಮತ್ತು ಅದರ ವ್ಯಾಪ್ತಿ ಅಪಾರವಾದದ್ದು— ಭೌತದೇಹದಿಂದ ಹಿಡಿದು, ಅವನ ವಿವಿಧ ಕರಣಗಳಲ್ಲಿಯೂ, ಅವನ ಸ್ನಾಯು ಗಳಲ್ಲಿಯೂ, ಅವನ ಬೇರೆಬೇರೆ ಅಂಗಾಗಳಲ್ಲಿಯೂ ಈ ಗೂಢ ಸಾಮರ್ಥ್ಯ ಹರಡಿದ್ದು,

ಭಾವ–ರಸ–ಕ್ಷೇತ್ರದಲ್ಲಿ ಈ ವಿವಿಧಾವಯವಗಳ ಅಂತಸ್ಸಂಬಂಧ ಕ್ರಿಯೆ ಪ್ರತಿಕ್ರಿಯೆಗಳನ್ನು ಪ್ರಕಾಶ ಪಡಿಸುತ್ತ, ಮನಸ್ಸನ್ನು ಪ್ರವೇಶಿಸಿ, ಆಧ್ಯಾತ್ಮಿಕ ಜೋಧೆಯ ಬೀಸಿನಲ್ಲಿಯೂ ಸೃಜನಾತ್ಮಕ ಶಕ್ತಿ ಸಾಮರ್ಥ್ಯಗಳ ಆಳತುಂಬುಗಳಲ್ಲಿಯೂ ಚಿತ್ರಭಾವವಾಗಿ ಹೊರಹೊಮ್ಮುತ್ತದೆ.

ವ್ಯಕ್ತಿಮನುಷ್ಯನ ಚಟುವಟಿಕೆಯ ನಾಲ್ಕನೆಯ ಮೂಲಾಧಾರತತ್ತ್ವ–ಅವನು ಹೊಣೆಯ ನಿಯೋಗವನ್ನು ಪಡೆದು ಇಳೆಗೆ ಬಂದಿರುವುದನ್ನು ಸೂಚಿಸುತ್ತದೆ. ಜಗತ್ತಿನ ಲಕ್ಷಣವನ್ನೂ ರಹಸ್ಯವನ್ನೂ ಗ್ರಹಿಸುವ ಸಾಮರ್ಥ್ಯ ಅವನಿಗುಂಟು. ಜಗದ್ವ್ಯಾಪಾರದಲ್ಲಿ ಅವನಿಗೆ ಇಷ್ಟವೂ ಉತ್ಸಾಹವೂ ಉಂಟು; ತನಗೆ ಕರ್ತವ್ಯಭಾರವಾಗಿ ಬಂದ ನಿಯೋಗವನ್ನು ದೀಕ್ಷಾಬದ್ಧನಾಗಿ, ಅದು ಯಶಸ್ವಿಯಾಗುವಂತೆ ನಿರ್ವಾಹಮಾಡಬಲ್ಲನೆಂಬ ಅರ್ಪಣ ಪ್ರವೃತ್ತಿಯೂ ಅವನಿಗೆ ಉಂಟು.

ಐದನೆಯ ಮೂಲಾಧಾರತತ್ತ್ವ:– ಮನುಷ್ಯವ್ಯವಹಾರಗಳಲ್ಲಿ ಅದೃಷ್ಟಕ್ಕಿರುವ ಪಾತ್ರವನ್ನೂ, ಆದಕ್ಕೆ ಕಾರ್ಯಕಾರಣ ಸರಣಿಯ ಪಾತ್ರ ಕೊಂಡಿಬಿದ್ದಿರುವುದನ್ನೂ ಇದು ಸೂಚಿಸುತ್ತದೆ. ಈ ಕೊಂಡಿಗಳು ಸೇರಿಕೊಂಡು ಆದ ಒಂದು ವಿಚಿತ್ರ ಸಂಬಂಧ ವ್ಯೂಹಕ್ಕೆ ಮನುಷ್ಯನು ಬದ್ಧನಾದದ್ದರಿಂದ, ಅವನು ಪಡೆದ ಕರ್ತವ್ಯ ನಿಯೋಗವು ಯಶಸ್ವಿಯಾಗಿ ಮುಗಿಯದೆ ವಿಫಲವಾಗಬಹುದು. ಇದಕ್ಕೆ ಕಾರಣ ಅವನ ಉತ್ಸಾಹದ ನ್ಯೂನತೆಯಾಗಬಹುದು; ಅವನ ದಕ್ಷತೆಯ ಕೊರತೆಯಾಗಬಹುದು. ಈ ಕಾರಣಗಳಿಂದ ಅವನು ಕೈಕೊಂಡ ಉದ್ಯಮದ ಗತಿವೇಗ ನಿಧಾನವಾಗುತ್ತದೆ. ಆದರೆ ನಿಯೋಗಕ್ಕೆ ಯಶಸ್ಸು ಲಭ್ಯವಾದಾಗ ಅದಕ್ಕೆ ಕಾರಣ–ನಿಯೋಗಿ ಇಡಿಯ ಉದ್ಯಮ ಯೋಜನೆಯನ್ನು ಸಮಗ್ರವಾಗಿ ಅರಿತು ಹುರುಪಿನಿಂದ ಮುನ್ನುಗ್ಗಿ ಕಾರ್ಯನಿರ್ವಾಹ ಮಾಡಿರುವುದೇ.

ಇತ್ತೀಚಿನವರೆಗೆ ಮನುಷ್ಯಸಮಾಜಕ್ಕೆ ಸಲ್ಲುತ್ತಿದ್ದ ಕಟ್ಟುನಿಟ್ಟಾದ ನಿರ್ದೇಶನವು ದೇವತಾ ಶಾಸ್ತ್ರಜ್ಞರಿಂದಲೂ ರಾಜಕೀಯಸ್ಥರಿಂದಲೂ ಸಲ್ಲುತ್ತಿತ್ತು. ನಿರ್ದೇಶನ ನೀಡುತ್ತಿದ್ದ ರಾಜಕೀಯಸ್ಥರ ಜೊತೆಗೆ ವಕೀಲರು ಇರುತ್ತಿದ್ದರು. ತಾರ್ಕಿಕರು, ದೇವತಾ ಶಾಸ್ತ್ರಜ್ಞರು ಮತ್ತು ದಾರ್ಶನಿಕರು ವಾಕ್ಯಗಳಿಗೂ (words) ಪ್ರಮೇಯ ಸೂತ್ರಗಳಿಗೂ (formulas) ಪದಾರ್ಥವರ್ಗಗಳಿಗೂ (categories) ಬಂದಿಗಳಾಗಿರುತ್ತಾರೆ. ಅವರು ತಮ್ಮ ಕಲ್ಪನೆಗಳಿಗ ಮಾತಿನ ರೂಪವನ್ನು ಕೊಟ್ಟು ಪ್ರತಿಪಾದಿಸುತ್ತಾರೆ. ನಿಶ್ಚಿತ ತರ್ಕವಿಧಾನಕ್ಕೆ ಅನುಸಾರವಾಗಿ ವಾದಮಾಡುತ್ತಾರೆ. ನ್ಯೂನಾತಿರೇಕಗಳನ್ನು ಸಮೀಕರಣ ಮಾಡುವ ಪ್ರಯತ್ನದಲ್ಲಿ ಕೊನೆಗವರು ನಾಸ್ತ್ಯರ್ಥಕ ಫಲಿತಾಂಶವನ್ನು ಕಾಣುತ್ತಾರೆ. ಈ ಸೋಲಿನಿಂದ ಅವರೇನೂ ನಿರುತ್ಸಾಹಗೊಳ್ಳದೆ ಉತ್ತೇಜಿತರಾಗಿಯೇ ಯಥಾಪೂರ್ವದಂತೆ ಮರಳಿ ಮರಳಿ ವಾದಯತ್ನಮಾಡುತ್ತಾರೆ.

ಮಾಮೂಲು (ಪರಂಪರಾ ಪ್ರಾಪ್ತ ಪದ್ಧತಿ) ಮತ್ತು ಕಾನೂನು ಗತಕಾಲಕ್ಕೆ ಸಾರ್ವತ್ರಿಕಾನ್ವಯದ ಸಂಸ್ಥಾಪ್ರತಿಷ್ಠೆಯನ್ನು ಕೊಡುತ್ತದೆ; ಮತ್ತು ಗತವು ವರ್ತಮಾನಕ್ಕೆ ಸಾಗಿಸುವ ಜೀವನ ವಿಧಾನಗಳನ್ನು ನಿರ್ಬಂಧಕವಾಗಿ ಮಾಡುತ್ತದೆ. ಇತರ ಉದ್ಯಮ ಪ್ರಯತ್ನಗಳ ಕ್ಷೇತ್ರಗಳಲ್ಲಿರುವಂತೆಯೇ, – ಸಾಮಾನ್ಯವಾಗಿ ದುರವಗಾಹ್ಯವೂ ದುಜ್ಞೇಯವೂ ಮತ್ತು ಭಾವನಾರೂಪವೂ ಆದ ಕ್ಷೇತ್ರಗಳಲ್ಲಿ ಮಾಡುವ ಬುದ್ಧಿಕಾರ್ಯಕ್ಕೂ ಮಿತಿಗಳಿರುತ್ತವೆ; ಅವುಗಳ ಮಟ್ಟದಲ್ಲೂ ಕಾರ್ಯವಿವರಗಳಲ್ಲೂ ಈ ಮಿತಿ ವ್ಯಕ್ತಪಡುತ್ತದೆ.

ಯಾರು ಮನಃಕಲ್ಪನೆಗಳನ್ನು ಕಾರ್ಯರಂಗದಲ್ಲಿ ಪ್ರಯೋಗ ಮಾಡುವರೋ, ಯೋಜನೆಗಳನ್ನು ಯಾರು ನಿರೂಪಿಸಿ ಪ್ರತಿಪಾದಿಸುತ್ತ ಆ ಯೋಜನಾನುಸಾರವಾದ ಕರ್ತವ್ಯ ನಿಯೋಗಗಳನ್ನು ಆಚರಣೆಗೆ ತಂದುಕೊಳ್ಳುವರೋ, ಅವರು ಉದ್ದಿಷ್ಟ ತತ್ತ್ವವನ್ನು ಅನುಷ್ಠಾನಮುಖದಿಂದ ಸಂತತಾಭ್ಯಾಸಕ್ಕೆ ತಿರುಗಿಸುತ್ತಾರೆ. ತತ್ತ್ವವು ರಚನೆ ಹೇಗೆ ಎಂಬುದನ್ನು ಪ್ರತಿಪಾದಿಸುತ್ತದೆ. ಅನುಷ್ಠಾನವು ತತ್ತ್ವನಿರ್ದೇಶನದಂತೆ ವಸ್ತುವನ್ನು ಉತ್ಪಾದಿಸುತ್ತದೆ. ವಸ್ತುವನ್ನು ಉತ್ಪಾದಿಸಿ ಆದಕ್ಕೆ ರೂಪ ಕೊಡುತ್ತದೆ. ದಾರ್ಶನಿಕರು ಭವಿಷ್ಯತ್ತನ್ನು ಮನಸಾ ಗ್ರಹಿಸುತ್ತಾರೆ; ಸ್ವಲ್ಪ ಮಟ್ಟಿಗೆ ಅದರ ವಿವರಗಳನ್ನು ರೇಖಿಸಿಕೊಡುತ್ತಾರೆ. ಶಿಲ್ಪಿಗಳೂ ಪರಿಕರ್ಮ ತಂತ್ರಿಗಳೂ ಯೋಜನೆಗಳನ್ನು ರೇಖಿಸಿ, ಅವುಗಳ ಉದ್ದೇಶ ನಿರೂಪಣ ಮಾಡಿ, ಅವಕ್ಕೆ ಅವಶ್ಯವಾದ ವಿವಿಧ ವಸ್ತುಸಾಧನೋಪಕರಣಗಳನ್ನೂ ವಸ್ತುನಿರ್ಮಾಣಕ್ಕೆ ಅವಶ್ಯವಾದ "ಕಿಂಸ್ವಿದ್–ಜ್ಞಾನ" ( know–how )ಸಾಧನಗಳನ್ನು ಸಂಗ್ರಹಿಸಿಕೊಂಡು, ರಚನೆ ಆಗುತ್ತಿರುವಾಗ ಉಸ್ತುವಾರಿ ನಡಸುತ್ತ, ಕ್ರಿಯೆಯ ಗತಿಯನ್ನು ನಿರ್ವಹಿಸುವ ಕಾಲದಲ್ಲಿ ನಿರ್ದೇಶಕರು ಕೊಟ್ಟ ಸೂಚನೆಯಂತೆ ಪರೀಕ್ಷಣಗಳನ್ನು ಮಾಡಿ ಇಡಿಯ ರಚನೆಯನ್ನು ಅಂಕೆಯಲ್ಲಿ ನಡಸಿ, ಸಾಂಗವಾಗುವಂತೆ ಕಾರ್ಯಕ್ಕೆ ನೆರವು ಕೊಡುತ್ತಾರೆ.

ಹೀಗೆ ಆಲೋಚನೆ, ತತ್ತ್ವ ಮತ್ತು ಅಭ್ಯಾಸಗಳು ಸಂಗಮಿಸಿ ಏಕವಾಗಿ ರಚನೆಯೊಟ್ಟನ್ನು ಕಣ್ಣಿಗೆ ಕಟ್ಟುತ್ತವೆ. ಯಾರು ಕಾರ್ಯಕ್ಷೇತ್ರದಲ್ಲಿ ಅನುಭವಿಗಳಾಗಿ ರಚನೆಯ ವ್ಯಾಪ್ತಿ ಮಹಿಮೆಗಳನ್ನು ಮನಸಾ ಗ್ರಹಿಸಬಲ್ಲರೋ ಆವರು ಗೊತ್ತು ಮಾಡಿಕೊಳ್ಳುವ ಯೋಜನೆಗೊಂದು ಪ್ರತಿಷ್ಠೆಯ ಮಹಿಮೆಯನ್ನು ತಂದುಕೊಳ್ಳುತ್ತಾರೆ; ಮತ್ತು ಕಾರ್ಯಸಿದ್ಧಿಯ ಸಂಭವ ಹಾಗು ಸಾಧ್ಯತೆಯನ್ನು ಗ್ರಹಿಸಿ, ಧೀರರಾಗಿ ಕಾರ್ಯವ್ಯವಸ್ಥೆಯಲ್ಲಿ ತೊಡಗುತ್ತಾರೆ. ರಚನೆಯ ಮೇಲ್ವಿಚಾರಕರಾಗಿ, ಅದು ಸಾಗಿ ಸಾಂಗವಾಗಿ ನೆರವೇರಿ ಮುಗಿಯುವುದಕ್ಕೂ ನಾಯಕ ಸ್ಥಾನದಿಂದ ಸೇವೆ ಸಲ್ಲಿಸುತ್ತಾರೆ.

ಮನುಷ್ಯವರ್ಗಕ್ಕೆ ಉತ್ತಮ ಭವಿಷ್ಯತ್ತನ್ನು ಹಾರೈಸುವವರೂ, ಆ ಆಶಯ ಕ್ಕೋಸ್ಕರ ಉದ್ದೇಶನಿಷ್ಠರಾಗಿ, ಕಲ್ಪನಾ ಸಾಮರ್ಥ್ಯವುಳ್ಳವರಾಗಿ, ಯೋಜನೆಯ ರೂಪರೇಷೆಗಳನ್ನು ರಚಿಸುವ ಚಾತುರಿಯುಳ್ಳವರಾಗಿ, ಯೋಜಕರಾಗಿ, ನಿರ್ಮಾ ಪಕರಾಗಿ, ನುರಿತು ಅರಳಿರುವ ಕಾರ್ಯಕರ್ತರ ಮುಂದೆ ಎರಡು ಕ್ರಿಯಾಗತಿ ನಿರ್ವಾಹಕ ಪ್ರವಾಹಗಳು ಗೋಚರಕ್ಕೆ ಬರುತ್ತವೆ. ಒಂದು ಪ್ರವಾಹದಿಂದ ಸಮಗ್ರ ವಿಷಯ ಪರಿಶೀಲನೆ, ಲಕ್ಷಣ ನಿರೂಪಣೆ, ವಿಷಯ ವಿಂಗಡನೆ, ವಿಷಯ ವರ್ಗೀಕರಣೆ, ಕಾರ್ಯಸಂಗತವಲ್ಲದ್ದರ ತಿರಸ್ಕರಣೆ, ನೂತನಾವಿಷ್ಕಾರ ಚಿಂತನೆ ಮತ್ತು ಅಭಿವೃದ್ಧಿಗೆ ಅನುಕೂಲವಾದ ಸಾಧನಗಳ ವಿವರ–ಇವನ್ನೆಲ್ಲ ತಿಳಿದುಕೊಳ್ಳಬಹುದು. ಈ ವಿವರಗಳೆಲ್ಲ ವಸ್ತುನಿರ್ಮಾಪಕರೂ ವಸತಿ ನಿರ್ಮಾಪಕರೂ ಇಳೆಯಲ್ಲಿ ಮನುಷ್ಯ ನನ್ನು ಬಾಳಿಸುವ ಪರಿಸರ ನಿರ್ಮಾಪಕರೂ ಚಿತ್ತಾವಧಾನದಿಂದ ಗಮನಿಸಬೇಕಾ ದವು. ಇನ್ನೊಂದು ಪ್ರವಾಹವು ಮನುಷ್ಯನ ಅಸ್ತಿತ್ವದ ಸಮಷ್ಟಿತಾತ್ಪರ್ಯವನ್ನೂ ಅವನ ವಸತಿಪರಿಸರವು ಅದಕ್ಕಿಂತ ವಿಶಾಲವಾದ ಸಾಮಾಜಿಕ ಪರಿಸರದ ಒಂದು ಭಾಗವಾಗಿರುವುದರ ಅರ್ಥವಿಶೇಷವನ್ನೂ ತಿಳಿಸಿಕೊಡುತ್ತದೆ. ವಿಶಾಲವಿಶ್ವಪರಿಸರ ಕ್ಷೇತ್ರದಲ್ಲಿ ಕಾಣಬರುವ ವೈವಿಧ್ಯ ಹಾಗೂ ಐಕ್ಯ ಪ್ರಕಾಶಕವಾದ ಸಮರಸ ಲಕ್ಷ ಣಕ್ಕೆ ಭಾಗಶಃ ಹೊಣೆಹೊತ್ತುಕೊಂಡಿರುತ್ತದೆ. ಹಾಗೆಯೇ ಜಗದ್ವಸ್ತುಗಳಲ್ಲಿ ಕಾಣ ಬರುವ ವಿರೋಧ ಸಂಯೋಜನೆಗಳ ನಡುವೆ ಇರಬೇಕಾದ ಸಮತೂಕಕ್ಕೂ ಮನುಷ್ಯ ದೌರ್ಬಲ್ಯಗಳಿಗೆ ಪ್ರತಿಭಾರವಾಗಿ ಪ್ರಯೋಗಿಸಬೇಕಾದ ನೀತಿಬಲವಿವೇಕಕ್ಕೂ, ಜಗ ದೊಟ್ಟಿನ ಕಾರ್ಯನಿರ್ವಾಹಕ್ಕೆ ಎಡರಾಗದಂತೆ ಬಿಡಿಮನುಷ್ಯನಿಗೆ ಇರಬೇಕಾದ ಪ್ರಯೋಗ ಪರೀಕ್ಷಾ ಪ್ರಕಾಶಗಳ ವಿಸ್ತರಣೆಗೂ ಮನುಷ್ಯನು ಪೂರಾ ಹೊಣೆಗಾರನಲ್ಲ. ಮನುಷ್ಯನು ಕೈಗೊಳ್ಳುವ ಪ್ರಯೋಗ ಪರೀಕ್ಷೆಗಳಲ್ಲಿ ದೋಷಗಳಿರುತ್ತವೆ. ಆದರೂ ಅವನ ಪಾತ್ರವನ್ನು ಅಸಡ್ಡೆ ಮಾಡುವಂತಿಲ್ಲ. ನಿತ್ಯವಿಸ್ತಾರವಾಗುತ್ತಿರುವ ಜಗತ್ತಿನ ಕ್ರಮವ್ಯವಸ್ಥೆ, ಮಹಿಮೆ, ಘನತೆ ಸೌಂದರ್ಯಗಳ ಸಂವರ್ಧನೆಗೆ ಅವನ ಪಾತ್ರ ದಿಂದ ಕಾಣಿಕೆ ಸಲ್ಲುತ್ತಲೇ ಇರುತ್ತದೆ.

## ರ್ಯಾಡಿಕಲ್ ಪಂಥಿಗಳು ಇಂದು ಎದುರಿಸಬೇಕಾದ ಸವಾಲು

ನಮ್ಮ ಭೂಗ್ರಹದ ಮೇಲೆ ಈಗ ಸುಮಾರು ಮೂವತ್ತುಸಾವಿರಲಕ್ಷ ಜನರು ವಾಸ ಮಾಡುತ್ತಿದ್ದಾರೆ. ಆಕಾಶದಲ್ಲಿಯ ನಕ್ಷತ್ರ ನೀಹಾರದಿಂದ ಹಿಡಿದು ಕ್ಷೀರಪಥದ (ಆಕಾಶ ಗಂಗೆ) ವರೆಗೆ ಜಗತ್ ಸೃಷ್ಟಿಮಾಲೆಯಲ್ಲಿ ಮನುಷ್ಯನ ಸೃಷ್ಟಿ ಸಾಮರ್ಥ್ಯ ಒಂದು ಎನ್ನಿಸುತ್ತದೆ. ಮನುಷ್ಯವರ್ಗವೊಂದು ಸಾಮರ್ಥ್ಯಗಳ ಭಂಡಾರ. ಇನ್ನೂ ಪಕ್ವಕ್ಕೆ ಬರಬೇಕಾದ, ಸಾಮಾನ್ಯವಾಗಿ ಉಪೇಕ್ಷೆಗೆ ಪಕ್ಕಾದ, ಉಪಾಯ ಕೌಶಲ, ತಿಳಿವಳಿಕೆಯಲ್ಲಿ ವಿವೇಚನೆ, ಮನಃಪ್ರತಿಮಾಕಲ್ಪನೆ, ಆಶೋತ್ತರ, ಪ್ರತಿಭೆ,

ಅತಿಶಯ ಮೇಧಾಶಕ್ತಿ — ಇವೆಲ್ಲ ಮನುಷ್ಯನ ಜೀವಗುಣಭಂಡಾರದಲ್ಲಿ ಸೇರಿರತಕ್ಕ ವಿವಿಧಸಾಮರ್ಥ್ಯಗಳು.

ನಮ್ಮ ನಿಕಟವಾದ ಭೂಮಿಕೆ (ಹಿನ್ನೆಲೆ) ಯಲ್ಲಿ ಪ್ರಕೃತಿ ಹಾಗೂ ಸಮಾಜ ಪರಿಸರವಿರುತ್ತ ಅದರಲ್ಲಿ ನಿತ್ಯಾಭಿವೃದ್ಧಿಯಾಗುತ್ತಿರುತ್ತದೆ. ಈ ಅಭಿವೃದ್ಧಿಗೆ ಕಾರಣ ಇಂದು ಮನುಷ್ಯ ಪ್ರಯತ್ನಕ್ಕೆ ಒದಗಿರುವ ವಿಶಾಲಾವಕಾಶ. ಮನುಷ್ಯ ಪ್ರಯತ್ನಗಳ ಫಲವಾಗಿ ಮನುಷ್ಯಾನುಭವಗಳೂ ಕೌಶಲಗಳೂ ಗುಣಾಕಾರ ಕ್ರಮದಲ್ಲಿ ವೃದ್ಧಿಯಾಗುತ್ತಿವೆ. ನಮ್ಮ ಇತಿಹಾಸದಲ್ಲಿ ನೆನ್ನೆ ತಾನೆ ಈ ಪ್ರಯೋಗ ಪರೀಕ್ಷೆಗಳು ಪರಾಕಾಷ್ಠದಶೆಗೇರಿ, ಅಣುವನ್ನು ಭೇದಿಸಿದ ಮಹಾಸಂದಿ ಕಾಲವನ್ನು ಮುಟ್ಟಿದೆವು; ಸಮತಾವಾದಿ ರಚನೆಯ ಮಹಾರಂಭದಲ್ಲಿ ತೊಡಗಿದೆವು. ವಿಜ್ಞಾನಪ್ರಗತಿ, ವಸ್ತುನಿರ್ಮಾಣಗಳು, ಬಹುಮುಖ ಸೃಜನಾತ್ಮಕ ಕ್ರಿಯೆಗಳು, ಮನುಷ್ಯ ಕೌಶಲಗಳಿಗೂ ಪ್ರಾವೀಣ್ಯಗಳಿಗೂ ಪ್ರಾಪ್ತವಾಗಿರುವ ಮಹಾವ್ಯಾಪ್ತಿ— ಇವೆಲ್ಲ ಮನುಷ್ಯವರ್ಗಕ್ಕೆ ಭವಿಷ್ಯದ ಬಾಗಿಲುಗಳನ್ನು ತೆರೆದಿವೆ. ಭೂಮಿ, ಸೌರವ್ಯೂಹ, ವಿಶ್ವಜಗತ್ತು—ಪ್ರಾಯಶಃ ತಾಳ್ಮೆಗೆಟ್ಟು, ಪ್ರಾಣಚೇತನದ ಪ್ರವಾಹರೂಪವಾದ ಈ ಉತ್ತರೋತ್ತರಾಭಿವೃದ್ಧಿಗೆ ಮನುಷ್ಯನ ಕಾಣಿಕೆಯೇನು ಎಂದು ತವಕದಿಂದ ಎದುರು ನೋಡುತ್ತಿವೆ. ಈ ಅಭಿವೃದ್ಧಿ ಪ್ರಕೃತಿ ಹಾಗೂ ಸಮಾಜಪರಿಸರಗಳಲ್ಲಿ ಪಕ್ವ ಪ್ರತಿಕ್ರಿಯೆಗಳನ್ನುಂಟು ಮಾಡಿ, ಮನುಷ್ಯ ಪ್ರಯತ್ನಗಳನ್ನು ಮುಂದುವರಿಸುವುದಕ್ಕೆ ಉತ್ತೇಜನ ಕೊಟ್ಟು, ಸಾರ್ವತ್ರಿಕ ಶುಭಜೀವನಸಿದ್ಧಿಗೂ ಆ ಶುಭಜೀವನದ ನಿತ್ಯೋರ್ಜಿತವಾದ ಪ್ರತಿಷ್ಠೆಗೂ ಅಭೂತಪೂರ್ವವಾದ ಅವಕಾಶ ನೀಡುತ್ತದೆ.

ವಿಶ್ವಪ್ರಪಂಚವೆಂಬ ಮಹಾಯಂತ್ರವ್ಯವಸ್ಥೆಯನ್ನು—"ಋತನಿಯಮ"ವನ್ನು ಅರಿತುಕೊಳ್ಳಲು ಮನುಷ್ಯವರ್ಗವು ಸಮೀಚೀನವಾದ ಸಂಯುಕ್ತ ಪ್ರಯತ್ನಮಾಡುವ ಕಾಲಬಂದಿದೆ. ಈ ಜಗದ್ಯಂತ್ರೋದ್ದೇಶಗಳನ್ನು ಊಹಿಸಿ ಅರಿತುಕೊಂಡು, ಅವಕ್ಕೆ ಅನುಕೂಲವಾಗುವ ಕಾಣಿಕೆಗಳನ್ನು ಸಲ್ಲಿಸಬೇಕಾದ ಹೊತ್ತುಬಂದಿದೆ. ಇಂದು ಮನುಷ್ಯನು--ಮುಂದೆ ಬರುವ ಒಂದೊಂದು ಪೀಳಿಗೆಯೂ ಅನುಮೋದಿಸಿ, ಅವಶ್ಯವಾದ ತಿದ್ದುಪಾಟುಗಳಿಗೆ ಮನಸ್ಸುಕೊಟ್ಟು, ಪೂರ್ವಸಿದ್ಧತೆಗಳನ್ನು ಸರಿಯಾಗಿ ಮಾಡಿಕೊಂಡು, ಪೀಳಿಗೆ ಪೀಳಿಗೆಯೂ, ಸ್ಫೂರ್ತ್ಯುತ್ಸಾಹಗಳಿಂದ ತನ್ನಲ್ಲಿ ಸಿದ್ಧಿಗಳನ್ನು ಸಾಧ್ಯಮಾಡಿಕೊಳ್ಳುವ ಸಾಮರ್ಥ್ಯವನ್ನು ಪಡೆದಿವೆಎಂಬ ಆತ್ಮಪ್ರತ್ಯಯದಿಂದ ಹೊರಟು, ಧೈರ್ಯವಾಗಿಯೂ ದೇಹಾತ್ಮ ಬಲಗಳಿಂದಲೂ ಆಶಾವಾದದಿಂದಲೂ ಮನುಷ್ಯವರ್ಗವನ್ನು ನಡಸುವ ಶುಭಜೀವನ ಮಾರ್ಗವನ್ನು ಬೆಳಗುವ ಹೊಣೆಯನ್ನುಹೊತ್ತಿದ್ದಾನೆ.

ಹೊಣೆಯರಿತ ಅಲ್ಪಸಂಖ್ಯಾಕರು ಈ ಗುರುತರ ವಿಷಯವನ್ನು ತಿಳಿದುಕೊಳ್ಳುವ ಕುತೂಹಲಿಗಳಾಗಿ, ಸಮರ್ಥರಾಗಿ, ದೀಕ್ಷಾಬದ್ಧರಾಗಿ,—ಅರ್ಪಣ

ಬುದ್ಧಿಯಿಂದಲೂ ಕಷ್ಟಪ್ರಯಾಸಗಳು ತುಂಬಿದ ಕಾರ್ಯಕೋತ್ಸಾಹದಿಂದಲೂ ಕೂಡಿ, ಜೀವನಕ್ಕೆ ಸಂಬಂಧಪಟ್ಟ ಎಲ್ಲ ಕ್ಷೇತ್ರಗಳಲ್ಲಿಯೂ–ಸಂಗೀತ, ಕಲೆ, ಸಂಶೋಧನೆ, ಯಂತ್ರ ಕೃತಿನಿರ್ಮಾಣಗಳು, ತಂತ್ರಯುಕ್ತಿ ರಚನೆಗಳು, ಬಗೆಬಗೆಯ ಕ್ರೀಡೆಗಳು, ಸಾಹಿತ್ಯ, ಆರೋಗ್ಯ ಈ ಕ್ಷೇತ್ರಗಳಲ್ಲೆಲ್ಲ – ಕೃಷಿಮಾಡಬೇಕು. ಪ್ರಕೃತಿ ಮತ್ತು ಸಮಾಜ ಪರಿಸರಗಳು ಒದಗಿಸುವ ವಸ್ತುಗಳನ್ನೂ ಸೌಕರ್ಯಾವಕಾಶಗಳನ್ನೂ ದಕ್ಷತೆಯಿಂದಲೂ ಮಿತವ್ಯಯ ಧೋರಣೆಯಿಂದಲೂ ಬಳಸಿಕೊಳ್ಳುತ್ತ, ಮನುಷ್ಯವರ್ಗದ ಪರಮ ಹಿತವೇ ತಮ್ಮ ವ್ಯವಸಾಯದ ಉದ್ದೇಶವೆಂದು ಹೊಣೆಯರಿತು, ಆ ಉದ್ದೇಶಾನುಸಾರಿಯಾದ ಫಲವನ್ನು ದೊರಕಿಸುವ ಪ್ರಯತ್ನವನ್ನು ಸಾಗಿಸುತ್ತಿರಬೇಕು.

ಸೃಜನಾತ್ಮಕವಾದ ಕಾರ್ಯಸಾಮರ್ಥ್ಯವುಳ್ಳ ಮನುಷ್ಯನು ಈ ಧ್ಯೇಯ ಸಾಧಕ ಪಥದಲ್ಲಿ ಸಂತತವಾಗಿ ಮುನ್ನಡೆಯಬೇಕಾದರೆ ತನಗೆ ಮಾರ್ಗಕಂಟಕವೆನ್ನಿಸುವ ಪದ್ಧತಿಯನ್ನು ಮುರಿದು, ಪ್ರಯತ್ನವನ್ನಡ್ಡಗಟ್ಟುವ ವ್ಯಸನಾಭ್ಯಾಸಗಳನ್ನು ತೊರೆದು, ಮುಂದುಮುಂದಕ್ಕೆ ಸಾಗಬೇಕು.

ಇವೊತ್ತು ಮನುಷ್ಯವರ್ಗ ಇಂಥ ಒಂದು ಧೀರಪ್ರಯತ್ನವನ್ನು ಕೈಕೊಂಡು, ಪಯಣದ ಮೊದಲ ಹಂತಗಳನ್ನು ದಾಟುತ್ತಿದೆ. ಇದುವರೆಗೆ ದೊರೆಕೊಂಡ ಸಿದ್ಧಿಸಾಧನೆಗಳು ಇನ್ನು ಮುಂದೆ ಕೈಕೊಳ್ಳಬೇಕಾಗಿರುವ ಪ್ರಯತ್ನಗಳಿಗೆ ಯಶಸ್ಸುಂಟೆಂದು ಭರವಸೆ ಕೊಡುವಂಥವು. ಯಾವಾಗ ಮನುಷ್ಯನು ತನ್ನ ಆಯ್ದುಕೊಂಡ ಪಥದಲ್ಲಿ ಮುನ್ನಡೆಯುತ್ತ ಪ್ರಕೃತಿಯಿಂದ ತಾನು ತನಗೋಸ್ಕರವೂ ತನ್ನ ಸೋದರ ಜೀವಭೂತಗಳಿಗೋಸ್ಕರವೂ ಬಳಸಿಕೊಳ್ಳುವ ವಸ್ತುಸೌಕರ್ಯಗಳನ್ನು ಮಿತವ್ಯಯದಿಂದ ಬಳಸಿ, ಪೋಲುಮಾಡದೆ ಉಳಿಸಿ—ಪ್ರಕೃತಿಯಲ್ಲಿ ಮಿತನೇಮದಂತೆ ನೆಲೆಗೊಂಡಿರುವ ಸಂಬಂಧವ್ಯವಸ್ಥೆಗಳನ್ನು ಕೆಡಿಸಿ ಅವ್ಯವಸ್ಥೆ ಅಸ್ತವ್ಯಸ್ತತೆಗಳಿಗೆ ಈಡುಮಾಡದೆಸಾಗಿ ಘಟ್ಟವನ್ನು ತಲುಪುತ್ತಾನೋ, ಆಗ ಮನುಷ್ಯವರ್ಗಕ್ಕೆ ಅನುವುಮಾಡುವ ಶುಭಜೀವನದ ಶಿಲ್ಪವಿಧಾನಕ್ಕೆ ಬೇಕಾದ ತಳಪಾಯದ ಗಟ್ಟಿಕೆಲಸವನ್ನವನು ಮಾಡಿದಂತೆ ಆಗುತ್ತದೆ. ಹೀಗೆ, ಮುಂದೆ ಕಟ್ಟಬೇಕಾದ ಶುಭಜೀವನ ಶಿಲ್ಪಕ್ಕೆ ತಕ್ಕ ತಳಪಾಯ ಏರ್ಪಟ್ಟಿತೆಂದು ಅವನಿಗೆ ಖಚಿತವಾದ ಮೇಲೆ, ಮನುಷ್ಯ ಸಮಾಜವು ಅಂಕೆಗೊಳಪಟ್ಟು ರೂಪಗೊಳ್ಳಲು ಅವಕಾಶವಾಗುತ್ತದೆ. ಅದರ ಪ್ರತಿಯೊಬ್ಬ ಸದಸ್ಯನೂ ಸಂಯಮದಿಂದ ನಡೆದುಕೊಂಡು ಶುಭಜೀವನಕ್ಕೆ ಅರ್ಹರಾಗುತ್ತಾನೆ. ಶುಭಜೀವನಕ್ಕೆ ಅವಶ್ಯವಾದ ಪ್ರಕೃತಿ ಹಾಗೂ ಸಾಮಾಜಿಕ ಪರಿಸರ ನಿಯಮಗಳು ಮೂಲಾಧಾರವಾಗಿ ಮನುಷ್ಯನಿಗೆ ಒದಗಿದರೆ ಮಾತ್ರ ರ್‍ಯಾಡಿಕಲ್ ಪಂಥಿಯು ಧರ್ಮೇಂದ್ರಿಯದ ಅಂಕುಶ ಪ್ರಯೋಗದಿಂದಲೂ ಅದರ ಬಾಧೆಯಿಂದಲೂ ಬಿಡುಗಡೆಪಡೆಯುತ್ತಾನೆ. ಆಗ ರ್‍ಯಾಡಿಕಲ್ ಪಂಥಿಯ ಹಾರೈಕೆಗಳು ಘನವಾಗುತ್ತವೆ; ಅವನ ಭಾವ ಪ್ರಕಾಶನ

ಭವ್ಯವಾಗಿ ವಿಶಾಲವ್ಯಾಪಿಯಾಗುತ್ತದೆ; ಅವನ ಆಲೋಚನೆ ಆಳವಾಗುತ್ತದೆ; ಅವ ಕೃತಿ ಶುದ್ಧೋದ್ದೇಶದಿಂದಲೂ ಯುಕ್ತಾಯುಕ್ತ ವಿವೇಕದಿಂದಲೂ ಸಾಂಗವಾಗ ತ್ತದೆ. ಏಕೆಂದರೆ ಅವನು ತನ್ನ ಸ್ವಭಾವವನ್ನು ಅಂಕೆಯಲ್ಲಿರಿಸಿಕೊಂಡು, ಸಾಮಾಜಿ ಪರಿಸರದ ನೆರವನ್ನು ದಕ್ಷತೆಯಿಂದ ತನ್ನ ಬಾಳಿಗೆ ಹೊಣೆಯಿಂದ ದೊರಕಿಸಿಕೊಂಡ ತಾನೂ ಹೊಣೆಯರಿತು ಆ ಪರಿಸರಕ್ಕೆ ಬೇಕಾದ ನಾಯಕ ನಿರ್ದೇಶನವನ್ನು ನೀ ಬಲ್ಲವನಾಗಿರುತ್ತಾನೆ. ಅವನ ನಿರ್ದೇಶನದಲ್ಲಿ ವಿಶ್ವಜನ ಸಮಾಜದಲ್ಲಿ ಬಹುಸಂಖ್ಯಾ ಜನಕ್ಕೆ ಉತ್ತಮೋತ್ತಮ ಶುಭಸಂದಾಯ ಮಾಡುವ ಜಗತ್ತಿನ ಉದಯವಾಗುತ್ತ

1780 ರ ನಂತರದ ದಶಕದಲ್ಲಿ ಪ್ರಕಟವಾದ ಕ್ಷೋಭೆಯ ವೇಳೆಯಲ್ಲಿ ಅಂದಿ ಅಮೆರಿಕದ ರ್ಯಾಡಿಕಲ್ ಪಂಥಿಗಳು ಎದುರಿಸಬೇಕಾಗಿಬಂದಿದ್ದಂಥ ಸವಾಲನ್ನೇ ಮ ಇಂದೂ ಇಂದಿನ ರ್ಯಾಡಿಕಲ್ ಪಂಥಿಗಳೂ ಸವಾಲನ್ನು ಎದುರಿಸಿ ತಮ್ಮ ಪಾತ್ರವನ ನಿರ್ವಹಿಸಬೇಕಾಗಿದೆ. ಮನುಷ್ಯನ ಮತ್ತು ಅವನ ಆಶ್ರಿತ ವರ್ಗದ ಭವಿಷ್ಯತ್ತು ಅವರ ಈ ಪಾತ್ರ ನಿರ್ವಾಹವನ್ನು ಅವಲಂಬಿಸುತ್ತದೆ ಎನ್ನಿಸುತ್ತದೆ ನನಗೆ.



# ಪ್ರಕಟನೆಗಳು

| | | Rs. P. |
|---|---|---|
| 1. | ರಾಜ್ಯಶಾಸ್ತ್ರ ( ಎರಡು ಭಾಗಗಳಲ್ಲಿ ) — ಡಿ. ವಿ. ಜಿ. | 11-00 |
| 2. | ಕುಸುಮಾರ್ಪಣೆ ( ಡಿ. ವಿ. ಜಿ. ಯವರ ಕೆಲವು ಕೃತಿಗಳನ್ನು ಕುರಿತ ಲೇಖನಗಳ ಸಂಗ್ರಹ ) | 5-00 |
| 3. | ಶ್ರೀ ರಾಮಚಂದ್ರಪ್ರಭು ( ಡಿ. ವಿ. ಜಿ. ಯವರ ಶ್ರೀರಾಮಪರೀಕ್ಷಣಂ ಕೃತಿಯ ಮೇಲಣ ಟೀಕೆ ) — ಜಿ. ಪಿ. ರಾಜರತ್ನಂ | 6-00 |
| 4. | ಭಾರತಭೂಮಂಡನಂ ( ಡಿ. ವಿ. ಜಿ. ಯವರ ಸ್ವತಂತ್ರಭಾರತ ಅಭಿನಂದನಸ್ತವವನ್ನು ಕುರಿತ ಟೀಕೆ ) — ಜಿ. ಪಿ. ರಾಜರತ್ನಂ | 2-00 |
| 5. | ವಾಲ್ಮೀಕಿ ಮುನಿಗಳ ಹಾಸ್ಯ ಪ್ರವೃತ್ತಿ — ವಿದ್ವಾನ್ ಎನ್. ರಂಗನಾಥ ಶರ್ಮಾ | 1-00 |
| 6. | ಸಾಹಿತ್ಯದಿಂದ ಆಗುವ ಕೆಲಸ — ( ಪ್ರೊ॥ ಟಿ. ಎಸ್. ವೆಂಕಣ್ಣಯ್ಯ ಜ್ಞಾಪಕೋಪನ್ಯಾಸ ) — ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ | 1-00 |
| 7. | ಶಾಸನ ಸಭೆಯ ಕಾರ್ಯವಿಧಾನ — ಶ್ರೀ ಟಿ. ಹನುಮಂತಪ್ಪ | 1-00 |
| 8. | ಸಾರ್ವಜನಿಕರಲ್ಲಿ ಸಾತ್ತ್ವಿಕ — ( ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಶ್ರೀ ತಿರುಮಲಮ್ಮ ರಾಮಸ್ವಾಮಿ ಜ್ಞಾಪಕೋಪನ್ಯಾಸ ) - ಡಿ.ವಿ.ಜಿ. | 1-50 |
| 9. | ನಮ್ಮ ಜನ ನಡೆಸಿದ ಜೀವನ — ( ಶ್ರೀ ಎಂ. ಶ್ರೀನಿವಾಸಯ್ಯಂಗಾರ್ ಜ್ಞಾಪಕೋಪನ್ಯಾಸ ) — ಶ್ರೀ ತಿ. ತಾ. ಶರ್ಮಾ | 1-00 |
| 10. | ಆಂಗ್ಲ ಸಾಹಿತ್ಯ ನೀಡಿದ ಸ್ಫೂರ್ತಿ — ( ಪ್ರೊ॥ ಟಿ. ಎಸ್. ವೆಂಕಣ್ಣಯ್ಯ ಜ್ಞಾಪಕೋಪನ್ಯಾಸ ) — ಡಾ॥ ವಿನಾಯಕ ಕೃಷ್ಣ ಗೋಕಾಕ್ | 1-00 |
| 11. | ಒಳ್ಳೆಯ ಮನುಷ್ಯ, ಒಳ್ಳೆಯ ಬದುಕು — ( ಟಿ. ಎಸ್. ವೆಂಕಣ್ಣಯ್ಯ ಜ್ಞಾಪಕೋಪನ್ಯಾಸ ) ಡಾ॥ ವಿ. ಸೀತಾರಾಮಯ್ಯ | 1-50 |
| 12. | ಕನ್ನಡ ಗೀತಿಕೆಯ ಲಕ್ಷಣ ಮತ್ತು ಧಾಟಿ — ( ಎಂ. ಗೋವಿಂದ ಪೈ ಜ್ಞಾಪಕೋಪನ್ಯಾಸ ) - ವಿದ್ವಾನ್ ಶ್ರೀ ಸೇಡಿಯಾಪು ಕೃಷ್ಣಭಟ್ಟ | 2-00 |
| 13. | ಕನ್ನಡ ನುಡಿ ತನ್ನ ಕಾಲಮೇಲೆ ತಾ ನಿಲ್ಲಬಹುದೆ? ( ಎಂ. ಗೋವಿಂದಪೈ ಜ್ಞಾಪಕೋಪನ್ಯಾಸ) - ಡಾ॥ ರಂ.ಶ್ರೀ. ಮುಗಳಿ | 1-50 |

ಕಮಿಷನ್ನು: ವ್ಯಾಪಾರಿಗಳಿಂದ ಹತ್ತು ರೂಪಾಯಿಗಳಿಗೆ ಮೇಲ್ಪಟ್ಟು ಬರುವ ಬೇಡಿಕೆಗಳಿಗೆ ಸೇಕಡ 25 ರಂತೆ ರಿಯಾಯಿತಿ.

ಪ್ರತಿಗಳಿಗೆ ಬರೆಯಿರಿ.

ಗೌ॥ ಕಾರ್ಯದರ್ಶಿ.

ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆ

ಫೋನ್: 602436 ಎನ್. ಆರ್. ಕಾಲೋನಿ, ಬೆಂಗಳೂರು 560 019